॥ ಶ್ರೀ ॥

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯಾ ೩೩



ಶ್ರೀಕೃಷ್ಣದ್ವೈಪಾಯನಮುನಿಪ್ರಣೀತಂ

# ಶ್ರೀಮತ್ಸ್ಯಮಹಾಪುರಾಣಂ

ಕನ್ನಡ ಅನುವಾದಸಹಿತಂ



ಅನುವಾದಕ:

**ವಾಜಪೇಯಂ ಶ್ರೀರಂಗಾಚಾರ್**

ಸಾಹಿತ್ಯವಿದ್ವಾನ್, ಕನ್ನಡ ಪಂಡಿತ

ಮೈಸೂರು

ಶ್ರೀನಿವಾಸ್ ಎಲೆಕ್ಟ್ರಿಕ್ ಪ್ರೆಸ್

೧೯೪೭

|| ಶ್ರೀ ||

## ಪೀಠಿಕೆ

ಮತ್ಸ್ಯಪುರಾಣದ ರತ್ನಮಾಲೆಗೆ ಮೂರನೆಯ ಪದಕವು ಕೂಡಿತು. ಕನ್ನಡ ಮಾತೆಯ ಕಂಠದೇಶವನ್ನು ಬೆಳಗಿಸುವ ಪುಣ್ಯವು ಇದಕ್ಕೊದಗಿತು.

ಈ ಮೂರನೆಯ ಸಂಪುಟದಲ್ಲಿ ಭೂಗೋಳವರ್ಣನ, ಖಗೋಳವರ್ಣನ, ತ್ರಿಪುರದಹನವೃತ್ತಾಂತ ಮತ್ತು ಮನ್ವಂತರಾನುಕಥನಗಳೆಂಬ ನಾಲ್ಕು ಮುಖ್ಯ ವಿಷಯಗಳು ಪ್ರತಿಪಾದಿತವಾಗಿವೆ. ಏನು ಕೇಳಿದರೆ ಅದಕ್ಕೆ ಉತ್ತರಕೊಡಲು ಸಿದ್ಧನಾಗಿ ಸರ್ವಜ್ಞನಾದ ಸೂತಪೌರಾಣಿಕನು ಕುಳಿತಿದ್ದಾನೆ. ಬೇರೆ ಹವ್ಯಾಸ ವಾವುದೂ ಇಲ್ಲದೆ ಜ್ಞಾನಾಮೃತದಲ್ಲಿಯೇ ನೆಟ್ಟ ಮನಸ್ಸಿನಿಂದ ನೂರಾರು ಜನ ಋಷಿಗಳು ಕಾದುಕೊಂಡಿದ್ದಾರೆ. ಹೀಗಿರುವಾಗ ವಿಷಯಗಳಿಗೆ ಕೊರತೆಯೇನು? ಸೃಷ್ಟಿಯ ಒಂದೊಂದು ವಸ್ತುವೂ ಸೃಷ್ಟಿಕರ್ತನ ಮಹಿಮೆಯ ಕೈಗನ್ನಡಿಯಾಗಿದೆ. ಅದರ ಸೌಂದರ್ಯವನ್ನೂ ವೈಚಿತ್ರ್ಯವನ್ನೂ ಅನುಭವಿಸಿದಂತೆಲ್ಲ ಮನಸ್ಸು ಹೊರಗಣ ಪ್ರಪಂಚದಿಂದ ದೂರದೂರವಾಗಿ ಸರಿಯುತ್ತ, ತೆರೆಯ ಮರೆಯಲ್ಲಿ ಅಡಗಿರುವ ಸೌಂದರ್ಯನಿಧಿಯಾದ ಆ ಪರಮಾತ್ಮನಲ್ಲಿ ಲೀನವಾಗುತ್ತದೆ. ಜೀವನ ಯಾತ್ರೆಯನ್ನು ಸಾಗಿಸಲು ಮಾನವನು ದಿನದಿನವೂ ಪಡೆಯುತ್ತಿರುವ ಸೌಲಭ್ಯ ಗಳನ್ನು ವಿಮರ್ಶಿಸಿದರೆ ಅವನ ಹೃದಯವು ಕೃತಜ್ಞತೆಯ ಹುಚ್ಚುಹೊಳೆಯಲ್ಲಿ ಕೊಚ್ಚಿಹೋಗಿ ದಯಾಮಯನಾದ ಆ ಸರ್ವೇಶ್ವರನನ್ನು ಆಶ್ರಯಿಸಿಕೊಂಡು ನಿಲ್ಲುತ್ತದೆ. ಇದೇ ಋಷಿಗಳ ದೃಷ್ಟಿ. ಹೀಗೆಂದ ಮೇಲೆ ಯಾವ ವಿಷಯವನ್ನು ವರ್ಣಿಸಿದರೆ ತಾನೆ ಏನು? ಸಕಲವೂ ಅವನೇ; ಎಲ್ಲವೂ ಅವನದೇ.

ಪುರಾಣಕಾರರು ಭೂಗೋಳದ ಮತ್ತು ಖಗೋಳದ ವರ್ಣನೆಯನ್ನು ತಮ್ಮದೇ ಆದ ಒಂದು ವಿಶಿಷ್ಟರೀತಿಯಲ್ಲಿ ಮಾಡಿದ್ದಾರೆ. ಅವರು ಹೇಳುವ ಎಷ್ಟೋ ಅಭಿಪ್ರಾಯಗಳು ವರಾಹಮಿಹಿರ, ಭಾಸ್ಕರ, ಆರ್ಯಭಟ ಮೊದಲಾದ ಜ್ಯೋತಿ ಶ್ಶಾಸ್ತ್ರಜ್ಞರಿಗೆ ಸಮ್ಮತವಿಲ್ಲ. ಭೂಮಂಡಲದ ಸ್ವರೂಪ, ಗ್ರಹಗಳ ಪರಿಮಾಣ, ಸನ್ನಿವೇಶ ಮತ್ತು ಲಕ್ಷಣ, ಚಂದ್ರನ ವೃದ್ಧಿಕ್ಷಯಗಳು, ಸೂರ್ಯಚಂದ್ರರ ಗ್ರಹಣ ಗಳು ಮುಂತಾದ ವಿಷಯಗಳಲ್ಲಿ ಜ್ಯೋತಿಶ್ಶಾಸ್ತ್ರಕ್ಕೂ ಪುರಾಣಕ್ಕೂ ಏಕಾಭಿ

ಪ್ರಾಯವು ಬಾರದು. "ಗಾತ್ರದಲ್ಲಿ ಚಂದ್ರನು ಸೂರ್ಯನಿಗೆ ಇಮ್ಮಡಿಯಾಗಿದ್ದಾನೆ. ಭೂಮಿಯು ಇವರಿಬ್ಬರಿಗಿಂತ ದೊಡ್ಡದು. ಸೂರ್ಯಮಂಡಲದ ಸುತ್ತಳತೆ ಇಪ್ಪತ್ತೇಳು ಸಾವಿರ ಯೋಜನ. ಮುಂತಾದ ಪುರಾಣದ ಅಭಿಪ್ರಾಯಗಳು ಖಗೋಳಶಾಸ್ತ್ರಜ್ಞರಿಗೆ ಸರಿಹೋಗವು.

ವಸ್ತುತಃ ಪೌರಾಣಿಕರ ಮತ್ತು ಜ್ಯೌತಿಷ್ಕರ ದೃಷ್ಟಿಯಲ್ಲೇ ಭೇದವಿದೆ. ವಿಶ್ವದ ವೈಚಿತ್ರ್ಯ, ಸೃಷ್ಟಿಕರ್ತನ ಅದ್ಭುತಶಕ್ತಿ, ಭಗವದ್ಭಕ್ತಿ, ಕರ್ಮಶ್ರದ್ಧೆ, ಸಾತ್ವಿಕ ವೃತ್ತಿ ಇವುಗಳ ಕಡೆಗೆ ಮಾನವರ ಮನಸ್ಸನ್ನು ಸೆಳೆಯುವುದು ಪುರಾಣಗಳ ಉದ್ದೇಶ. ಇದು ಈಡೇರುವ ಸಲುವಾಗಿ ತಕ್ಕ ಸನ್ನಿವೇಶಗಳನ್ನು ಕಲ್ಪಿಸಿ, ಜನರ ಮನಸ್ಸಿಗೆ ರಂಜನವಾಗುವಂತೆ ಅರ್ಥವಾದದ ಮೂಲಕ ಅವು ವಿಷಯವನ್ನು ಪ್ರತಿಪಾದಿಸುತ್ತವೆ. "ಈ ಭೂಮಿ, ಸೂರ್ಯ, ಚಂದ್ರ, ನಕ್ಷತ್ರ, ಆಕಾಶ ಇವೆಲ್ಲವೂ ಒಂದೇ ಒಂದು ಬ್ರಹ್ಮಾಂಡದ ಏಕದೇಶ. ಭಗವಂತನ ಸೃಷ್ಟಿಯಲ್ಲಿ ಈ ತೆರನಾದ ಅಂಡಗಳು ಕೋಟಿಗಟ್ಟಲೆಯಾಗಿವೆ" ಎಂದು ಪುರಾಣಗಳು ಘೋಷಿಸುತ್ತವೆ. ಜ್ಯೋತಿಶ್ಶಾಸ್ತ್ರದ ದೃಷ್ಟಿ ಇದಲ್ಲ. ಅದರದು ಬಣ್ಣಕಟ್ಟದ ನೇರವಾದ ಮಾತು. ಲೆಕ್ಕಾಚಾರವನ್ನು ಎಳ್ಳಷ್ಟೂ ಮೀರದೆ ಜಗತ್ತಿನ ಸ್ವರೂಪವನ್ನು ಇದ್ದದ್ದು ಇದ್ದಹಾಗೆ ತಿಳಿಸುವುದೇ ಅದರ ಉದ್ದೇಶ.

ತ್ರಿಪುರದಹನದ ಕಥೆಯು ಬಹು ಹೃದಯಂಗಮವಾಗಿದೆ. ದುಷ್ಟನಿಗ್ರಹ ಮತ್ತು ಶಿಷ್ಟಪರಿಪಾಲನದಲ್ಲಿ ಭಗವಂತನ ಆಸಕ್ತಿ, ಆತನ ನ್ಯಾಯತತ್ಪರತೆ ಇವು ಅದರಲ್ಲಿ ಸ್ಪಷ್ಟವಾಗಿ ಕಾಣುವುವು. "ಈ ಜಗತ್ತಿನಲ್ಲಿ ಜನಿಸಿದ ಮೇಲೆ ಮರಣದ ಹಿಡಿತದಿಂದ ಪಾರಾಗುವುದು ಸಾಧ್ಯವೇ ಇಲ್ಲ. ಮೃತ್ಯುವಿನ ಕೈ ಬಲು ಉದ್ದ; ಎಲ್ಲಿದ್ದರೂ ಅದಕ್ಕೆ ಎಟುಕಿಸುತ್ತದೆ. ಸುಖಸಂಪದಗಳು ಎಷ್ಟಿದ್ದರೂ ಕೊನೆಗಾಲಕ್ಕೆ ಯಾವುದೂ ನೆರವಾಗದು. ಎಷ್ಟೇ ಪ್ರಬಲನಾಗಿರಲಿ ಜಗತ್ತಿಗೆ ಕಂಟಕನಾದವನನ್ನು ದೈವವೇ ನಾಶಮಾಡುತ್ತದೆ" ಎಂಬ ಚಿರಂತನವಾದ ಸಂದೇಶವನ್ನು ತ್ರಿಪುರಾಸುರರ ಜೀವನವು ಲೋಕಕ್ಕೆ ಸಾರಿ ಹೇಳುತ್ತದೆ.

ಕೊನೆಯ ಆರು ಅಧ್ಯಾಯಗಳು ಮನ್ವಂತರವನ್ನು ವರ್ಣಿಸುತ್ತವೆ. ಚತುರ್ಯುಗಗಳ ಪರಿಮಾಣ ಮತ್ತು ಲಕ್ಷಣ, ಧರ್ಮದ ಉನ್ನತಿ ಮತ್ತು ಅವನತಿ, ಅದಕ್ಕೆ ತಕ್ಕಂತೆ ಜನರ ಜೀವನದಲ್ಲಿ ಸುಖದುಃಖಗಳ ಏರುತಗ್ಗುಗಳು, ಶ್ರೌತಸ್ಮಾರ್ತ ಧರ್ಮಗಳು ಇವೆಲ್ಲವೂ ಈ ಭಾಗದಲ್ಲಿ ವಿವರಿಸಲ್ಪಟ್ಟಿವೆ. ಮಂತ್ರಗಳನ್ನು ಸಾಕ್ಷಾತ್ಕ

ರಿಸಿಕೊಂಡು ಅವುಗಳನ್ನು ಪ್ರಚಾರಕ್ಕೆ ತಂದ ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯ ವರ್ಣಗಳಿಗೆ ಸೇರಿದ ತೊಂಬತ್ತೆರಡು ಮಂದಿ ಋಷಿಗಳ ಲೋಕೋಪಕಾರವನ್ನು ಸ್ಮರಿಸಿ ಸಂಪುಟವು ಸಮಾಪ್ತವಾಗುತ್ತದೆ.

ಆಳುವ ಮಹಾಸ್ವಾಮಿಯವರಾದ ಶ್ರೀಮಜ್ಜಯಚಾಮರಾಜೇಂದ್ರವೊಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ. ರವರ ಔದಾರ್ಯದ ಉದ್ಯಾನದಲ್ಲಿ ಸಾಹಿತ್ಯ, ಕಲೆ ಮತ್ತು ಶಾಸ್ತ್ರಗಳ ಬಳ್ಳಿಯು ಸೊಂಪಾಗಿ ಬೆಳೆಯುತ್ತಿದೆ. ಅದರ ನೂರಾರು ಹೂಗಳು ನಾಡಿನಲ್ಲೆಲ್ಲ ಸವಿಗಂಪನ್ನು ಬೀರುತ್ತಿವೆ. ಅವರ ಕೀರ್ತಿ ಬೆಳಗಲಿ. ಜಗದೀಶ್ವರನು ಅವರಿಗೆ ಮಂಗಳದ ಪರಂಪರೆಯನ್ನು ಕರುಣಿಸಲಿ.

ಸರ್ವಜಿತ್ಸಂವತ್ಸರ
ವೈಶಾಖ ಶುದ್ಧ ಬಿದಿಗೆ ಬುಧವಾರ
೨೩-೪-೧೯೪೭.

**ನಾಜಪೇಯಂ ಶ್ರೀರಂಗಾಚಾರ್**
ಅನುವಾದಕ

# ವಿಷಯ ಸೂಚಿಕೆ


| ಅಧ್ಯಾಯ | ವಿಷಯ | ಪುಟ |
| --- | --- | --- |
| ೧೧೩. | ಭೂಗೋಳ ವರ್ಣನ (ಜಂಬೂ ಮೊದಲಾದ ಸಪ್ತದ್ವೀಪಗಳು,<br>ವರ್ಷಪರ್ವತಗಳು, ಭಾರತ ಮುಂತಾದ ವರ್ಷಗಳು) .... | ೧ |
| ೧೧೪. | ಭೂಗೋಳವರ್ಣನ (ಭಾರತವರ್ಷದ ಮಹಿಮೆ, ಸಪ್ತಕುಲ<br>ಪರ್ವತಗಳು, ನದಿಗಳು ಮತ್ತು ದೇಶಗಳು, ಕಿಂಪುರುಷ<br>ಮತ್ತು ಹರಿವರ್ಷಗಳು) .... .... .... | ೧೯ |
| ೧೧೫. | ಭೂಗೋಳವರ್ಣನ (ಪುರೂರವಸ್ಸಿನ ಪೂರ್ವಜನ್ಮ ವೃತ್ತಾಂತ,<br>ಆತನು ತಪೋವನಕ್ಕೆ ಹೋದುದು, ಐರಾವತೀನದಿಯನ್ನು<br>ಕಂಡುದು) .... .... .... .... | ೩೭ |
| ೧೧೬. | ಭೂಗೋಳವರ್ಣನ (ಐರಾವತೀನದಿಯ ವರ್ಣನೆ) .... | ೪೨ |
| ೧೧೭. | ಭೂಗೋಳವರ್ಣನ (ಹಿಮಾಲಯ ಪರ್ವತದ ವರ್ಣನೆ) .... | ೪೯ |
| ೧೧೮. | ಭೂಗೋಳವರ್ಣನ (ಅತ್ರಿಮಹರ್ಷಿಯ ಆಶ್ರಮವರ್ಣನೆ) .... | ೫೫ |
| ೧೧೯. | ಭೂಗೋಳವರ್ಣನ (ದೇವಾಲಯದ ವರ್ಣನೆ, ಅತ್ರಿಮಹರ್ಷಿಯು<br>ಪ್ರತಿಷ್ಠೆಮಾಡಿದ್ದ ವಾಸುದೇವ ಮೂರ್ತಿಯ ವರ್ಣನೆ,<br>ಪುರೂರವ ರಾಜನ ತಪಸ್ಸು) .... .... | ೭೦ |
| ೧೨೦. | ಭೂಗೋಳವರ್ಣನ (ಗಂಧರ್ವರ ಮತ್ತು ಅಪ್ಸರಸ್ತ್ರೀಯರ<br>ಕ್ರೀಡಾವರ್ಣನೆ, ರಾಜರ್ಷಿಗೂ ಅವರಿಗೂ ನಡೆದ ಸಂವಾದ,<br>ಅತ್ರಿಮುನಿಗೆ ಪುರೂರವರಾಜನು ತನ್ನ ಕನಸನ್ನು ಹೇಳಿದುದು) | ೮೦ |
| ೧೨೧. | ಭೂಗೋಳವರ್ಣನ (ಜಂಬೂದ್ವೀಪವರ್ಣನೆ) .... .... | ೯೧ |
| ೧೨೨. | ಭೂಗೋಳವರ್ಣನ (ಶಾಕ, ಕುಶ, ಕ್ರೌಂಚ ಮತ್ತು ಶಾಲ್ಮಲಿದ್ವೀಪ<br>ಗಳ ವರ್ಣನೆ, ಅಲ್ಲಿನ ನಿವಾಸಿಗಳ ಆಚಾರ ವ್ಯವಹಾರಗಳು) | ೧೦೮ |
| ೧೨೩. | ಭೂಗೋಳವರ್ಣನ (ಗೋಮೇದ ಮತ್ತು ಪುಷ್ಕರದ್ವೀಪಗಳು,<br>ಇವುಗಳನ್ನು ಸುತ್ತುಗಟ್ಟಿರುವ ಸುರಾಸಮುದ್ರ ಮತ್ತು<br>ಶುದ್ಧೋದಕಸಮುದ್ರಗಳು, ಈ ದ್ವೀಪನಿವಾಸಿಗಳ ಲಕ್ಷಣ) | ೧೩೦ |

# ವಿಷಯ ಸೂಚಿಕೆ


| ಅಧ್ಯಾಯ | ವಿಷಯ | ಪುಟ |
|---|---|---|
| ೧೨೪. | ಖಗೋಳವರ್ಣನ (ಸೂರ್ಯಚಂದ್ರರ ಮಂಡಲಪ್ರಮಾಣ, ಗತಿಭೇದಗಳು, ಭೂಮಂಡಲದ ವಿಸ್ತಾರ, ದಕ್ಷಿಣೋತ್ತರಾಯನಗಳು, ದೇವಯಾನ ಪಿತೃಯಾನಗಳು) .... .... | ೧೪೫ |
| ೧೨೫. | ಖಗೋಳವರ್ಣನ (ಸೂರ್ಯಚಂದ್ರರ ಸಂಚಾರಕ್ರಮ, ಮೇಘಪ್ರಭೇದಗಳು, ಸೂರ್ಯನ ರಥದ ಸ್ವರೂಪ, ಧ್ರುವಮಂಡಲದ ವರ್ಣನೆ) .... .... .... .... | ೧೬೯ |
| ೧೨೬. | ಖಗೋಳವರ್ಣನ (ವಸಂತ ಮೊದಲಾದ ಋತುಗಳಲ್ಲಿ ಸೂರ್ಯನೊಡನೆ ಸಂಚರಿಸುವ ಬೇರೆ ಬೇರೆ ಗಣಗಳು, ಚಂದ್ರನ ರಥದ ಸ್ವರೂಪ, ಅವನ ವೃದ್ಧಿಕ್ಷಯಗಳು) .... .... | ೧೮೨ |
| ೧೨೭. | ಖಗೋಳವರ್ಣನ (ಕುಜ, ಬುಧ, ಗುರು ಮೊದಲಾದವರ ರಥಗಳ ಲಕ್ಷಣ, ಧ್ರುವನ ಮಹಿಮೆ, ಶಿಂಶುಮಾರವೆಂಬ ಕಾಲಚಕ್ರದ ಸ್ವರೂಪ) .... .... .... | ೧೯೮ |
| ೧೨೮. | ಖಗೋಳವರ್ಣನ (ಅಗ್ನಿಯ ಮೂರು ಪ್ರಭೇದಗಳು, ಸೂರ್ಯನ ಬಗೆಬಗೆಯ ಕಿರಣಗಳು ಮತ್ತು ಅವುಗಳ ಕಾರ್ಯ, ಅಂತರಿಕ್ಷದಲ್ಲಿ ಗ್ರಹಗಳ ಸನ್ನಿವೇಶ) .... .... .... | ೨೦೫ |
| ೧೨೯. | ತ್ರಿಪುರೋಪಾಖ್ಯಾನ (ಮಯನು ಬ್ರಹ್ಮನಿಂದ ವರವನ್ನು ಪಡೆದುದು, ಚಿನ್ನ, ಬೆಳ್ಳಿ ಮತ್ತು ಕಬ್ಬಿಣಗಳಿಂದ ಮೂರು ಪಟ್ಟಣಗಳನ್ನು ರಚಿಸಿದುದು) .... .... .... | ೨೨೩ |
| ೧೩೦. | ತ್ರಿಪುರೋಪಾಖ್ಯಾನ (ತ್ರಿಪುರವರ್ಣನ) .... .... | ೨೩೨ |
| ೧೩೧. | ತ್ರಿಪುರೋಪಾಖ್ಯಾನ (ತ್ರಿಪುರಾಸುರರ ಪ್ರಾಬಲ್ಯ, ಹಸಿವು ಬಾಯಾರಿಕೆಗಳೂ ಈರ್ಷ್ಯಾಸೂಯೆಗಳೂ ತ್ರಿಪುರವನ್ನು ಪ್ರವೇಶಿಸಿದುದು, ಮಯನು ದುಃಸ್ವಪ್ನವನ್ನು ಕಂಡುದು, ದಾನವರು ಅಧರ್ಮನಿರತರಾದುದು) .... .... | ೨೩೯ |
| ೧೩೨. | ತ್ರಿಪುರೋಪಾಖ್ಯಾನ (ದೇವತೆಗಳು ಬ್ರಹ್ಮನನ್ನು ಮರೆಹೊಕ್ಕುದು, ಎಲ್ಲರೂ ಕೂಡಿ ಪರಮೇಶ್ವರನನ್ನು ಸ್ತೋತ್ರಮಾಡಿದುದು.) | ೨೫೦ |
| ೧೩೩. | ತ್ರಿಪುರೋಪಾಖ್ಯಾನ (ದೇವತೆಗಳಿಗೆ ಮಹಾದೇವನ ಅಭಯದಾನ, ಅದ್ಭುತವಾದ ರಥದ ನಿರ್ಮಾಣ, ಜೈತ್ರಯಾತ್ರಾವರ್ಣನ) | ೨೫೭ |

## ವಿಷಯ ಸೂಚಿಕೆ


| ಅಧ್ಯಾಯ | ವಿಷಯ | ಪುಟ |
|---|---|---|
| ೧೩೪. | ತ್ರಿಪುರೋಪಾಖ್ಯಾನ (ತ್ರಿಪುರನಗರಕ್ಕೆ ನಾರದಮಹರ್ಷಿಯ ಆಗಮನ, ಮಯನಾರದರ ಸಂವಾದ, ಹಿಂಜರಿಯದೆ ಯುದ್ಧ ಮಾಡಬೇಕೆಂದು ದೈತ್ಯರಿಗೆ ಮಯನ ಪ್ರೋತ್ಸಾಹ) .... | ೨೭೨ |
| ೧೩೫. | ತ್ರಿಪುರೋಪಾಖ್ಯಾನ (ದೇವಾಸುರರ ಯುದ್ಧ, ಮಯನ ಮಾಯೆಯಿಂದ ಗಣೇಶ್ವರರು ಮೋಹಗೊಂಡುದು, ಇಂದ್ರಾದಿ ದಿಕ್ಪಾಲಕರ ಯುದ್ಧ, ದೈತ್ಯರ ಪರಾಜಯ) .... | ೨೮೦ |
| ೧೩೬. | ತ್ರಿಪುರೋಪಾಖ್ಯಾನ (ವಿದ್ಯುನ್ಮಾಲಿಯ ಮರಣ, ಮೃತರಾದ ದಾನವರನ್ನು ಬದುಕಿಸುವುದಕ್ಕಾಗಿ ಮಯನು ಅಮೃತದ ಬಾವಿಯನ್ನು ನಿರ್ಮಿಸಿದುದು, ವಿಷ್ಣುವು ಎತ್ತಿನ ರೂಪದಿಂದ ಬಂದು ಅದನ್ನು ಕುಡಿದುಬಿಟ್ಟುದು) .... .... | ೨೮೯ |
| ೧೩೭. | ತ್ರಿಪುರೋಪಾಖ್ಯಾನ (ತ್ರಿಪುರನಗರದ ಮುತ್ತಿಗೆ, ಮಯನು ತನ್ನ ನಗರದೊಡನೆ ಸಮುದ್ರವನ್ನು ಪ್ರವೇಶಿಸಿದುದು, ಇಂದ್ರನು ಅವನ ಮೇಲೆ ಯುದ್ಧಕ್ಕೆ ಹೊರಟುದು) .... .... | ೩೧೪ |
| ೧೩೮. | ತ್ರಿಪುರೋಪಾಖ್ಯಾನ (ತಾರಕಾಖ್ಯನ ವಧೆ, ದೇವಾಸುರ ಯುದ್ಧ) | ೩೨೩ |
| ೧೩೯. | ತ್ರಿಪುರೋಪಾಖ್ಯಾನ (ಮಯನು ದಾನವರನ್ನು ಯುದ್ಧಕ್ಕಾಗಿ ಪ್ರೋತ್ಸಾಹಿಸಿದುದು, ದಾನವರ ಚಂದ್ರಿಕಾವಿಹಾರವರ್ಣನೆ) | ೩೩೯ |
| ೧೪೦. | ತ್ರಿಪುರೋಪಾಖ್ಯಾನ (ನಂದಿಯಿಂದ ವಿದ್ಯುನ್ಮಾಲಿಯ ವಧೆ. ಪರಮೇಶ್ವರನು ತ್ರಿಪುರವನ್ನು ದಹಿಸಿದುದು, ಹೆಂಗಸರ ಮತ್ತು ಮಕ್ಕಳ ಗೋಳಾಟ) .... .... .... | ೩೫೩ |
| ೧೪೧. | ಮನ್ವಂತರಾನುಕೀರ್ತನ (ಪುರೂರವರಾಜನು ಪಿತೃಗಳಿಗೆ ತೃಪ್ತಿಯನ್ನುಂಟುಮಾಡುವ ರೀತಿ, ಅಮಾವಾಸ್ಯೆಯ ಮತ್ತು ಹುಣ್ಣಿಮೆಯ ಪ್ರಭೇದಗಳು, ಪಿತೃದೇವತೆಗಳ ಬೇರೆ ಬೇರೆ ಪಂಗಡಗಳು ಮತ್ತು ಅವರನ್ನು ತೃಪ್ತಿಗೊಳಿಸುವ ಕ್ರಮ) | ೩೭೩ |
| ೧೪೨. | ಮನ್ವಂತರಾನುಕೀರ್ತನ (ವಿಧವಿಧವಾದ ಕಾಲಮಾನಗಳು, ಮನುಷ್ಯವರ್ಷ, ದೇವವರ್ಷ, ಪಿತೃವರ್ಷ, ಯುಗಪ್ರಮಾಣ, ತ್ರೇತಾಯುಗಸ್ವಭಾವ) .... .... .... | ೩೯೩ |

## ವಿಷಯ ಸೂಚಿಕೆ

**ಅಧ್ಯಾಯ** | **ವಿಷಯ** | **ಪುಟ**


**೧೪೩.** ಮನ್ವಂತರಾನುಕೀರ್ತನ (ತ್ರೇತಾಯುಗದಲ್ಲಿ ಯಜ್ಞವು ಪ್ರಚಾರಕ್ಕೆ ಬಂದುದು, ಋಷಿಗಳಿಗೂ ದೇವತೆಗಳಿಗೂ ಸಂವಾದ, ವಸುರಾಜನಿಗೆ ಋಷಿಗಳ ಶಾಪ) .... .... ೪೧೧

**೧೪೪.** ಮನ್ವಂತರಾನುಕೀರ್ತನ (ದ್ವಾಪರಯುಗದ ಧರ್ಮಗಳು, ಕಲಿಯುಗದ ಲಕ್ಷಣ, ಯುಗಾಂತದಲ್ಲಿ ಪ್ರಮತಿಯಿಂದ ಧರ್ಮಕಂಟಕರ ನಿಗ್ರಹ, ಕೃತಯುಗದ ಪ್ರಾದುರ್ಭಾವ) .... ೪೨೧

**೧೪೫.** ಮನ್ವಂತರಾನುಕೀರ್ತನ (ಯುಗಭೇದದಿಂದ ಪ್ರಾಣಿಗಳ ಶರೀರದ ಪ್ರಮಾಣದಲ್ಲಿ ವ್ಯತ್ಯಾಸ, ಆಚಾರ್ಯ, ಸಾಧು ಮೊದಲಾದವರ ಲಕ್ಷಣ, ಮಂತ್ರಕರ್ತರೆಂದು ಪ್ರಸಿದ್ಧರಾದ ತೊಂಬತ್ತೆರಡು ಜನ ಋಷಿಗಳು. ಈಶ್ವರರು, ಋಷೀಕರು ಮೊದಲಾದ ಐದು ಪಂಗಡದ ಋಷಿಗಳು).... .... .... ೪೪೪

॥ ಶ್ರೀ ॥

ಓಂ ತತ್ಸದ್ಬ್ರಹ್ಮಣೇ ನಮಃ

# ಶ್ರೀಮದ್ದ್ವೈಪಾಯನಮುನಿಪ್ರಣೀತಂ

# ಶ್ರೀಮತ್ಸ್ಯಮಹಾಪುರಾಣಂ

---

## ಅಥ ತ್ರಯೋದಶಾಧಿಕಶತತಮೋಽಧ್ಯಾಯಃ

॥ ಋಷಯ ಊಚುಃ ॥

ಕತಿ ದ್ವೀಪಾಃ ಸಮುದ್ರಾ ವಾ ಪರ್ವತಾ ವಾ ಕತಿ ಪ್ರಭೋ ।
ಕಿಯಂತಿ ಚೈವ ವರ್ಷಾಣಿ ತೇಷು ನದ್ಯಶ್ಚ ಕಾಃ ಸ್ಮೃತಾಃ ॥ ೧ ॥

ಮಹಾಭೂಮಿಪ್ರಮಾಣಂ ಚ ಲೋಕಾಲೋಕಸ್ತಥೈವ ಚ ।
ಪರ್ಯಾಪ್ತಿಂ ಪರಿಮಾಣಂ ಚ ಗತಿಶ್ಚಂದ್ರಾರ್ಕಯೋಸ್ತಥಾ ॥ ೨ ॥

ಏತತ್ಪ್ರಬ್ರೂಹಿ ನಃ ಸರ್ವಂ ವಿಸ್ತರೇಣ ಯಥಾರ್ಥವಿತ್ ।
ತ್ವದುಕ್ತಮೇತತ್ಸಕಲಂ ಶ್ರೋತುಮಿಚ್ಛಾಮಹೇ ವಯಂ ॥ ೩ ॥

---

೧. ಋಷಿಗಳು ಹೇಳಿದರು.—ಓ ಪ್ರಭೂ, ದ್ವೀಪಗಳೂ, ಸಮುದ್ರಗಳೂ, ಪರ್ವತಗಳೂ ಎಷ್ಟಿವೆ? ಭರತ, ಕಿಂಪುರುಷ ಮೊದಲಾದ ವರ್ಷಗಳ (ಅತ್ಯಂತ ವಿಸ್ತಾರವಾದ ಭೂಭಾಗಗಳ) ಸಂಖ್ಯೆ ಎಷ್ಟು? ಅವುಗಳಲ್ಲಿ ಹರಿಯುವ ನದಿಗಳು ಯಾವುವು?

೨-೩. ಅಖಂಡ ಭೂಮಂಡಲದ ಪ್ರಮಾಣವೆಷ್ಟು? ಲೋಕಾಲೋಕ ಪರ್ವತದ ರಚನೆಯೆಂತಿರುವುದು? ಚಂದ್ರಸೂರ್ಯರ ಸಂಚಾರಕ್ರಮವು ಹೇಗೆ? ಅವರ ಮಂಡಲದ ಅಡ್ಡಳತೆ ಮತ್ತು ಸುತ್ತಳತೆ ಎಷ್ಟು? ಇದೆಲ್ಲವನ್ನೂ ವಿಸ್ತಾರವಾಗಿ ನಮಗೆ ಹೇಳು. ಓ ಸೂತಾ, ನೀನು ಸಕಲ ವಿಷಯಗಳನ್ನೂ ಬಲ್ಲವನು. ನಿನ್ನಿಂದ ಇದನ್ನೆಲ್ಲ ಕೇಳಬೇಕೆಂದಿದ್ದೇವೆ.

**॥ ಸೂತ ಉವಾಚ ॥**

**ದ್ವೀಪಭೇದಸಹಸ್ರಾಣಿ ಸಪ್ತ ಚಾಂತರ್ಗತಾನಿ ಚ ।**
**ನ ಶಕ್ಯಂತೇ ಕ್ರಮೇಣೇಹ ವಕ್ತುಂ ವೈ ಸಕಲಂ ಜಗತ್ ॥ ೪ ॥**

**ಸಪ್ತೈವ ತು ಪ್ರವಕ್ಷ್ಯಾಮಿ ಚಂದ್ರಾದಿತ್ಯಗ್ರಹೈಃ ಸಹ ।**
**ತೇಷಾಂ ಮನುಷ್ಯತರ್ಕೇಣ ಪ್ರಮಾಣಾನಿ ಪ್ರಚಕ್ಷತೇ ॥ ೫ ॥**

**ಅಚಿಂತ್ಯಾಃ ಖಲು ಯೇ ಭಾವಾಸ್ತಾಂಸ್ತು ತರ್ಕೇಣ ಸಾಧಯೇತ್ ।**
**ಪ್ರಕೃತಿಭ್ಯಃ ಪರಂ ಯಚ್ಚ ತದಚಿಂತ್ಯಸ್ಯ ಲಕ್ಷಣಂ ॥ ೬ ॥**

**ಸಪ್ತ ವರ್ಷಾಣಿ ವಕ್ಷ್ಯಾಮಿ ಜಂಬೂದ್ವೀಪಂ ಯಥಾವಿಧಂ ।**
**ವಿಸ್ತರಂ ಮಂಡಲಂ ಯಚ್ಚ ಯೋಜನೈಸ್ತನ್ನಿಬೋಧತ ॥ ೭ ॥**

---

೪. ಸೂತಪೌರಾಣಿಕನು ಹೇಳಿದನು.—ದ್ವೀಪಗಳಲ್ಲಿ ಸಾವಿರಾರು ಭೇದಗಳುಂಟು; ಆದರೆ ಅವೆಲ್ಲವೂ ಏಳು ದ್ವೀಪಗಳಲ್ಲಿ ಅಡಗಿವೆ. ಜಗತ್ತೆಲ್ಲವನ್ನೂ ಕ್ರಮವಾಗಿ ವಿವರಿಸಿ ಹೇಳುವುದೆಂದರೆ ಯಾರಿಗೂ ಸಾಧ್ಯವಿಲ್ಲ.

೫. ಆದುದರಿಂದ ಈಗ ನಾನು ವಿವರಿಸುವುದು ಏಳು ದ್ವೀಪಗಳನ್ನು ಮಾತ್ರ. ಅವುಗಳೊಡನೆ ಚಂದ್ರಸೂರ್ಯಾದಿ ಗ್ರಹಗಳ ವಿಷಯವನ್ನೂ ತಿಳಿಸುವೆನು. ಪ್ರಾಜ್ಞರು ಅವುಗಳ ಅಳತೆಯನ್ನು ಅನುಮಾನ ಪ್ರಮಾಣದಿಂದ ತಿಳಿದು ಹೇಳಿದ್ದಾರೆ.

೬. ಏಕೆಂದರೆ ಉಳಿದ ಪ್ರಮಾಣಗಳಿಂದ ಅರಿಯಲು ಸಾಧ್ಯವಾಗದ ವಿಷಯಗಳನ್ನು ಅನುಮಾನದಿಂದ ಸಾಧಿಸಬೇಕು. ಪ್ರಕೃತಿಯ ವಿಕಾರವೆನಿಸಿದ ಕಣ್ಣು, ಕಿವಿ ಮೊದಲಾದ ಇಂದ್ರಿಯಗಳಿಗೆ ನಿಲುಕದ ವಿಚಾರವು ಅನುಮಾನಕ್ಕೆ ವಿಷಯವಾಗುತ್ತದೆ.

೭. ಜಂಬೂದ್ವೀಪವನ್ನೂ, ಅದರಲ್ಲಿ ಅಂತರ್ಗತವಾಗಿರುವ ಹರಿವರ್ಷ, ಕಿಂಪುರುಷವರ್ಷ ಮೊದಲಾದ ಏಳು ವರ್ಷಗಳನ್ನೂ ವರ್ಣಿಸುವೆನು. ಜಂಬೂದ್ವೀಪದ ವಿಸ್ತಾರ, ಆಕಾರ ಮುಂತಾದ ವಿಷಯಗಳನ್ನು ಋಷಿಗಳ ಅಭಿಪ್ರಾಯವನ್ನು ಅನುಸರಿಸಿ ತಿಳಿಸುವೆನು. ಈಗ ನಾನು ಹೇಳುವ ಅಳತೆಯು ಯೋಜನದ ಲೆಕ್ಕದಲ್ಲಿರುವುದು.

**ಯೋಜನಾನಾಂ ಸಹಸ್ರಾಣಿ ಶತಂ ದ್ವೀಪಸ್ಯ ವಿಸ್ತರಃ ।**
**ನಾನಾಜನಪದಾಕೀರ್ಣಂ ಪುರೈಶ್ಚ ವಿವಿಧೈಃ ಶುಭೈಃ ॥ ೮ ॥**

**ಸಿದ್ಧಚಾರಣಸಂಕೀರ್ಣಂ ಪರ್ವತೈರುಪಶೋಭಿತಂ ।**
**ಸರ್ವಧಾತುಪಿನದ್ಧೈಸ್ತೈಃ ಶಿಲಾಜಾಲಸಮುದ್ಗತೈಃ ॥ ೯ ॥**

**ಪರ್ವತಪ್ರಭವಾಭಿಶ್ಚ ನದೀಭಿಶ್ಚ ಸಮಂತತಃ ।**
**ಪ್ರಾಗಾಯತಾ ಮಹಾಪಾರ್ಶ್ವಾಃ ಷಡಿಮೇ ವರ್ಷಪರ್ವತಾಃ ॥೧೦॥**

**ಅವಗಾಹ್ಯ ಹ್ಯುಭಯತಃ ಸಮುದ್ರೌ ಪೂರ್ವಪಶ್ಚಿಮೌ ।**
**ಹಿಮಪ್ರಾಯಶ್ಚ ಹಿಮವಾನ್ ಹೇಮಕೂಟಶ್ಚ ಹೇಮವಾನ್ ॥೧೧॥**

**ಸರ್ವತಃ ಸುಮುಖಶ್ಚಾಪಿ ನಿಷಧಃ ಪರ್ವತೋ ಮಹಾನ್ ।**
**ಚಾತುರ್ವರ್ಣ್ಯಸ್ತು ಸೌವರ್ಣೋ ಮೇರುಶ್ಚೋಲ್ಬಮಯಃ ಸ್ಮೃತಃ ॥೧೨॥**

---

೮-೯. ಜಂಬೂದ್ವೀಪವು ಒಂದು ಲಕ್ಷಯೋಜನ ವಿಸ್ತಾರವಾಗಿದೆ. ಬಗೆ ಬಗೆಯ ದೇಶಗಳಿಂದಲೂ, ಮಂಗಲಮಯವಾದ ವಿವಿಧನಗರಗಳಿಂದಲೂ ಅದು ತುಂಬಿದೆ. ಸಿದ್ಧರೂ ಚಾರಣರೂ ಅಸಂಖ್ಯಾತರಾಗಿ ಬಂದು ಅಲ್ಲಿ ವಿಹರಿಸುತ್ತಾರೆ. ಅಲ್ಲಿನ ಪರ್ವತಗಳು ಸುಂದರವಾಗಿವೆ. ಅವುಗಳ ಬಂಡೆಗಳಲ್ಲಿ ನಾನಾಜಾತಿಯ ಖನಿಜವಸ್ತುಗಳು ಅಡಗಿವೆ.

೧೦. ಪರ್ವತಗಳಲ್ಲಿ ಹುಟ್ಟಿ ನದಿಗಳು ಎಲ್ಲದಿಕ್ಕುಗಳಿಗೂ ಹರಿಯುತ್ತವೆ. ಮುಂದೆ ಹೇಳುವ ಆರೂ ವರ್ಷ ಪರ್ವತಗಳು; ಎಂದರೆ ಬೇರೆ ಬೇರೆ ವರ್ಷಗಳ ಎಲ್ಲೆಯಲ್ಲಿ ಇರತಕ್ಕುವು. ಅವು ಪಶ್ಚಿಮದಿಂದ ಪೂರ್ವಕ್ಕೆ ವಿಸ್ತಾರವಾಗಿ ಹಬ್ಬಿವೆ. ಅವುಗಳ ತಪ್ಪಲು ನೆಲವು ಬಹು ವಿಶಾಲವಾಗಿದೆ.

೧೧. ಪೂರ್ವಪಶ್ಚಿಮವಾಗಿ ಹಬ್ಬಿರುವ ಈ ಪರ್ವತಗಳು ಎರಡು ಕಡೆಯೂ ಸಮುದ್ರವನ್ನು ಮುಟ್ಟುತ್ತಿವೆ. ಮಂಜಿನಿಂದ ತುಂಬಿರುವ ಬೆಟ್ಟವಾದುದರಿಂದ ಹಿಮಾಚಲವೆಂಬ ಹೆಸರು ಬಂದಿತು. ಹೇಮಕೂಟಪರ್ವತವು ಹೆಸರಿಗೆ ತಕ್ಕಂತೆ ಸುವರ್ಣಮಯವಾದ ಶಿಖರಗಳಿಂದ ಕೂಡಿದೆ.

೧೨. ನಿಷಧವೆಂಬ ಮಹಾಪರ್ವತವು ಎಲ್ಲಕಡೆಗಳಲ್ಲಿಯೂ ನೋಡುವುದಕ್ಕೆ ಸುಂದರವಾಗಿದೆ. ಮೇರು ಪರ್ವತವು ಸುವರ್ಣಮಯವಾದುದು. ಅದು ಬ್ರಾಹ್ಮಣಾದಿ ಚತುರ್ವರ್ಣಾತ್ಮಕವಾಗಿದೆ. ಹಲವು-ಪ್ರಾಣಿಗಳ ನೆಲೆವೀಡಾಗಿರುವುದರಿಂದ ಅದು ಸೃಷ್ಟಿಕರ್ತನ ಗರ್ಭಾಶಯವೆನಿಸಿದೆ.

**ವೃಕ್ಷಾಕೃತಿಪ್ರಮಾಣಶ್ಚ ಚತುರಸ್ರಃ ಸಮಾಹಿತಃ ।**
**ನಾನಾವರ್ಣೈಃ ಸಮಃ ಪಾರ್ಶ್ವೈಃ ಪ್ರಜಾಪತಿಗುಣಾನ್ವಿತಃ ॥೧೩॥**

**ನಾಭೀಬಂಧನಸಂಭೂತೋ ಬ್ರಹ್ಮಣೋಽವ್ಯಕ್ತಜನ್ಮನಃ ।**
**ಪೂರ್ವತಃ ಶ್ವೇತವರ್ಣಸ್ತು ಬ್ರಾಹ್ಮಣ್ಯಂ ತಸ್ಯ ತೇನ ವೈ ॥೧೪॥**

**ಪೀತಶ್ಚ ದಕ್ಷಿಣೇನಾಸೌ ತೇನ ವೈಶ್ಯತ್ವಮಿಷ್ಯತೇ ।**
**ಭೃಂಗಿಪತ್ರನಿಭಶ್ಚೈವ ಪಶ್ಚಿಮೇನ ಸಮನ್ವಿತಃ ।**
**ತೇನಾಸ್ಯ ಶೂದ್ರತಾ ಸಿದ್ಧಾ ಮೇರೋರ್ನಾಮಾರ್ಥಕರ್ಮತಃ ॥೧೫॥**

**ಪಾರ್ಶ್ವಮುತ್ತರತಸ್ತಸ್ಯ ರಕ್ತವರ್ಣಂ ಸ್ವಭಾವತಃ ।**
**ತೇನಾಸ್ಯ ಕ್ಷತ್ರಭಾವಃ ಸ್ಯಾದಿತಿ ವರ್ಣಾಃ ಪ್ರಕೀರ್ತಿತಾಃ ॥೧೬॥**

---

೧೩. ಅದು ವೃಕ್ಷದ ಆಕಾರವಾಗಿ ಅದಕ್ಕೆ ಅನುಗುಣವಾದ ಪ್ರಮಾಣದಿಂದ ಕೂಡಿದೆ. ನಾಲ್ಕು ಕಡೆಯೂ ಒಂದೇ ಅಳತೆಯಿಂದ ಚಚ್ಚೌಕವಾಗಿ ಸಕಲ ಲೋಕಗಳಿಗೂ ಆಧಾರವೆನಿಸಿದೆ. ಅದರ ಪಾರ್ಶ್ವಗಳು ನಾನಾವರ್ಣಗಳಿಂದ ಕೂಡಿ ಸಮವಾಗಿವೆ. ಚತುರ್ಮುಖಬ್ರಹ್ಮನನ್ನು ಈ ಪರ್ವತವು ಗುಣಗಳಲ್ಲಿ ಹೋಲುತ್ತದೆ.

೧೪. ಅವ್ಯಕ್ತಜನ್ಮನೆನಿಸಿದ ಬ್ರಹ್ಮನ ಹೊಕ್ಕುಳಿನ ಗಂಟಿನಿಂದ ಈ ಪರ್ವತವು ಉತ್ಪನ್ನವಾಯಿತು. ಇದು ಪೂರ್ವಭಾಗದಲ್ಲಿ ಬೆಳ್ಳಗಿದೆ. ಬಿಳಿಯ ಬಣ್ಣವು ಬ್ರಾಹ್ಮಣ ಜಾತಿಯ ಗುರುತಾದುದರಿಂದ ಇದರಲ್ಲಿ ಬ್ರಾಹ್ಮಣ್ಯವಿದ್ದಂತೆ ಆಯಿತು.

೧೫. ದಕ್ಷಿಣದಲ್ಲಿ ಇದು ಹೊಂಬಣ್ಣವಾಗಿದೆ. ಆದುದರಿಂದ ವೈಶ್ಯಧರ್ಮವು ಇದರಲ್ಲಿದೆ ಎನ್ನುವರು. ಪಶ್ಚಿಮಭಾಗದಲ್ಲಿ ಲವಂಗಪತ್ರೆಯ ಬಣ್ಣವು ಕಾಣುತ್ತದೆ. ಅದರಿಂದ ಮೇರುಪರ್ವತಕ್ಕೆ ಶೂದ್ರತ್ವವು ಸಿದ್ಧವಾಯಿತು.

೧೬. ಅದರ ಉತ್ತರಪಾರ್ಶ್ವವು ಸ್ವಭಾವವಾಗಿ ಕೆಂಪುಬಣ್ಣದಿಂದ ಕೂಡಿದೆ. ಅದರಿಂದ ಕ್ಷತ್ರಿಯ ಸ್ವಭಾವವು ಬಂದಂತಾಯಿತು. ಹೀಗೆ ನಾಲ್ಕು ವರ್ಣಗಳ ಸಂಬಂಧವನ್ನು ಮೇರುಪರ್ವತಕ್ಕೆ ಹೇಳಿದೆನು.*

---

* ಬ್ರಾಹ್ಮಣ, ಕ್ಷತ್ರಿಯ ಮತ್ತು ಶೂದ್ರರಲ್ಲಿ ಕ್ರಮವಾಗಿ ಸತ್ವ, ರಜಸ್ಸು ಮತ್ತು ತಮಸ್ಸುಗಳೆಂಬ ಗುಣಗಳು ಪ್ರಧಾನವಾಗಿವೆ. ಬಿಳುಪು, ಕೆಂಪು ಮತ್ತು ಕಪ್ಪು ಬಣ್ಣಗಳು ಈ ಗುಣಗಳನ್ನು ಸೂಚಿಸುತ್ತವೆ. ವೈಶ್ಯನಲ್ಲಿ ರಜೋಗುಣವೂ ತಮೋಗುಣವೂ ಮಿಶ್ರವಾಗಿವೆ. ಆದುದರಿಂದ ಹೊಂಬಣ್ಣವು ಅವನನ್ನು ಗುರುತಿಸುತ್ತದೆ.

ನೀಲಶ್ಚ ವೈದೂರ್ಯಮಯಃ ಶ್ವೇತಃ ಪೀತೋ ಹಿರಣ್ಮಯಃ ।
ಮಯೂರಬರ್ಹವರ್ಣಶ್ಚ ಶಾತಕೌಂಭಃ ಸ ಶೃಂಗವಾನ್ ॥೧೭॥

ಏತೇ ಪರ್ವತರಾಜಾನಃ ಸಿದ್ಧಚಾರಣಸೇವಿತಾಃ ।
ತೇಷಾಮಂತರವಿಷ್ಕಂಭೋ ನವಸಾಹಸ್ರಮುಚ್ಯತೇ ॥೧೮॥

ಮಧ್ಯೇ ತ್ವಿಲಾವೃತಂ ನಾಮ ಮಹಾಮೇರೋಃ ಸಮಂತತಃ ।
ಚತುರ್ವಿಂಶತ್ಸಹಸ್ರಾಣಿ ವಿಸ್ತೀರ್ಣೋ ಯೋಜನೈಃ ಸಮಃ ॥೧೯॥

ಮಧ್ಯೇ ತಸ್ಯ ಮಹಾಮೇರುರ್ವಿಧೂಮ ಇವ ಪಾವಕಃ ।
ವೇದ್ಯರ್ಧಂ ದಕ್ಷಿಣಂ ಮೇರೋರುತ್ತರಾರ್ಧಂ ತಥೋತ್ತರಂ ॥೨೦॥

ವರ್ಷಾಣಿ ಯಾನಿ ಸಪ್ತಾತ್ರ ತೇಷಾಂ ವೈ ವರ್ಷಪರ್ವತಾಃ ।
ದ್ವೇ ದ್ವೇ ಸಹಸ್ರೇ ವಿಸ್ತೀರ್ಣಾ ಯೋಜನೈರ್ದಕ್ಷಿಣೋತ್ತರಂ ॥೨೧॥

---

೧೭. ನೀಲಪರ್ವತವು ವೈಡೂರ್ಯ ರತ್ನಗಳಿಂದ ತುಂಬಿದೆ. ಶ್ವೇತಪರ್ವತವು ಸುವರ್ಣಮಯವಾದುದು. ಅದು ಹಳದಿಯ ಬಣ್ಣವಾಗಿದೆ. ಶೃಂಗಪರ್ವತವು ನವಿಲುಗರಿಯ ಬಣ್ಣದಿಂದ ಕೂಡಿದೆ. ಅದೂ ಸಹ ಬಂಗಾರದಿಂದಲೇ ಆದುದು.

೧೮. ಇವೇ ನಾನು ಹಿಂದೆ ಹೇಳಿದ ವರ್ಷಪರ್ವತಗಳು. ಇವುಗಳಲ್ಲಿ ಆಶ್ರಯವನ್ನು ಪಡೆದು ಸಿದ್ಧರೂ ಚಾರಣರೂ ವಿಹರಿಸುತ್ತಿರುವರು. ಈ ಪರ್ವತಗಳಲ್ಲಿ ಒಂದರಿಂದ ಮತ್ತೊಂದರ ವರೆಗೆ ಇರುವ ಒಳ ಅಳತೆಯು ಒಂಬತ್ತು ಸಾವಿರ ಯೋಜನವೆನ್ನುತ್ತಾರೆ.

೧೯. ಜಂಬೂದ್ವೀಪದ ನಟ್ಟನಡುವೆ ಇಲಾವೃತ ವರ್ಷವಿದೆ. ಅದು ಮೇರು ಪರ್ವತದ ನಾಲ್ಕು ಕಡೆಯೂ ವ್ಯಾಪಿಸಿದೆ. ಅದು ವಿಸ್ತಾರದಲ್ಲಿ ಇಪ್ಪತ್ತು ನಾಲ್ಕು ಸಾವಿರ ಯೋಜನವಿದೆ.

೨೦. ಅದರ ಮಧ್ಯದಲ್ಲಿ ಮಹಾಮೇರು ಪರ್ವತವು ಹೊಗೆಯಿಲ್ಲದ ಅಗ್ನಿಯಂತೆ ಪ್ರಕಾಶಿಸುತ್ತದೆ. ಮಟ್ಟವಾಗಿರುವ ಅದರ ತಪ್ಪಲಿನ ದಕ್ಷಿಣಾರ್ಧವೂ, ಉತ್ತರಾರ್ಧವೂ ಕ್ರಮವಾಗಿ ಇಲಾವೃತ ವರ್ಷದ ದಕ್ಷಿಣೋತ್ತರಾರ್ಧಗಳಿಗೆ ಸೇರಿವೆ.

೨೧. ಏಳು ವರ್ಷಗಳಿಗೂ ಎಲ್ಲೆಯನ್ನು ಗೊತ್ತುಪಡಿಸುವ ವರ್ಷ ಪರ್ವತಗಳಿವೆಯಷ್ಟೆ. ಒಂದೊಂದರ ಅಗಲವೂ ದಕ್ಷಿಣೋತ್ತರವಾಗಿ ಎರಡು ಸಾವಿರ ಯೋಜನವಿರುವುದು.

ಜಂಬೂದ್ವೀಪಸ್ಯ ವಿಸ್ತಾರಸ್ತೇಷಾಮಾಯಾಮ ಉಚ್ಯತೇ ।
ನೀಲಶ್ಚ ನಿಷಧಶ್ಚೈವ ತೇಷಾಂ ಹೀನಾಶ್ಚ ಯೇ ಪರೇ ॥೨೨॥

ಶ್ವೇತಶ್ಚ ಹೇಮಕೂಟಶ್ಚ ಹಿಮವಾಞ್ಛೃಂಗವಾಂಶ್ಚ ಯಃ ।
ಜಂಬೂದ್ವೀಪಪ್ರಮಾಣೇನ ನಿಷಧಃ ಪರಿಕೀರ್ತ್ಯತೇ ॥೨೩॥

ತಸ್ಮಾದ್ದ್ವಾದಶಭಾಗೇನ ಹೇಮಕೂಟೋಽಪಿ ಹೀಯತೇ ।
ಹಿಮವಾನ್ ವಿಂಶಭಾಗೇನ ತಸ್ಮಾದೇವ ಪ್ರಹೀಯತೇ ।
ಅಷ್ಟಾಶೀತಿ ಸಹಸ್ರಾಣಿ ಹೇಮಕೂಟೋ ಮಹಾಗಿರಿಃ ॥೨೪॥

ಅಶೀತಿರ್ಹಿಮವಾಞ್ಛೈಲ ಆಯತಃ ಪೂರ್ವಪಶ್ಚಿಮೇ ।
ದ್ವೀಪಸ್ಯ ಮಂಡಲೀಭಾವಾದ್ಧ್ರಾಸವೃದ್ಧೀ ಪ್ರಕೀರ್ತಿತೇ ॥೨೫॥

ವರ್ಷಾಣಾಂ ಪರ್ವತಾನಾಂ ಚ ಯಥಾಭೇದಂ ತಥೋತ್ತರಂ ।
ತೇಷಾಂ ಮಧ್ಯೇ ಜನಪದಾಸ್ತಾನಿ ವರ್ಷಾಣಿ ಸಪ್ತ ವೈ ॥೨೬॥

---

೨೨-೨೩. ಈ ಪರ್ವತಗಳು ಜಂಬೂದ್ವೀಪವು ಆಯಾ ಪ್ರದೇಶದಲ್ಲಿ ಎಷ್ಟು ಅಗಲವಾಗಿದೆಯೋ ಅಷ್ಟೇ ಉದ್ದವಾಗಿ ಹಬ್ಬಿರುವುವು. ನೀಲ ಮತ್ತು ನಿಷಧಗಳು ಸಮಾನವಾದ ಅಳತೆಯುಳ್ಳವು; ಮತ್ತು ದೊಡ್ಡವು. ಉಳಿದವು ಇವುಗಳಿಗಿಂತ ಚಿಕ್ಕವು. ಇವುಗಳಲ್ಲಿ ಶ್ವೇತಪರ್ವತವು ಹೇಮಕೂಟಪರ್ವತಕ್ಕೂ, ಶೃಂಗವಂತ ಪರ್ವತವು ಹಿಮವತ್ಪರ್ವತಕ್ಕೂ ಸಮನಾಗಿರುವುವು. ನಿಷಧಪರ್ವತವು ಜಂಬೂದ್ವೀಪದಷ್ಟು ಎಂದರೆ ಒಂದು ಲಕ್ಷಯೋಜನದಷ್ಟು ಉದ್ದವಾಗಿದೆ.

೨೪-೨೫. ಹೇಮಕೂಟಪರ್ವತವು ನಿಷಧಪರ್ವತಕ್ಕಿಂತ ಹನ್ನೆರಡುಸಾವಿರ ಯೋಜನ ಕಡಿಮೆಯಾಗಿದೆ. ಹಿಮವತ್ಪರ್ವತವಾದರೋ ಇಪ್ಪತ್ತು ಸಾವಿರದಷ್ಟು ಕಡಿಮೆಯಾಗಿದೆ. ಎಂದರೆ ಹೇಮಕೂಟವು ಪೂರ್ವಪಶ್ಚಿಮವಾಗಿ ಎಂಬತ್ತೆಂಟು ಸಾವಿರಯೋಜನವೂ, ಹಿಮಾಚಲವು ಎಂಬತ್ತುಸಾವಿರಯೋಜನವೂ ಉದ್ದವಾಗಿವೆ ಎಂದು ಹೇಳಿದ ಹಾಗೆ ಆಯಿತು. ದ್ವೀಪವು ಗುಂಡಾಗಿರುವುದರಿಂದ ಪರ್ವತಗಳ ಪರಿಮಾಣದಲ್ಲಿ ಹೆಚ್ಚು ಕಡಿಮೆ ಆಗುತ್ತದೆ.

೨೬. ಮುಂದೆ ಮುಂದೆ ಹೋಗುತ್ತ ವರ್ಷಗಳಲ್ಲೂ, ಪರ್ವತಗಳಲ್ಲೂ ಪರಸ್ಪರಭೇದವು ಕಾಣುವುದು. ಅವುಗಳ ನಡುವೆ ಬೇರೆ ಬೇರೆ ದೇಶಗಳಿವೆ. ಆ ವರ್ಷಗಳ ಸಂಖ್ಯೆ ಏಳು ಮಾತ್ರ.

ಪ್ರಸಾತವಿಷಮೈಸ್ತೈಸ್ತು ಪರ್ವತೈರಾವೃತಾನಿ ತು ।
ಸಪ್ತ ತಾನಿ ನದೀಭೇದ್ಯೈರಗಮ್ಯಾನಿ ಪರಸ್ಪರಂ ॥೨೭॥

ವಸಂತಿ ತೇಷು ಸತ್ವಾನಿ ನಾನಾಜಾತೀನಿ ಸರ್ವಶಃ ।
ಇಮಂ ಹೈಮವತಂ ವರ್ಷಂ ಭಾರತಂ ನಾಮ ವಿಶ್ರುತಂ ॥೨೮॥

ಹೇಮಕೂಟಂ ಪರಂ ತಸ್ಮಾನ್ನಾಮ್ನಾ ಕಿಂಪುರುಷಂ ಸ್ಮೃತಂ ।
ಹೇಮಕೂಟಾಚ್ಚ ನಿಷಧಂ ಹರಿವರ್ಷಂ ತದುಚ್ಯತೇ ॥೨೯॥

ಹರಿವರ್ಷಾತ್ಪರಂ ಚಾಪಿ ಮೇರೋಸ್ತು ತದಿಲಾವೃತಂ ।
ಇಲಾವೃತಾತ್ಪರಂ ನೀಲಂ ರಮ್ಯಕಂ ನಾಮ ವಿಶ್ರುತಂ ॥೩೦॥

ರಮ್ಯಕಾದಪರಂ ಶ್ವೇತಂ ವಿಶ್ರುತಂ ತದ್ಧಿರಣ್ಯಕಂ ।
ಹಿರಣ್ಯಕಾತ್ಪರಂ ಚೈವ ಶೃಂಗವಂತಂ ಕುರು ಸ್ಮೃತಂ ॥೩೧॥

---

೨೭. ಆಳವಾದ ಕಮರಿಗಳೂ ಎತ್ತರವಾದ ಪರ್ವತಗಳೂ ದಟ್ಟವಾಗಿ ಹಬ್ಬಿವೆ. ದೊಡ್ಡ ದೊಡ್ಡ ನದಿಗಳು ಅಡ್ಡವಾಗಿ ಹರಿಯುತ್ತಿವೆ. ಆದುದರಿಂದ ಒಂದು ವರ್ಷದಿಂದ ಮತ್ತೊಂದಕ್ಕೆ ಹೋಗುವುದು ಕಷ್ಟ.

೨೮. ಅವುಗಳಲ್ಲಿ ನಾನಾಜಾತಿಯ ಪ್ರಾಣಿಗಳು ಎಲ್ಲೆಡೆಗಳಲ್ಲಿಯೂ ವಾಸಿಸುವುವು. ಹಿಮವತ್ಪರ್ವತದಿಂದ ಕೂಡಿದ ಈ ವರ್ಷಕ್ಕೆ ಭಾರತವರ್ಷವೆಂದು ಹೆಸರು.

೨೯. ಹಿಮಾಲಯ ಪರ್ವತದಿಂದ ಆಚೆಗೆ ಹೇಮಕೂಟ ಪರ್ವತವಿದೆ. ಇವೆರಡರ ನಡುವಣ ಭೂಭಾಗಕ್ಕೆ ಕಿಂಪುರುಷ ವರ್ಷವೆಂದು ಹೆಸರು. ಆ ಬಳಿಕ ಹರಿವರ್ಷವೂ, ಅದರ ಎಲ್ಲೆಗಟ್ಟಿನಲ್ಲಿ ನಿಷಧಪರ್ವತವೂ ಇರುವುವು.

೩೦. ಹರಿವರ್ಷದ ತರುವಾಯ ಇಲಾವೃತವರ್ಷವು ಸಿಕ್ಕುವುದು. ಇದು ಮೇರುಪರ್ವತದಿಂದ ವ್ಯಾಪ್ತವಾಗಿದೆ. ಆ ಬಳಿಕ ನೀಲಪರ್ವತವೂ, ಅದರಿಂದ ಆವೃತವಾದ ರಮ್ಯಕ ವರ್ಷವೂ ಪ್ರಕಾಶಿಸುತ್ತವೆ.

೩೧. ರಮ್ಯಕವರ್ಷದ ಮತ್ತೊಂದು ಗಡಿಯಲ್ಲಿ ಶ್ವೇತಪರ್ವತವಿದೆ. ಪ್ರಸಿದ್ಧವಾದ ಹಿರಣ್ಯವರ್ಷವು ಇಲ್ಲಿಂದ ಪ್ರಾರಂಭವಾಗುವುದು. ಇದರ ಕೊನೆಯಲ್ಲಿ ಶೃಂಗವಂತ ಪರ್ವತವೂ, ಅಲ್ಲಿಂದ ಮುಂದೆ ಕುರುವರ್ಷವೂ ವಿರಾಜಿಸುವುವು.

**ಧನುಃಸಂಸ್ಥೇ ತು ವಿಜ್ಞೇಯೇ ದ್ವೇ ವರ್ಷೇ ದಕ್ಷಿಣೋತ್ತರೇ ।**
**ದೀರ್ಘಾಣಿ ತಸ್ಯ ಚತ್ವಾರಿ ಮಧ್ಯಮಂ ತದಿಲಾವೃತಂ ||೩೨||**

**ಪೂರ್ವತೋ ನಿಷಧಸ್ಯೇದಂ ವೇದ್ಯರ್ಧಂ ದಕ್ಷಿಣಂ ಸ್ಮೃತಂ ।**
**ಪರಂ ತ್ವಿಲಾವೃತಂ ಪಶ್ಚಾದ್ವೇದ್ಯರ್ಧಂ ತು ತದುತ್ತರಂ ||೩೩||**

**ತಯೋರ್ಮಧ್ಯೇ ತು ವಿಜ್ಞೇಯೋ ಮೇರುರ್ಯತ್ರ ತ್ವಿಲಾವೃತಂ ।**
**ದಕ್ಷಿಣೇನ ತು ನೀಲಸ್ಯ ನಿಷಧಸ್ಯೋತ್ತರೇಣ ತು ||೩೪||**

**ಉದಗಾಯತೋ ಮಹಾಶೈಲೋ ಮಾಲ್ಯವಾನ್ನಾಮ ಪರ್ವತಃ ।**
**ದ್ವಾತ್ರಿಂಶತಾ ಸಹಸ್ರೇಣ ಪ್ರತೀಚ್ಯಾಂ ಸ ಮಹಾಗಿರಿಃ ||೩೫||**

**ಮಾಲ್ಯವಾನ್ವೈ ಸಹಸ್ರೈಕ ಆನೀಲನಿಷಧಾಯತಃ ।**
**ದ್ವಾತ್ರಿಂಶತ್ತ್ವೇವಮುಪ್ಯುಕ್ತಃ ಪೂರ್ವತೋ ಗಂಧಮಾದನಃ ||೩೬||**

---

೩೨. ದಕ್ಷಿಣದಲ್ಲಿರುವ ಭಾರತವರ್ಷ ಮತ್ತು ಉತ್ತರದಲ್ಲಿರುವ ಕುರುವರ್ಷ ಇವೆರಡೂ ಬಿಲ್ಲಿನ ಆಕಾರವಾಗಿ ಬಗ್ಗಿವೆ. ಹಿರಣ್ಯಕ, ರಮ್ಯಕ, ಹರಿ ಮತ್ತು ಕಿಂಪುರುಷ ವರ್ಷಗಳು ದೀರ್ಘವಾಗಿವೆ. ಇಳಾವೃತ ವರ್ಷವು ನಟ್ಟನಡುವೆ ಇದೆ.

೩೩. ಮೇರುಪರ್ವತವು ಇಲಾವೃತ ವರ್ಷದ ಮಧ್ಯದಲ್ಲಿದ್ದು ಆ ವರ್ಷವನ್ನು ಎರಡು ಭಾಗವಾಗಿ ವಿಂಗಡಿಸುತ್ತದೆಯಷ್ಟೆ. ಅವುಗಳಲ್ಲಿ ನಿಷಧ ಪರ್ವತದ ಮುಂಗಡೆಗೆ ಇರುವ ಭಾಗವನ್ನು ದಕ್ಷಿಣ ವೇದಿಯೆಂದೂ, ನೀಲಪರ್ವತದ ಹಿಂಗಡೆಗೆ ಇರುವ ಭಾಗವನ್ನು ಉತ್ತರವೇದಿಯೆಂದೂ ಹೇಳುತ್ತಾರೆ. ಇವುಗಳೆರಡರ ನಡುವೆ ಮೇರುಪರ್ವತವಿದೆ. ಇದೇ ಇಳಾವೃತವರ್ಷ.

೩೪-೩೬. ಇಳಾವೃತ ವರ್ಷದ ಪಶ್ಚಿಮ ಭಾಗದಲ್ಲಿ ನೀಲಪರ್ವತಕ್ಕೆ ದಕ್ಷಿಣದಲ್ಲೂ, ನಿಷಧ ಪರ್ವತಕ್ಕೆ ಉತ್ತರದಲ್ಲೂ ಮಾಲ್ಯವಂತವೆಂಬ ಮಹಾಪರ್ವತವು ದಕ್ಷಿಣೋತ್ತರವಾಗಿ ಹಬ್ಬಿದೆ. ಅದರ ಉದ್ದ ಮೂವತ್ತೆರಡು ಸಾವಿರ ಯೋಜನ. ಎತ್ತರ ಒಂದು ಸಾವಿರ ಯೋಜನ. ಹೀಗೆಯೇ ಪೂರ್ವಭಾಗದಲ್ಲಿ ನೀಲಪರ್ವತದಿಂದ ನಿಷಧ ಪರ್ವತದ ವರೆಗೆ ದಕ್ಷಿಣೋತ್ತರವಾಗಿ ವ್ಯಾಪಿಸಿರುವ ಮತ್ತೊಂದು ಮಹಾಗಿರಿಯುಂಟು. ಅದರ ಹೆಸರು ಗಂಧಮಾದನ. ಅದೂ ಕೂಡ ಮಾಲ್ಯವಂತ ಪರ್ವತದಷ್ಟೇ ಎಂದರೆ ಮೂವತ್ತೆರಡು ಸಾವಿರ ಯೋಜನ ಉದ್ದವೂ ಒಂದು ಸಾವಿರ ಯೋಜನ ಎತ್ತರವೂ ಇರುವುದು.

ಪರಿಮಂಡಲಯೋರ್ಮಧ್ಯೇ ಮೇರುಃ ಕನಕಪರ್ವತಃ ।
ಚಾತುರ್ವರ್ಣ್ಯಸಮೋ ವರ್ಣೈಶ್ಚತುರಸ್ರಃ ಸಮುಚ್ಛ್ರಿತಃ ॥೩೭॥

ನಾನಾವರ್ಣಃ ಸ ಪಾರ್ಶ್ವೇಷು ಪೂರ್ವಾಂತೇ ಶ್ವೇತ ಉಚ್ಯತೇ ।
ಪೀತಂ ತು ದಕ್ಷಿಣಂ ತಸ್ಯ ಭೃಂಗಿಪತ್ರನಿಭಂ ಪರಂ ॥೩೮॥

ಉತ್ತರಂ ತಸ್ಯ ರಕ್ತಂ ವೈ ಇತಿ ವರ್ಣಸಮನ್ವಿತಃ ।
ಮೇರುಸ್ತು ಶುಶುಭೇ ದಿವ್ಯೋ ರಾಜವತ್ಸ ತು ವೇಷ್ಟಿತಃ ।
ಆದಿತ್ಯತರುಣಾಭಾಸೋ ವಿಧೂಮ ಇವ ಪಾವಕಃ ॥೩೯॥

ಯೋಜನಾನಾಂ ಸಹಸ್ರಾಣಿ ಚತುರಾಶೀತಿ ಸೂಚ್ಛ್ರಿತಃ ।
ಪ್ರವಿಷ್ಟಃ ಷೋಡಶಾಧಸ್ತಾದಷ್ಟಾವಿಂಶತಿವಿಸ್ತೃತಃ ॥೪೦॥

ವಿಸ್ತಾರಾದ್ದ್ವಿಗುಣಶ್ಚಾಸ್ಯ ಪರಿಣಾಹಃ ಸಮಂತತಃ ।
ಸ ಪರ್ವತೋ ಮಹಾದಿವ್ಯೋ ದಿವ್ಯೌಷಧಿಸಮನ್ವಿತಃ ॥೪೧॥

---

೩೭. ಈ ಎರಡು ಪರ್ವತಗಳಿಂದ ಏರ್ಪಟ್ಟ ಭದ್ರಾಶ್ವ ಮತ್ತು ಕೇತುಮಾಲಗಳೆಂಬ ಎರಡು ವರ್ಷಗಳ ನಟ್ಟನಡುವೆ ಸುವರ್ಣಮಯವಾದ ಮೇರುಪರ್ವತವಿದೆ. ಇದು ಬ್ರಾಹ್ಮಣಾದಿ ಚತುರ್ವರ್ಣಗಳ ಬಣ್ಣದಿಂದ ಕೂಡಿ ಚಚ್ಚೌಕವಾಗಿ ಬಹಳ ಎತ್ತರವಾಗಿದೆ.

೩೮. ಅದರ ನಾಲ್ಕು ಪಕ್ಕಗಳು ಒಂದೊಂದು ಬಣ್ಣವಾಗಿವೆ. ಪೂರ್ವಪಾರ್ಶ್ವವು ಬೆಳ್ಳಗೂ, ದಕ್ಷಿಣಭಾಗವು ಹೊಂಬಣ್ಣವಾಗಿಯೂ ಇವೆ. ಪಶ್ಚಿಮದಲ್ಲಿ ಲವಂಗಪತ್ರೆಯ ಬಣ್ಣವೂ, ಉತ್ತರದಲ್ಲಿ ಕೆಂಪುಬಣ್ಣವೂ ಪ್ರಕಾಶಿಸುವುವು.

೩೯. ದೇವತೆಗಳ ವಾಸಕ್ಕೆ ಯೋಗ್ಯವಾದ ಆ ಮೇರುಪರ್ವತವು, ಉಪಪರ್ವತಗಳು ಸುತ್ತುವರಿದಿರಲು, ರಾಜನಂತೆ ಪ್ರಕಾಶಿಸುತ್ತದೆ. ಬಾಲಸೂರ್ಯನ ತೇಜಸ್ಸಿನಿಂದ ಕೂಡಿ ಅದು ಹೊಗೆಯಿಲ್ಲದ ಅಗ್ನಿಯಂತೆ ಕಂಗೊಳಿಸುತ್ತದೆ.

೪೦. ಅದು ಎಂಬತ್ತನಾಲ್ಕುಸಾವಿರ ಯೋಜನ ಉನ್ನತವಾಗಿದೆ. ನೆಲದೊಳಗೆ ಹದಿನಾರುಸಾವಿರ ಯೋಜನಗಳ ದೂರ ವ್ಯಾಪಿಸಿದೆ. ಇಪ್ಪತೆಂಟುಸಾವಿರ ಯೋಜನಗಳಷ್ಟು ವಿಸ್ತಾರವಾಗಿದೆ.

೪೧. ಈ ಪರ್ವತದ ವೈಶಾಲ್ಯವು ಸುತ್ತಲೂ ಅದರ ವಿಸ್ತಾರದ ಎರಡರಷ್ಟಿದೆ. ಶ್ರೇಷ್ಠವಾದ ಅನೇಕ ಮೂಲಿಕೆಗಳಿಂದ ಕೂಡಿ ಅದು ಲೋಕೋತ್ತರವಾಗಿದೆ.

ಭುವನೈರಾವೃತಃ ಸರ್ವೈರ್ಜಾತರೂಪಪರಿಷ್ಕೃತೈಃ ।
ತತ್ರ ದೇವಗಣಾಶ್ಚೈವ ಗಂಧರ್ವಾಸುರರಾಕ್ಷಸಾಃ ।
ಶೈಲರಾಜೇ ಪ್ರಮೋದಂತೇ ಸರ್ವತೋಽಪ್ಸರಸಾಂ ಗಣೈಃ ॥೪೨॥

ಸ ತು ಮೇರುಃ ಪರಿವೃತೋ ಭುವನೈರ್ಭೂತಭಾವನೈಃ ।
ಯಸ್ಯೇಮೇ ಚತುರೋ ದೇಶಾ ನಾನಾಪಾರ್ಶ್ವೇಷು ಸಂಸ್ಥಿತಾಃ ॥೪೩॥

ಭದ್ರಾಶ್ವಂ ಭಾರತಂ ಚೈವ ಕೇತುಮಾಲಂ ಚ ಪಶ್ಚಿಮೇ ।
ಉತ್ತರಾಶ್ಚೈವ ಕುರವಃ ಕೃತಪುಣ್ಯಪ್ರತಿಶ್ರಯಾಃ ॥೪೪॥

ವಿಷ್ಕಂಭಪರ್ವತಾಸ್ತದ್ವನ್ಮಂದರೋ ಗಂಧಮಾದನಃ ।
ವಿಪುಲಶ್ಚ ಸುಪಾರ್ಶ್ವಶ್ಚ ಸರ್ವರತ್ನವಿಭೂಷಿತಾಃ ॥೪೫॥

ಅರುಣೋದಂ ಮಾನಸಂ ಚ ಸಿತೋದಂ ಭದ್ರಸಂಜ್ಞಿತಂ ।
ತೇಷಾಮುಪರಿ ಚತ್ವಾರಿ ಸರಾಂಸಿ ಚ ವನಾನಿ ಚ ॥೪೬॥

---

೪೨. ಸುವರ್ಣಾಲಂಕೃತಗಳಾದ ದಿವ್ಯಭೂಮಿಗಳು ಆ ಪರ್ವತದ ಸುತ್ತಲೂ ಬೇಕಾದಷ್ಟಿವೆ. ಅವುಗಳಲ್ಲಿ ದೇವತೆಗಳೂ, ಗಂಧರ್ವರೂ, ಅಸುರರೂ, ರಾಕ್ಷಸರೂ ಮತ್ತು ಅಪ್ಸರಸ್ತ್ರೀಯರೂ ಸಂತೋಷದಿಂದ ವಿಹರಿಸುವರು.

೪೩-೪೪. ನಾನಾವಿಧವಾದ ಪ್ರಾಣಿಗಳಿಗೆ ಆವಾಸಸ್ಥಾನವಾದ ದೇಶಗಳು ಆ ಮೇರುಪರ್ವತದ ಸುತ್ತಲೂ ಇವೆ. ಭದ್ರಾಶ್ವ, ಭಾರತ ಮತ್ತು ಕೇತುಮಾಲ ಗಳೆಂಬ ಭೂಖಂಡಗಳು ಕ್ರಮವಾಗಿ ಪೂರ್ವ, ದಕ್ಷಿಣ ಮತ್ತು ಪಶ್ಚಿಮ ದಿಕ್ಕುಗಳಲ್ಲಿವೆ. ಉತ್ತರದಿಕ್ಕಿನಲ್ಲಿ ಉತ್ತರಕುರುವೆಂಬ ದೇಶವಿದೆ. ಪುಣ್ಯಶಾಲಿಗಳಿಗೆ ಮಾತ್ರ ಅಲ್ಲಿನ ವಾಸವು ಲಭಿಸುವುದು.

೪೫. ಮಂದರ, ಗಂಧಮಾದನ, ವಿಪುಲ ಮತ್ತು ಸುಪಾರ್ಶ್ವಗಳೆಂಬ ನಾಲ್ಕೂ ಮೇರುಪರ್ವತವನ್ನು ಆಶ್ರಯಿಸಿಕೊಂಡಿರುವ ಉಪಪರ್ವತಗಳು. ಅವು ಸಕಲ ವಿಧವಾದ ರತ್ನಗಳಿಂದಲೂ ಅಲಂಕೃತವಾಗಿವೆ.

೪೬. ಅವುಗಳ ಮೇಲೆ ಕ್ರಮವಾಗಿ ಅರುಣೋದ, ಮಾನಸ, ಸಿತೋದ ಮತ್ತು ಭದ್ರಗಳೆಂಬ ನಾಲ್ಕು ಸರೋವರಗಳಿವೆ. ಅಲ್ಲದೆ ಹಲವು ವನಗಳೂ ಇವೆ.

ತಥಾ ಭದ್ರಕದಂಬಸ್ತು ಪರ್ವತೇ ಗಂಧಮಾದನೇ ।
ಜಂಬೂವೃಕ್ಷಸ್ತಥಾಽಶ್ವತ್ಥೋ ವಿಪುಲೇಽಥ ವಟಃ ಪರಃ ॥೪೭॥

ಗಂಧಮಾದನಪಾರ್ಶ್ವೇ ತು ಪಶ್ಚಿಮೇಽಮರಗಂಡಿಕಃ ।
ದ್ವಾತ್ರಿಂಶಚ್ಚ ಸಹಸ್ರಾಣಿ ಯೋಜನೈಃ ಸರ್ವತಃ ಸಮಃ ॥೪೮॥

ತತ್ರ ತೇ ಶುಭಕರ್ಮಾಣಃ ಕೇತುಮಾಲಾಃ ಪರಿಶ್ರುತಾಃ ।
ತತ್ರ ಕಾಲಾನಲಾಃ ಸರ್ವೇ ಮಹಾಸತ್ವಾ ಮಹಾಬಲಾಃ ॥೪೯॥

ಸ್ತ್ರಿಯಶ್ಚೋತ್ಪಲವರ್ಣಾಭಾಃ ಸುಂದರ್ಯಃ ಪ್ರಿಯದರ್ಶನಾಃ ।
ತತ್ರ ದಿವ್ಯೋ ಮಹಾವೃಕ್ಷಃ ಪನಸಃ ಪತ್ರಭಾಸುರಃ ॥೫೦॥

ತಸ್ಯ ಪೀತ್ವಾ ಫಲರಸಂ ಜೀವಂತಿ ಹಿ ಸಮಾಯುತಂ ।
ತಸ್ಯ ಮಾಲ್ಯವತಃ ಪಾರ್ಶ್ವೇ ಪೂರ್ವೇ ಪೂರ್ವಾ ತು ಗಂಡಿಕಾ ।
ದ್ವಾತ್ರಿಂಶಚ್ಚ ಸಹಸ್ರಾಣಿ ಯೋಜನಾನಾಂ ತದುಚ್ಯತೇ ॥೫೧॥

---

೪೭. ಗಂಧಮಾದನ ಪರ್ವತದಲ್ಲಿ ಸೊಗಸಾದ ಕಡಹದ ಮರವಿದೆ. ಮಂದರದಲ್ಲಿ ನೇರಿಳೆಮರವೂ, ಸುಪಾರ್ಶ್ವದಲ್ಲಿ ಅರಳಿಯ ಮರವೂ ಇವೆ ವಿಪುಲ ಪರ್ವತದಲ್ಲೋ ಎಂದರೆ ಪ್ರಸಿದ್ಧವಾದ ಆಲದ ಮರವುಂಟು.

೪೮. ಗಂಧಮಾದನ ಪರ್ವತದ ಪಶ್ಚಿಮ ಪಾರ್ಶ್ವದಲ್ಲಿ ಅಮರಗಂಡಿಕವೆಂಬ ಭೂಭಾಗವಿದೆ. ಅದು ಮಟ್ಟವಾಗಿ ಮೂವತ್ತೆರಡು ಸಾವಿರ ಯೋಜನ ವಿಸ್ತಾರ ವಾಗಿದೆ.

೪೯. ಅಲ್ಲಿ ಇರತಕ್ಕವರು ಪುಣ್ಯವಂತರು. ಅವರಿಗೆ ಕೇತುಮಾಲರೆಂದು ಪ್ರಸಿದ್ಧಿಯುಂಟು. ಅವರೆಲ್ಲರೂ ಪ್ರಲಯಕಾಲದ ಅಗ್ನಿಯಂತೆ ತೇಜಸ್ವಿಗಳು; ಸತ್ವಶಾಲಿಗಳು ಮತ್ತು ಬಲಶಾಲಿಗಳು.

೫೦. ಅಲ್ಲಿರುವ ಸ್ತ್ರೀಯರು ನೈದಿಲೆ ಹೂವಿನ ಹಾಗೆ ಕಾಂತಿಯುಕ್ತರಾಗಿರು ವರು. ಅವರು ಸುಂದರಿಯರು. ಅವರ ನೋಟವೇ ಸಾಕು; ಆನಂದವನ್ನು ಬೀರುವುದು. ಅಲ್ಲಿ ಬಲು ದೊಡ್ಡದಾದ ಒಂದು ಹಲಸಿನ ಮರವಿದೆ. ಅದು ಎಲೆ ಗಳಿಂದ ತುಂಬಿ ಶೋಭಿಸುತ್ತಿದೆ. ಅದರ ಹಣ್ಣಿನ ರಸವನ್ನು ಕುಡಿದು ಅಲ್ಲಿನ ಜನರು ಹತ್ತು ಸಾವಿರ ವರ್ಷ ಜೀವಿಸುತ್ತಾರೆ.

೫೧-೫೨. ಮಾಲ್ಯವಂತ ಪರ್ವತದ ಪೂರ್ವಪಾರ್ಶ್ವದಲ್ಲಿ ಪೂರ್ವಗಂಡಿಕೆ ಯೆಂಬ ಪ್ರದೇಶವಿದೆ. ಅದಕ್ಕೆ ಭದ್ರಾಶ್ವವೆಂದು ಹೆಸರು. ಅದರ ವಿಸ್ತಾರ

**ಭದ್ರಾಶ್ವಸ್ತತ್ರ ವಿಜ್ಞೇಯೋ ನಿತ್ಯಂ ಮುದಿತಮಾನಸಃ ।**
**ಭದ್ರಸಾಲವನಂ ತತ್ರ ಕಾಲಾಮ್ರಶ್ಚ ಮಹಾದ್ರುಮಃ ॥೫೨॥**

**ತತ್ರ ತೇ ಪುರುಷಾಃ ಶ್ವೇತಾ ಮಹಾಸತ್ವಾ ಮಹಾಬಲಾಃ ।**
**ಸ್ತ್ರಿಯಃ ಕುಮುದವರ್ಣಾಭಾಃ ಸುಂದರ್ಯಃ ಪ್ರಿಯದರ್ಶನಾಃ ॥೫೩॥**

**ಚಂದ್ರಪ್ರಭಾಶ್ಚಂದ್ರವರ್ಣಾಃ ಪೂರ್ಣಚಂದ್ರನಿಭಾನನಾಃ ।**
**ಚಂದ್ರಶೀತಲಗಾತ್ರಾಶ್ಚ ಸ್ತ್ರಿಯೋ ಹ್ಯುತ್ಪಲಗಂಧಿಕಾಃ ॥೫೪॥**

**ದಶ ವರ್ಷಸಹಸ್ರಾಣಿ ಆಯುಸ್ತೇಷಾಮನಾಮಯಂ ।**
**ಕಾಲಾಮ್ರಸ್ಯ ರಸಂ ಪೀತ್ವಾ ತೇ ಸರ್ವೇ ಸ್ಥಿರಯೌವನಾಃ ॥೫೫॥**

**॥ ಸೂತ ಉವಾಚ ॥**

**ಇತ್ಯುಕ್ತವಾನ್ ಋಷೀನ್ ಬ್ರಹ್ಮಾ ವರ್ಷಾಣಿ ಚ ನಿಸರ್ಗತಃ ।**
**ಪೂರ್ವಂ ಮಮಾನುಗ್ರಹಕೃದ್ಭೂಯಃ ಕಿಂ ವರ್ಣಯಾಮಿ ವಃ ॥೫೬॥**

---

ಮೂವತ್ತೆರಡು ಸಾವಿರ ಯೋಜನ. ಅಲ್ಲಿ ಜನರು ಯಾವಾಗಲೂ ಸಂತುಷ್ಟಚಿತ್ತ ರಾಗಿರುವರು. ಭದ್ರಸಾಲವೆಂಬ ವನವೂ, ಕಾಲಾಮ್ರವೆಂಬ ಮಾವಿನ ಮರವೂ ಅಲ್ಲಿ ಇರುವುವು.

೫೩. ಅಲ್ಲಿ ಪುರುಷರು ಬಿಳಿಯ ಬಣ್ಣದವರು, ಮಹಾಶೂರರು ಮತ್ತು ಬಲಿಷ್ಠರು. ಸ್ತ್ರೀಯರು ಬಿಳಿಯ ನೈದಿಲೆಯನ್ನು ಬಣ್ಣದಲ್ಲಿ ಹೋಲುವರು. ಅವರು ಬಲು ಚೆಲುವೆಯರು. ದರ್ಶನಮಾತ್ರದಿಂದಲೇ ಪ್ರೀತಿಯನ್ನು ಹುಟ್ಟಿಸುವರು.

೫೪. ಚಂದ್ರನ ಕಾಂತಿಯೂ ಬಣ್ಣವೂ ಅವರಲ್ಲಿ ಕಂಗೊಳಿಸುವುವು. ಅವರ ಮುಖವು ಪೂರ್ಣಚಂದ್ರನಂತಿರುವುದು. ದೇಹವು ಚಂದ್ರನಂತೆ ಶೀತಲವಾಗಿರು ವುದು ; ಮತ್ತು ನೈದಿಲೆ ಹೂವಿನ ವಾಸನೆಯನ್ನು ಬೀರುತ್ತಿರುವುದು.

೫೫. ಅವರು ಹತ್ತು ಸಾವಿರ ವರ್ಷಗಳ ಕಾಲ ಆರೋಗ್ಯದಿಂದ ಬದುಕುವರು. ಕಾಲಾಮ್ರಫಲದ (ಒಂದು ಜಾತಿಯ ಮಾವಿನ ಹಣ್ಣು) ರಸವನ್ನು ಕುಡಿದು ಅವರೆಲ್ಲರೂ ನಿತ್ಯಯೌವನದಿಂದ ಶೋಭಿಸುವರು.

೫೬. ಸೂತಪೌರಾಣಿಕನು ಹೇಳಿದನು.—ಬ್ರಹ್ಮದೇವನು ಮೇಲೆ ಹೇಳಿದಂತೆ ಭಾರತವರ್ಷ ಮೊದಲಾದ ಎಲ್ಲ ಭೂಖಂಡಗಳ ವಿಷಯವನ್ನೂ ಋಷಿಗಳಿಗೆ ತಿಳಿಸಿದನು. ನನ್ನ ಮೇಲಂತೂ ಆತನಿಗೆ ಬಹಳ ಅನುಗ್ರಹ. ಎಲೈ ಋಷಿಗಳಿರಾ, ನಿಮಗೆ ಮತ್ತೇನು ಹೇಳಲಿ ?

ಏತಚ್ಛ್ರುತ್ವಾ ವಚಸ್ತೇ ತು ಋಷಯಃ ಸಂಶಿತವ್ರತಾಃ ।
ಜಾತಕೌತೂಹಲಾಃ ಸರ್ವೇ ಪ್ರತ್ಯೂಚುಸ್ತೇ ಮುದಾನ್ವಿತಾಃ ॥೫೭॥

॥ ಋಷಯ ಊಚುಃ ॥

ಪೂರ್ವಾಪರೌ ಸಮಾಖ್ಯಾತೌ ಯೌ ದೇಶೌ ತೌ ತ್ವಯಾ ಮುನೇ ।
ಉತ್ತರಾಣಾಂ ಚ ವರ್ಷಾಣಾಂ ಪರ್ವತಾನಾಂ ಚ ಸರ್ವಶಃ ॥೫೮॥

ಆಖ್ಯಾಹಿ ನೋ ಯಥಾತಥ್ಯಂ ಯೇ ಚ ಪರ್ವತವಾಸಿನಃ ।
ಏವಮುಕ್ತಸ್ತು ಋಷಿಭಿಸ್ತೇಭ್ಯಸ್ತ್ವಾಖ್ಯಾತವಾನ್ ಪುನಃ ॥೫೯॥

॥ ಸೂತ ಉವಾಚ ॥

ಶೃಣುಧ್ವಂ ಯಾನಿ ವರ್ಷಾಣಿ ಪೂರ್ವೋಕ್ತಾನಿ ಚ ವೈ ಮಯಾ ।
ದಕ್ಷಿಣೇನ ತು ಶ್ವೇತಸ್ಯ ನೀಲಸ್ಯೈವೋತ್ತರೇಣ ತು ॥೬೦॥

---

೫೭. ಮಹಾಮಹಿಮರಾದ ಆ ಋಷಿಗಳಿಗೆ ಈ ಮಾತನ್ನು ಕೇಳಿ ಬಹಳ ಕುತೂಹಲವು ಹುಟ್ಟಿತು. ಅವರೆಲ್ಲರೂ ಇಂತೆಂದರು.

೫೮-೫೯. ಋಷಿಗಳು ಹೇಳಿದರು.—"ಎಲೈ ಸೂತಮುನಿಯೇ, ಮೇರುಪರ್ವತಕ್ಕೆ ಪೂರ್ವದಲ್ಲಿಯೂ ಪಶ್ಚಿಮದಲ್ಲಿಯೂ ಇರುವ ಭದ್ರಾಶ್ವ ಮತ್ತು ಕೇತುಮಾಲಗಳೆಂಬ ಎರಡು ದೇಶಗಳನ್ನು ವಿವರಿಸಿದೆ. ಇನ್ನು ಉತ್ತರದಲ್ಲಿರುವ ವರ್ಷಗಳನ್ನೂ ಪರ್ವತಗಳನ್ನೂ ವಿಶದವಾಗಿ ವರ್ಣಿಸಿ ಹೇಳು. ಅಲ್ಲಿ ವಾಸಮಾಡುವ ಜನಗಳ ವೃತ್ತಾಂತವನ್ನೂ ತಿಳಿಸು" ಎಂದು ಋಷಿಗಳು ಕೇಳಲು ಸೂತಮಹರ್ಷಿಯು ಅವರಿಗೆ ಮತ್ತೆ ಇಂತೆಂದನು.

೬೦-೬೧. ಸೂತಪೌರಾಣಿಕನು ಹೇಳಿದನು.—ನಾನು ಹಿಂದೆ ಹೇಳಿದ ವರ್ಷಗಳ ವೃತ್ತಾಂತವನ್ನು ತಿಳಿಸುವೆನು ಕೇಳಿರಿ. ಶ್ವೇತಪರ್ವತಕ್ಕೆ ದಕ್ಷಿಣದಲ್ಲಿಯೂ ನೀಲಪರ್ವತಕ್ಕೆ ಉತ್ತರದಲ್ಲಿಯೂ ರಮಣಕವೆಂಬ ಭೂಭಾಗವುಂಟು.—(ಇದೇ ರಮ್ಯಕ ವರ್ಷವೆಂಬುದು) ಅಲ್ಲಿನ ಜನರಿಗೆ ಪ್ರೇಮವೇ ಪ್ರಧಾನ. ಅವರು ನಿರ್ಮಲ

ವರ್ಷಂ ರಮಣಕಂ ನಾಮ ಜಾಯಂತೇ ಯತ್ರ ವೈ ಪ್ರಜಾಃ ।
ರತಿಪ್ರಧಾನಾ ವಿಮಲಾ ಜಾಯಂತೇ ಯತ್ರ ಮಾನವಾಃ ।
ಶುಕ್ಲಾಭಿಜನಸಂಪನ್ನಾಃ ಸರ್ವೇ ತೇ ಪ್ರಿಯದರ್ಶನಾಃ ॥೬೧॥

ತತ್ರಾಪಿ ಚ ಮಹಾವೃಕ್ಷೋ ನ್ಯಗ್ರೋಧೋ ರೋಹಿತೋ ಮಹಾನ್ ।
ತಸ್ಯಾಪಿ ತೇ ಫಲರಸಂ ಪಿಬಂತೋ ವರ್ತಯಂತಿ ಹಿ ॥೬೨॥

ದಶ ವರ್ಷಸಹಸ್ರಾಣಿ ದಶ ವರ್ಷಶತಾನಿ ಚ ।
ಜೀವಂತಿ ತೇ ಮಹಾಭಾಗಾಃ ಸದಾ ಹೃಷ್ಟಾ ನರೋತ್ತಮಾಃ ॥೬೩॥

ಉತ್ತರೇಣ ತು ಶ್ವೇತಸ್ಯ ಪಾರ್ಶ್ವೇ ಶೃಂಗಸ್ಯ ದಕ್ಷಿಣೇ ।
ವರ್ಷಂ ಹಿರಣ್ವತಂ ನಾಮ ಯತ್ರ ಹೈರಣ್ವತೀ ನದೀ ॥೬೪॥

ಮಹಾಬಲಾ ಮಹಾಸತ್ವಾ ನಿತ್ಯಂ ಮುದಿತಮಾನಸಾಃ ।
ಶುಕ್ಲಾಭಿಜನಸಂಪನ್ನಾಃ ಸರ್ವೇ ಚ ಪ್ರಿಯದರ್ಶನಾಃ ॥೬೫॥

---

ಸ್ವಭಾವದವರು, ಸದ್ವಂಶಜರು, ಬಿಳಿಯ ಬಣ್ಣದವರು, ಮನವನ್ನು ಸೆಳೆಯುವ ನೋಟದವರು.

೬೨. ಅಲ್ಲಿಯೂ ಸಹ ದೊಡ್ಡದಾದ ಆಲದ ಮರವೊಂದಿದೆ. ಅದರ ಬಣ್ಣ ಕೆಂಪು. ಅದರ ಹಣ್ಣಿನ ರಸವನ್ನು ಕುಡಿದು ಆ ಜನರು ಬದುಕುತ್ತಾರೆ.

೬೩. ಬಹು ಪುಣ್ಯಶಾಲಿಗಳಾದ ಆ ಜನರು ಹನ್ನೊಂದುಸಾವಿರ ವರ್ಷಗಳ ಕಾಲ ಜೀವಿಸುತ್ತಾರೆ. ದುಃಖವೆಂಬುದನ್ನೇ ಅವರು ಕಾಣರು. ಮನುಷ್ಯವರ್ಗದಲ್ಲೇ ಅವರು ಶ್ರೇಷ್ಠರೆನಿಸಿಕೊಂಡಿರುವರು.

೬೪. ಶ್ವೇತಪರ್ವತಕ್ಕೆ ಉತ್ತರದಲ್ಲಿಯೂ ಶೃಂಗಪರ್ವತಕ್ಕೆ ದಕ್ಷಿಣದಲ್ಲಿಯೂ ಇರುವ ಭೂಭಾಗಕ್ಕೆ ಹಿರಣ್ವತವರ್ಷವೆಂದು ಹೆಸರು. ಅಲ್ಲಿ ಹೈರಣ್ವತಿಯೆಂಬ ನದಿಯು ಹರಿಯುತ್ತದೆ.

೬೫. ಅಲ್ಲಿನ ಜನರು ಬಹುಬಲಶಾಲಿಗಳು; ಧೀರರು; ಯಾವಾಗಲೂ ಸಂತೋಷದಿಂದ ಇರತಕ್ಕವರು. ಅವರ ಮೈಯ ಬಣ್ಣ ಬಿಳುಪು. ಅವರು ಸತ್ಕುಲ ಪ್ರಸೂತರು. ಅವರನ್ನು ನೋಡಿದ ಮಾತ್ರದಿಂದಲೇ ಪ್ರೀತಿಯು ಹುಟ್ಟುವುದು.

**ಏಕಾದಶ ಸಹಸ್ರಾಣಿ ವರ್ಷಾಣಾಂ ತೇ ನರೋತ್ತಮಾಃ ।**
**ಆಯುಷ್ಪ್ರಮಾಣಂ ಜೀವಂತಿ ಶತಾನಿ ದಶ ಪಂಚ ಚ ॥೬೬॥**

**ತಸ್ಮಿನ್ ವರ್ಷೇ ಮಹಾವೃಕ್ಷೋ ಲಕುಚಃ ಪತ್ರಸಂಶ್ರಯಃ ।**
**ತಸ್ಯ ಪೀತ್ವಾ ಫಲರಸಂ ತತ್ರ ಜೀವಂತಿ ಮಾನವಾಃ ॥೬೭॥**

**ಶೃಂಗಸಾಹ್ವಸ್ಯ ಶೃಂಗಾಣಿ ತ್ರೀಣಿ ತಾನಿ ಮಹಾಂತಿ ವೈ ।**
**ಏಕಂ ಮಣಿಮಯಂ ತತ್ರ ಏಕಂ ತು ಕನಕಾನ್ವಿತಂ ॥**
**ಸರ್ವರತ್ನಮಯಂ ಚೈಕಂ ಭವನೈರುಪಶೋಭಿತಂ ॥೬೮॥**

**ಉತ್ತರೇ ಚಾಸ್ಯ ಶೃಂಗಸ್ಯ ಸಮುದ್ರಾಂತೇ ಚ ದಕ್ಷಿಣೇ ।**
**ಕುರವಸ್ತತ್ರ ತದ್ವರ್ಷಂ ಪುಣ್ಯಂ ಸಿದ್ಧನಿಷೇವಿತಂ ॥೬೯॥**

**ತತ್ರ ವೃಕ್ಷಾ ಮಧುಫಲಾ ದಿವ್ಯಾಮೃತಮಯಾಪಗಾಃ ।**
**ವಸ್ತ್ರಾಣಿ ತೇ ಪ್ರಸೂಯಂತೇ ಫಲೈಶ್ಚಾಭರಣಾನಿ ಚ ॥೭೦॥**

---

೬೬. ಅಲ್ಲಿನ ನಿವಾಸಿಗಳು ಮನುಷ್ಯರಲ್ಲೆಲ್ಲ ಶ್ರೇಷ್ಠರೆನಿಸಿಕೊಂಡಿರುವರು. ಅವರು ಹನ್ನೆರಡು ಸಾವಿರದ ಏಳುನೂರು ವರ್ಷಗಳ ಕಾಲ ಜೀವಿಸುವರು.

೬೭. ಆ ಭೂಖಂಡದಲ್ಲಿ ಎಲೆಗಳು ಒತ್ತಾಗಿ ಬೆಳೆದಿರುವ ದೊಡ್ಡದೊಂದು ಗಜನಿಂಬೇ ಗಿಡವಿದೆ. ಅದರ ಹಣ್ಣಿನ ರಸವನ್ನು ಕುಡಿದು ಅಲ್ಲಿನ ಜನರು ಬದುಕುತ್ತಾರೆ.

೬೮. ಶೃಂಗಪರ್ವತಕ್ಕೆ ಮೂರು ದೊಡ್ಡ ಶಿಖರಗಳಿವೆ. ಒಂದು ರತ್ನಮಯವಾದುದು. ಇನ್ನೊಂದು ಸುವರ್ಣಯುತವಾದುದು. ಮತ್ತೊಂದು ಸಕಲವಿಧವಾದ ರತ್ನಗಳಿಂದ ಪೂರ್ಣವಾಗಿ ದಿವ್ಯವಾದ ಗೃಹಗಳಿಂದ ಶೋಭಿಸುತ್ತಿರುವುದು.

೬೯. ಈ ಶೃಂಗಪರ್ವತಕ್ಕೆ ಉತ್ತರದಲ್ಲಿಯೂ ಸಮುದ್ರತೀರಕ್ಕೆ ದಕ್ಷಿಣದಲ್ಲಿಯೂ ವ್ಯಾಪಿಸಿರುವ ಭೂಭಾಗವನ್ನು ಕುರುವರ್ಷವೆನ್ನುವರು. ಅದು ಯೋಗಸಿದ್ಧರಿಗೆ ಆಶ್ರಯವಾದ ಪುಣ್ಯಭೂಮಿಯೆನಿಸಿಕೊಂಡಿದೆ.

೭೦. ಅಲ್ಲಿನ ಮರಗಳು ಮಧುರವಾದ ಫಲಗಳಿಂದ ತುಂಬಿವೆ. ಅವು ನಾನಾವಿಧವಾದ ವಸ್ತ್ರಗಳನ್ನೂ ಆಭರಣಗಳನ್ನೂ ಕೊಡುತ್ತವೆ. ನದಿಗಳು ಅಮೃತರಸದಿಂದ ತುಂಬಿವೆ.

**ಸರ್ವಕಾಮಪ್ರದಾತಾರಃ ಕೇಚಿದ್ವೃಕ್ಷಾ ಮನೋರಮಾಃ ।**
**ಅಪರೇ ಕ್ಷೀರಿಣೋ ನಾಮ ವೃಕ್ಷಾಸ್ತತ್ರ ಮನೋರಮಾಃ ।**
**ಯೇ ರಕ್ಷಂತಿ ಸದಾ ಕ್ಷೀರಂ ಷಡ್ರಸಂ ಚಾಮೃತೋಪಮಂ ॥೭೧॥**

**ಸರ್ವಾ ಮಣಿಮಯೀ ಭೂಮಿಃ ಸೂಕ್ಷ್ಮಾ ಕಾಂಚನವಾಲುಕಾ ।**
**ಸರ್ವತ್ರ ಸುಖಸಂಸ್ಪರ್ಶಾ ನಿಶ್ಶಬ್ದಾಃ ಪವನಾಃ ಶುಭಾಃ ॥೭೨॥**

**ದೇವಲೋಕಚ್ಯುತಾಸ್ತತ್ರ ಜಾಯಂತೇ ಮಾನವಾಃ ಶುಭಾಃ ।**
**ಶುಕ್ಲಾಭಿಜನಸಂಪನ್ನಾಃ ಸರ್ವೇ ತೇ ಸ್ಥಿರಯೌವನಾಃ ॥೭೩॥**

**ಮಿಥುನಾನಿ ಪ್ರಜಾಯಂತೇ ಸ್ತ್ರಿಯಶ್ಚಾಪ್ಸರಸೋಪಮಾಃ ।**
**ತೇಷಾಂ ತು ಕ್ಷೀರಿಣಾಂ ಕ್ಷೀರಂ ಪಿಬಂತಿ ಹ್ಯಮೃತೋಪಮಂ ॥೭೪॥**

**ಏಕಾಹಾಜ್ಜಾಯತೇ ಯುಗ್ಮಂ ಸಮಂ ಚೈವ ವಿವರ್ಧತೇ ।**
**ಸಮಂ ರೂಪಂ ಚ ಶೀಲಂ ಚ ಸಮಂ ಚೈವ ಮ್ರಿಯಂತಿ ವೈ ॥೭೫॥**

---

೭೧. ಸೊಗಸಾದ ಕೆಲವು ಮರಗಳು ಇಷ್ಟಾರ್ಥಗಳನ್ನೆಲ್ಲ ಸಲ್ಲಿಸುವುವು. ಇನ್ನು ಕೆಲವಕ್ಕೆ ಕ್ಷೀರವೃಕ್ಷಗಳೆಂದು ಹೆಸರು. ಅವೂ ಸಹ ಸುಂದರವಾಗಿವೆ. ಅವುಗಳಲ್ಲಿ ಯಾವಾಗಲೂ ಹಾಲು ಮತ್ತು ಅಮೃತದಂತಹ ಷಡ್ರಸಗಳು ಸಿದ್ಧವಾಗಿರುವುವು.

೭೨. ನೆಲವೆಲ್ಲವೂ ರತ್ನಖಚಿತವಾದುದು. ಸೂಕ್ಷ್ಮವಾದ ಬಂಗಾರದ ಕಣಗಳೇ ಅಲ್ಲಿ ಮರಳು. ಗಾಳಿಯು ಶರೀರಕ್ಕೆ ಹಿತವಾಗಿ ಶಬ್ದವಿಲ್ಲದಂತೆ ಬೀಸುವುದು.

೭೩. ಪುಣ್ಯವೆಲ್ಲ ತೀರಿದ ಬಳಿಕ ದೇವಲೋಕದಿಂದ ಹೊರಹೊರಡುವ ಮಾನವೋತ್ತಮರು ಅಲ್ಲಿ ಜನ್ಮವನ್ನು ತಾಳುವರು. ಅವರು ಶುದ್ಧವಾದ ವಂಶದಲ್ಲಿ ಜನಿಸಿ ನಿತ್ಯಯೌವನದಿಂದ ಕಂಗೊಳಿಸುವರು.

೭೪. ದಂಪತಿಗಳು ಒಟ್ಟಾಗಿಯೇ ಜನಿಸುವರು. ಸ್ತ್ರೀಯರು ಅಪ್ಸರಸ್ಸುಗಳಿಗೆ ಸಮಾನರಾಗಿರುವರು. ಅವರು ಕ್ಷೀರವೃಕ್ಷಗಳ ಅಮೃತದಂತಿರುವ ರಸವನ್ನು ಕುಡಿಯುವರು.

೭೫. ದಂಪತಿಗಳಿಬ್ಬರೂ ಒಂದೇ ದಿನ ಜನಿಸಿ ಜೊತೆಯಲ್ಲಿಯೇ ಬೆಳೆಯುತ್ತಾರೆ. ಅವರ ರೂಪವೂ ಶೀಲವೂ ಸಮಾನವಾಗಿರುವುವು. ಅವರು ಸಾಯುವುದೂ ಸಹ ಜೊತೆಯಲ್ಲಿಯೇ.

ಏಕೈಕಮನುರಕ್ತಾಶ್ಚ ಚಕ್ರವಾಕಮಿವ ಧ್ರುವಂ।
ಅನಾಮಯಾ ಹ್ಯಶೋಕಾಶ್ಚ ನಿತ್ಯಂ ಮುದಿತಮಾನಸಾಃ ॥೭೬॥

ದಶ ವರ್ಷಸಹಸ್ರಾಣಿ ದಶ ವರ್ಷಶತಾನಿ ಚ।
ಜೀವಂತಿ ಚ ಮಹಾಸತ್ವಾ ನ ಚಾನ್ಯಾ ಸ್ತ್ರೀ ಪ್ರವರ್ತತೇ ॥೭೭॥

॥ ಸೂತ ಉವಾಚ ॥

ಏವಮೇವ ನಿಸರ್ಗೋ ವೈ ವರ್ಷಾಣಾಂ ಭಾರತೇ ಯುಗೇ।
ದೃಷ್ಟಃ ಪರಮಧರ್ಮಜ್ಞಾಃ ಕಿಂ ಭೂಯಃ ಕಥಯಾಮಿ ವಃ ॥೭೮॥

ಆಖ್ಯಾತಾಸ್ತ್ವೇವಮೃಷಯಃ ಸೂತಪುತ್ರೇಣ ಧೀಮತಾ।
ಉತ್ತರಶ್ರವಣೇ ಭೂಯಃ ಪಪ್ರಚ್ಛುಃ ಸೂತನಂದನಂ ॥೭೯॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ದ್ವೀಪಾದಿವರ್ಣನಂ ನಾಮ
ತ್ರಯೋದಶಾಧಿಕಶತತಮೋಽಧ್ಯಾಯಃ

---

೭೬. ಅವರು ಚಕ್ರವಾಕ ದಂಪತಿಗಳಂತೆ ಪರಸ್ಪರ ಅನುರಕ್ತರಾಗಿರುವರು. ಅವರಿಗೆ ರೋಗವಾಗಲಿ ದುಃಖವಾಗಲಿ ಇರುವುದಿಲ್ಲ; ಅವರು ಸದಾ ಸಂತುಷ್ಟ ಚಿತ್ತರಾಗಿರುವರು.

೭೭. ಮಹಾಸತ್ವಶಾಲಿಗಳಾದ ಆ ಜನರು ಹನ್ನೊಂದು ಸಾವಿರ ವರ್ಷಗಳ ಕಾಲ ಜೀವಿಸುವರು. ಪರಸ್ತ್ರೀಯರ ಚಿಂತೆಗೆ ಅಲ್ಲಿ ಅವಕಾಶವೇ ಇಲ್ಲ.

೭೮. ಸೂತಪೌರಾಣಿಕನು ಹೇಳಿದನು.—ವರ್ಷಗಳಲ್ಲಿ ಒಂದಾದ ಭಾರತ ವರ್ಷದಲ್ಲಿಯೂ ಸಹ ಸೃಷ್ಟಿಯ ರೀತಿಯು ಹೀಗೆಯೇ ಇರುವುದು. ಧರ್ಮರಹಸ್ಯ ವನ್ನು ಬಲ್ಲ ಎಲೈ ಮುನಿಗಳಿರಾ, ನಿಮಗೆ ಇನ್ನೇನನ್ನು ಹೇಳಲಿ?

೭೯. ಮೇಧಾವಿಯಾದ ಸೂತಪೌರಾಣಿಕನು ಹೀಗೆ ಹೇಳಲು, ಮುಂದಿನ ಸಂಗತಿಯನ್ನು ತಿಳಿದುಕೊಳ್ಳಬೇಕೆಂಬ ಇಚ್ಛೆಯಿಂದ ಋಷಿಗಳು ಮತ್ತೆ ಪ್ರಶ್ನಿಸಿದರು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಜಂಬೂದ್ವೀಪವನ್ನೂ ಅದರ ಭಾಗಗಳಾದ ಇಳಾವೃತ, ರಮ್ಯಕ ಮುಂತಾದ ವರ್ಷಗಳನ್ನೂ ವರ್ಣಿಸಿದೆ.

ಜಂಬೂದ್ವೀಪದ ನಟ್ಟನಡುವೆ ಮೇರುಪರ್ವತವಿದೆ. ಇದರ ಉತ್ತರಕ್ಕೆ ನೀಲ, ಶ್ವೇತ ಮತ್ತು ಶೃಂಗಪರ್ವತಗಳೂ, ದಕ್ಷಿಣಕ್ಕೆ ನಿಷಧ, ಹೇಮಕೂಟ ಮತ್ತು ಹಿಮವತ್ಪರ್ವತಗಳೂ ಒಂದರ ತರುವಾಯ ಮತ್ತೊಂದು ಪೂರ್ವ ಪಶ್ಚಿಮವಾಗಿ ಹಬ್ಬಿವೆ. ಎರಡೆರಡು ಪರ್ವತಗಳ ನಡುವೆ ಇರುವ ಭೂಭಾಗಕ್ಕೆ ವರ್ಷವೆಂದು ಹೆಸರು. ಮಧ್ಯದಲ್ಲಿ ಇಳಾವೃತ ವರ್ಷವಿದೆ. ಅದರ ಉತ್ತರಕ್ಕೆ ರಮ್ಯಕ, ಹಿರಣ್ಯಕ ಮತ್ತು ಕುರುವರ್ಷಗಳು ಒಂದರ ಮುಂದೆ ಮತ್ತೊಂದು ಅನುಕ್ರಮವಾಗಿವೆ. ಹೀಗೆಯೇ ದಕ್ಷಿಣದಿಕ್ಕಿನಲ್ಲಿ ಹರಿವರ್ಷ, ಕಿಂಪುರುಷವರ್ಷ ಮತ್ತು ಭಾರತವರ್ಷಗಳೆಂಬ ಮೂರು ಭೂಖಂಡಗಳಿವೆ. ಇದಲ್ಲದೆ ಇಳಾವೃತ ವರ್ಷದ ಪೂರ್ವ ಪಶ್ಚಿಮ ಭಾಗಗಳಲ್ಲಿ ಭದ್ರಾಶ್ವ ಮತ್ತು ಕೇತುಮಾಲಗಳೆಂಬ ಎರಡು ವರ್ಷಗಳು ಗಂಧಮಾದನ ಮತ್ತು ಮಾಲ್ಯವಂತಗಳೆಂಬ ಪರ್ವತಗಳಿಂದ ವಿಭಕ್ತವಾಗಿವೆ.

ಶ್ರೀಮತ್ಸ್ಯಮಹಾಪುರಾಣದಲ್ಲಿ ದ್ವೀಪಾದಿ ವರ್ಣನವೆಂಬ
ನೂರ ಹದಿಮೂರನೆಯ ಅಧ್ಯಾಯವು ಮುಗಿದುದು.



## ಅಥ ಚತುರ್ದಶಾಧಿಕಶತತಮೋಽಧ್ಯಾಯಃ

॥ ಋಷಯ ಊಚುಃ ॥

ಯದಿದಂ ಭಾರತಂ ವರ್ಷಂ ಯಸ್ಮಿನ್ ಸ್ವಾಯಂಭುವಾದಯಃ ।
ಚತುರ್ದಶೈವ ಮನವಃ ಪ್ರಜಾಸರ್ಗಂ ಸಸರ್ಜಿರೇ ॥ ೧ ॥

ಏತದ್ವೇದಿತುಮಿಚ್ಛಾಮಃ ಸಕಾಶಾತ್ತವ ಸುವ್ರತ ।
ಉತ್ತರಶ್ರವಣಂ ಭೂಯಃ ಪ್ರಬ್ರೂಹಿ ವದತಾಂ ವರ ॥ ೨ ॥

ಏತಚ್ಛ್ರುತ್ವಾ ಋಷೀಣಾಂ ತು ಪ್ರಾಬ್ರವೀಲ್ಲೋಮಹರ್ಷಣಿಃ ।
ಪೌರಾಣಿಕಸ್ತದಾ ಸೂತ ಋಷೀಣಾಂ ಭಾವಿತಾತ್ಮನಾಂ ॥ ೩ ॥

ಬುಧ್ಯಾ ವಿಚಾರ್ಯ ಬಹುಧಾ ವಿಮೃಶ್ಯ ಚ ಪುನಃ ಪುನಃ ।
ತೇಭ್ಯಸ್ತು ಕಥಯಾಮಾಸ ಉತ್ತರಶ್ರವಣಂ ತದಾ ॥ ೪ ॥

॥ ಸೂತ ಉವಾಚ ॥

ಅಥಾಹಂ ವರ್ಣಯಿಷ್ಯಾಮಿ ವರ್ಷೇಽಸ್ಮಿನ್ ಭಾರತೇ ಪ್ರಜಾಃ ।
ಭರಣಾತ್ಪ್ರಜನಾಚ್ಚೈವ ಮನುರ್ಭರತ ಉಚ್ಯತೇ ॥ ೫ ॥

---

೧-೨. ಋಷಿಗಳು ಹೇಳಿದರು.—ಸ್ವಾಯಂಭುವ ಮೊದಲಾದ ಹದಿನಾಲ್ಕು ಜನ ಮನುಚಕ್ರವರ್ತಿಗಳು ಪ್ರಜಾಸೃಷ್ಟಿಯನ್ನು ಮಾಡಿ ರಾಜ್ಯಭಾರವನ್ನು ನಡೆಸಿದುದು ಈ ಭಾರತವರ್ಷದಲ್ಲಿಯೇ ಅಲ್ಲವೇ! ಧರ್ಮವನ್ನು ಬಲ್ಲವನೂ ಮಾತುಗಾರನೂ ಆದ ಎಲೈ ಪೌರಾಣಿಕನೇ, ನಿನ್ನಿಂದ ಇದರ ವಿವರಣೆಯನ್ನು ತಿಳಿದುಕೊಳ್ಳಬೇಕೆಂದು ಬಯಸುತ್ತೇವೆ. ಮುಂದಿನ ವೃತ್ತಾಂತವನ್ನು ಹೇಳು.

೩-೪. ಋಷಿಗಳ ಈ ಮಾತನ್ನು ಕೇಳಿ ಸೂತಪೌರಾಣಿಕನಿಗೆ ಆನಂದದಿಂದ ರೋಮಾಂಚವು ಹುಟ್ಟಿತು. ಅವನು ತನ್ನ ಬುದ್ಧಿಶಕ್ತಿಯಿಂದ ಚೆನ್ನಾಗಿ ಆಲೋಚಿಸಿ, ಮತ್ತೆ ಮತ್ತೆ ವಿಮರ್ಶೆಮಾಡಿ ಅವರು ಕೇಳಿದ ವೃತ್ತಾಂತವನ್ನು ತಿಳಿಸಿದನು.

೫-೬. ಸೂತಪೌರಾಣಿಕನು ಹೇಳಿದನು.—ಇನ್ನು ಮುಂದೆ ಈ ಭಾರತವರ್ಷದ ಪ್ರಜೆಗಳ ವಿಚಾರವನ್ನು ಹೇಳುವೆನು. ಪಾಲಿಸುವುದರಿಂದಲೂ ಸೃಷ್ಟಿಸುವು

**ನಿರುಕ್ತವಚನಶ್ಚೈವ ವರ್ಷಂ ತದ್ಭಾರತಂ ಸ್ಮೃತಂ ।**
**ಯತಃ ಸ್ವರ್ಗಶ್ಚ ಮೋಕ್ಷಶ್ಚ ಮಧ್ಯಮಶ್ಚಾಽಪಿ ಹಿ ಸ್ಮೃತಃ ॥ ೬ ॥**

**ನ ಖಲ್ವನ್ಯತ್ರ ಮರ್ತ್ಯಾನಾಂ ಭೂಮೌ ಕರ್ಮವಿಧಿಃ ಸ್ಮೃತಃ ।**
**ಭಾರತಸ್ಯಾಸ್ಯ ವರ್ಷಸ್ಯ ನವ ಭೇದಾನ್ನಿಬೋಧತ ॥ ೭ ॥**

**ಇಂದ್ರದ್ವೀಪಃ ಕಶೇರುಶ್ಚ ತಾಮ್ರಪರ್ಣೀ ಗಭಸ್ತಿಮಾನ್ ।**
**ನಾಗದ್ವೀಪಸ್ತಥಾ ಸೌಮ್ಯೋ ಗಂಧರ್ವಸ್ತ್ವಥ ವಾರುಣಃ ॥ ೮ ॥**

**ಅಯಂ ತು ನವಮಸ್ತೇಷಾಂ ದ್ವೀಪಃ ಸಾಗರಸಂವೃತಃ ।**
**ಯೋಜನಾನಾಂ ಸಹಸ್ರಂ ತು ದ್ವೀಪೋಽಯಂ ದಕ್ಷಿಣೋತ್ತರಃ ॥ ೯ ॥**

**ಆಯತಸ್ತು ಕುಮಾರೀತೋ ಗಂಗಾಯಾಃ ಪ್ರವಹಾವಧಿಃ ।**
**ತಿರ್ಯಗೂರ್ಧ್ವಂ ತು ವಿಸ್ತೀರ್ಣಃ ಸಹಸ್ರಾಣಿ ದಶೈವ ತು ॥೧೦॥**

---

ದರಿಂದಲೂ ಮನುವಿಗೆ ಭರತನೆಂಬ ಹೆಸರು ಬಂದಿದೆ. ಭರತನು ಆಳಿದ ದೇಶವಾದುದರಿಂದ ಇದಕ್ಕೆ ಭಾರತವರ್ಷವೆಂಬ ಪ್ರಖ್ಯಾತಿ ಬಂದಿತು. ಭಾರತಶಬ್ದದ ನಿರ್ವಚನವನ್ನು ಪ್ರಾಜ್ಞರು ಈ ರೀತಿಯಾಗಿ ಮಾಡಿದ್ದಾರೆ. ಈ ಮಧ್ಯಮ ಭೂಮಿಯು ಸ್ವರ್ಗಫಲವನ್ನೂ ಮೋಕ್ಷಫಲವನ್ನೂ ಕೊಡುತ್ತದೆ. ಈ ಭಾರತ ವರ್ಷವನ್ನು ಬಿಟ್ಟರೆ ಜಗತ್ತಿನ ಮತ್ತಾವ ಭಾಗದಲ್ಲಿಯೂ ಜನರಿಗೆ ಕರ್ಮಾನುಷ್ಠಾನದ ನಿಯಮವಿಲ್ಲ.

೮. ಈ ಭಾರತವರ್ಷದಲ್ಲಿ ಒಂಬತ್ತು ವಿಭಾಗಗಳಿವೆ. ಅವುಗಳ ಹೆಸರನ್ನು ಹೇಳುವೆನು ಕೇಳಿ. ಇಂದ್ರದ್ವೀಪ, ಕಶೇರು, ತಾಮ್ರಪರ್ಣಿ, ಗಭಸ್ತಿಮಂತ, ನಾಗದ್ವೀಪ, ಸೌಮ್ಯ, ಗಂಧರ್ವ ಮತ್ತು ವಾರುಣಗಳೆಂಬುವು ಆದಿಯಿಂದ ಎಂಟು ಭೂಭಾಗಗಳು.

೯. ಈಗ ನಾವು ವಾಸಮಾಡುತ್ತಿರುವುದೇ ಒಂಬತ್ತನೆಯ ದ್ವೀಪ. ಇದನ್ನು ಸಾಗರವು ಸುತ್ತುಗಟ್ಟಿರುವುದು. ದಕ್ಷಿಣೋತ್ತರವಾಗಿ ಇದು ಒಂದು ಸಾವಿರ ಯೋಜನ ವಿಸ್ತಾರವಾಗಿದೆ.

೧೦. ಕನ್ಯಾಕುಮಾರಿಯಿಂದ ಗಂಗಾನದಿಯ ಉತ್ಪತ್ತಿಸ್ಥಾನದ ವರೆಗೆ ಇದು ವ್ಯಾಪಿಸಿದೆ. ಮೇಲ್ಗಡೆಯಲ್ಲಿ ಈ ದ್ವೀಪವು ಪೂರ್ವಪಶ್ಚಿಮವಾಗಿ ಹತ್ತುಸಾವಿರ ಯೋಜನ ಅಗಲವಾಗಿದೆ.

**ದ್ವೀಪೋ ಹ್ಯುಪನಿವಿಷ್ಟೋಽಯಂ ಮ್ಲೇಚ್ಛೈರಂತೇಷು ಸರ್ವಶಃ ।**
**ಯವನಾಶ್ಚ ಕಿರಾತಾಶ್ಚ ತಸ್ಯಾಂತೇ ಪೂರ್ವಪಶ್ಚಿಮೇ ॥೧೧॥**

**ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾ ಮಧ್ಯೇ ಶೂದ್ರಾಶ್ಚ ಭಾಗಶಃ ।**
**ಇಜ್ಯಾಯುಧವಣಿಜ್ಯಾದಿ ವರ್ತಯಂತೋ ವ್ಯವಸ್ಥಿತಾಃ ॥೧೨॥**

**ತೇಷಾಂ ಸವ್ಯವಹಾರೋಽಯಂ ವರ್ತತೇ ಚ ಪರಸ್ಪರಂ ।**
**ಧರ್ಮಾರ್ಥಕಾಮಸಂಯುಕ್ತೋ ವರ್ಣಾನಾಂ ತು ಸ್ವಕರ್ಮಸು ॥೧೩॥**

**ಸಂಕಲ್ಪಪಚ್ಯಮಾನಾತ್ತು ಆಶ್ರಮಾಣಾಂ ಯಥಾವಿಧಿ ।**
**ಇಹ ಸ್ವರ್ಗಾಪವರ್ಗಾರ್ಥಂ ಪ್ರವೃತ್ತಿರಿಹ ಮಾನುಷೇ ॥೧೪॥**

**ಯಸ್ತ್ವಯಂ ಮಾನವೋ ದ್ವೀಪಸ್ತಿರ್ಯಗ್ಯಾಮಃ ಪ್ರಕೀರ್ತಿತಃ ।**
**ಯ ಏನಂ ಜಯತೇ ಕೃತ್ಸ್ನಂ ಸ ಸಮ್ರಾಡಿತಿ ಕೀರ್ತಿತಃ ॥೧೫॥**

---

೧೧. ಈ ದ್ವೀಪದ ಗಡಿಗಳಲ್ಲಿ ಎಲ್ಲಕಡೆಯೂ ಮ್ಲೇಚ್ಛರು ವಾಸವಾಗಿದ್ದಾರೆ. ಪೂರ್ವದ ಮತ್ತು ಪಶ್ಚಿಮದ ಕೊನೆಯಲ್ಲಿ ಯವನರೂ ಕಿರಾತರೂ ಇದ್ದಾರೆ.

೧೨. ಮಧ್ಯಭಾಗದಲ್ಲಿ ಬ್ರಾಹ್ಮಣರೂ, ಕ್ಷತ್ರಿಯರೂ, ವೈಶ್ಯರೂ ಮತ್ತು ಶೂದ್ರರೂ ಅಲ್ಲಲ್ಲಿ ವಾಸಮಾಡುತ್ತಿರುವರು. ಅವರು ದೇವತಾರಾಧನೆ, ಬಿಲ್ಲುವಿದ್ಯೆ, ವ್ಯಾಪಾರ, ಸೇವೆ ಮುಂತಾದ ಕರ್ಮಗಳಲ್ಲಿ ತೊಡಗಿರುವರು.

೧೩. ಈ ನಾಲ್ಕು ವರ್ಣದವರಿಗೂ ಅವರವರ ಆಶ್ರಮ ಧರ್ಮಕ್ಕೆ ತಕ್ಕಂತೆ ಧರ್ಮ, ಅರ್ಥ ಮತ್ತು ಕಾಮಗಳೆಂಬ ಪುರುಷಾರ್ಥಗಳನ್ನು ಕೊಡುವ ಕರ್ಮಗಳಲ್ಲಿ ಪರಸ್ಪರ ವ್ಯವಹಾರವುಂಟು.

೧೪. ಜೀವರಾಶಿಗಳ ಕರ್ಮವು ಕ್ಷಯಿಸಲೆಂದು ಸಂಕಲ್ಪಿಸಿ ಭಗವಂತನು ಆಶ್ರಮಧರ್ಮಗಳನ್ನು ಗೊತ್ತುಮಾಡಿರುವನು. ಶಾಸ್ತ್ರೋಕ್ತವಾದ ನಿಯಮದಂತೆ ಅವುಗಳನ್ನು ಈ ಭಾರತಭೂಮಿಯಲ್ಲಿ ಅನುಷ್ಠಾನಮಾಡಿದರೆ ಮಾನವನಿಗೆ ಸ್ವರ್ಗಾದಿಸುಖವೂ ಮೋಕ್ಷವೂ ಲಭಿಸುವುವು.

೧೫. ಮನುಚಕ್ರವರ್ತಿಗಳ ಅಧಿಕಾರಸ್ಥಾನವೆನಿಸಿಕೊಂಡು, ಮೇಲೆ ಹೇಳಿದ ಉದ್ದಳತೆ ಮತ್ತು ಅಡ್ಡಳತೆಗಳಿಂದ ಕೂಡಿದ ಈ ದ್ವೀಪವನ್ನೂ ಸಂಪೂರ್ಣವಾಗಿ ಯಾವನು ಜಯಿಸುತ್ತಾನೆಯೋ ಅವನನ್ನು ಸಮ್ರಾಟ್ (ಚಕ್ರವರ್ತಿ) ಎನ್ನುವರು.

**ಅಯಂ ಲೋಕಸ್ತು ವೈ ಸಮ್ರಾಡಂತರಿಕ್ಷಂ ವಿರಾಟ್ಸ್ಮೃತಂ**
**ಸ್ವರಾಡಸೌ ಸ್ಮೃತೋ ಲೋಕಃ ಪುನರ್ವಕ್ಷ್ಯಾಮಿ ವಿಸ್ತರಾತ್ ||೧೬||**

**ಸಪ್ತ ಚಾಸ್ಮಿನ್ ಮಹಾವರ್ಷೇ ವಿಶ್ರುತಾಃ ಕುಲಪರ್ವತಾಃ |**
**ಮಹೇಂದ್ರೋ ಮಲಯಃ ಸಹ್ಯಃ ಶುಕ್ತಿಮಾನೃಕ್ಷವಾನಪಿ ||೧೭||**

**ವಿಂಧ್ಯಶ್ಚ ಪಾರಿಯಾತ್ರಶ್ಚ ಇತ್ಯೇತೇ ಕುಲಪರ್ವತಾಃ |**
**ತೇಷಾಂ ಸಹಸ್ರಶಶ್ಚಾಽನ್ಯೇ ಪರ್ವತಾಸ್ತು ಸಮೀಪತಃ ||೧೮||**

**ಅಭಿಜ್ಞಾತಾಸ್ತತಶ್ಚಾನ್ಯೇ ವಿಪುಲಾಶ್ಚಿತ್ರಸಾನವಃ |**
**ಅನ್ಯೇ ತೇಭ್ಯಃ ಪರಿಜ್ಞಾತಾ ಹ್ರಸ್ವಾ ಹ್ರಸ್ವೋಪಜೀವಿನಃ | ||೧೯||**

**ತೈರ್ವಿಮಿಶ್ರಾ ಜಾನಪದಾ ಆರ್ಯಾ ಮ್ಲೇಚ್ಛಾಶ್ಚ ಸರ್ವತಃ |**
**ಪಿಬಂತಿ ಬಹುಲಾ ನದ್ಯೋ ಗಂಗಾ ಸಿಂಧುಃ ಸರಸ್ವತೀ ||೨೦||**

---

೧೬. ಈ ಲೋಕವನ್ನು ಸಮ್ರಾಟ್ ಎಂದೂ, ಅಂತರಿಕ್ಷವನ್ನು ವಿರಾಟ್ ಎಂದೂ ಕರೆಯುತ್ತಾರೆ. ಅದರ ಮೇಲಿನ ಸ್ವರ್ಗಲೋಕವನ್ನು ಸ್ವರಾಟ್ ಎನ್ನುವರು. ಭಾರತವರ್ಷವನ್ನು ಇನ್ನಷ್ಟು ವಿಸ್ತಾರವಾಗಿ ವರ್ಣಿಸುವೆನು ಕೇಳು.

೧೭-೧೮. ಈ ದೊಡ್ಡ ಭೂಖಂಡದಲ್ಲಿ ಏಳು ಕುಲಪರ್ವತಗಳಿವೆ. ಮಹೇಂದ್ರ, ಮಲಯ, ಸಹ್ಯ, ಶುಕ್ತಿಮಂತ, ಋಕ್ಷವಂತ, ವಿಂಧ್ಯ ಮತ್ತು ಪಾರಿಯಾತ್ರಗಳೆಂದು ಅವುಗಳ ಹೆಸರು. ಅವುಗಳ ನೆರೆಹೊರೆಯಲ್ಲಿ ಇನ್ನೂ ಸಾವಿರಾರು ಪರ್ವತಗಳಿವೆ.

೧೯. ಇನ್ನೂ ಎಷ್ಟೋ ದೊಡ್ಡ ದೊಡ್ಡ ಪರ್ವತಗಳುಂಟು. ಅವುಗಳ ತಪ್ಪಲು ನೆಲವು ಅತಿ ರಮಣೀಯವಾಗಿ ಆಶ್ಚರ್ಯವನ್ನು ಹುಟ್ಟಿಸುತ್ತದೆ. ಅವುಗಳಿಗಿಂತ ಚಿಕ್ಕವಾದವುಗಳೂ ಕೂಡ ಹೇರಳವಾಗಿವೆ. ಅವುಗಳಲ್ಲಿ ಕುಳ್ಳರಾದ ಜನರು ವಾಸಿಸುತ್ತಿರುವರು.

೨೦-೨೨. ಆರ್ಯರೂ ಮ್ಲೇಚ್ಛರೂ ಸೇರಿ ಒಟ್ಟಿಗೆ ಆ ದೇಶದ ನಿವಾಸಿಗಳೆನಿಸಿರುವರು. ಗಂಗೆ, ಸಿಂಧು, ಸರಸ್ವತಿ, ಶತದ್ರು, ಚಂದ್ರಭಾಗೆ, ಯಮುನೆ, ಸರಯು, ಐರಾವತಿ, ವಿತಸ್ತೆ, ವಿಶಾಲೆ, ದೇವಿಕೆ, ಕುಹು, ಗೋಮತಿ, ಧೌತಪಾಪೆ, ಬಾಹುದೆ,

ಶತದ್ರುಶ್ಚಂದ್ರಭಾಗಾ ಚ ಯಮುನಾ ಸರಯೂಸ್ತಥಾ ।
ಐರಾವತೀ ವಿತಸ್ತಾ ಚ ವಿಶಾಲಾ ದೇವಿಕಾ ಕುಹೂಃ ॥೨೦॥

ಗೋಮತೀ ಧೌತಪಾಪಾ ಚ ಬಾಹುದಾ ಚ ದೃಷದ್ವತೀ ।
ಕೌಶಿಕೀ ತು ತೃತೀಯಾ ಚ ನಿಶ್ಚಲಾ ಗಂಡಕೀ ತಥಾ ।
ಇಕ್ಷುರ್ಲೌಹಿತಮಿತ್ಯೇತಾ ಹಿಮವತ್ಪಾರ್ಶ್ವನಿಃಸೃತಾಃ ॥೨೨॥

ವೇದಸ್ಮೃತಿರ್ವೇತ್ರವತೀ ವೃತ್ರಘ್ನೀ ಸಿಂಧುರೇವ ಚ ।
ಪರ್ಣಾಶಾ ನರ್ಮದಾ ಚೈವ ಕಾವೇರೀ ಮಹತೀ ತಥಾ ॥೨೩॥

ಪಾರಾ ಚ ಧನ್ವತೀ ರೂಪಾ ವಿದುಷಾ ವೇಣುಮತ್ಯಪಿ ।
ಶಿಪ್ರಾ ಹ್ಯವಂತೀ ಕುಂತೀ ಚ ಪಾರಿಯಾತ್ರಾಶ್ರಿತಾಃ ಸ್ಮೃತಾಃ ॥೨೪॥

ಮಂದಾಕಿನೀ ದಶಾರ್ಣಾ ಚ ಚಿತ್ರಕೂಟಾ ತಥೈವ ಚ ।
ತಮಸಾ ಪಿಪ್ಪಲೀ ಶ್ಯೇನೀ ತಥಾ ಚಿತ್ರೋತ್ಪಲಾಽಪಿ ಚ ॥೨೫॥

ವಿಮಲಾ ಚಂಚಲಾ ಚೈವ ತಥಾ ಚ ಧೂತವಾಹಿನೀ ।
ಶುಕ್ತಿಮಂತೀ ಶುನೀ ಲಜ್ಜಾ ಮುಕುಟಾ ಹ್ರಾದಿಕಾಽಪಿ ಚ ।
ಋಷ್ಯವಂತಪ್ರಸೂತಾಸ್ತಾ ನದ್ಯೋಽಮಲಜಲಾಃ ಶುಭಾಃ ॥೬೭॥

---

ದೃಷದ್ವತಿ, ಕೌಶಿಕಿ, ನಿಶ್ಚಲೆ, ಗಂಡಕಿ, ಇಕ್ಷು ಮತ್ತು ಲೌಹಿತಗಳೆಂಬ ನದಿಗಳು ಹಿಮವತ್ಪರ್ವತದಲ್ಲಿ ಹುಟ್ಟಿ ಹರಿಯುತ್ತವೆ. ಜನರು ಇವುಗಳ ನೀರನ್ನು ಸ್ನಾನ ಪಾನಾದಿಗಳಿಗೆ ಉಪಯೋಗಿಸುತ್ತಾರೆ.

೨೩–೨೪. ವೇದಸ್ಮೃತಿ, ವೇತ್ರವತಿ, ವೃತ್ರಘ್ನಿ, ಸಿಂಧು, ಪರ್ಣಾಶೆ, ನರ್ಮದೆ, ಕಾವೇರಿ, ಮಹತಿ, ಪಾರೆ, ಧನ್ವತಿ, ರೂಪೆ, ವಿದುಷೆ, ವೇಣುಮತಿ, ಶಿಪ್ರೆ, ಅವಂತಿ ಮತ್ತು ಕುಂತಿ ಇವೆಲ್ಲವೂ ಪಾರಿಯಾತ್ರ ಪರ್ವತದಲ್ಲಿ ಹುಟ್ಟುವ ನದಿಗಳು.

೨೫–೨೬. ಮಂದಾಕಿನಿ, ದಶಾರ್ಣೆ, ಚಿತ್ರಕೂಟಿ, ತಮಸೆ, ಪಿಪ್ಪಲಿ, ಶ್ಯೇನಿ, ಚಿತ್ರೋತ್ಪಲೆ, ವಿಮಲೆ, ಚಂಚಲೆ, ಧೂತವಾಹಿನಿ, ಶುಕ್ತಿಮಂತಿ, ಶುನಿ, ಲಜ್ಜೆ, ಮುಕುಟೆ ಮತ್ತು ಹ್ರಾದಿಕೆಯೆಂಬ ನದಿಗಳು ಋಷ್ಯವಂತಪರ್ವತದಲ್ಲಿ ಜನಿಸುತ್ತವೆ. ಇವುಗಳ ನೀರು ಬಹಳ ತಿಳಿಯಾಗಿದೆ.

**ತಾಪೀ ಪಯೋಷ್ಣೀ ನಿರ್ವಿಂಧ್ಯಾ ಕ್ಷಿಪ್ರಾ ಚ ಋಷಭಾ ನದೀ ।**
**ವೇಣಾ ವೈತರಣೀ ಚೈವ ವಿಶ್ವಮಾಲಾ ಕುಮುದ್ವತೀ ॥೨೭॥**

**ತೋಯಾ ಚೈವ ಮಹಾಗೌರೀ ದುರ್ಗಮಾ ತು ಶಿಲಾ ತಥಾ ।**
**ವಿಂಧ್ಯಪಾದಪ್ರಸೂತಾಸ್ತಾಃ ಸರ್ವಾಃ ಶೀತಜಲಾಃ ಶುಭಾಃ ॥೨೮॥**

**ಗೋದಾವರೀ ಭೀಮರಥೀ ಕೃಷ್ಣವೇಣೀ ಚ ವಂಜುಲಾ ।**
**ತುಂಗಭದ್ರಾ ಸುಪ್ರಯೋಗಾ ವಾಹ್ಯಾ ಕಾವೇರೀ ಚೈವ ತು ।**
**ದಕ್ಷಿಣಾಪಥನದ್ಯಸ್ತಾಃ ಸಹ್ಯಪಾದಾದ್ವಿನಿಃಸೃತಾಃ ॥೨೯॥**

**ಕೃತಮಾಲಾ ತಾಮ್ರಪರ್ಣೀ ಪುಷ್ಪಜಾ ಹ್ಯುತ್ಪಲಾವತೀ ।**
**ಮಲಯಪ್ರಸೂತಾ ನದ್ಯಸ್ತಾಃ ಸರ್ವಾಃ ಶೀತಜಲಾಃ ಶುಭಾಃ ॥೩೦॥**

**ತ್ರಿಭಾಗಾ ಋಷಿಕುಲ್ಯಾ ಚ ಇಕ್ಷುದಾ ತ್ರಿದಿವಾಚಲಾ ।**
**ತಾಮ್ರಪರ್ಣೀ ತಥಾ ಮೂಲೀ ಶರವಾ ವಿಮಲಾ ತಥಾ ।**
**ಮಹೇಂದ್ರತನಯಾಃ ಸರ್ವಾಃ ಪ್ರಖ್ಯಾತಾಃ ಶುಭಗಾಮಿನೀಃ ॥೩೧॥**

---

೨೭-೨೮. ತಾಪಿ, ಪಯೋಷ್ಣಿ, ನಿರ್ವಿಂಧ್ಯೆ, ಕ್ಷಿಪ್ರೆ, ಋಷಭೆ, ವೇಣೆ, ವೈತರಣೆ, ವಿಶ್ವಮಾಲೆ, ಕುಮುದ್ವತಿ, ತೋಯೆ, ಮಹಾಗೌರಿ, ದುರ್ಗಮೆ, ಶಿಲೆ ಇವುಗಳು ವಿಂಧ್ಯಪರ್ವತದ ತಪ್ಪಲಿನಲ್ಲಿ ಉದ್ಭವಿಸುತ್ತವೆ. ಈ ನದಿಗಳ ನೀರು ತಣ್ಣಗಿದೆ. ಇವು ಪಾಪಹರವಾದುವು.

೨೯. ಗೋದಾವರಿ, ಭೀಮರಥಿ, ಕೃಷ್ಣವೇಣಿ, ವಂಜುಲೆ, ತುಂಗಭದ್ರೆ, ಸುಪ್ರಯೋಗೆ, ವಾಹ್ಯೆ ಮತ್ತು ಕಾವೇರಿಗಳು ದಕ್ಷಿಣದೇಶದಲ್ಲಿ ಹರಿಯುವ ನದಿಗಳು ಇವು ಸಹ್ಯಾದ್ರಿಯ ತಪ್ಪಲಿನಲ್ಲಿ ಹುಟ್ಟುತ್ತವೆ.

೩೦. ಕೃತಮಾಲೆ, ತಾಮ್ರಪರ್ಣಿ, ಪುಷ್ಪಜೆ ಮತ್ತು ಉತ್ಪಲಾವತಿಯೆಂಬ ಪುಣ್ಯನದಿಗಳು ಮಲಯಪರ್ವತದಲ್ಲಿ ಜನಿಸುವುವು. ಇವುಗಳ ನೀರು ತಂಪಾಗಿರುವುದು.

೩೧. ತ್ರಿಭಾಗೆ, ಋಷಿಕುಲ್ಯೆ, ಇಕ್ಷುದೆ, ತ್ರಿದಿವೆ, ಅಚಲೆ, ತಾಮ್ರಪರ್ಣಿ, ಮೂಲಿ, ಶರವೆ ಮತ್ತು ವಿಮಲೆಗಳೆಂಬ ಸುಪ್ರಸಿದ್ಧವಾದ ನದಿಗಳು ಮಹೇಂದ್ರ ಪರ್ವತದಿಂದ ಹೊರಟು ಬಲು ಅಂದವಾಗಿ ಹರಿಯುತ್ತವೆ.

ಕಾಶಿಕಾ ಸುಕುಮಾರೀ ಚ ಮಂದಗಾ ಮಂದವಾಹಿನೀ ।
ಕೃಪಾ ಚ ಪಾಶಿನೀ ಚೈವ ಶುಕ್ತಿಮಂತಾತ್ಮಜಾಸ್ತು ತಾಃ ॥೩೨॥

ಸರ್ವಾಃ ಪುಣ್ಯಜಲಾಃ ಪುಣ್ಯಾಃ ಸರ್ವಗಾಶ್ಚ ಸಮುದ್ರಗಾಃ ।
ವಿಶ್ವಸ್ಯ ಮಾತರಃ ಸರ್ವಾಃ ಸರ್ವಪಾಪಹರಾಃ ಶುಭಾಃ ॥೩೩॥

ತಾಸಾಂ ನದ್ಯುಪನದ್ಯಶ್ಚ ಶತಶೋಽಥ ಸಹಸ್ರಶಃ ।
ತಾಸ್ವಿಮೇ ಕುರುಪಾಂಚಾಲಾಃ ಶಾಲ್ವಾಶ್ಚೈವ ಸುಜಾಂಗಲಾಃ ॥೩೪॥

ಶೂರಸೇನಾ ಭದ್ರಕಾರಾ ವಾಹ್ಯಾಃ ಸಹ ಪಟಚ್ಚರಾಃ ।
ಮತ್ಸ್ಯಾಃ ಕಿರಾತಾಃ ಕುಲ್ಯಾಶ್ಚ ಕುಂತಲಾಃ ಕಾಶಿಕೋಸಲಾಃ ॥೩೫॥

ಆವಂತಾಶ್ಚ ಕಲಿಂಗಾಶ್ಚ ಮೂಕಾಶ್ಚೈವಾಂಧಕೈಃ ಸಹ ।
ಮಧ್ಯದೇಶಾ ಜನಪದಾಃ ಪ್ರಾಯಶಃ ಪರಿಕೀರ್ತಿತಾಃ ॥೩೬॥

ಸಹ್ಯಸ್ಯಾನಂತರೇ ಚೈತೇ ತತ್ರ ಗೋದಾವರೀ ನದೀ ।
ಪೃಥಿವ್ಯಾಮಪಿ ಕೃತ್ಸ್ನಾಯಾಂ ಸ ಪ್ರದೇಶೋ ಮನೋರಮಃ ॥೩೭॥

---

೩೨. ಕಾಶಿಕೆ, ಸುಕುಮಾರಿ, ಮಂದಗೆ, ಮಂದವಾಹಿನಿ, ಕೃಪೆ ಮತ್ತು ಪಾಶಿನಿಯೆಂಬ ನದಿಗಳು ಶುಕ್ತಿಮಂತ ಪರ್ವತದಲ್ಲಿ ಜನಿಸುತ್ತವೆ.

೩೩. ಈ ಎಲ್ಲ ನದಿಗಳೂ ಪವಿತ್ರವಾದುವು. ಎಲ್ಲ ದಿಕ್ಕುಗಳಲ್ಲಿಯೂ ಹರಿದು ಸಮುದ್ರವನ್ನು ಸೇರುವುವು. ತಾಯಿಯಂತೆ ಜಗತ್ತನ್ನು ಕಾಪಾಡುವುವು. ಸಕಲ ಪಾತಕಗಳನ್ನೂ ಪರಿಹರಿಸುವುವು. ಮಂಗಳವನ್ನು ಕೊಡುವುವು.

೩೪-೩೬. ಅವುಗಳಿಗೆ ಬಂದು ಸೇರುವ ಉಪನದಿಗಳೂ ಇನ್ನೂ ಉಳಿದ ನದಿಗಳೂ ನೂರಾರು, ಸಾವಿರಾರು ಇರುವುವು. ಕುರು, ಪಾಂಚಾಲ, ಶಾಲ್ವ, ಪಟಚ್ಚರ, ಮತ್ಸ್ಯ, ಕಿರಾತ, ಕುಲ್ಯ, ಕುಂತಲ, ಕಾಶಿ, ಕೋಸಲ, ಆವಂತ, ಕಲಿಂಗ, ಮೂಕ, ಅಂಧಕ ಎಂಬ ಹಲವು ನಾಡುಗಳುಂಟು. ಇವೆಲ್ಲವೂ ಭಾರತ ವರ್ಷದ ಮಧ್ಯಭಾಗದಲ್ಲಿರುವ ದೇಶಗಳು.

೩೭. ಈ ನಾಡುಗಳು ಸಹ್ಯಪರ್ವತದ ಮುಂಭಾಗದಲ್ಲಿ ಇವೆ. ಅಲ್ಲಿ ಗೋದಾವರಿ ನದಿ ಹರಿಯುತ್ತದೆ. ಪ್ರಪಂಚದಲ್ಲೆಲ್ಲ ಆ ಪ್ರದೇಶವು ಬಹು ಮನೋಹರವಾಗಿ

**ಯತ್ರ ಗೋವರ್ಧನೋ ನಾಮ ಮಂದರೋ ಗಂಧಮಾದನಃ ।**
**ರಾಮಪ್ರಿಯಾರ್ಥಂ ಸ್ವರ್ಗೀಯಾ ವೃಕ್ಷಾ ದಿವ್ಯಾಸ್ತಥೌಷಧೀಃ ॥೩೮॥**

**ಭರದ್ವಾಜೇನ ಮುನಿನಾ ಪ್ರಿಯಾರ್ಥಮವತಾರಿತಾಃ ।**
**ತತಃ ಪುಷ್ಪವರೋ ದೇಶಸ್ತೇನ ಜಜ್ಞೇ ಮನೋರಮಃ ॥೩೯॥**

**ಬಾಹ್ಲೀಕಾ ವಾಟಧಾನಾಶ್ಚ ಆಭೀರಾಃ ಕಾಲತೋಯಕಾಃ ।**
**ಪುರಂಧ್ರಾಶ್ಚೈವ ಶೂದ್ರಾಶ್ಚ ಪಲ್ಲವಾಶ್ಚಾತ್ತಖಂಡಿಕಾಃ ॥೪೦॥**

**ಗಾಂಧಾರಾ ಯವನಾಶ್ಚೈವ ಸಿಂಧುಸೌವೀರಮದ್ರಕಾಃ ।**
**ಶಕಾ ದ್ರುಹ್ಯಾಃ ಪುಲಿಂದಾಶ್ಚ ಪಾರದಾ ಹಾರಮೂರ್ತಿಕಾಃ ॥೪೧॥**

**ರಾಮಠಾಃ ಕಂಟಕಾರಾಶ್ಚ ಕೈಕೇಯ್ಯಾ ದಶನಾಮಿಕಾಃ ।**
**ಕ್ಷತ್ರಿಯೋಪನಿವೇಶ್ಯಾಶ್ಚ ವೈಶ್ಯಾಃ ಶೂದ್ರಕುಲಾನಿ ಚ ।**
**ಅತ್ರಯೋಽಥ ಭರದ್ವಾಜಾಃ ಪ್ರಸ್ಥಲಾಃ ಸದಸೇರಕಾಃ ॥೪೨॥**

---

೩೮. ಅಲ್ಲಿ ಗೋವರ್ಧನ, ಮಂದರ ಮತ್ತು ಗಂಧಮಾದನಗಳೆಂಬ ಬೆಟ್ಟಗಳುಂಟು. ಶ್ರೀರಾಮಚಂದ್ರನ ಮನಸ್ಸಿಗೆ ಪ್ರೀತಿಯನ್ನು ಹುಟ್ಟಿಸುವ ಸಲುವಾಗಿ ಸ್ವರ್ಗೀಯವಾದ ವೃಕ್ಷಗಳೂ, ದಿವ್ಯೌಷಧಿಗಳೂ ಅಲ್ಲಿ ಹುಟ್ಟಿ ಬೆಳೆದುವು.

೩೯. ಭರದ್ವಾಜಮುನಿಯು ಶ್ರೀರಾಮಚಂದ್ರನಿಗೆ ಸತ್ಕಾರಮಾಡಬೇಕೆಂಬ ಉದ್ದೇಶದಿಂದ ಈ ವೃಕ್ಷಾದಿಗಳನ್ನು ಸ್ವರ್ಗಲೋಕದಿಂದ ಭೂಮಿಗೆ ಬರಮಾಡಿದನು. ಈ ಕಾರಣದಿಂದಲೇ ಪುಷ್ಪವರವೆಂಬ ಆ ದೇಶವು ಬಹು ಮನೋಹರವಾಗಿದೆ.

೪೦-೪೨. ಬಾಹ್ಲೀಕ, ವಾಟಧಾನ, ಆಭೀರಕ, ಕಾಲತೋಯ, ಪುರಂಧ್ರ, ಶೂದ್ರ, ಪಲ್ಲವ, ಆತ್ತಖಂಡಿಕ, ಗಾಂಧಾರ, ಯವನ, ಸಿಂಧು, ಸೌವೀರ, ಮದ್ರ, ಶಕ, ದ್ರುಹ್ಯ, ಪುಲಿಂದ, ಪಾರದ, ಹಾರಮೂರ್ತಿಕ, ರಾಮಠ, ಕಂಟಕಾರ, ಕೇಕಯ ಮತ್ತು ದಶನಾಮಿಕಗಳೆಂಬುವು ಪ್ರಸಿದ್ಧವಾದ ದೇಶಗಳು. ಇವುಗಳಲ್ಲಿ ಕ್ಷತ್ರಿಯರೂ, ವೈಶ್ಯರೂ, ಶೂದ್ರರೂ, ಅತ್ರಿ ಮತ್ತು ಭರದ್ವಾಜ ಮಹರ್ಷಿಗಳ ವಂಶದ ಬ್ರಾಹ್ಮಣರೂ ವಿಶೇಷವಾಗಿ ವಾಸಿಸುತ್ತಾರೆ. ಇವುಗಳಲ್ಲದೆ ಪ್ರಸ್ಥಲ, ಸದಸೇರಕ, ಲಂಪಾಕ, ತಲಗಾನ, ಸೌನಿಕ ಮತ್ತು ಜಾಂಗಲಗಳೆಂಬ ಪ್ರಖ್ಯಾತವಾದ

**ಲಂಪಕಾಸ್ತಲಗಾನಾಶ್ಚ ಸೌನಿಕಾಃ ಸಹ ಜಾಂಗಲೈಃ ।**
**ಏತೇ ದೇಶಾ ಉದೀಚ್ಯಾಸ್ತು ಪ್ರಾಚ್ಯಾನ್ ದೇಶಾನ್ ನಿಬೋಧತ ॥೪೩॥**

**ಅಂಗಾ ವಂಗಾ ಮದ್ಗುರಕಾ ಅಂತರ್ಗಿರಿಬಹಿರ್ಗಿರೀ ।**
**ತತಃ ಪ್ಲವಂಗಮಾತಂಗಾ ಯಮುಕಾ ಮಲ್ಲವರ್ಣಕಾಃ ।**
**ಸಹ್ಯೋತ್ತರಾಃ ಪ್ರವಿಜಯಾ ಮಾರ್ಗವಾ ಯೇ ಚ ಮಾಲವಾಃ ॥೪೪॥**

**ಪ್ರಾಗ್ಜ್ಯೋತಿಷಾಶ್ಚ ಪುಂಡ್ರಾಶ್ಚ ವಿದೇಹಾಸ್ತಾಮ್ರಲಿಪ್ತಕಾಃ ।**
**ಶಾಲ್ವಮಾಗಧಗೋನರ್ದಾಃ ಪ್ರಾಚ್ಯಾ ಜನಪದಾಃ ಸ್ಮೃತಾಃ ॥೪೫॥**

**ತೇಷಾಂ ಪರೇ ಜನಪದಾ ದಕ್ಷಿಣಾಪಥವಾಸಿನಃ ।**
**ಪಾಂಡ್ಯಾಶ್ಚ ಕೇರಲಾಶ್ಚೈವ ಚೋಲಾಃ ಕುಲ್ಯಾಸ್ತಥೈವ ಚ ॥೪೬॥**

**ಸೇತುಕಾಃ ಸೂತಿಕಾಶ್ಚೈವ ಕುಪಥಾ ವಾಜಿವಾಸಿಕಾಃ ।**
**ನವರಾಷ್ಟ್ರಾ ಮಾಹಿಷಿಕಾಃ ಕಲಿಂಗಾಶ್ಚೈವ ಸರ್ವಶಃ ॥೪೭॥**

---

ದೇಶಗಳೂ ಇವೆ. ಇವುಗಳೆಲ್ಲ ಉತ್ತರ ದಿಕ್ಕಿನಲ್ಲಿ ಇರತಕ್ಕುವು. ಇನ್ನು ಪೂರ್ವ ದಿಕ್ಕಿನ ದೇಶಗಳನ್ನು ಹೇಳುವೆನು ಕೇಳಿರಿ.

೪೪-೪೫. ಅಂಗ, ವಂಗ, ಮದ್ಗುರಕ, ಅಂತರ್ಗಿರಿ, ಬಹಿರ್ಗಿರಿ, ಪ್ಲವಂಗ, ಮಾತಂಗ, ಯಮುಕ, ಮಲ್ಲವರ್ಣಕ, ಸಹ್ಯೋತ್ತರ, ಪ್ರವಿಜಯ, ಮಾರ್ಗವ, ಮಾಲವ, ಪ್ರಾಗ್ಜ್ಯೋತಿಷ, ಪುಂಡ್ರ, ವಿದೇಹ, ತಾಮ್ರಲಿಪ್ತ, ಶಾಲ್ವ, ಮಗಧ ಮತ್ತು ಗೋನರ್ದಗಳೆಂಬುವು ಪೂರ್ವದಿಕ್ಕಿನಲ್ಲಿರುವ ದೇಶಗಳು.

೪೬-೫೧. ಮೇಲೆ ಹೇಳಿದ ದೇಶಗಳ ನಿವಾಸಿಗಳಲ್ಲದೆ ಇನ್ನೂ ಬೇರೆ ಬೇರೆ ನಾಡುಗಳ ಜನರು ದಕ್ಷಿಣಾಪಥದಲ್ಲಿ ಎಂದರೆ ದಕ್ಷಿಣ ದೇಶದಲ್ಲಿ ವಾಸಿಸುತ್ತಾರೆ. ಅವರು ಯಾರೆಂದರೆ:—ಪಾಂಡ್ಯರು, ಕೇರಳರು, ಚೋಳರು, ಕುಲ್ಯರು, ಸೇತುಕರು, ಸೂತಿಕರು, ಕುಪಥರು, ವಾಜಿವಾಸಕರು, ನವರಾಷ್ಟ್ರರು, ಮಾಹಿಷಿಕರು, ಕಳಿಂಗರು, ಕಾರೂಷರು, ಹೈಷೀಕರು, ಆಟವ್ಯರು, ಶಬರರು, ಪುಳಿಂದರು, ವಿಂಧ್ಯ ಪುಷಿಕರು, ವೈದರ್ಭರು, ದಂಡಕರು, ಕುಲೀಯರು, ಸಿರಾಲರು, ರೂಪಸರು, ತಾಪಸರು, ತೈತ್ತಿರಿಕರು, ಕಾರಸ್ಕರರು, ಮತ್ತು ವಾಸಿಕ್ಯರು. ಇವರೆಲ್ಲರೂ

ಕಾರೂಷಾಶ್ಚ ಸಹೈಷೀಕಾ ಆಟವ್ಯಾಃ ಶಬರಾಸ್ತಥಾ ।
ಪುಲಿಂದಾ ವಿಂಧ್ಯಪುಷಿಕಾ ವೈದರ್ಭಾ ದಂಡಕೈಃ ಸಹ ॥೪೮॥

ಕುಲೀಯಾಶ್ಚ ಸಿರಾಲಾಶ್ಚ ರೂಪಸಾಸ್ತಾಪಸೈಃ ಸಹ ।
ತಥಾ ತೈತ್ತಿರಿಕಾಶ್ಚೈವ ಸರ್ವೇ ಕಾರಸ್ಕರಾಸ್ತಥಾ ॥೪೯॥

ವಾಸಿಕ್ಯಾಶ್ಚೈವ ಯೇ ಚಾನ್ಯೇ ಯೇ ಚೈವಾಂತರನರ್ಮದಾಃ ।
ಭಾರುಕಚ್ಛಾಃ ಸಮಾಹೇಯಾಃ ಸಹ ಸಾರಸ್ವತೈಃ ಸಹ ॥೫೦॥

ಕಾಚ್ಛೀಕಾಶ್ಚೈವ ಸೌರಾಷ್ಟ್ರಾ ಆನರ್ತಾ ಅರ್ಬುದೈಃ ಸಹ ।
ಇತ್ಯೇತೇ ಅಪರಾಂತಾಸ್ತು ಶೃಣು ಯೇ ವಿಂಧ್ಯವಾಸಿನಃ ॥೫೧॥

ಮಾಲವಾಶ್ಚ ಕರೂಷಾಶ್ಚ ಮೇಕಲಾಶ್ಚೋತ್ಕಲೈಃ ಸಹ ।
ಔಂಡ್ರಾ ಮಾಷಾ ದಶಾರ್ಣಾಶ್ಚ ಭೋಜಾಃ ಕಿಷ್ಕಿಂಧಕೈಃ ಸಹ ॥೫೨॥

ಸ್ತೋಶಲಾಃ ಕೋಸಲಾಶ್ಚೈವ ತ್ರೈಪುರಾ ವೈದಿಶಾಸ್ತಥಾ ।
ತುಮುರಾಸ್ತುಂಬರಾಶ್ಚೈವ ಪದ್ಗಮಾ ನೈಷಧೈಃ ಸಹ ॥೫೩॥

ಅರೂಪಾಃ ಶೌಂಡಿಕೇರಾಶ್ಚ ವೀತಿಹೋತ್ರಾ ಅವಂತಯಃ ।
ಏತೇ ಜನಪದಾಃ ಖ್ಯಾತಾ ವಿಂಧ್ಯಪೃಷ್ಠನಿವಾಸಿನಃ ॥೫೪॥

---

ನರ್ಮದಾನದಿಯ ದಕ್ಷಿಣದಲ್ಲಿರುವವರು. ಭಾರುಕಚ್ಛರು, ಸಮಾಹೇಯರು, ಸಾರಸ್ವತರು, ಕಾಚ್ಛೀಕರು, ಸೌರಾಷ್ಟ್ರರು, ಆನರ್ತರು, ಅರ್ಬುದರು ಇವರಾದರೋ ಅದರ ಉತ್ತರದಿಕ್ಕಿನಲ್ಲಿ ವಾಸಿಸುವವರು. ಇನ್ನು ವಿಂಧ್ಯಪರ್ವತದ ಪ್ರಾಂತದಲ್ಲಿ ನೆಲೆಸಿರತಕ್ಕವರನ್ನು ತಿಳಿಸುವೆನು.

೫೨-೫೪. ಈ ಮುಂದೆ ಹೇಳುವ ಪಂಗಡದವರು ವಿಂಧ್ಯಪರ್ವತದ ತಪ್ಪಲಿನ ನಾಡುಗಳಲ್ಲಿ ವಾಸಮಾಡುತ್ತಾರೆ. ಮಾಲವರು, ಕರೂಷರು, ಮೇಕಲರು, ಉತ್ಕಲರು, ಔಂಢ್ರರು, ಮಾಷರು, ದಶಾರ್ಣರು, ಭೋಜರು, ಕಿಷ್ಕಿಂಧಕರು, ಸ್ತೋಶಲರು, ಕೋಸಲರು, ತ್ರೈಪುರರು, ವೈದಿಶರು, ತುಮುರರು, ತುಂಬರರು. ಪದ್ಗಮರು, ನೈಷಧರು, ಅರೂಪರು, ಶೌಂಡಿಕೇರರು, ವೀತಿಹೋತ್ರರು ಮತ್ತು ಅವಂತಿಗಳು. ಅವರ ದೇಶಗಳಿಗೂ ಇವೇ ಹೆಸರು.

**ಅತೋ ದೇಶಾನ್ ಪ್ರವಕ್ಷ್ಯಾಮಿ ಪರ್ವತಾಶ್ರಯಿಣಶ್ಚ ಯೇ।**
**ನಿರಾಹಾರಾಃ ಸರ್ವಗಾಶ್ಚ ಕುಪಥಾ ಅಪಥಾಸ್ತಥಾ ॥೫೫॥**
**ಕುಥಪ್ರಾವರಣಾಶ್ಚೈವ ಊರ್ಣಾದರ್ವಾಃ ಸಮುದ್ಗಕಾಃ।**
**ತ್ರಿಗರ್ತಾ ಮಂಡಲಾಶ್ಚೈವ ಕಿರಾತಾಶ್ಚಾಮರೈಃ ಸಹ ॥೫೬॥**
**ಚತ್ವಾರಿ ಭಾರತೇ ವರ್ಷೇ ಯುಗಾನಿ ಮುನಯೋಽಬ್ರುವನ್।**
**ಕೃತಂ ತ್ರೇತಾ ದ್ವಾಪರಂ ಚ ಕಲಿಶ್ಚೇತಿ ಚತುರ್ಯುಗಂ।**
**ತೇಷಾಂ ನಿಸರ್ಗಂ ವಕ್ಷ್ಯಾಮಿ ಉಪರಿಷ್ಟಾಚ್ಚ ಕೃತ್ಸ್ನಶಃ ॥೫೭॥**

**॥ ಮತ್ಸ್ಯ ಉವಾಚ ॥**

**ಏತಚ್ಛ್ರುತ್ವಾ ತು ಋಷಯ ಉತ್ತರಂ ಪುನರೇವ ತೇ।**
**ಶುಶ್ರೂಷವಸ್ತಮೂಚುಸ್ತೇ ಪ್ರಹೃಷ್ಟಂ ಲೋಮಹರ್ಷಣಿಂ ॥೫೮॥**

**॥ ಋಷಯ ಊಚುಃ ॥**

**ಯಚ್ಚ ಕಿಂಪುರುಷಂ ವರ್ಷಂ ಹರಿವರ್ಷಂ ತಥೈವ ಚ।**
**ಆಚಕ್ಷ್ವ ನೋ ಯಥಾತತ್ವಂ ಕೀರ್ತಿತಂ ಭಾರತಂ ತ್ವಯಾ ॥೫೯॥**

---

೫೫-೫೬. ನಿರಾಹಾರರು, ಸರ್ವಗರು, ಕುಪಥರು, ಅಪಥರು, ಕುಥಪ್ರಾವರಣರು, ಊರ್ಣಾದರ್ವರು, ಸಮುದ್ಗಕರು, ತ್ರಿಗರ್ತರು, ಮಂಡಲರು, ಕಿರಾತರು ಮತ್ತು ಅಮರರೆಂಬವರು ವಿಂಧ್ಯಪರ್ವತವನ್ನು ಆಶ್ರಯಿಸಿಕೊಂಡು ಅವೇ ಹೆಸರಿನ ನಾಡುಗಳಲ್ಲಿ ವಾಸಮಾಡುತ್ತಿರುವರು.

೫೭. ಭಾರತವರ್ಷದಲ್ಲಿ ಕೃತ, ತ್ರೇತಾ, ದ್ವಾಪರ ಮತ್ತು ಕಲಿಗಳೆಂಬ ನಾಲ್ಕು ಯುಗಗಳುಂಟೆಂದು ಋಷಿಗಳು ಹೇಳಿರುವರು. ಅವುಗಳ ಲಕ್ಷಣವನ್ನು ಮುಂದೆ ಸಂಪೂರ್ಣವಾಗಿ ವಿವರಿಸುವೆನು.

೫೮. ಮತ್ಸ್ಯರೂಪನಾದ ಭಗವಂತನು ಹೇಳಿದನು.—ಆ ಮುನಿಗಳು ಇದನ್ನು ಕೇಳಿ ಮುಂದಿನ ವೃತ್ತಾಂತವನ್ನು ತಿಳಿಯಬೇಕೆಂಬ ಕುತೂಹಲದಿಂದ ಪುಲಕಾಂಕಿತನಾದ ಆ ಸೂತಮಹರ್ಷಿಗೆ ಹೀಗೆ ಹೇಳಿದರು.

೫೯. ಋಷಿಗಳು ಹೇಳಿದರು.—ಭಾರತವರ್ಷದ ವಿಷಯವನ್ನು ವಿವರಿಸಿ ಹೇಳಿದೆ. ಓ ಸೂತಾ, ಇನ್ನು ಕಿಂಪುರುಷವರ್ಷವನ್ನೂ ಹರಿವರ್ಷವನ್ನೂ ವರ್ಣಿಸು.

ಜಂಬೂಖಂಡಸ್ಯ ವಿಸ್ತಾರಂ ತಥಾಽನ್ಯೇಷಾಂ ವಿದಾಂವರ ।
ದ್ವೀಪಾನಾಂ ವಾಸಿನಾಂ ತೇಷಾಂ ವೃಕ್ಷಾಣಾಂ ಪ್ರಬ್ರವೀಹಿ ನಃ ॥೬೦॥

ಪೃಷ್ಟಸ್ತ್ವೇವಂ ತದಾ ವಿಪ್ರೈರ್ಯಥಾಪ್ರಶ್ನಂ ವಿಶೇಷತಃ ।
ಉವಾಚ ಋಷಿಭಿರ್ದೃಷ್ಟಂ ಪುರಾಣಾಭಿಮತಂ ತಥಾ ॥೬೧॥

॥ ಸೂತ ಉವಾಚ ॥

ಶುಶ್ರೂಷವಸ್ತು ಯದ್ವಿಪ್ರಾಃ ಶುಶ್ರೂಷಧ್ವಮತಂದ್ರಿತಾಃ ।
ಜಂಬೂಖಂಡಃ ಕಿಂಪುರುಷೇ ಸುಮಹಾನ್ನಂದನೋಪಮಃ ॥೬೨॥

ದಶ ವರ್ಷಸಹಸ್ರಾಣಿ ಸ್ಥಿತಿಃ ಕಿಂಪುರುಷೇ ಸ್ಮೃತಾ ।
ಜಾಯಂತೇ ಮಾನವಾಸ್ತತ್ರ ಸುತಪ್ತಕನಕಪ್ರಭಾಃ ॥೬೩॥

---

೬೦. ಜ್ಞಾನಿಗಳಲ್ಲಿ ಅಗ್ರೇಸರನಾದ ಎಲೈ ಸೂತಪೌರಾಣಿಕನೇ, ಜಂಬೂಖಂಡದ ಮತ್ತು ಉಳಿದ ದ್ವೀಪಗಳ ವಿಸ್ತಾರವೆಷ್ಟು? ಅವುಗಳಲ್ಲಿ ವಾಸಿಸುವ ಜನರು ಯಾರು? ಅಲ್ಲಿ ಬೆಳೆಯುವ ಮರಗಳೆಂತಹವು? ಈ ವಿಷಯವನ್ನೆಲ್ಲ ನಮಗೆ ತಿಳಿಯಹೇಳು.

೬೧. ಆ ದ್ವಿಜೋತ್ತಮರು ಹೀಗೆ ಪ್ರಶ್ನೆಮಾಡಲು, ಸೂತಪೌರಾಣಿಕನು ಮಹರ್ಷಿಗಳ ಅಭಿಪ್ರಾಯವನ್ನು ಅನುಸರಿಸಿ, ಪುರಾಣಗಳಲ್ಲಿ ಪ್ರತಿಪಾದಿತವಾಗಿರುವ ರೀತಿಯಲ್ಲಿ ಅವರ ಪ್ರಶ್ನೆಗಳಿಗೆ ಉತ್ತರವಿತ್ತನು.

೬೨. ಸೂತಪೌರಾಣಿಕನು ಹೇಳಿದನು.—ಎಲೈ ಬ್ರಾಹ್ಮಣರೇ, ನಿಮಗೆ ಕೇಳಬೇಕೆಂಬ ಅಭಿಲಾಷೆಯಿದೆ. ಆದುದರಿಂದ ಗಮನವಿಟ್ಟು ಕೇಳಿ. ಕಿಂಪುರುಷವರ್ಷದಲ್ಲಿ ಜಂಬೂಖಂಡವೆಂಬುದು ಒಂದು ಭಾಗ. ಇದು ಬಹಳ ವಿಸ್ತಾರವಾಗಿದೆ. ಇಂದ್ರನ ನಂದನವನದಂತೆ ಕಂಗೊಳಿಸುತ್ತಿದೆ.

೬೩. ಕಿಂಪುರುಷವರ್ಷದಲ್ಲಿ ಮನುಷ್ಯರು ಹತ್ತುಸಾವಿರ ವರ್ಷಗಳ ಕಾಲ ಜೀವಿಸುತ್ತಾರೆ. ಅವರ ಮೈಬಣ್ಣವು ಪುಟಕ್ಕೆ ಹಾಕಿದ ಚಿನ್ನದ ಬಣ್ಣವನ್ನು ಹೋಲುತ್ತದೆ.

**ವರ್ಷೇ ಕಿಂಪುರುಷೇ ಪುಣ್ಯೇ ಪ್ಲಕ್ಷೋ ಮಧುವಹಃ ಸ್ಮೃತಃ ।**
**ತಸ್ಯ ಕಿಂಪುರುಷಾಃ ಸರ್ವೇ ಪಿಬಂತೋ ರಸಮುತ್ತಮಂ ॥೬೪॥**

**ಅನಾಮಯಾ ಹ್ಯಶೋಕಾಶ್ಚ ನಿತ್ಯಂ ಮುದಿತಮಾನಸಾಃ ।**
**ಸುವರ್ಣವರ್ಣಾಶ್ಚ ನರಾಃ ಸ್ತ್ರಿಯಶ್ಚಾಪ್ಸರಸಃ ಸ್ಮೃತಾಃ ॥೬೫॥**

**ತತಃ ಪರಂ ಕಿಂಪುರುಷಾದ್ಧರಿವರ್ಷಂ ಪ್ರಚಕ್ಷತೇ ।**
**ಮಹಾರಜತಸಂಕಾಶಾ ಜಾಯಂತೇ ಯತ್ರ ಮಾನವಾಃ ॥೬೬॥**

**ದೇವಲೋಕಚ್ಯುತಾಃ ಸರ್ವೇ ಬಹುರೂಪಾಶ್ಚ ಸರ್ವಶಃ ।**
**ಹರಿವರ್ಷೇ ನರಾಃ ಸರ್ವೇ ಪಿಬಂತೀಕ್ಷುರಸಂ ಶುಭಂ ॥೬೭॥**

**ನ ಜರಾ ಬಾಧತೇ ತತ್ರ ತೇನ ಜೀವಂತಿ ತೇ ಚಿರಂ ।**
**ಏಕಾದಶ ಸಹಸ್ರಾಣಿ ತೇಷಾಮಾಯುಃ ಪ್ರಕೀರ್ತಿತಂ ॥೬೮॥**

---

೬೪. ಪವಿತ್ರವಾದ ಈ ಕಿಂಪುರುಷವರ್ಷದಲ್ಲಿ ಒಂದು ಪ್ಲಕ್ಷವೃಕ್ಷ (ಬಸರಿಯ ಮರ) ಇದೆ. ಅದರ ಹಣ್ಣುಗಳಲ್ಲಿ ಜೇನು ತುಂಬಿದೆ. ಅಲ್ಲಿನ ನಿವಾಸಿಗಳಿಗೆ ಕಿಂಪು ರುಷರೆಂದು ಹೆಸರು. ಅವರೆಲ್ಲರೂ ಈ ಮಧುವನ್ನು ಪಾನಮಾಡುತ್ತಾರೆ.

೬೫. ಆ ಜನರು ರೋಗರಹಿತರು; ಶೋಕವೆಂಬುದನ್ನೇ ಕಾಣರು. ಅವರ ಮನಸ್ಸು ಯಾವಾಗಲೂ ಸಂತೋಷದಲ್ಲೇ ಮುಳುಗಿ ತೇಲಾಡುತ್ತಿರುವುದು. ಚಿನ್ನದಂತಹ ಮೈಬಣ್ಣ ಅವರದು. ಹೆಂಗಸರೂ ಸಹ ಅಪ್ಸರಸ್ತ್ರೀಯರೇ ಆಗಿರುವರು.

೬೬. ಕಿಂಪುರುಷವರ್ಷದಿಂದ ಮುಂದೆ ಹರಿವರ್ಷವಿದೆ. ಅಲ್ಲಿಯೂ ಕೂಡ ಜನರು ಬಂಗಾರದ ಬಣ್ಣದವರಾಗಿಯೇ ಹುಟ್ಟುವರು.

೬೭. ಅಲ್ಲಿನವರೆಲ್ಲರೂ ದೇವಲೋಕದಲ್ಲಿ ಬಗೆಬಗೆಯ ಸುಖಗಳನ್ನು ಅನುಭವಿಸಿ ಸುಕೃತವು ತೀರಿದ ಬಳಿಕ ಅಲ್ಲಿಂದ ಜಾರಿ ಬಿದ್ದವರು. ಅವರಿಗೆ ಬಗೆ ಬಗೆಯ ರೂಪಗಳನ್ನು ಧರಿಸಬಲ್ಲ ಶಕ್ತಿಯುಂಟು. ಅವರು ಸೊಗಸಾದ ಕಬ್ಬಿನ ಹಾಲನ್ನು ಕುಡಿದು ಜೀವಿಸುತ್ತಾರೆ.

೬೮. ಅಲ್ಲಿ ಮುಪ್ಪಿನ ಕಾಟವಿಲ್ಲ. ಆದುದರಿಂದಲೇ ಅವರು ಬಹುಕಾಲ ಬದುಕುತ್ತಾರೆ. ಅವರ ಆಯುರ್ಮಾನವು ಹನ್ನೊಂದು ಸಾವಿರ ವರ್ಷಗಳು.

ಮಧ್ಯಮಂ ತನ್ಮಯಾ ಪ್ರೋಕ್ತಂ ನಾಮ್ನಾ ವರ್ಷಮಿಲಾವೃತಂ ।
ನ ತತ್ರ ಸೂರ್ಯಸ್ತಪತಿ ನ ಚ ಜಾನಂತಿ ಮಾನವಾಃ ॥೧೯॥

ಚಂದ್ರಸೂರ್ಯೌ ಸನಕ್ಷತ್ರಾವಪ್ರಕಾಶಾವಿಲಾವೃತೇ ।
ಪದ್ಮಪ್ರಭಾಃ ಪದ್ಮವರ್ಣಾಃ ಪದ್ಮಪತ್ರನಿಭೇಕ್ಷಣಾಃ ॥೨೦॥

ಪದ್ಮಗಂಧಾಶ್ಚ ಜಾಯಂತೇ ತತ್ರ ಸರ್ವೇ ಚ ಮಾನವಾಃ ।
ಜಂಬೂಫಲರಸಾಹಾರಾ ಅನಿಷ್ಪಂದಾಃ ಸುಗಂಧಿನಃ ॥೨೧॥

ದೇವಲೋಕಚ್ಯುತಾಃ ಸರ್ವೇ ಮಹಾರಜತವಾಸಸಃ ।
ತ್ರಯೋದಶ ಸಹಸ್ರಾಣಿ ವರ್ಷಾಣಾಂ ತೇ ನರೋತ್ತಮಾಃ ॥೨೨॥

ಆಯುಷ್ಪ್ರಮಾಣಂ ಜೀವಂತಿ ಯೇ ತು ವರ್ಷ ಇಲಾವೃತೇ ।
ಮೇರೋಸ್ತು ದಕ್ಷಿಣೇ ಪಾರ್ಶ್ವೇ ನಿಷಧಸ್ಯೋತ್ತರೇಣ ವಾ ॥೨೩॥

---

೧೯. ಇಲಾವೃತ ವರ್ಷವು ಜಂಬೂದ್ವೀಪದ ಮಧ್ಯದಲ್ಲಿದೆಯೆಂದು ಆಗಲೇ ಹೇಳಿದ್ದೇನೆ. ಅಲ್ಲಿ ಸೂರ್ಯನು ತಪಿಸುವುದಿಲ್ಲ. ಜನರು ಬಿಸಲಿನ ಬೇಗೆಯನ್ನೇ ಕಾಣರು.

೨೦-೨೧. ಇಳಾವೃತದಲ್ಲಿ ಚಂದ್ರ, ಸೂರ್ಯ ಮತ್ತು ನಕ್ಷತ್ರಗಳು ಪ್ರಕಾಶಿಸುವುದಿಲ್ಲ. ಅಲ್ಲಿ ಹುಟ್ಟುವ ಮನುಷ್ಯರೆಲ್ಲರೂ ತಾವರೆಯ ಕಾಂತಿಯಿಂದ ಕೂಡಿದವರು. ಬಣ್ಣವೂ ಸಹ ತಾವರೆಯದೇ. ಅವರ ಕಣ್ಣುಗಳು ತಾವರೆಯ ಎಸಳಿನಂತಿವೆ. ಮೈ ಪದ್ಮಗಂಧದಿಂದ ಕೂಡಿದೆ. ನೇರಿಳೆ ಹಣ್ಣಿನ ರಸವೇ ಅವರ ಆಹಾರ. ಅವರು ಕಣ್ಣಿನ ರೆಪ್ಪೆಗಳನ್ನು ಬಡಿಯುವುದಿಲ್ಲ. ಅವರಿದ್ದ ಕಡೆ ಯಾವಾಗಲೂ ಸುವಾಸನೆಯು ತುಂಬಿರುವುದು.

೨೨. ಇಲಾವೃತ ವರ್ಷದಲ್ಲಿ ಇರುವವರೆಲ್ಲರೂ ದೇವಲೋಕದಲ್ಲಿ ಪುಣ್ಯ ಫಲವನ್ನು ಅನುಭವಿಸಿದ ಬಳಿಕ ಅಲ್ಲಿಗೆ ಬಂದವರು. ಅವರು ಜರತಾರಿಯ ವಸ್ತ್ರಗಳನ್ನು ಧರಿಸುವರು. ಮನುಷ್ಯವರ್ಗದಲ್ಲಿ ಉತ್ತಮರೆನಿಸಿಕೊಂಡು ಹದಿಮೂರು ಸಾವಿರ ವರ್ಷಗಳ ಕಾಲ ಅವರು ಬದುಕುವರು.

೨೩-೨೪. ಮೇರುಪರ್ವತಕ್ಕೆ ದಕ್ಷಿಣದಲ್ಲಿ ಅಥವಾ ನಿಷಧಪರ್ವತಕ್ಕೆ ಉತ್ತರದಲ್ಲಿ ದೊಡ್ಡದೊಂದು ನೇರಿಳೆ ಮರವುಂಟು. ಅದಕ್ಕೆ ಸುದರ್ಶನವೆಂದು

**ಸುದರ್ಶನೋ ನಾಮ ಮಹಾಞ್ಜಂಬೂವೃಕ್ಷಃ ಸನಾತನಃ ।**
**ನಿತ್ಯಪುಷ್ಪಫಲೋಪೇತಃ ಸಿದ್ಧಚಾರಣಸೇವಿತಃ ॥೭೪॥**

**ತಸ್ಯ ನಾಮ್ನಾ ಸಮಾಖ್ಯಾತೋ ಜಂಬೂದ್ವೀಪೋ ವನಸ್ಪತೇಃ ।**
**ಯೋಜನಾನಾಂ ಸಹಸ್ರಂ ಚ ಶತಧಾ ಚ ಮಹಾರ್ ಪುನಃ ॥೭೫॥**

**ಉತ್ಸೇಧೋ ವೃಕ್ಷರಾಜಸ್ಯ ದಿವಮಾವೃತ್ಯ ತಿಷ್ಠತಿ ।**
**ತಸ್ಯ ಜಂಬೂಫಲರಸೋ ನದೀ ಭೂತ್ವಾ ಪ್ರಸರ್ಪತಿ ॥೭೬॥**

**ಮೇರುಂ ಪ್ರದಕ್ಷಿಣಂ ಕೃತ್ವಾ ಜಂಬೂಮೂಲಗತಾ ಪುನಃ ।**
**ತಂ ಪಿಬಂತಿ ಸದಾ ಹೃಷ್ಟಾ ಜಂಬೂರಸಮಿಲಾವೃತೇ ॥೭೭॥**

**ಜಂಬೂಫಲರಸಂ ಪೀತ್ವಾ ನ ಜರಾ ಬಾಧತೇಽಪಿ ತಾನ್ ।**
**ನ ಕ್ಷುಧಾ ನ ಕ್ಲಮೋ ವಾಽಪಿ ನ ದುಃಖಂ ಚ ತಥಾವಿಧಂ ॥೭೮॥**

---

ಹೆಸರು. ಅದು ಶಾಶ್ವತವಾಗಿರತಕ್ಕದು. ಅದರಲ್ಲಿ ಹೂಹಣ್ಣುಗಳು ಯಾವಾಗಲೂ ತುಂಬಿವೆ. ಸಿದ್ಧರೂ ಚಾರಣರೂ ಅದನ್ನು ಸೇವಿಸುವರು.

೭೫-೭೬. ಆ ಜಂಬೂವೃಕ್ಷ (ನೇರಿಳೆಮರ) ದಿಂದ ಆ ದ್ವೀಪಕ್ಕೆ ಜಂಬೂ ದ್ವೀಪವೆಂದು ಹೆಸರು ಬಂದಿತು. ಆ ಮಹಾವೃಕ್ಷವು ಒಂದು ಲಕ್ಷಯೋಜನ ವಿಸ್ತಾರವಾಗಿದೆ. ಅದು ಸ್ವರ್ಗವನ್ನು ಆಕ್ರಮಿಸಿ ಬೆಳೆದು ನಿಂತಿದೆ. ಅದರ ಹಣ್ಣಿನ ರಸವು ನದಿಯ ರೂಪದಿಂದ ಹರಿಯುತ್ತದೆ.

೭೭. ಆ ನದಿಯು ಮೇರುಪರ್ವತವನ್ನು ಬಳಸಿಕೊಂಡು ಮತ್ತೆ ನೇರಿಳೆ ಮರದ ಬುಡಕ್ಕೇ ಬಂದು ಸೇರುವುದು. ಇಲಾವೃತ ವರ್ಷದಲ್ಲಿರುವ ಪ್ರಾಣಿಗಳು ಆ ರಸವನ್ನು ಎಡೆಬಿಡದೆ ಸಂತೋಷದಿಂದ ಪಾನಮಾಡುವುವು.

೭೮. ನೇರಿಳೆ ಹಣ್ಣಿನ ರಸವನ್ನು ಕುಡಿಯುವುದರಿಂದ ಆ ಪ್ರಾಣಿಗಳಿಗೆ ಮುಪ್ಪಿನ ಬಾಧೆಯಿಲ್ಲ. ಹಸಿವು, ದಣಿವು, ಮುಂತಾದುದಾವುದೂ ಅವುಗಳನ್ನು ಪೀಡಿಸದು.

ತತ್ರ ಜಾಂಬೂನದಂ ನಾಮ ಕನಕಂ ದೇವಭೂಷಣಂ ।
ಇಂದ್ರಗೋಪಕಸಂಕಾಶಂ ಜಾಯತೇ ಭಾಸುರಂ ಚ ಯತ್ ॥೭೯॥

ಸರ್ವೇಷಾಂ ವರ್ಷವೃಕ್ಷಾಣಾಂ ಶುಭಃ ಫಲರಸಸ್ತು ಸಃ ।
ಸ್ಕನ್ನಂ ತು ಕಾಂಚನಂ ಶುಭ್ರಂ ಜಾಯತೇ ದೇವಭೂಷಣಂ ॥೮೦॥

ತೇಷಾಂ ಮೂತ್ರಂ ಪುರೀಷಂ ವಾ ದಿಕ್ಷ್ವಷ್ಟಾಸು ಚ ಸರ್ವಶಃ ।
ಈಶ್ವರಾನುಗ್ರಹಾದ್ಭೂಮಿರ್ಮೃತಾಂಶ್ಚ ಗ್ರಸತೇ ತು ತಾನ್ ॥೮೧॥

ರಕ್ಷಃಪಿಶಾಚಾ ಯಕ್ಷಾಶ್ಚ ಸರ್ವೇ ಹೈಮವತಾಸ್ತು ತೇ ।
ಹೇಮಕೂಟೇ ತು ವಿಜ್ಞೇಯಾ ಗಂಧರ್ವಾಪ್ಸರಸೋ ಗಣಾಃ ॥೮೨॥

---

೭೯. ಆ ಪ್ರದೇಶದಲ್ಲಿ ಬಂಗಾರವು ದೊರಕುತ್ತದೆ. ಜಂಬೂನದಿಯು (ನೇರಿಳೆ ಹಣ್ಣಿನ ರಸದ ನದಿಯು) ದಡದಲ್ಲಿ ಉತ್ಪನ್ನವಾದ ಕಾರಣ ಅದಕ್ಕೆ ಜಾಂಬೂನದವೆಂಬ ಹೆಸರು ಬಂದಿದೆ. ಅದು ದೇವತೆಗಳ ಅಲಂಕಾರಕ್ಕೆ ಯೋಗ್ಯವಾದುದು. ಇಂದ್ರಗೋಪವೆಂಬ ಹುಳುವಿನಂತೆ ಪ್ರಕಾಶಯುಕ್ತವಾದುದು.

೮೦. ಎಲ್ಲ ವರ್ಷಗಳಲ್ಲಿಯೂ ಬೇರೆ ಬೇರೆ ವೃಕ್ಷಗಳುಂಟಷ್ಟೆ. ಮಿಕ್ಕ ಹಣ್ಣುಗಳ ರಸಕ್ಕಿಂತಲೂ ಆ ಜಂಬೂರಸವು ಪ್ರಶಸ್ತವಾದುದು. ಸಕಲ ಜಂತುಗಳಿಗೂ ಅದು ಹಿತಕರವಾದುದು. ಅದು ನೆಲದ ಮೇಲೆ ಸೋರಿದರೆ ಶುಭ್ರವಾದ ಬಂಗಾರದ ರೂಪವನ್ನು ತಾಳುತ್ತದೆ. ದೇವತೆಗಳ ಆಭರಣಕ್ಕೆ ಯೋಗ್ಯವಾಗುತ್ತದೆ.

೮೧. ಈಶ್ವರನ ಅನುಗ್ರಹದಿಂದ ಇಲಾವೃತ ವರ್ಷದ ಎಲ್ಲ ಕಡೆಗಳಲ್ಲಿಯೂ ಅಲ್ಲಿನ ನಿವಾಸಿಗಳ ಮಲಮೂತ್ರಗಳು ಮತ್ತು ಮೃತದೇಹಗಳು ತಾವಾಗಿಯೇ ನೆಲದೊಳಗೆ ಸೇರಿ ಅದೃಶ್ಯವಾಗುವುವು.

೮೨. ರಾಕ್ಷಸರು, ಪಿಶಾಚರು, ಯಕ್ಷರು ಇವರೆಲ್ಲರೂ ಹಿಮವತ್ಪರ್ವತದಲ್ಲಿ ವಾಸಿಸುವರು. ಹೇಮಕೂಟದಲ್ಲಾದರೋ ಗಂಧರ್ವರೂ ಅಪ್ಸರಸ್ತ್ರೀಯರೂ ನೆಲೆಸಿರುವರು.

**ಸರ್ವೇ ನಾಗಾ ನಿಷೇವಂತೇ ಶೇಷವಾಸುಕಿತಕ್ಷಕಾಃ।**
**ಮಹಾಮೇರೌ ತ್ರಯಸ್ತ್ರಿಂಶತ್ಕ್ರೀಡಂತೇ ಯಜ್ಞಿಯಾಃ ಶುಭಾಃ ॥೮೩॥**

**ನೀಲೇ ತು ವೈದೂರ್ಯಮಯೇ ಸಿದ್ಧಾ ಬ್ರಹ್ಮರ್ಷಯೋಽವಸರ್।**
**ದೈತ್ಯಾನಾಂ ದಾನವಾನಾಂ ಚ ಶ್ವೇತಃ ಪರ್ವತ ಉಚ್ಯತೇ ॥೮೪॥**

**ಶೃಂಗವಾರ್ ಪರ್ವತಶ್ರೇಷ್ಠಃ ಪಿತೃಣಾಂ ಪ್ರತಿಸಂಚರಃ।**
**ಇತ್ಯೇತಾನಿ ಮಯೋಕ್ತಾನಿ ನವ ವರ್ಷಾಣಿ ಭಾರತೇ ॥೮೫॥**

**ಭೂತೈರಪಿ ನಿವಿಷ್ಟಾನಿ ಗತಿಮಂತಿ ಧ್ರುವಾಣಿ ಚ।**
**ತೇಷಾಂ ವೃದ್ಧಿರ್ಬಹುವಿಧಾ ದೃಶ್ಯತೇ ದೇವಮಾನುಷೈಃ।**
**ಅಶಕ್ಯಾ ಪರಿಸಂಖ್ಯಾತುಂ ಶ್ರದ್ಧೇಯಾ ಚ ಬುಭೂಷತಾ ॥೮೬॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಭುವನಕೋಶೇ**
**ಚತುರ್ದಶಾಧಿಕ ಶತತಮೋಽಧ್ಯಾಯಃ**

---

೮೩. ಮಹಾಮೇರು ಪರ್ವತದಲ್ಲಿ ಶೇಷ, ವಾಸುಕಿ, ತಕ್ಷಕ ಮುಂತಾದ ಸರ್ಪಗಳೆಲ್ಲ ವಿಹರಿಸುವುವು. ಯಜ್ಞದಲ್ಲಿ ಭಾಗವನ್ನು ಪಡೆಯಲು ಅರ್ಹರಾದ ಮೂವತ್ತುಮೂರು ಕೋಟಿ ದೇವತೆಗಳು ಕ್ರೀಡಿಸುವರು.

೮೪. ವೈಡೂರ್ಯ ರತ್ನಗಳಿಂದ ತುಂಬಿದ ನೀಲಪರ್ವತದಲ್ಲಿ ಸಿದ್ಧರೂ ಬ್ರಹ್ಮರ್ಷಿಗಳೂ ವಾಸಮಾಡುತ್ತಾರೆ. ಶ್ವೇತಪರ್ವತವು ದೈತ್ಯರಿಗೂ ದಾನವರಿಗೂ ಆವಾಸಸ್ಥಳವೆನಿಸಿದೆ.

೮೫-೮೬. ಪರ್ವತಗಳಲ್ಲಿ ಶ್ರೇಷ್ಠವೆನಿಸಿದ ಶೃಂಗವಂತವು ಪಿತೃದೇವತೆಗಳ ಸಂಚಾರಮಾರ್ಗವಾಗಿದೆ. ಓ ರಾಜಾ, ಭಾರತವರ್ಷದ ಒಳಭಾಗಗಳಾದ ಇಂದ್ರ ದ್ವೀಪ, ಕಶೇರು ಮುಂತಾದ ಒಂಬತ್ತು ವರ್ಷಗಳನ್ನು (ಭೂಖಂಡಗಳನ್ನು) ವಿವರಿಸಿ ಹೇಳಿದೆನು. ಅವುಗಳಲ್ಲಿ ಚರಾಚರಗಳಾದ ಸಕಲ ಜಂತುಗಳೂ ವಾಸಿಸುತ್ತವೆ. ಅವು ನಾನಾವಿಧವಾಗಿ ಅಭಿವೃದ್ಧಿ ಹೊಂದುತ್ತವೆ. ಇಷ್ಟೇ ಸರಿಯೆಂದು ಅವುಗಳನ್ನು ಲೆಕ್ಕ ಮಾಡಿ ಹೇಳಲು ದೇವತೆಗಳಿಗಾಗಲಿ ಮನುಷ್ಯರಿಗಾಗಲಿ ಸಾಧ್ಯವಿಲ್ಲ. ವಿಷಯವನ್ನು ತಿಳಿಯಬೇಕೆಂಬ ಕುತೂಹಲವಿದ್ದರೆ ಪುರಾಣಗಳಲ್ಲಿ ಹೇಳಿರುವುದನ್ನು ನಂಬಬೇಕು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಬೇರೆ ಬೇರೆ ವರ್ಷಗಳ (ಭೂಖಂಡಗಳ) ವರ್ಣನವನ್ನು ಮಾಡಿದೆ.

ಈಗ ನಾವು ವಾಸಿಸುತ್ತಿರುವ ಭಾರತ ವರ್ಷವು ಸ್ವರ್ಗವನ್ನೂ ಮೋಕ್ಷವನ್ನೂ ಅನುಗ್ರಹಿಸಬಲ್ಲ ಪುಣ್ಯಭೂಮಿ. ಇದನ್ನು ಬಿಟ್ಟರೆ ಜಗತ್ತಿನ ಮತ್ತಾವ ಕಡೆಯಲ್ಲೂ ಕರ್ಮಾನುಷ್ಠಾನವಿಲ್ಲ. ಇದರಲ್ಲಿ ಒಂಬತ್ತು ಉಪವರ್ಷಗಳಿವೆ. ನೂರಾರು ಪರ್ವತಗಳೂ, ಲೆಕ್ಕವಿಲ್ಲದಷ್ಟು ನದಿಗಳೂ, ಜನಭರಿತವೂ ಸಂಪದ್ಯುಕ್ತವೂ ಆದ ಹಲವು ದೇಶಗಳೂ ಇಲ್ಲಿ ಕಂಗೊಳಿಸುತ್ತಿವೆ.

ಕಿಂಪುರುಷ, ಹರಿವರ್ಷ, ಮುಂತಾದುವು ದೇವಲೋಕಕ್ಕೆ ಸಮಾನವಾಗಿರತಕ್ಕುವು. ಅಲ್ಲಿನ ನಿವಾಸಿಗಳು ಮುಪ್ಪು, ರೋಗ, ಶೋಕ ಇವುಗಳ ಬಾಧೆಯನ್ನರಿಯದೆ ಅನೇಕ ಸಾವಿರ ವರ್ಷಗಳ ಕಾಲ ಸುಖದಿಂದ ಬದುಕುವರು. ಇಳಾವೃತ ವರ್ಷದಲ್ಲಿ ದೊಡ್ಡದೊಂದು ಜಂಬೂವೃಕ್ಷ (ನೇರಿಳೆಮರ) ವಿದೆ. ಅದರಿಂದಲೇ ಈ ದ್ವೀಪಕ್ಕೆ ಜಂಬೂದ್ವೀಪವೆಂಬ ಹೆಸರು ಬಂದಿತು. ಅದರ ಹಣ್ಣಿನ ರಸವು ನೆಲಕೆ ಸೋಕಿದೊಡನೆ ಬಂಗಾರವು ಉತ್ಪನ್ನವಾಗುತ್ತದೆ. ಈ ಕಾರಣದಿಂದಲೇ ಚಿನ್ನಕೆ ಜಾಂಬೂನದವೆಂದು ಹೆಸರು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಭೂಗೋಳ ವರ್ಣನದೊಳಗೆ
ನೂರಹದಿನಾಲ್ಕನೆಯ ಅಧ್ಯಾಯವು ಮುಗಿದುದು.

## ಅಥ ಪಂಚದಶಾಧಿಕಶತತಮೋಽಧ್ಯಾಯಃ

॥ ಮನುರುವಾಚ ॥

ಚರಿತಂ ಬುಧಪುತ್ರಸ್ಯ ಜನಾರ್ದನ ಮಯಾ ಶ್ರುತಂ ।
ಶ್ರುತಃ ಶ್ರಾದ್ಧವಿಧಿಃ ಪುಣ್ಯಃ ಸರ್ವಪಾಪಪ್ರಣಾಶನಃ ॥ ೧ ॥

ವಿಮಲಂ ಚೈವ ಸರ್ವೇಷಾಂ ಫಲಮುಚ್ಚೈಸ್ತಥಾ ಶ್ರುತಂ ।
ಕೃಷ್ಣಾಜಿನಪ್ರದಾನಂ ಚ ವೃಷೋತ್ಸರ್ಗಸ್ತಥೈವ ಚ ॥ ೨ ॥

ಶ್ರುತ್ವಾ ರೂಪಂ ನರೇಂದ್ರಸ್ಯ ಬುಧಪುತ್ರಸ್ಯ ಕೇಶವ ।
ಕೌತೂಹಲಂ ಸಮುತ್ಪನ್ನಂ ತನ್ಮಮಾಚಕ್ಷ್ವ ಪೃಚ್ಛತಃ ॥ ೩ ॥

ಕೇನ ಕರ್ಮವಿಪಾಕೇನ ಸ ತು ರಾಜಾ ಪುರೂರವಾಃ ।
ಅವಾಪ ತಾದೃಶಂ ರೂಪಂ ಸೌಭಾಗ್ಯಮಪಿ ಚೋತ್ತಮಂ ॥ ೪ ॥

---

೧. ಮನುಚಕ್ರವರ್ತಿ ಹೇಳಿದನು.—ಓ ಜನಾರ್ದನಾ, ಬುಧನ ಪುತ್ರನಾದ ಪುರೂರವನ ವೃತ್ತಾಂತವನ್ನೂ, ಸರ್ವಪಾಪ ಪರಿಹಾರಕವಾದ ಶ್ರಾದ್ಧದ ವಿಧಿಯನ್ನೂ ಕೇಳಿದೆನು.

೨. ಎಲ್ಲ ಬಗೆಯ ದಾನಧರ್ಮಗಳ ಮಹತ್ಫಲವನ್ನೂ ಅರಿತೆನು. ಕೃಷ್ಣಾಜಿನವನ್ನು ದಾನಮಾಡುವುದು, ವೃಷಭವನ್ನು ಬಿಡುವುದು ಇವುಗಳಿಂದ ಬರುವ ಫಲವೂ ತಿಳಿಯಿತು.

೩. ಬುಧಪುತ್ರನಾದ ಪುರೂರವ ಮಹಾರಾಜನ ರೂಪವರ್ಣನವನ್ನು ಕೇಳಿ ನನಗೆ ಕುತೂಹಲವು ಹುಟ್ಟಿದೆ. ದೇವಾ, ಆದರ ವಿವರವನ್ನು ನನಗೆ ತಿಳಿಸು.

೪. ಯಾವ ಪುಣ್ಯಕರ್ಮದ ಫಲವಾಗಿ ಆ ಸಾರ್ವಭೌಮನಿಗೆ ಅಂತಹ ರೂಪವೂ, ಉತ್ತಮವಾದ ಸೌಭಾಗ್ಯವೂ ಲಭಿಸಿದುವು?

ದೇವಾಂಸ್ತ್ರಿಭುವನಶ್ರೇಷ್ಠಾನ್ ಗಂಧರ್ವಾಂಶ್ಚ ಮನೋರಮಾನ್ ।
ಊರ್ವಶೀ ಸಂಗತಾ ತ್ಯಕ್ತ್ವಾ ಸರ್ವಭಾವೇನ ತಂ ನೃಪಂ ॥ ೫ ॥

॥ ಮತ್ಸ್ಯ ಉವಾಚ ॥

ಶೃಣು ಕರ್ಮವಿಪಾಕೇನ ಯೇನ ರಾಜಾ ಪುರೂರವಾಃ ।
ಅವಾಪ ತಾದೃಶಂ ರೂಪಂ ಸೌಭಾಗ್ಯಮಪಿ ಚೋತ್ತಮಂ ॥ ೬ ॥

ಅತೀತೇ ಜನ್ಮನಿ ಪುರಾ ಯೋಽಯಂ ರಾಜಾ ಪುರೂರವಾಃ ।
ಪುರೂರವಾ ಇತಿ ಖ್ಯಾತೋ ಮದ್ರದೇಶಾಧಿಪೋ ಹಿ ಸಃ ॥ ೭ ॥

ಚಾಕ್ಷುಷಸ್ಯಾನ್ವಯೇ ರಾಜಾ ಚಾಕ್ಷುಷಸ್ಯಾಂತರೇ ಮನೋಃ ।
ಸ ವೈ ನೃಪಗುಣೈರ್ಯುಕ್ತಃ ಕೇವಲಂ ರೂಪವರ್ಜಿತಃ ॥ ೮ ॥

॥ ಋಷಯ ಊಚುಃ ॥

ಪುರೂರವಾ ಮದ್ರಪತಿಃ ಕರ್ಮಣಾ ಕೇನ ಪಾರ್ಥಿವಃ ।
ಬಭೂವ ಕರ್ಮಣಾ ಕೇನ ರೂಪವಾಂಶ್ಚೈವ ಸೂತಜ ॥ ೯ ॥

---

೫. ಮೂರುಲೋಕಗಳಲ್ಲಿಯೂ ಶ್ರೇಷ್ಠರಾದ ದೇವತೆಗಳನ್ನೂ, ಸುಂದರರಾದ ಗಂಧರ್ವರನ್ನೂ ಬಿಟ್ಟು ಊರ್ವಶಿಯು ಪರಿಪೂರ್ಣವಾದ ಮನಸ್ಸಿನಿಂದ ಆವನನ್ನು ಸೇರಿದಳಲ್ಲವೆ !

೬. ಮತ್ಸ್ಯರೂಪನಾದ ಭಗವಂತನು ಹೇಳಿದನು.—ಯಾವ ಪುಣ್ಯಕರ್ಮದ ಫಲದಿಂದ ರಾಜನಾದ ಪುರೂರವನು ಅಂತಹ ರೂಪವನ್ನೂ, ಉತ್ತಮವಾದ ಸೌಭಾಗ್ಯವನ್ನೂ ಪಡೆದನೋ ಅದನ್ನು ಕೇಳು.

೭. ಬುಧನ ಮಗನಾದ ಈ ಪುರೂರವರಾಜನೇ ಹಿಂದಿನ ಜನ್ಮದಲ್ಲಿ ಮದ್ರದೇಶದ ಅರಸನಾಗಿದ್ದನು. ಆಗಲೂ ಅವನಿಗೆ ಪುರೂರವನೆಂದೇ ಹೆಸರಿದ್ದಿತು.

೮. ಚಾಕ್ಷುಷ ಮನ್ವಂತರದಲ್ಲಿ ಆತನು ಚಾಕ್ಷುಷ ಮಹಾರಾಜನ ವಂಶದಲ್ಲಿ ಹುಟ್ಟಿದ್ದನು. ರಾಜನಿಗೆ ಬೇಕಾದ ಸಕಲಗುಣಗಳೂ ಆತನಲ್ಲಿದ್ದುವು. ಆದರೆ ರೂಪವು ಮಾತ್ರ ಇರಲಿಲ್ಲ.

೯. ಋಷಿಗಳು ಹೇಳಿದರು.—ಮದ್ರ ದೇಶಾಧಿಪನಾದ ಪುರೂರವನು ಯಾವ ಸುಕೃತದ ಫಲದಿಂದ ರಾಜನಾದನು ? ಓ ಸೂತಾ, ಯಾವ ಸತ್ಕರ್ಮದಿಂದ ಆತನು ರೂಪವಂತನೂ ಆದನು ?

|| ಸೂತ ಉವಾಚ ||

ದ್ವಿಜಗ್ರಾಮೇ ದ್ವಿಜಶ್ರೇಷ್ಠೋ ನಾಮ್ನಾ ಚಾಸೀತ್ಪುರೂರವಾಃ ।
ನದ್ಯಾಃ ಕೂಲೇ ಮಹಾರಾಜಃ ಪೂರ್ವಜನ್ಮನಿ ಪಾರ್ಥಿವಃ ||೧೦||

ಸ ತು ಮದ್ರಪತೀ ರಾಜಾ ಯಸ್ತು ನಾಮ್ನಾ ಪುರೂರವಾಃ ।
ತಸ್ಮಿಞ್ಜನ್ಮನ್ಯಸೌ ವಿಪ್ರೋ ದ್ವಾದಶ್ಯಾಂ ತು ಸದಾನಘ ||೧೧||

ಉಪೋಷ್ಯ ಪೂಜಯಾಮಾಸ ರಾಜ್ಯಕಾಮೋ ಜನಾರ್ದನಂ ।
ಚಕಾರ ಸೋಽಪವಾಸಶ್ಚ ಸ್ನಾನಮಭ್ಯಂಗಪೂರ್ವಕಂ ||೧೨||

ಉಪವಾಸಫಲಾತ್ಪ್ರಾಪ್ತಂ ರಾಜ್ಯಂ ಮದ್ರೇಷ್ವಕಂಟಕಂ ।
ಉಪೋಷಿತಸ್ತಥಾಭ್ಯಂಗಾದ್ರೂಪಹೀನೋ ವ್ಯಜಾಯತ ||೧೩||

ಉಪೋಷಿತೈರ್ನರೈಸ್ತಸ್ಮಾತ್ಸ್ನಾನಮಭ್ಯಂಗಪೂರ್ವಕಂ ।
ವರ್ಜನೀಯಂ ಪ್ರಯತ್ನೇನ ರೂಪಘ್ನಂ ತತ್ಪರಂ ನೃಪ ||೧೪||

---

೧೦. ಸೂತಪೌರಾಣಿಕನು ಹೇಳಿದನು.—ಮದ್ರದೇಶದ ಮಹಾರಾಜನಾದ ಆ ಪುರೂರವನು ತನ್ನ ಹಿಂದಿನ ಜನ್ಮದಲ್ಲಿ ಒಂದಾನೊಂದು ನದೀತೀರದ ಅಗ್ರಹಾರದಲ್ಲಿ ಬ್ರಾಹ್ಮಣೋತ್ತಮನಾಗಿ ಜನಿಸಿದ್ದನು. ಆಗಲೂ ಕೂಡ ಅವನಿಗೆ ಅದೇ ಹೆಸರಿದ್ದಿತು.

೧೧-೧೨. ಪುರೂರವನೆಂಬ ಮದ್ರದೇಶಾಧಿಪತಿಯು ಹಿಂದಿನ ಜನ್ಮದಲ್ಲಿ ಬ್ರಾಹ್ಮಣನಾಗಿದ್ದುದು ಸರಿಯಷ್ಟೆ. ಆತನು ದ್ವಾದಶಿಯ ದಿನ ಉಪವಾಸಮಾಡಿ, ರಾಜ್ಯದ ಅಪೇಕ್ಷೆಯಿಂದ ಮಹಾವಿಷ್ಣುವನ್ನು ಪೂಜಿಸುತ್ತಿದ್ದನು. ಆದರೆ ಉಪವಾಸದೊಡನೆ ಆತನು ಅಭ್ಯಂಜನ ಸ್ನಾನವನ್ನೂ ಸಹ ತಪ್ಪದೆ ಮಾಡುತ್ತಿದ್ದನು.

೧೩. ಉಪವಾಸದ ಫಲದಿಂದ ಆತನಿಗೆ ಮದ್ರದೇಶದಲ್ಲಿ ನಿರುಪದ್ರವವಾದ ದೊರೆತನವು ಪ್ರಾಪ್ತವಾಯಿತು. ಅಭ್ಯಂಗದಿಂದಲೋ ಎಂದರೆ ಅವನು ರೂಪರಹಿತನಾದನು.

೧೪. ಆದುವರಿಂದ ಏನೇ ಆಗಲಿ ಉಪವಾಸವ್ರತದಲ್ಲಿ ಇರತಕ್ಕವನು ಅಭ್ಯಂಗಸ್ನಾನವನ್ನು ಮಾಡಬಾರದು. ಓ ರಾಜಾ, ಹಾಗೆ ಮಾಡಿದರೆ ಸೌಂದರ್ಯವು ನಾಶವಾಗುವುದು.

**ಏತದ್ವಃ ಕಥಿತಂ ಸರ್ವಂ ಯದ್ವೃತ್ತಂ ಪೂರ್ವಜನ್ಮನಿ ।**
**ಮದ್ರೇಶ್ವರತ್ವಚರಿತಂ ಶೃಣು ತಸ್ಯ ಮಹೀಪತೇಃ ॥೧೫॥**

**ತಸ್ಯ ರಾಜಗುಣೈಃ ಸರ್ವೈಃ ಸಮುಪೇತಸ್ಯ ಭೂಪತೇಃ ।**
**ಜನಾನುರಾಗೋ ನೈವಾಸೀದ್ರೂಪಹೀನಸ್ಯ ತಸ್ಯ ವೈ ॥೧೬॥**

**ರೂಪಕಾಮಃ ಸ ಮದ್ರೇಶಸ್ತಪಸೇ ಕೃತನಿಶ್ಚಯಃ ।**
**ರಾಜ್ಯಂ ಮಂತ್ರಿಗತಂ ಕೃತ್ವಾ ಜಗಾಮ ಹಿಮಪರ್ವತಂ ॥೧೭॥**

**ವ್ಯವಸಾಯದ್ವಿತೀಯಸ್ತು ಪದ್ಭ್ಯಾಮೇವ ಮಹಾಯಶಾಃ ।**
**ದ್ರಷ್ಟುಂ ಸ ತೀರ್ಥಸದನಂ ವಿಷಯಾಂತೇ ಸ್ವಕೇ ನದೀಂ ।**
**ಐರಾವತೀತಿ ವಿಖ್ಯಾತಾಂ ದದರ್ಶಾತಿಮನೋರಮಾಂ ॥೧೮॥**

---

೧೫. ಬ್ರಾಹ್ಮಣಜನ್ಮದಲ್ಲಿದ್ದಾಗ ಏನು ನಡೆಯಿತೆಂಬುದನ್ನು ಸಂಪೂರ್ಣವಾಗಿ ಹೇಳಿದೆನು. ಇನ್ನು ಮದ್ರರಾಜನಾಗಿ ಹುಟ್ಟಿದ ಬಳಿಕ ಆ ರಾಜನ ವೃತ್ತಾಂತವೇನೆಂಬುದನ್ನು ಹೇಳುತ್ತೇನೆ; ಕೇಳು.

೧೬. ಆ ರಾಜನಲ್ಲಿ ಅರಸನಿಗೆ ಬೇಕಾದ ಗುಣಗಳೆಲ್ಲವೂ ಇದ್ದುವು. ಆದರೂ ಜನರಿಗೆ ಆತನಲ್ಲಿ ಅನುರಾಗವಿರಲಿಲ್ಲ. ಏಕೆಂದರೆ ಅವನ ರೂಪವು ಮನಸ್ಸನ್ನು ಎಳೆಯುವಂತಹುದಾಗಿ ಇರಲಿಲ್ಲ.

೧೭. ಆ ಮದ್ರಭೂಪಾಲನು ರೂಪವನ್ನು ಪಡೆಯುವುದಕ್ಕೋಸ್ಕರ ತಪಸ್ಸು ಮಾಡಬೇಕೆಂದು ನಿಶ್ಚಯಿಸಿದನು. ರಾಜ್ಯವನ್ನು ಮಂತ್ರಿಯ ವಶಕ್ಕೆ ಕೊಟ್ಟು ತಪಸ್ಸಿಗಾಗಿ ಹಿಮವತ್ಪರ್ವತದ ಕಡೆಗೆ ಹೊರಟನು.

೧೮. ಕೀರ್ತಿವಂತನಾದ ಆ ರಾಜನಿಗೆ ಅವನ ಮನೋನಿಶ್ಚಯವೇ ಸಹಾಯವಾಗಿತ್ತು; ಮತ್ತಾರನ್ನೂ ಅವನು ಸಂಗಡ ಕರೆದುಕೊಳ್ಳಲಿಲ್ಲ. ಸಕಲ ಪುಣ್ಯತೀರ್ಥಗಳಿಗೂ ನೆಲೆಯಾದ ಹಿಮಾಲಯಪರ್ವತವನ್ನು ನೋಡಬೇಕೆಂದು ಆತನು ಕಾಲ್ನಡೆಯಲ್ಲೇ ಪ್ರಯಾಣಮಾಡಿದನು. ಅವನ ದೇಶದ ಗಡಿನಾಡಿನಲ್ಲಿ ಐರಾವತಿಯೆಂಬ ಬಹು ಸಂದರವಾದ ನದಿಯು ಅವನ ಕಣ್ಣಿಗೆ ಬಿದ್ದಿತು.

**ತುಹಿನಗಿರಿಭವಾಂ ಮಹೌಘವೇಗಾಂ**
**ತುಹಿನಗಭಸ್ತಿಸಮಾನಶೀತಲೋದಾಂ ।**
**ತುಹಿನಸದೃಶಹೈಮವರ್ಣಪುಂಜಾಂ**
**ತುಹಿನಯಶಾಃ ಸರಿತಂ ದದರ್ಶ ರಾಜಾ ॥೧೯॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ತಪೋವನಾಗಮನಂ ನಾಮ ಪಂಚದಶಾಧಿಕಶತತಮೋಽಧ್ಯಾಯಃ**

---

೧೯. ನಿರ್ಮಲವಾದ ಕೀರ್ತಿಯಿಂದ ವಿರಾಜಿತನಾದ ಆ ಮಹಾರಾಜನು ಹಿಮವತ್ಪರ್ವತದಲ್ಲಿ ಹುಟ್ಟಿ ಮಹಾವೇಗದಿಂದ ದೊಡ್ಡಪ್ರವಾಹವಾಗಿ ಹರಿದು ಬರುತ್ತಿರುವ ಆ ನದಿಯನ್ನು ನೋಡಿದನು. ಅದರ ನೀರು ಚಂದ್ರನ ಕಿರಣಗಳಂತೆ ತಣ್ಣಗಿತ್ತು. ನೊರೆಯು ಮಂಜಿನಂತೆ ಬೆಳ್ಳಗೆ ರಾಶಿಯಾಗಿತ್ತು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಪುರೂರವನ ಹಿಂದಿನ ಜನ್ಮದ ವೃತ್ತಾಂತವು ವರ್ಣಿತವಾಗಿದೆ.

ಬುಧನ ಮಗನಾದ ಪುರೂರವನು ಬಹಳ ರೂಪವಂತನಾಗಿರಲು ಕಾರಣವೇನೆಂದು ಋಷಿಗಳು ಕೇಳಿದರು. ಸೂತ ಪೌರಾಣಿಕನು ಅದಕ್ಕೆ ಉತ್ತರವಿತ್ತನು. ಹಿಂದಿನ ಜನ್ಮವೊಂದರಲ್ಲಿ ಪುರೂರವನು ಬ್ರಾಹ್ಮಣನಾಗಿ ಹುಟ್ಟಿದ್ದನು. ಆಗ ಪ್ರತಿಯೊಂದು ದ್ವಾದಶಿಯ ದಿನವೂ ಅವನು ಅಭ್ಯಂಜನಸ್ನಾನವನ್ನು ಮಾಡಿ, ಉಪವಾಸವಿದ್ದು ಮಹಾವಿಷ್ಣುವನ್ನು ಪೂಜಿಸುತ್ತಿದ್ದನು. ಅರಸನಾಗಬೇಕೆಂಬುದೇ ಆತನ ಕೋರಿಕೆಯಾಗಿತ್ತು. ಮರುಹುಟ್ಟಿನಲ್ಲಿ ಅವನು ಮದ್ರದೇಶದ ರಾಜನೇನೋ ಆದನು; ಆದರೆ ಉಪವಾಸದ ದಿನ ಅಭ್ಯಂಗವನ್ನು ಮಾಡುತ್ತಿದ್ದುದರ ಫಲವಾಗಿ ರೂಪವಿಲ್ಲದವನಾದನು. ಅವನಲ್ಲಿ ಎಲ್ಲ ಒಳ್ಳೆಯ ಗುಣಗಳು ತುಂಬಿದ್ದರೂ ಈ ಒಂದು ಕಾರಣದಿಂದ ಪ್ರಜೆಗಳಿಗೆ ಅವನಲ್ಲಿ ಅನುರಾಗವು ಹುಟ್ಟದೆ ಹೋಯಿತು. ಆದುದರಿಂದ ತಪಸ್ಸುಮಾಡಿ ಸೌಂದರ್ಯವನ್ನು ಸಂಪಾದಿಸಬೇಕೆಂಬ ಅಭಿಲಾಷೆಯಿಂದ ಅವನು ಹಿಮವತ್ಪರ್ವತಕ್ಕೆ ಹೋದನು. ದಾರಿಯಲ್ಲಿ ಐರಾವತಿಯೆಂಬ ಸುಂದರವಾದ ನದಿಯನ್ನು ಕಂಡನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ತಪೋವನಾಗಮನವೆಂಬ
ನೂರ ಹದಿನೈದನೆಯ ಅಧ್ಯಾಯವು ಮುಗಿದುದು.

## ಅಥ ಷೋಡಶಾಧಿಕಶತತಮೋಽಧ್ಯಾಯಃ

॥ ಸೂತ ಉವಾಚ ॥

ಸ ದದರ್ಶ ನದೀಂ ಪುಣ್ಯಾಂ ದಿವ್ಯಾಂ ಹೈಮವತೀಂ ಶುಭಾಂ ।
ಗಂಧರ್ವೈಶ್ಚ ಸಮಾಕೀರ್ಣಾಂ ನಿತ್ಯಂ ಶಕ್ರೇಣ ಸೇವಿತಾಂ ॥ ೧ ॥

ಸುರೇಭಮದಸಂಸಿಕ್ತಾಂ ಸಮಂತಾತ್ತು ವಿರಾಜಿತಾಂ ।
ಮಧ್ಯೇನ ಶಕ್ರಚಾಪಾಭಾಂ ತಸ್ಮಿನ್ನಹನಿ ಸರ್ವದಾ ॥ ೨ ॥

ತಪಸ್ವಿಶರಣೋಪೇತಾಂ ಮಹಾಬ್ರಾಹ್ಮಣಸೇವಿತಾಂ ।
ದದರ್ಶ ತಪನೀಯಾಭಾಂ ಮಹಾರಾಜಃ ಪುರೂರವಾಃ ॥ ೩ ॥

ಸಿತಹಂಸಾವಲಿಚ್ಛನ್ನಾಂ ಕಾಶಚಾಮರರಾಜತಾಂ ।
ಸಾಭಿಷಿಕ್ತಾಮಿವ ಸತಾಂ ಪಶ್ಯನ್ ಪ್ರೀತಿಂ ಪರಾಂ ಯಯೌ ॥ ೪ ॥

---

೧. ಸೂತಪೌರಾಣಿಕನು ಹೇಳಿದನು.—ಮದ್ರಭೂಪತಿಯು ಹಿಮವತ್ಪರ್ವತದಲ್ಲಿ ಹುಟ್ಟಿ ಹರಿಯುವ, ಮಂಗಳಮಯವೂ ಪುಣ್ಯಕರವೂ ಆದ ಆ ದಿವ್ಯನದಿಯನ್ನು ನೋಡಿದನು. ಆದರಲ್ಲಿ ಗಂಧರ್ವರು ಜಲವಿಹಾರಕ್ಕಾಗಿ ನೆರೆದಿದ್ದರು. ಇಂದ್ರನು ನಿತ್ಯವೂ ಅದನ್ನು ಸೇವಿಸುತ್ತಿದ್ದನು.

೨. ಇಂದ್ರನ ಐರಾವತವು ಬಂದು ನೀರಾಟವಾಡಿದ ಕಾರಣ ಅದರ ಮದದ ಜಿಡ್ಡು ಆ ನದಿಯ ನೀರಿನಲ್ಲಿ ಸೇರಿಕೊಂಡಿತ್ತು. ಅದರಿಂದ ಯಾವ ಕಡೆ ನೋಡಲಿ ಕಾಮನ ಬಿಲ್ಲು ಮೂಡಿದಂತೆ ಬಗೆಬಗೆಯ ಬಣ್ಣಗಳು ಕಂಗೊಳಿಸುತ್ತಿದ್ದುವು.

೩. ನದಿಯ ತೀರದಲ್ಲಿ ಮುನಿಜನರ ಪರ್ಣಶಾಲೆಗಳಿದ್ದುವು. ಸಕಲ ಶಾಸ್ತ್ರಜ್ಞರಾದ ಬ್ರಾಹ್ಮಣೋತ್ತಮರು ಜಪದಲ್ಲೂ ಧ್ಯಾನದಲ್ಲೂ ನಿರತರಾಗಿದ್ದರು. ಬಾಲಸೂರ್ಯನ ಹೊಂಬಿಸಿಲು ಬಿದ್ದಿರಲು ನೀರು ಬಂಗಾರದ ಕಾಂತಿಯಿಂದ ಬೆಳಬೆಳಗುತ್ತಿತ್ತು. ಇಂತಹ ಮಹಾನದಿಯನ್ನು ಪುರೂರವ ಮಹಾರಾಜನು ನೋಡಿದನು.

೪. ಬಿಳಿಯ ಹಂಸಗಳು ಸಾಲಾಗಿ ಮೆರೆಯುತ್ತಿದ್ದುವು. ಕಾಶಕುಸುಮಗಳ ಗೊಂಚಲು ಚಾಮರದಂತೆ ಪ್ರಕಾಶಿಸುತ್ತಿತ್ತು. ಪಟ್ಟಾಭಿಷಿಕ್ತಳಾದ ರಾಣಿಯಂತೆ ನದಿಯು ಶೋಭಿಸುತ್ತಿತ್ತು. ಇದನ್ನು ಕಂಡು ರಾಜನಿಗೆ ಬಹಳ ಆನಂದವಾಯಿತು.

ಪುಣ್ಯಾಂ ಸುಶೀತಲಾಂ ಹೃದ್ಯಾಂ ಮನಸಃ ಪ್ರೀತಿವರ್ಧಿನೀಂ ।
ಕ್ಷಯವೃದ್ಧಿಯುತಾಂ ರಮ್ಯಾಂ ಸೋಮಮೂರ್ತಿಮಿವಾಪರಾಂ ॥ ೫ ॥

ಸುಶೀತಶೀಘ್ರಪಾನೀಯಾಂ ದ್ವಿಜಸಂಘನಿಷೇವಿತಾಂ ।
ಸುತಾಂ ಹಿಮವತಃ ಶ್ರೇಷ್ಠಾಂ ಚಂಚದ್ವೀಚಿವಿರಾಜಿತಾಂ ॥ ೬ ॥

ಅಮೃತಸ್ವಾದುಸಲಿಲಾಂ ತಾಪಸೈರುಪಶೋಭಿತಾಂ ।
ಸ್ವರ್ಗಾರೋಹಣನಿಶ್ರೇಣೀಂ ಸರ್ವಕಲ್ಮಷನಾಶಿನೀಂ ॥ ೭ ॥

ಅಗ್ರ್ಯಾಂ ಸಮುದ್ರಮಹಿಷೀಂ ಮಹರ್ಷಿಗಣಸೇವಿತಾಂ ।
ಸರ್ವಲೋಕಸ್ಯ ಚೌತ್ಸುಕ್ಯಕಾರಿಣೀಂ ಸುಮನೋಹರಾಂ ॥ ೮ ॥

---

೫. ಐರಾವತೀನದಿಯು ಪುಣ್ಯಕರವೂ, ಶೀತಲವೂ, ಮನೋಹರವೂ ಆಗಿತ್ತು. ಮನಸ್ಸಿಗೆ ಪ್ರೀತಿಯನ್ನು ಹೆಚ್ಚಿಸುತ್ತಿತ್ತು. ಮಳೆಗಾಲದಲ್ಲಿ ಅದರ ಪ್ರವಾಹವು ಹೆಚ್ಚುತ್ತಲೂ ಬೇಸಗೆಯಲ್ಲಿ ಬತ್ತುತ್ತಲೂ ಇದ್ದಿತು. ಈ ಕಾರಣಗಳಿಂದ ಅದು ಚಂದ್ರನ ಬೇರೊಂದು ಆಕಾರವೋ ಎನ್ನುವಂತೆ ತೋರುತ್ತಿತ್ತು.

೬. ಆ ನದಿಯು ಸುಶೀತಲವಾದ ಜಲದಿಂದ ಪೂರ್ಣವಾಗಿ ಬಹುವೇಗವಾಗಿ ಹರಿಯುತ್ತಿತ್ತು. ಸ್ನಾನಸಂಧ್ಯಾದಿಕರ್ಮಗಳನ್ನು ನೆರವೇರಿಸುವುದಕ್ಕಾಗಿ ಅಲ್ಲಲ್ಲಿ ಬ್ರಾಹ್ಮಣರು ಗುಂಪು ಗುಂಪಾಗಿ ಕೂಡಿದ್ದರು. ಅಲೆಗಳು ಮನೋಹರವಾಗಿ ಅಲೆದಾಡುತ್ತಿದ್ದುವು. ಅದು ಹಿಮವಂತನ ಮೆಚ್ಚಿನ ಮಗಳೆನಿಸಿತ್ತು.

೭. ಅದರ ನೀರು ಅಮೃತದಂತೆ ಮಧುರವಾಗಿತ್ತು. ತಪಸ್ವಿಜನಗಳು ಅದರ ತೀರವನ್ನು ಅಲಂಕರಿಸಿದ್ದರು. ಅದು ಸಕಲ ಪಾಪಗಳನ್ನೂ ಪರಿಹರಿಸುತ್ತಿದ್ದ ಕಾರಣ ಸ್ವರ್ಗಕ್ಕೆ ಹತ್ತಿಹೋಗಲು ಅನುಕೂಲವಾದ ಏಣಿಯೋ ಎನ್ನುವಂತಿತ್ತು.

೮. ಸಮುದ್ರರಾಜನ ಪತ್ನಿಯರಲ್ಲಿ ಐರಾವತಿಯು ಮೊದಲನೆಯದಾಗಿತ್ತು. ಮಹರ್ಷಿಗಳು ಅದನ್ನು ಸೇವಿಸುತ್ತಿದ್ದರು. ಅದು ಬಹು ಮನೋಹರವಾಗಿ ಸಕಲ ಜನರಿಗೂ ಕುತೂಹಲವನ್ನು ಹುಟ್ಟಿಸುತ್ತಿತ್ತು.

**ಹಿತಾಂ ಸರ್ವಸ್ಯ ಲೋಕಸ್ಯ ನಾಕಮಾರ್ಗಪ್ರದಾಯಿಕಾಂ ।**
**ಗೋಕುಲಾಕುಲತೀರಾಂತಾಂ ರಮ್ಯಾಂ ಶೈವಾಲವರ್ಜಿತಾಂ ॥ ೯ ॥**

**ಹಂಸಸಾರಸಸಂಘುಷ್ಟಾಂ ಜಲಜೈರುಪಶೋಭಿತಾಂ ।**
**ಆವರ್ತನಾಭಿಗಂಭೀರಾಂ ದ್ವೀಪೋರುಜಘನಸ್ಥಲೀಂ ॥೧೦॥**

**ನೀಲನೀರಜನೇತ್ರಾಭಾಮುತ್ಫುಲ್ಲಕಮಲಾನನಾಂ ।**
**ಹಿಮಾಭಫೇನವಸನಾಂ ಚಕ್ರವಾಕಾಧರಾಂ ಶುಭಾಂ ।**
**ಬಲಾಕಾಪಙ್ಕ್ತಿದಶನಾಂ ಚಲನ್ಮತ್ಸ್ಯಾವಲಿಭ್ರುವಂ ॥೧೧॥**

**ಸ್ವಜಲೋದ್ಭೂತಮಾತಂಗರಮ್ಯಕುಂಭಪಯೋಧರಾಂ ।**
**ಹಂಸನೂಪುರಸಂಘುಷ್ಟಾಂ ಮೃಣಾಲವಲಯಾವಲೀಂ ॥೧೨॥**

**ತಸ್ಯಾಂ ರೂಪಮದೋನ್ಮತ್ತಾ ಗಂಧರ್ವಾನುಗತಾಃ ಸದಾ ।**
**ಮಧ್ಯಾಹ್ನಸಮಯೇ ರಾಜನ್ ಕ್ರೀಡಂತ್ಯಪ್ಸರಸಾಂ ಗಣಾಃ ॥೧೩॥**

---

೯. ಮನುಷ್ಯರೆಲ್ಲರಿಗೂ ಅದು ಹಿತಕರವಾಗಿದ್ದಿತು. ಪಾಪಗಳನ್ನು ಕಳೆದು ಎಲ್ಲರನ್ನೂ ಸದ್ಗತಿಗೆ ಒಯ್ಯುತ್ತಿತ್ತು. ಅದರ ತೀರದಲ್ಲಿ ಹಸುಗಳು ಗುಂಪು ಗುಂಪಾಗಿ ಮೇಯುತ್ತಿದ್ದುವು. ಪಾಚಿಯಿಲ್ಲದೆ ಅದು ನಯನಮನೋಹರವಾಗಿದ್ದಿತು.

೧೦-೧೨. ಹಂಸಗಳು ಮತ್ತು ಸಾರಸಗಳು ಇಂಪಾಗಿ ಕೂಗುತ್ತಿದ್ದುವು. ತಾವರೆಗಳು ಅಂದವಾಗಿ ಅರಳಿದ್ದುವು. ಆ ನದಿಯು ಸುಂದರಿಯಾದ ಒಬ್ಬ ರಮಣಿಯೋ ಎನ್ನುವಂತಿದ್ದಳು. ನೀರಿನ ಸುಳಿಯೇ ಆಕೆಯ ಹೊಕ್ಕುಳು; ದ್ವೀಪವೇ ಜಘನಸ್ಥಲ; ಕನ್ನೈದಿಲೆಯೇ ಹೊಳೆಯುವ ಕಣ್ಣುಗಳು; ಅರಳಿದ ತಾವರೆಯೇ ಮುಖ; ಅಚ್ಚಬಿಳಿಯ ನೊರೆಯೇ ಉಟ್ಟ ಸೀರೆ. ಚಕ್ರವಾಕ ಪಕ್ಷಿಯೇ ಕೆಂಪಗೆ ಅಂದವಾಗಿರುವ ತುಟಿ; ಕೊಕ್ಕರೆಗಳ ಸಾಲೇ ಹಲ್ಲುಗಳು; ಚಲಿಸುವ ಮೀನುಗಳೇ ಹುಬ್ಬುಗಳು; ನೀರಾನೆಗಳ ಕುಂಭಗಳೇ ಸ್ತನಗಳು; ಹಂಸಗಳ ಮೃದುಧ್ವನಿಯೇ ಕಾಲಂದಿಗೆಯ ಸದ್ದು. ಸುರುಳಿಸುತ್ತಿಕೊಂಡಿರುವ ತಾವರೆಯ ದಂಟುಗಳೇ ಬಳೆಗಳು.

೧೩. ಓ ರಾಜಾ, ಸೌಂದರ್ಯದ ಮದದಿಂದ ಸೊಕ್ಕೇರಿದ ಅಪ್ಸರಸ್ತ್ರೀಯರು ಗಂಧರ್ವರೊಡಗೂಡಿ ಆ ನದಿಗೆ ಬಂದು ನಡುಹಗಲಿನಲ್ಲಿ ಪ್ರತಿದಿನವೂ ಜಲಕ್ರೀಡೆ ಯಾಡುವರು.

ಕಾಮಪ್ಸರೋವಿನಿರ್ಮುಕ್ತಂ ವಹಂತೀಂ ಕುಂಕುಮಂ ಶುಭಂ ।
ಸ್ವತೀರದ್ರುಮಸಂಭೂತನಾನಾವರ್ಣಸುಗಂಧಿನೀಂ ॥೧೪॥

ತರಂಗವ್ರಾತಸಂಕ್ರಾಂತಸೂರ್ಯಮಂಡಲದುರ್ದಶಾಂ ।
ಸುರೇಭಜನಿತಾಘಾತವಿಕೂಲದ್ವಯಭೂಷಿತಾಂ ॥೧೫॥

ಶಕ್ರೇಭಗಂಡಸಲಿಲೈರ್ದೇವಸ್ತ್ರೀಕುಚಚಂದನೈಃ ।
ಸಂಯುತಂ ಸಲಿಲಂ ತಸ್ಯಾಃ ಷಟ್ಪದೈರುಪಸೇವ್ಯತೇ ॥೧೬॥

ತಸ್ಯಾಸ್ತೀರಭವಾ ವೃಕ್ಷಾಃ ಸುಗಂಧಕುಸುಮಾಂಚಿತಾಃ ।
ತಥಾಪಕೃಷ್ಟಸಂಭ್ರಾಂತಭ್ರಮರಸ್ತನಿತಾಕುಲಾಃ ॥೧೭॥

ಯಸ್ಯಾಸ್ತೀರೇ ರತಿಂ ಯಾಂತಿ ಸದಾ ಕಾಮವಶಾ ಮೃಗಾಃ ।
ತಪೋವನಾಶ್ಚ ಋಷಯಸ್ತಥಾ ದೇವಾಃ ಸಹಾಪ್ಸರಾಃ ॥೧೮॥

---

೧೪. ಅಪ್ಸರ ಸ್ತ್ರೀಯರು ಹಚ್ಚಿಕೊಂಡಿದ್ದ ಕುಂಕುಮವು ನದಿಯ ನೀರಿನೊಡನೆ ಬೆರೆಯುತ್ತಿತ್ತು. ದಡದ ಮರಗಳಲ್ಲಿ ಬಿಟ್ಟಿದ್ದ ಬಗೆಬಗೆಯ ಬಣ್ಣದ ಹೂಗಳು ಸುವಾಸನೆಯನ್ನು ಎಲ್ಲ ಕಡೆಗೂ ಬೀರುತ್ತಿದ್ದುವು.

೧೫. ಚಲಿಸುವ ಅಲೆಗಳ ರಾಶಿಯಲ್ಲಿ ಸೂರ್ಯಮಂಡಲವು ಪ್ರತಿಫಲಿಸಿ ಅಲುಗಾಡುತ್ತ ಅಸ್ಪಷ್ಟವಾಗಿ ಕಾಣುತ್ತಿತ್ತು. ಇಂದ್ರನ ವಾಹನವಾದ ಐರಾವತವು ನೀರಾಟವಾಡುವ ರಭಸಕ್ಕೆ ನೀರು ಉಕ್ಕಿ ಎರಡು ದಡಗಳ ಮೇಲೂ ಹರಿಯುತ್ತಿತ್ತು.

೧೬. ಐರಾವತದ ಗಂಡಸ್ಥಲದಲ್ಲಿ ಹರಿಯುವ ಮದಜಲವೂ, ದೇವತಾ ಸ್ತ್ರೀಯರು ಕುಚಗಳಿಗೆ ಹಚ್ಚಿಕೊಂಡಿರುವ ಕೇಸರಿಯ ಗಂಧವೂ ನೀರಿನೊಡನೆ ಮಿಶ್ರವಾಗಲು, ದುಂಬಿಗಳು ಆ ಪರಿಮಳವನ್ನು ಕುಡಿಯುವುದಕ್ಕಾಗಿ ನೀರಿಗೆ ಮುತ್ತಿಕೊಳ್ಳುತ್ತಿದ್ದುವು.

೧೭. ಆ ನದಿಯ ದಡದಲ್ಲಿ ಬೆಳೆದಿರುವ ಮರಗಳು ಪರಿಮಳವನ್ನು ಬೀರುತ್ತಿರುವ ಹೂಗಳಿಂದ ತುಂಬಿದ್ದುವು. ದುಂಬಿಗಳು ದೂರದಿಂದ ಓಡಿಬಂದು ಅವುಗಳ ಉತ್ಕಟವಾದ ಸುಂಗಧದಿಂದ ಗಾಬರಿಗೊಂಡು ಝೇಂಕರಿಸುತ್ತಿದ್ದುವು.

೧೮-೧೯. ಮನ್ಮಥನ ಪಾಶಕ್ಕೆ ಗುರಿಯಾದ ಮೃಗಗಳು ಆ ನದಿಯ ತೀರದಲ್ಲಿ ಯಾವಾಗಲೂ ಆನಂದಿಸುತ್ತಿರುವುವು. ತಪೋವನದಲ್ಲಿರುವ ಋಷಿಗಳು ಶಾಂತಚಿತ್ತ

**ಲಭಂತೇ ಯತ್ರ ಪೂಕಾಂಗಾ ದೇವೇಭ್ಯಃ ಪ್ರತಿಮಾನಿತಾಃ।**
**ಸ್ತ್ರಿಯಶ್ಚ ನಾಕಬಹುಲಾಃ ಪದ್ಮೇಂದುಪ್ರತಿಮಾನನಾಃ ॥೧೯॥**

**ಯಾ ಬಿಭರ್ತಿ ಸದಾ ತೋಯಂ ದೇವಸಂಘೈರಪೀಡಿತಂ।**
**ಪುಲಿಂದೈರ್ನೃಪಸಂಘೈಶ್ಚ ವ್ಯಾಘ್ರವೃಂದೈರಪೀಡಿತಂ ॥೨೦॥**

**ಸತಾಮರಸಪಾನೀಯಾಂ ಸತಾರಗಗನಾಮಲಾಂ।**
**ಸ ತಾಂ ಪಶ್ಯನ್ ಯಯೌ ರಾಜಾ ಸತಾಮೀಪ್ಸಿತಕಾಮದಾಂ ॥೨೧॥**

**ಯಸ್ಯಾಸ್ತೀರರುಹೈಃ ಕಾಶೈಃ ಪೂರ್ಣೈಶ್ಚಂದ್ರಾಂಶುಸನ್ನಿಭೈಃ।**
**ರಾಜತೇ ವಿವಿಧಾಕಾರೈ ರಮ್ಯಂ ತೀರಂ ಮಹಾದ್ರುಮೈಃ।**
**ಯಾ ಸದಾ ವಿವಿಧೈ ರ್ವಿಪ್ರೈರ್ದೇವೈಶ್ಚಾಪಿ ನಿಷೇವ್ಯತೇ ॥೨೨॥**

---

ರಾಗಿ ನೆಮ್ಮದಿಯಿಂದಿರುವರು. ಅಪ್ಸರ ಸ್ತ್ರೀಯರೊಡಗೂಡಿ ದೇವತೆಗಳು ವಿಹರಿಸುವರು. ಚಂದ್ರನಂತೆಯೂ ತಾವರೆಯಂತೆಯೂ ಮುಖವು ಶೋಭಿಸುತ್ತಿರಲು, ಅಮರಸುಂದರಿಯರು ದೇವತೆಗಳ ಮನ್ನಣೆಗೆ ಪಾತ್ರರಾಗಿ ಅಲ್ಲಿ ಕ್ರೀಡಾದಿಗಳಿಂದ ಸಂತೋಷವನ್ನು ಪಡೆಯುವರು.

೨೦. ದೇವಗಣಗಳು ಮೆಚ್ಚಿ ಹೊಗಳುವ ದಿವ್ಯೋದಕದಿಂದ ಆ ನದಿಯು ಸದಾ ಪೂರ್ಣವಾಗಿರುವುದು. ಬೇಡರು, ಹುಲಿಗಳು, ಬೇಟೆಗಾಗಿ ಬರುವ ರಾಜರು ಇವರಿಂದ ಅದರ ನೈರ್ಮಲ್ಯವಾಗಲಿ ಸೊಗಸಾಗಲಿ ಕುಂದದು.

೨೧. ಅಂದವಾಗಿ ಅರಳಿ ಕಂಗೊಳಿಸುವ ತಾವರೆಗಳಿಂದ ಅಲಂಕೃತವಾದ ಆ ನದಿಯು ನಕ್ಷತ್ರಸಹಿತವಾದ ಆಕಾಶದಂತೆ ನಿರ್ಮಲವಾಗಿತ್ತು. ಸಾಧು ಸಜ್ಜನರ ಇಷ್ಟಾರ್ಥಗಳನ್ನು ಅದು ಸಲ್ಲಿಸುತ್ತಿತ್ತು. ರಾಜನು ಅದನ್ನು ನೋಡುತ್ತ ಮುಂದೆ ನಡೆದನು.

೨೨. ಚಂದ್ರನ ಕಿರಣಗಳಂತೆ ಶುಭ್ರವಾದ ಕಾಶೆಯ ಹುಲ್ಲಿನಿಂದಲೂ, ಬಗೆಬಗೆಯ ಆಕಾರದ ದೊಡ್ಡ ದೊಡ್ಡ ಮರಗಳಿಂದಲೂ ಆ ನದಿಯ ತೀರಪ್ರದೇಶವು ರಮ್ಯವಾಗಿತ್ತು. ಹಲವರು ಬ್ರಾಹ್ಮಣರೂ ದೇವತೆಗಳೂ ಸ್ನಾನಪಾನಾದಿಗಳನ್ನು ಮಾಡುತ್ತ ಅದನ್ನು ಸೇವಿಸುತ್ತಿದ್ದರು.

ಯಾ ಚ ಸದಾ ಸಕಲಾಘವಿನಾಶಂ
ಭಕ್ತಜನಸ್ಯ ಕರೋತ್ಯಚಿರೇಣ ।
ಯಾಽನುಗತಾ ಸರಿತಾಂ ಹಿ ಕದಂಬೈ
ರ್ಯಾಽನುಗತಾ ಸತತಂ ಹಿ ಮುನೀಂದ್ರೈಃ ॥೨೩॥

ಯಾ ಹಿ ಸುತಾನಿವ ಪಾತಿ ಮನುಷ್ಯಾನ್
ಯಾ ಚ ಯುತಾ ಸತತಂ ಹಿಮಸಂಘೈಃ ।
ಯಾ ಚ ಯುತಾ ಸತತಂ ಸುರವೃಂದೈ
ರ್ಯಾ ಚ ಜನೈಃ ಸ್ವಹಿತಾಯ ಶ್ರಿತಾ ವೈ ॥೨೪॥

ಯುಕ್ತಾ ಚ ಕೇಸರಿಗಣೈಃ ಕರಿವೃಂದಜುಷ್ಟಾ
ಸಂತಾನಯುಕ್ತಸಲಿಲಾಽಪಿ ಸುವರ್ಣಯುಕ್ತಾ ।

---

೨೩. ಆ ನದಿಯು ಭಕ್ತಜನರ ಪಾಪಗಳನ್ನೆಲ್ಲ ಎಡೆಬಿಡದೆ ಕಳೆಯುವುದು. ಎಷ್ಟೋ ನದಿಗಳು ಹರಿದು ಬಂದು ಅದರೊಡನೆ ಕೂಡುವುವು. ಮುನೀಂದ್ರರು ಯಾವಾಗಲೂ ಅದನ್ನು ಪೂಜಿಸುತ್ತಿರುವರು.

೨೪. ಅದು ಮನುಜರನ್ನು ಮಕ್ಕಳಂತೆ ರಕ್ಷಿಸುತ್ತಿದೆ. ಹಿಮಪಙ್ಕ್ತಿಯು ಅದನ್ನು ಯಾವಾಗಲೂ ಆವರಿಸಿದೆ. ದೇವಗಣವು ಸದಾ ಅಲ್ಲಿ ನೆರೆದಿದೆ. ಜನವು ತನ್ನ ಹಿತಸಾಧನೆಗಾಗಿ ಅದನ್ನು ಓಲೈಸುತ್ತಿದೆ.

೨೫. ಸಿಹ್ಮಗಳು ಗುಂಪುಗುಂಪಾಗಿದ್ದರೂ ಆ ನದಿಯಲ್ಲಿ ಆನೆಗಳು ಹಿಂಡುಗಟ್ಟಿಕೊಂಡಿದ್ದುವು. ನೀರು ಸೊರೆಯಿಂದ ತುಂಬಿದ್ದರೂ ಬಂಗಾರದಿಂದ ಕೂಡಿತ್ತು. ಈ ಎರಡು ವಾಕ್ಯಗಳಲ್ಲಿಯೂ ಪರಸ್ಪರ ವಿರುದ್ಧವಾದ ಅರ್ಥವು ಉಕ್ತವಾಗಿದೆ. ಅದರ ಪರಿಹಾರವೆಂತೆಂದರೆ—ಕೇಸರ ವೃಕ್ಷಗಳು ಯಥೇಚ್ಛವಾಗಿ ಬೆಳೆದಿದ್ದುವು. ಆನೆಗಳ ಹಿಂಡು ನೀರಾಟಕ್ಕಾಗಿ ಬರುತ್ತಿತ್ತು. ಕಲ್ಪವೃಕ್ಷಗಳ ಹೂಗಳು ನೀರಿನಲ್ಲಿ ಕೊಚ್ಚಿಕೊಂಡು ಬರುತ್ತಿದ್ದುವು. ಅದರಿಂದ ನೀರಿನ ಬಣ್ಣವು ಅಂದವಾಗಿ ಕಾಣುತ್ತಿತ್ತು. ಸೂರ್ಯನ ಕಿರಣಗಳು ಬೆಚ್ಚಗೆ ಹಿತಕರವಾಗಿದ್ದುದರಿಂದ ಕದಂಬ

**ಸೂರ್ಯಾಂಶುತಾಪಪರಿವೃದ್ಧಕದಂಬವೃಕ್ಷಾ**
**ಶೀತಾಂಶುತುಲ್ಯಯಶಸಾ ದದೃಶೇ ನೃಪೇಣ ॥೨೫॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಭುವನಕೋಶೇ ಸುರನದೀವರ್ಣನಂ ನಾಮ ಷೋಡಶಾಧಿಕ ಶತತಮೋಽಧ್ಯಾಯಃ**

---

ವೃಕ್ಷಗಳು ಸೊಂಪಾಗಿ ಕಂಗೊಳಿಸುತ್ತಿದ್ದುವು. ಚಂದ್ರನಂತೆ ನಿರ್ಮಲವಾದ ಕೀರ್ತಿಯಿಂದ ರಂಜಿಸುತ್ತಿದ್ದ ಆ ರಾಜನು ನದಿಯನ್ನು ನೋಡಿದನು.

### ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಐರಾವತೀ ನದಿಯನ್ನು ವರ್ಣಿಸಿದೆ.

ತಪಸ್ಸಿಗಾಗಿ ಹಿಮವತ್ಪರ್ವತಕ್ಕೆ ಹೋದ ಪುರೂರವರಾಜನು ದಾರಿಯಲ್ಲಿ ಐರಾವತಿಯೆಂಬ ನದಿಯನ್ನು ಕಂಡನಷ್ಟೆ. ಅದು ಎಲ್ಲರ ಪಾಪಗಳನ್ನೂ ಪರಿಹರಿಸುತ್ತಿತ್ತು. ದೇವತೆಗಳೂ, ಬ್ರಾಹ್ಮಣರೂ, ತಪಸ್ವಿಗಳೂ ಅದನ್ನು ಎಡೆಬಿಡದೆ ಸೇವಿಸುತ್ತಿದ್ದರು. ಅದು ಬಹು ಮನೋಹರವಾಗಿತ್ತು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಭುವನಕೋಶದೊಳಗೆ ಸುರನದೀ ವರ್ಣನವೆಂಬ ನೂರ ಹದಿನಾರನೆಯ ಅಧ್ಯಾಯವು ಮುಗಿದುದು.

## ಅಥ ಸಪ್ತದಶಾಧಿಕಶತತಮೋಽಧ್ಯಾಯಃ

॥ ಸೂತ ಉವಾಚ ॥

ಆಲೋಕಯನ್ನದೀಂ ಪುಣ್ಯಾಂ ತತ್ಸಮೀರಹೃತಶ್ರಮಃ ।
ಸ ಗಚ್ಛನ್ನೇವ ದದೃಶೇ ಹಿಮವಂತಂ ಮಹಾಗಿರಿಂ ॥ ೧ ॥

ಖಮುಲ್ಲಿಖದ್ಭಿರ್ಬಹುಭಿರ್ವೃತಂ ಶೃಂಗೈಸ್ತು ಪಾಂಡುರೈಃ ।
ಪಕ್ಷಿಣಾಮಪಿ ಸಂಚಾರೈರ್ವಿನಾ ಸಿದ್ಧಗತಿಂ ಶುಭಾಂ ॥ ೨ ॥

ನದೀಪ್ರವಾಹಸಂಜಾತಮಹಾಶಬ್ದೈಃ ಸಮಂತತಃ ।
ಅಸಂಶ್ರುತಾನ್ಯಶಬ್ದಂ ತಂ ಶೀತತೋಯಂ ಮನೋರಮಂ ॥ ೩ ॥

ದೇವದಾರುವನೈರ್ನೀಲೈಃ ಕೃತಾಧೋವಸನಂ ಶುಭಂ ।
ಮೇಘೋತ್ತರೀಯಕಂ ಶೈಲಂ ದದೃಶೇ ಸ ನರಾಧಿಪಃ ॥ ೪ ॥

---

೧. ಸೂತಪೌರಾಣಿಕನು ಹೇಳಿದನು.—ಆ ನದಿಯನ್ನು ಕಂಡು ಪುರೂರವ ಮಹಾರಾಜನಿಗೆ ಆನಂದವಾಯಿತು. ಅದರ ತಂಗಾಳಿಯಿಂದ ಅವನ ಆಯಾಸವು ಪರಿಹಾರವಾಯಿತು. ಹಾಗೆಯೇ ಮುಂದೆ ಹೋಗುತ್ತ ಅವನು ಹಿಮವತ್ಪರ್ವತವನ್ನು ನೋಡಿದನು.

೨. ಅದರ ಬಿಳಿಯ ಶಿಖರಗಳು ಆಕಾಶವನ್ನು ಮುಟ್ಟುತ್ತಿದ್ದುವು. ಪಕ್ಷಿಗಳು ಕೂಡ ಅಲ್ಲಿ ಸಂಚರಿಸುತ್ತಿರಲಿಲ್ಲ. ತಪಸ್ಸಿನಲ್ಲಿ ಸಿದ್ಧಿಯನ್ನು ಪಡೆದವರಿಗೆ ಮಾತ್ರ ಅಲ್ಲಿ ಸಂಚಾರವು ಸಾಧ್ಯವಾಗಿತ್ತು.

೩. ಎತ್ತ ಕಡೆ ನೋಡಿದರೂ ನದಿಗಳ ಪ್ರವಾಹದ ಅಬ್ಬರವು ಹೊರತು ಮತ್ತಾವ ಸದ್ದೂ ಕೇಳಿ ಬರುತ್ತಿರಲಿಲ್ಲ. ಅಲ್ಲಿನ ನೀರು ತಣ್ಣಗೆ ಕೊರೆಯುತ್ತಿತ್ತು. ಆ ಪ್ರದೇಶವು ಬಹು ಮನೋಹರವಾಗಿತ್ತು.

೪. ಆ ರಾಜನ ಕಣ್ಣಿಗೆ ಹಚ್ಚಗಿರುವ ದೇವದಾರುವನವು ಆ ಪರ್ವತವು ಉಟ್ಟುಕೊಂಡಿರುವ ಪಂಚೆಯಂತಿತ್ತು. ಮೇಘಮಾಲೆಯಾದರೋ, ಮೇಲಕ್ಕೆ ಹೊದೆದುಕೊಂಡಿರುವ ಧೋತ್ರವೆನ್ನುವ ಹಾಗಿದ್ದಿತು.

**ಶ್ವೇತಮೇಘಕೃತೋಷ್ಣೀಷಂ ಚಂದ್ರಾರ್ಕಮುಕುಟಂ ಕ್ವಚಿತ್ ।**
**ಹಿಮಾನುಲಿಪ್ತಸರ್ವಾಂಗಂ ಕ್ವಚಿದ್ಧಾತುವಿಮಿಶ್ರಿತಂ ॥ ೫ ॥**

**ಚಂದನೇನಾನುಲಿಪ್ತಾಂಗಂ ದತ್ತಪಂಚಾಗುಲಂ ಯಥಾ ।**
**ಶೀತಪ್ರದಂ ನಿದಾಘೇಽಪಿ ಶಿಲಾವಿಕಟಸಂಕಟಂ ।**
**ಸಾಲಕ್ತಕೈರಪ್ಸರಸಾಂ ಮುದ್ರಿತಂ ಚರಣೈಃ ಕ್ವಚಿತ್ ॥ ೬ ॥**

**ಕ್ವಚಿತ್ಸಂಸ್ಪೃಷ್ಟಸೂರ್ಯಾಂಶುಂ ಕ್ವಚಿಚ್ಚ ತಮಸಾವೃತಂ ।**
**ದರೀಮುಖೈಃ ಕ್ವಚಿದ್ಭೀಮೈಃ ಪಿಬಂತಂ ಸಲಿಲಂ ಮಹತ್ ॥ ೭ ॥**

**ಕ್ವಚಿದ್ವಿದ್ಯಾಧರಗಣೈಃ ಕ್ರೀಡದ್ಭಿರುಪಶೋಭಿತಂ ।**
**ಉಪಗೀತಂ ತಥಾ ಮುಖ್ಯೈಃ ಕಿನ್ನರಾಣಾಂ ಗಣೈಃ ಕ್ವಚಿತ್ ॥ ೮ ॥**

---

೫-೬. ಬಿಳಿಯ ಮೋಡವು ತಲೆಗೆ ಹಾಕಿಕೊಂಡ ರುಮಾಲನ್ನು ಹೋಲುತ್ತಿತ್ತು. ಚಂದ್ರಸೂರ್ಯರು ಕಿರೀಟದ ಹಾಗೆ ತೋರುತ್ತಿದ್ದರು. ಮಂಜು ಮೈಗೆಲ್ಲ ಹಚ್ಚಿಕೊಂಡ ಪಚ್ಚಕರ್ಪೂರವೆನ್ನುವಂತಿತ್ತು ಒಂದೊಂದು ಕಡೆಯಲ್ಲಿ ಕಾವಿಯ ಕಲ್ಲು ಮೊದಲಾದ ಬಗೆಬಗೆಯ ಧಾತುಗಳು ಕಾಣುತ್ತಿದ್ದುವು. ಇದನ್ನು ನೋಡಿದರೆ ಐದು ಬೆರಳುಗಳ ಪಟ್ಟೆ ಕಾಣುವಂತೆ ಶ್ರೀಗಂಧವನ್ನು ಮೈಗೆ ಲೇಪಿಸಿಕೊಂಡಿರುವನೋ ಎನ್ನುವಂತಿತ್ತು. ಬೇಸಗೆಯಲ್ಲಿ ಕೂಡ ಆ ಪರ್ವತದಲ್ಲಿ ಚಳಿಯಾಗುತ್ತಿತ್ತು. ದೊಡ್ಡ ದೊಡ್ಡ ಬಂಡೆಗಳು ಒತ್ತೊತ್ತಾಗಿದ್ದುವು. ಒಂದೊಂದು ಕಡೆಯಲ್ಲಿ ಅಪ್ಸರಸ್ತ್ರೀಯರು ಅರಗುಹಚ್ಚಿದ ತಮ್ಮ ಹೆಜ್ಜೆಗಳನ್ನು ನೆಲದ ಮೇಲೆ ಊರಿದ್ದರು.

೭. ಆ ಪರ್ವತದಲ್ಲಿ ಒಂದು ಕಡೆ ಸೂರ್ಯನ ಬೆಳಕು ಬೀಳುತ್ತಿತ್ತು; ಇನ್ನೊಂದು ಕಡೆ ಕತ್ತಲು ಕವಿದುಕೊಂಡಿತ್ತು. ಮತ್ತೊಂದು ಕಡೆ ಗುಹೆಗಳೊಳಗೆ ನೀರು ನುಗ್ಗುತ್ತಿತ್ತು. ಇದನ್ನು ನೋಡಿದರೆ ಪರ್ವತರಾಜನು ತನ್ನ ಬಾಯಿಂದ ನೀರನ್ನು ಕುಡಿಯುತ್ತಿರುವನೋ ಎಂದು ತೋರುತ್ತಿತ್ತು.

೮-೯. ಈ ಕಡೆ ವಿದ್ಯಾಧರರು ಕ್ರೀಡಿಸುತ್ತಿದ್ದರು; ಆ ಕಡೆ ಸುಪ್ರಸಿದ್ಧರಾದ ಕಿನ್ನರರು ಗಾನಮಾಡುತ್ತಿದ್ದರು. ಬೇರೊಂದು ಕಡೆ ಗಂಧರ್ವರೂ ಅಪ್ಸರಸ್ತ್ರೀಯರೂ

**ಆಪಾನಭೂಮೌ ಗಲಿತೈರ್ಗಂಧರ್ವಾಪ್ಸರಸಾಂ ಕ್ವಚಿತ್ ।**
**ಪುಷ್ಪೈಃ ಸಂತಾನಕಾದೀನಾಂ ದಿವ್ಯೈಸ್ತಮುಪಶೋಭಿತಂ ॥ ೯ ॥**

**ಸುಪ್ತೋತ್ಥಿತಾಭಿಃ ಶಯ್ಯಾಭಿಃ ಕುಸುಮಾನಾಂ ತಥಾ ಕ್ವಚಿತ್ ।**
**ಮೃದಿತಾಭಿಃ ಸಮಾಕೀರ್ಣಂ ಗಂಧರ್ವಾಣಾಂ ಮನೋರಮಂ ॥೧೦॥**

**ನಿರುದ್ಧಪವನೈರ್ದೇಶೈರ್ನೀಲಶಾದ್ವಲಮಂಡಿತೈಃ ।**
**ಕ್ವಚಿಚ್ಚ ಕುಸುಮೈರ್ಯುಕ್ತಮತ್ಯಂತರುಚಿರಂ ಶುಭಂ ॥೧೧॥**

**ತಪಸ್ವಿಶರಣಂ ಶೈಲಂ ಕಾಮಿನಾಮತಿದುರ್ಲಭಂ ।**
**ಮೃಗೈರ್ಯಥಾನುಚರಿತಂ ದಂತಿಭಿನ್ನಮಹಾದ್ರುಮಂ ॥೧೨॥**

**ಯತ್ರ ಸಿಂಹನಿನಾದೇನ ತ್ರಸ್ತಾನಾಂ ಭೈರವಂ ರವಂ ।**
**ದೃಶ್ಯತೇ ನ ಚ ಸಂಭ್ರಾಂತಂ ಗಜಾನಾಮಾಕುಲಂ ಕುಲಂ ॥೧೩॥**

---

ಕೂಡಿ ಮಧುಪಾನ ಮಾಡುತ್ತಿದ್ದರು. ಅವರು ಮುಡಿದಿದ್ದ ಪಾರಿಜಾತ ಮೊದಲಾದ ಹೂಗಳು ಜಾರಿಬಿದ್ದು ನೆಲದ ಮೇಲೆ ಮನೋಹರವಾಗಿ ಶೋಭಿಸುತ್ತಿದ್ದುವು.

೧೦. ಗಂಧರ್ವರು ನಿದ್ರೆಮಾಡಿ, ಎಚ್ಚೆತ್ತು ಬಿಟ್ಟುಹೋದ ಹಾಸಿಗೆಗಳು ಅಲ್ಲಲ್ಲಿ ಗೋಚರವಾಗುತ್ತಿದ್ದವು. ಅವುಗಳ ಮೇಲೆ ಹರಡಿದ್ದ ಹೂಗಳೆಲ್ಲ ಕಸಕಿ ಹೋಗಿದ್ದುವು.

೧೧. ಒಂದು ಕಡೆ ಗಾಳಿಯ ಸಂಚಾರವೇ ಇಲ್ಲ. ಇನ್ನೊಂದು ಕಡೆ ಹುಲ್ಲು ಹಸುರಾಗಿ ಬೆಳೆದು ಸೊಗಸಾಗಿತ್ತು. ಮತ್ತೊಂದು ಕಡೆ ಹೂಗಳು ಅರಳಿ ಬಹು ಮನೋಹರವಾಗಿದ್ದುವು.

೧೨. ಆ ಪರ್ವತವು ತಪಸ್ವಿಗಳಿಗೆ ಆಶ್ರಯವಾಗಿತ್ತು. ಕಾಮಿಜನಗಳಿಗಂತೂ ಅಂತಹ ಪ್ರದೇಶವು ಸಿಕ್ಕುವುದೇ ದುರ್ಲಭ. ಮೃಗಗಳು ಅಲ್ಲಿ ತಮ್ಮ ಇಷ್ಟ ಬಂದಂತೆ ತಿರುಗುತ್ತಿದ್ದುವು. ಕಾಡಾನೆಗಳು ದೊಡ್ಡದೊಡ್ಡ ಮರಗಳನ್ನು ಉರುಳಿಸಿದ್ದುವು.

೧೩. ಸಿಂಹದ ಗರ್ಜನೆಯನ್ನು ಕೇಳಿ, ಆನೆಗಳು ಹೆದರಿ ಗಾಬರಿಯಿಂದ ಗಟ್ಟಿಯಾಗಿ ಕೂಗಿಕೊಳ್ಳುತ್ತಿದ್ದವು. ಓಡಿ ಓಡಿ ದಣಿದು ಅವುಗಳ ಹಿಂಡು ಕಣ್ಣಿಗೆ ಕಾಣದಂತೆ ಎಲ್ಲಿಯೋ ಮರೆಯಾಯಿತು.

**ತಟೀಶ್ಚ ತಾಪಸೈರ್ಯತ್ರ ಕುಂಜದೇಶೈರಲಂಕೃತಾಃ ।**
**ರತ್ನೈರ್ಯಸ್ಯ ಸಮುತ್ಪನ್ನೈಸ್ತ್ರೈಲೋಕ್ಯಂ ಸಮಲಂಕೃತಂ ||೧೪||**

**ಅಹೀನಶರಣಂ ನಿತ್ಯಮಹೀನಜನಸೇವಿತಂ ।**
**ಅಹೀನಃ ಪಶ್ಯತಿ ಗಿರಿಮಹೀನಂ ರತ್ನಸಂಪದಾ ||೧೫||**

**ಅಲ್ಪೇನ ತಪಸಾ ಯತ್ರ ಸಿದ್ಧಿಂ ಪ್ರಾಪ್ಸ್ಯಂತಿ ತಾಪಸಾಃ ।**
**ಯಸ್ಯ ದರ್ಶನಮಾತ್ರೇಣ ಸರ್ವಕಲ್ಮಷನಾಶನಂ ||೧೬||**

**ಮಹಾಪ್ರಪಾತಸಂಪಾತಪ್ರಪಾತಾದಿಗತಾಂಬುಭಿಃ ।**
**ವಾಯುನೀತೈಃ ಸದಾ ತೃಪ್ತಿಕೃತದೇಶಂ ಕ್ವಚಿತ್ಕ್ವಚಿತ್ ||೧೭||**

**ಸಮಾಲಬ್ಧಜಲೈಃ ಶೃಂಗೈಃ ಕ್ವಚಿಚ್ಚಾಪಿ ಸಮುಚ್ಛ್ರಿತೈಃ ।**
**ನಿತ್ಯಾರ್ಕತಾಪವಿಷಮೈರಗಮ್ಯೈರ್ಮನಸಾ ಯುತಂ ||೧೮||**

---

೧೪. ತಪ್ಪಲಿನಲ್ಲಿ ಮುನಿಜನರು ವಾಸಿಸುತ್ತಿದ್ದರು. ಅಲ್ಲಲ್ಲಿ ಲತಾಗೃಹಗಳು ಸುಂದರವಾಗಿದ್ದುವು. ಆ ಬೆಟ್ಟದಲ್ಲಿ ಉತ್ಪನ್ನವಾದ ರತ್ನಗಳನ್ನು ಮೂರು ಲೋಕಗಳಿಗೂ ಅಲಂಕಾರಕ್ಕಾಗಿ ಕೊಂಡೊಯ್ಯುತ್ತಿದ್ದರು.

೧೫. ಶ್ರೇಷ್ಠವಾದ ಸರ್ಪಗಳಿಗೆ ಅದು ನೆಲೆಮನೆಯಾಗಿದ್ದಿತು. ಮಹಾತ್ಮರು ನಿತ್ಯವೂ ಅದನ್ನು ಸೇವಿಸುತ್ತಿದ್ದರು. ವಜ್ರ ವೈಡೂರ್ಯಾದಿಗಳಿಂದ ಸಮೃದ್ಧವಾದ ಆ ಪರ್ವತವನ್ನು ನೋಡಬೇಕಾದರೆ ಪುಣ್ಯವಿರಬೇಕು.

೧೬. ತಾಪಸರು ಅಲ್ಪಕಾಲದ ತಪಸ್ಸಿನಿಂದಲೇ ಅಲ್ಲಿ ಸಿದ್ಧಿಯನ್ನು ಪಡೆಯುವರು. ಅದರ ದರ್ಶನ ಮಾತ್ರದಿಂದ ಪಾಪಗಳೆಲ್ಲ ಪರಿಹಾರವಾಗುವುವು.

೧೭. ದೊಡ್ಡದೊಡ್ಡ ಕಮರಿಗಳು, ಹಳ್ಳಗಳು, ಜಲಪಾತಗಳು ಇವುಗಳಲ್ಲಿರುವ ನೀರಿನ ತುಂತುರನ್ನು ಹೊತ್ತುತಂದು ವಾಯುವು ಆ ಪ್ರದೇಶಕ್ಕೆಲ್ಲ ಆನಂದವನ್ನು ಬೀರುವುದು.

೧೮. ಬಲು ಎತ್ತರವಾದ ಶಿಖರಗಳ ತುದಿಯಲ್ಲಿ ಕೂಡ ಒಂದೊಂದು ಕಡೆ ನೀರು ನಿಂತಿರುವುದು. ಅಲ್ಲಿ ಸೂರ್ಯನ ತಾಪವು ದುಸ್ಸಹವಾಗಿರುವುದು. ಅಲ್ಲಿಗೆ ಹೋಗುವ ಯೋಚನೆಯನ್ನು ಮನಸ್ಸಿನಲ್ಲಿ ಸಹ ಮಾಡಲು ಸಾಧ್ಯವಾಗದು.

ದೇವದಾರುಮಹಾವೃಕ್ಷವ್ರಜಶಾಖಾನಿರಂತರೈಃ ।
ವಂಶಸ್ತಂಬನವಾಕಾರೈಃ ಪ್ರದೇಶೈರುಪಶೋಭಿತಂ ॥೧೯॥

ಹಿಮಚ್ಛತ್ರಮಹಾಶೃಂಗಂ ಪ್ರಪಾತಶತನಿರ್ಝರಂ ।
ಶಬ್ದಲಭ್ಯಾಂಬುವಿಷಮಂ ಹಿಮಸಂರುದ್ಧಕಂದರಂ ॥೨೦॥

ದೃಷ್ಟ್ವೈವ ತಂ ಚಾರುನಿತಂಬಭೂಮಿಂ
ಮಹಾನುಭಾವಃ ಸ ತು ಮದ್ರನಾಥಃ ।
ಬಭ್ರಾಮ ತತ್ರೈವ ಮುದಾ ಸಮೇತಃ
ಸ್ಥಾನಂ ತದಾ ಕಿಂಚಿದಥಾಸಸಾದ ॥೨೧॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಭುವನಕೋಶೇ
ಹಿಮವದ್ವರ್ಣನಂ ನಾಮ ಸಪ್ತದಶಾಧಿಕ ಶತತಮೋಽಧ್ಯಾಯಃ

---

೧೯. ಅತ್ಯುನ್ನತವಾದ ದೇವದಾರು ವೃಕ್ಷಗಳ ಕೊಂಬೆಗಳು ನಾಲ್ಕು ಕಡೆಗೂ ದಟ್ಟವಾಗಿ ವ್ಯಾಪಿಸಿರುವುವು. ಇವುಗಳಿಂದ ಆ ವನ ಪ್ರದೇಶವು ಮನೋಹರವಾಗಿ ಕಾಣುವುದು.

೨೦. ಆ ಪರ್ವತದ ಎತ್ತರವಾದ ಶಿಖರಗಳು ಹಿಮದಲ್ಲಿ ಮುಚ್ಚಿಹೋಗಿವೆ. ನೂರಾರು ಜಲಪಾತಗಳೂ, ಗಿರಿಝರಿಗಳೂ ಕಂಗೊಳಿಸುತ್ತಿವೆ. ಒಂದೊಂದು ಕಡೆ ನೀರೆಂಬುದು ಮಾತಿನಲ್ಲಿ ಹೊರತು ನಿಜವಾಗಿ ಸಿಕ್ಕದು. ಗುಹೆಗಳು ಮಂಜಿನಲ್ಲಿ ಹೂತುಹೋಗಿವೆ. ಇಂತಹ ವಿಷಮ ಪ್ರದೇಶವದು.

೨೧. ಮಹಾಮಹಿಮನೂ ಮದ್ರಭೂಪಾಲನೂ ಆದ ಪುರೂರವ ಮಹಾರಾಜನು ಸುಂದರವಾದ ಆ ತಪ್ಪಲು ನೆಲವನ್ನು ಕಂಡು, ಸಂತೋಷದಿಂದ ಅಲ್ಲೇ ಓಡಾಡುತ್ತ ಒಂದಾನೊಂದು ಸ್ಥಳಕ್ಕೆ ಬಂದನು.

## ಅಧ್ಯಾಯದ ಸಾರಾಂಶ

ಪುರೂರವ ಮಹಾರಾಜನು ಹಿಮಗಿರಿಯನ್ನು ಕಂಡು ಬೆರಗಾದನು. ಅದು ಗಗನವನ್ನು ಮುಟ್ಟುತ್ತಿತ್ತು. ಅದರ ತಪ್ಪಲು ನೆಲವು ಹಸುರಾದ ಕಾಡುಗಳಿಂದಲೂ, ಗಿರಿಝರಿಗಳಿಂದಲೂ, ಪುಷ್ಪಲತೆಗಳಿಂದಲೂ ವಿರಾಜಿಸುತ್ತಿತ್ತು. ಆ ರಾಜನು ಸಂತೋಷದಿಂದ ಅಲ್ಲಲ್ಲಿ ಓಡಾಡುತ್ತ ಕೊನೆಗೆ ಒಂದಾನೊಂದು ಸ್ಥಳಕ್ಕೆ ಬಂದು ಸೇರಿದನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಭುವನಕೋಶದೊಳಗೆ ಹಿಮವದ್ವರ್ಣನವೆಂಬ
ನೂರ ಹದಿನೇಳನೆಯ ಅಧ್ಯಾಯವು ಮುಗಿದುದು.



## ಅಥಾಷ್ಟಾದಶಾಧಿಕಶತತಮೋಽಧ್ಯಾಯಃ

|| ಸೂತ ಉವಾಚ ||

ತಸ್ಯೈವ ಪರ್ವತೇಂದ್ರಸ್ಯ ಪ್ರದೇಶಂ ಸುಮನೋಹರಂ ।
ಅಗಮ್ಯಂ ಮಾನುಷ್ಯೈರನ್ಯೈರ್ದೇವಯೋಗಾದುಪಾಗತಃ || ೧ ||

ಐರಾವತೀ ಸರಿಚ್ಛ್ರೇಷ್ಠಾ ಯಸ್ಮಾದ್ದೇಶಾದ್ವಿನಿರ್ಗತಾ ।
ಮೇಘಶ್ಯಾಮಂ ಚ ತಂ ದೇಶಂ ದ್ರುಮಖಂಡೈರನೇಕಶಃ || ೨ ||

ಶಾಲೈಸ್ತಾಲೈಸ್ತಮಾಲೈಶ್ಚ ಕರ್ಣಿಕಾರೈಃ ಸುಶಾಲ್ಮಲೈಃ ।
ನ್ಯಗ್ರೋಧೈಶ್ಚ ತಥಾಶ್ವತ್ಥೈಃ ಶಿರೀಷೈಃ ಶಿಂಶಪಾದ್ರುಮೈಃ || ೩ ||

ಶ್ಲೇಷ್ಮಾತಕೈರಾಮಲಕೈರ್ಹರೀತಕಬಿಭೀತಕೈಃ ।
ಭೂರ್ಜೈಃ ಸಮುಂಜಕೈರ್ಬಾಣೈರ್ವೃಕ್ಷೈಃ ಸಪ್ತಚ್ಛದದ್ರುಮೈಃ || ೪ ||

ಪದ್ಮಕೈಶ್ಚಂದನೈರ್ಬಿಲ್ವೈಃ ಕಪಿತ್ಥೈ ರಕ್ತಚಂದನೈಃ ।
ಮಾತಾಮ್ರರಿಷ್ಟಕಾಕ್ಷೋಟೈರಬ್ದಕೈಶ್ಚ ತಥಾರ್ಜುನೈಃ || ೫ ||

---

೧. ಸೂತ ಪೌರಾಣಿಕನು ಹೇಳಿದನು.—ಮದ್ರದೇಶಾಧಿಪತಿಯಾದ ಪುರೂರವನು ಹಿಮವತ್ಪರ್ವತದ ರಮಣೀಯವಾದ ಆ ಪ್ರದೇಶಕ್ಕೆ ದೈವಯೋಗದಿಂದ ಬಂದು ಸೇರಿದನು. ಏಕೆಂದರೆ ಸಾಮಾನ್ಯರಾದ ಮನುಷ್ಯರು ಅಲ್ಲಿಗೆ ಪ್ರವೇಶಿಸುವಂತಿರಲಿಲ್ಲ.

೨. ನದಿಗಳಲ್ಲಿ ಶ್ರೇಷ್ಠವಾದ ಐರಾವತಿಯು ಹುಟ್ಟುವ ಸ್ಥಳವೇ ಅದು. ಒತ್ತೊತ್ತಾಗಿ ಬೆಳೆದ ಮರಗಳಿಂದ ಅದು ಮೋಡದಂತೆ ನೀಲಿಯ ಬಣ್ಣವನ್ನು ತಾಳಿದ್ದಿತು.

೩-೬. ಆ ಪರ್ವತಪ್ರಾಂತದಲ್ಲಿ ಸಾಲ, ತಾಳೆ, ಹೊಂಗೆ, ಬೆಟ್ಟದಾವರೆ, ಬೂರಗ, ಆಲ, ಅರಳಿ, ಬಾಗೆ, ಶಿಂಶಪ, ನೆಲ್ಲಿ, ಚಳ್ಳೆ, ಅಳಲೆ, ತಾರೆ, ಭುಜಪತ್ರೆ, ಮುಂಜಕ, ಕರೀಗೋರಂಟೆ, ಏಳಿಲೆಯ ಬಾಳೆ, ಪದ್ಮಕ, ಶ್ರೀಗಂಧ, ಬಿಲ್ವ, ಬೇಲ,

ಮಹಾನಿಂಬೈಸ್ತಥಾ ನಿಂಬೈರ್ನಿರ್ಗುಂಡೀಭಿರ್ಹರಿದ್ರುಮೈಃ ।
ದೇವದಾರುಮಹಾವೃಕ್ಷೈಸ್ತಥಾ ಕಾಲೇಯಕದ್ರುಮೈಃ ॥ ೬ ॥

ಹಸ್ತಿಕರ್ಣೈಃ ಸುಮನಸೈಃ ಕೋವಿದಾರೈಃ ಸುಪುಷ್ಪಿತೈಃ ।
ಪ್ರಾಚೀನಾಮಲಕೈಶ್ಚಾಽಪಿ ಧನಕೈಃ ಸಮರಾಟಕೈಃ ॥ ೭ ॥

ಖರ್ಜೂರೈರ್ನಾರಿಕೇಲೈಶ್ಚ ಪ್ರಿಯಾಲಾಮ್ರಾತಕೇಂಗುದೈಃ ।
ತಂತುಮಾಲೈರ್ಧವೈರ್ಭವ್ಯೈಃ ಕಾಶ್ಮೀರೀಪರ್ಣಿಭಿಸ್ತಥಾ ॥ ೮ ॥

ಜಾತೀಫಲೈಃ ಪೂಗಫಲೈಃ ಕಟ್ಫಲೈರ್ಲವಲೀಫಲೈಃ ।
ಮಂದಾರೈಃ ಕೋವಿದಾರೈಶ್ಚ ಕಿಂಶುಕೈಃ ಕುಸುಮಾಂಶುಕೈಃ ॥ ೯ ॥

ಯವಾಸೈಃ ಶಮಿಪರ್ಣಾಸೈರ್ವೇತಸೈರಂಬುವೇತಸೈಃ ಃ
ರಕ್ತಾತಿರಿಂಗನಾರಂಗೈರ್ಹಿಂಗುಭಿಃ ಸಪ್ರಿಯಂಗುಭಿಃ ॥೧೦॥

ರಕ್ತಾಶೋಕೈಸ್ತಥಾಽಶೋಕೈರಾಕಲ್ಲೈರವಿಚಾರಕೈಃ ।
ಮುಚುಕುಂದೈಸ್ತಥಾ ಕುಂದೈರಾಟರೂಷಪರೂಷಕೈಃ ॥೧೧॥

---

ಕೆಂಪುಗಂಧ, ಹೆಬ್ಬೇವು, ಬೇವು, ಲಕ್ಕಿ, ಹರಿಚಂದನ, ದೇವದಾರು, ಮರದರಸಿನ ಮೊದಲಾದ ಮರಗಳು ಬೆಳೆದಿದ್ದುವು.

೭-೯. ಗಜಕರ್ಣ, ಜಾಜಿ, ಕುಸುಮಿತವಾದ ಕೋವಿದಾರ, ಅಗಳುಶುಂಠಿ, ಧನಕ, ಮರಾಟಕ, ಖರ್ಜೂರ, ತೆಂಗು, ಮೊರಟೆ, ಅಂಬಟೆ, ಗಾರೆ, ತಂತುಮಾಲ, ಧವ, ಭವ, ಶಿವನೆ, ಜಾತಿ, ಅಡಕೆ, ತೇಗ, ಲವಲಿ, ಮಂದಾರ, ಕಂಚುವಾಳ, ಹೂಗಳಿಂದ ಕೆಂಪು ಬಟ್ಟೆಯನ್ನು ಉಟ್ಟಹಾಗೆ ತೋರುತ್ತಿರುವ ಮುತ್ತಗ ಈ ಮರಗಳಿಂದ ಆ ಸ್ಥಳವು ಕಂಗೊಳಿಸುತ್ತಿತ್ತು.

೧೦-೧೩. ನಸುಗುನ್ನಿ, ಬನ್ನಿ, ಕಮ್ಮಗಸ್ಗರೆ, ಹಬ್ಬೆ, ನೀರುಹಬ್ಬೆ, ಬಂಧುಕ, ಅತಿರಿಂಗ, ಕಿತ್ತಳೆ, ಇಂಗು ಪ್ರಿಯಂಗು, ಕೆಂಪುಅಸುಗೆ, ಅಸುಗೆ, ಆಕಲ್ಲ, ಅವಿಚಾರಕ, ಮುಚುಕುಂದ, ಮೊಲ್ಲೆ, ಆಟರೂಷ, ಪರೂಷಕ, ನೆಲಬೇವು, ಕಿಂಕಿರಾತ,

ಕಿರಾತೈಃ ಕಂಕಿರಾತೈಶ್ಚ ಕೇತಕ್ಯೈಃ ಶ್ವೇತಕೇತಕ್ಯೈಃ ।
ಸೋಭಾಂಜನ್ಯೈರಂಜನ್ಯೈಶ್ಚ ಸುಕಲಿಂಗನಿಕೋಟಕ್ಯೈಃ ॥೧೨॥

ಸುವರ್ಣಚಾರುವಸನ್ಯೈರ್ದ್ರುಮಶ್ರೇಷ್ಠೈಸ್ತಥಾಽಽಸನ್ಯೈಃ ।
ಮನ್ಮಥಸ್ಯ ಶರಾಕಾರೈಃ ಸಹಕಾರೈರ್ಮನೋರಮ್ಯೈಃ ॥೧೩॥

ಪೀತಯೂಥಿಕಯಾ ಚೈವ ಶ್ವೇತಯೂಥಿಕಯಾ ತಥಾ ।
ಜಾತ್ಯಾ ಚಂಪಕಜಾತ್ಯಾ ಚ ತುಂಬರೈಶ್ಚಾಪ್ಯತುಂಬರೈಃ ॥೧೪॥

ಮೋಚೈರ್ಲೋಚೈಸ್ತು ಲಕುಚೈಸ್ತಿಲಪುಷ್ಪಕುಶೇಶಯೈಃ ।
ತಥಾ ಸುಪುಷ್ಪಾವರಣೈಶ್ಚ ವ್ಯಕ್ತೈಃ ಕಾಮಿವಲ್ಲಭೈಃ ॥೧೫॥

ಪುಷ್ಪಾಂಕುರೈಶ್ಚ ಬಕುಲೈಃ ಪಾರಿಭದ್ರಹರಿದ್ರಕೈಃ ।
ಧಾರಾಕದಂಬೈಃ ಕುಟಜೈಃ ಕದಂಬೈರ್ಗೌರಿಕೂಟಜೈಃ ॥೧೬॥

---

ತಾಳೆ, ಬಿಳಿಯತಾಳೆ, ಸೌಭಾಂಜನ, ಅಂಜನ, ಸುಕಲಿಂಗ ಮತ್ತು ನಿಕೋಟಕ ಗಳೆಂಬ ವೃಕ್ಷಗಳಿಂದ ಆ ಸ್ಥಲವು ರಮಣೀಯವಾಗಿತ್ತು.

೧೩. ಮನ್ಮಥನ ಬಾಣಗಳಂತೆಯೂ ಪೀಠಗಳಂತೆಯೂ ಶೋಭಿಸುತ್ತ ಚಿಗರು ಬಿಟ್ಟ ಸುಂದರವಾದ ಮಾವಿನ ಮರಗಳು ಮಿರುಮಿರುಗುವ ಜರತಾರಿ ವಸ್ತ್ರಗಳನ್ನು ಧರಿಸಿರುವುವೋ ಎನ್ನುವಂತೆ ತೋರುತ್ತಿದ್ದುವು.

೧೪-೧೫. ಹಳದಿಯ ಮತ್ತು ಬಿಳಿಯ ಕಾಡುಮಲ್ಲಿಗೆ ಹೂಗಳಿಂದಲೂ, ಜಾಜಿ ಮತ್ತು ಸಂಪಿಗೆ ಹೂಗಳಿಂದಲೂ, ತುಂಬರ ಮತ್ತು ಅತುಂಬರಗಳೆಂಬ ಪುಷ್ಪಗಳಿಂದಲೂ ಆ ವನಪ್ರದೇಶವು ಪರಿಮಳಯುಕ್ತವಾಗಿದ್ದಿತು. ಹೂವರಸೆ, ಲೋಚ, ನಿಂಬೆ, ಎಳ್ಳುಹೂ, ನೈದಿಲೆ, ಸೊಗಸಾಗಿ ಹೂಬಿಟ್ಟು ಕಾಮಿಜನರಿಗೆ ಪ್ರಿಯವಾಗಿರುವ ಗಜಹಿಪ್ಪಲಿ ಇವುಗಳು ಅಲ್ಲಿ ಚೆಲುವನ್ನು ಬೀರುತ್ತಿದ್ದುವು.

೧೬-೧೮. ಪುಷ್ಪಾಂಕುರ, ಪಗಡೆ, ಹಾಲಿವಾಣ, ಹರಿದ್ರಕ, ಧಾರಾಕದಂಬ, ಬೆಟ್ಟದ ಮಲ್ಲಿಗೆ, ಕದಂಬ, ಗೌರಿಕೂಟಜ, ಆದಿತ್ಯಮುಸ್ತಕ, ಕುಂಭ, ಕುಂಕುಮ,

ಆದಿತ್ಯಮುಸ್ತಕೈಃ ಕುಂಭೈಃ ಕುಂಕುಮೈಃ ಕಾಮವಲ್ಲಭೈಃ ।
ಕಟ್ಫಲೈರ್ಬದರೈರ್ನೀಪೈರ್ದೀಪೈರಿವ ಮಹೋಜ್ವಲೈಃ ॥೧೭॥

ರಕ್ತೈಃ ಪಾಲೀವನೈಃ ಶ್ವೇತೈರ್ದಾಡಿಮೈಶ್ಚಂಪಕದ್ರುಮೈಃ ।
ಬಂಧೂಕೈಶ್ಚ ಸಬಂಧೂಕೈಃ ಕುಂಜಕಾನಾಂ ತು ಜಾತಿಭಿಃ ॥೧೮॥

ಕುಸುಮೈಃ ಪಾಟಲಾಭಿಶ್ಚ ಮಲ್ಲಿಕಾಕರವೀರಕೈಃ ।
ಕುರವಕೈರ್ಹಿಮವರ್ಕೈರ್ಜಂಬೂಭಿರ್ನೃಪಜಂಬುಭಿಃ ॥೧೯॥

ಬೀಜಪೂರೈಃ ಸಕರ್ಪೂರೈರ್ಗುರುಭಿಶ್ಚಾಗುರುದ್ರುಮೈಃ ।
ಬಿಂಬೈಶ್ಚ ಪ್ರತಿಬಿಂಬೈಶ್ಚ ಸಂತಾನಕವಿತಾನಕೈಃ ॥೨೦॥

ತಥಾ ಗುಗ್ಗುಲವೃಕ್ಷೈಶ್ಚ ಹಿಂತಾಲಧವಲೇಕ್ಷುಭಿಃ ।
ತೃಣಶೂನ್ಯೈಃ ಕರವೀರೈರಶೋಕೈಶ್ಚ ಕ್ರಮುದರ್ನೈಃ ॥೨೧॥

ಪೀಲುಭಿರ್ಧಾತಕೀಭಿಶ್ಚ ಚಿರಿಬಿಲ್ವೈಃ ಸಮಾಕುಲೈಃ ।
ತಿಂತಿಡೀಕೈಸ್ತಥಾ ಲೋಧ್ರೈರ್ವಿಡಂಗೈಃ ಕ್ಷೀರಿಕಾದ್ರುಮೈಃ ॥೨೨॥

---

ಕಾಮವಲ್ಲಭ, ತೇಗ, ಎಲಚಿ, ದೀಪದಂತೆ ಬೆಳಗುವ ನೀಪ, ಕೆಂಪುಪಾಳಿ, ಬಿಳಿಯ ದಾಳಿಂಬೆ, ಸಂಪಿಗೆ, ಮತ್ತು ಬಂಧೂಕ ವೃಕ್ಷಗಳು ಮನೋಹರವಾಗಿ ಬೆಳೆದಿದ್ದುವು. ಬಗೆಬಗೆಯ ಲತಾಗೃಹಗಳು ಕಂಗೊಳಿಸಿದುವು.

೧೯-೨೦. ಮಲ್ಲಿಗೆ, ಕೇಪುಗಣಿಗಿಲೆ, ಕೆಂಪುಗೋರಂಟಿ ಮೊದಲಾದ ಹೂಗಳಿಂದಲೂ, ನೇರಿಳೆ, ಅರನೇರಿಳೆ, ಮಾದಳ, ಕರ್ಪೂರ ಮತ್ತು ಅಗಿಲು ಮರಗಳಿಂದಲೂ, ಪ್ರತಿಬಿಂಬ ಮತ್ತು ಸಂತಾನವೃಕ್ಷಗಳ ಸಮೂಹದಿಂದಲೂ ಆ ಅರಣ್ಯ ದೇಶವು ಶೋಭಿಸುತ್ತಿತ್ತು.

೨೧-೨೨. ಗುಗ್ಗುಲ, ಕಿರುತಾಳೆ, ರಸತಾಳೆ, ಗುರುಗಲು, ಕೆಂಪುಗಣಿಗಿಲೆ, ಅಶೋಕ, ತಗಚಿ, ಗೋಣಿ, ಧಾತಕಿ, ಹೊಂಗೆ, ಹುಣಿಸೆ, ಅರಗು, ವಾಯಿವಿಡಂಗ ಮತ್ತು ಹಾಲೆಗಿಡಗಳಿಂದ ಆ ಸ್ಥಳವು ಆವೃತವಾಗಿದ್ದಿತು.

ಅಶ್ಮಂತಕೈಸ್ತಥಾ ಕಾಲೈರ್ಜಂಬೀರೈಃ ಶ್ವೇತಕದ್ರುಮೈಃ ।
ಭಲ್ಲಾತಕೈರಿಂದ್ರಯವೈರ್ವಲ್ಗುಜೈಃ ಸಿದ್ಧಿಸಾಧಕೈಃ ॥೨೩॥

ಕರಮರ್ದೈಃ ಕಾಸಮರ್ದೈರರಿಷ್ಟಕವರಿಷ್ಟಕೈಃ ।
ರುದ್ರಾಕ್ಷೈರ್ದ್ರಾಕ್ಷಸಂಭೂತೈಃ ಸಪ್ತಾಹ್ವೈಃ ಪುತ್ರಜೀವಕೈಃ ॥೨೪॥

ಕಂಕೋಲಕೈರ್ಲವಂಗೈಶ್ಚ ತ್ವಗ್ದ್ರುಮೈಃ ಪಾರಿಜಾತಕೈಃ ।
ಪ್ರತಾನೈಃ ಪಿಪ್ಪಲೀನಾಂ ಚ ನಾಗವಲ್ಯಶ್ಚ ಭಾಗಶಃ ॥೨೫॥

ಮರೀಚಸ್ಯ ತಥಾ ಗುಲ್ಮೈರ್ನವಮಲ್ಲಿಕಯಾ ತಥಾ ।
ಮೃದ್ವೀಕಮಂಡಪೈರ್ಮುಖ್ಯೈರತಿಮುಕ್ತಕಮಂಡಪೈಃ ॥೨೬॥

ತ್ರಪುಷೈರ್ನರ್ತಿಕಾನಾಂ ಚ ಪ್ರತಾನೈಃ ಸಫಲೈಃ ಶುಭೈಃ ।
ಕೂಷ್ಮಾಂಡಾನಾಂ ಪ್ರತಾನೈಶ್ಚ ಅಲಾಬೂನಾಂ ತಥಾ ಕ್ವಚಿತ್ ॥೨೭॥

ಚಿರ್ಭಟಸ್ಯ ಪ್ರತಾನೈಶ್ಚ ಪಟೋಲೀಕಾರವೇಲ್ಲಕೈಃ ।
ಕರ್ಕೋಟಕೀವಿತಾನೈಶ್ಚ ವಾರ್ತಾಕೈರ್ಬೃಹತೀಫಲೈಃ ॥೨೮॥

---

೨೩-೨೬. ಅಶ್ಮಂತಕ, ಕಾಲ, ನಿಂಬೆ, ಶ್ವೇತಕದ್ರುಮ, ಗೇರು, ಕೊಡಸಿಗೆ, ಸೊಂಪಾಗಿ ಬೆಳೆದ ಸಿದ್ಧಿಸಾಧಕ, ಉಬ್ಬಸವನ್ನು ಹೋಗಲಾಡಿಸುವ ಕಮರಿಕೆ, ಅರಿಷ್ಟಕ, ವರಿಷ್ಟಕ, ರುದ್ರಾಕ್ಷ, ಏಳೆಲೆಯ ಬಾಳೆ, ಪುತ್ರಜೀವ, ತಕ್ಕೋಲ, ಲವಂಗ ಚಾಜಿಪತ್ರೆ, ಪಾರಿಜಾತ, ಪಿಪ್ಪಲಿ, ನಾಗವಲ್ಲಿ, ಮೆಣಸು ಮತ್ತು ನವಮಲ್ಲಿಗೆ ಇವುಗಳ ಗಿಡಬಳ್ಳಿಗಳಿಂದಲೂ, ದ್ರಾಕ್ಷಿ ಮತ್ತು ಇರವಂತಿಗೆಗಳ ಹಂದರಗಳಿಂದಲೂ ಆ ವನಸ್ಥಲವು ಪ್ರಕಾಶಿಸುತ್ತಿತ್ತು.

೨೭-೨೮. ತ್ರಪುಷ ಮತ್ತು ನರ್ತಿಕೆಗಳು ಮನೋಹರವಾಗಿ ಹಣ್ಣು ಬಿಟ್ಟಿದ್ದುವು. ಕುಂಬಳ, ಸೋರೆ, ಕಕ್ಕರಿಕೆ, ಪಡವಲ, ಹಾಗಲ, ಸೌತೆ, ಬದನೆ, ಹೆಗ್ಗುಳ್ಳ ಮೊದಲಾದ ಕಾಯಿಪಲ್ಯಗಳು ಬೇಕಾದಷ್ಟು ಬೆಳೆದಿದ್ದುವು.

ಕಂಟಕೈರ್ಮೂಲಕೈರ್ಮೂಲಶಾಕೈಸ್ತು ವಿವಿಧೈಸ್ತಥಾ ।
ಕಹ್ಲಾರೈಶ್ಚ ವಿದಾರ್ಯಾ ಚ ರುರೂಟೈಃ ಸ್ವಾದುಕಂಟಕೈಃ ॥೨೯॥

ಸಭಾಂಡೀರವಿದೂಸಾರರಾಜಜಂಬೂಕವಾಲುಕೈಃ ।
ಸುವರ್ಣಲಾಭಿಃ ಸರ್ವಾಭಿಃ ಸರ್ಷಪಾಭಿಸ್ತಥೈವ ಚ ॥೩೦॥

ಕಾಕೋಲೀಕ್ಷೀರಕಾಕೋಲೀ ಛತ್ರಯಾ ಚಾತಿಛತ್ರಯಾ ।
ಕಾಸಮರ್ದೈಸ್ತಥಾ ಸಾಲೈಸ್ತಥಾ ಕಟ್ಫಲಚಕ್ರಕೈಃ ॥೩೧॥

ತಥಾ ಕ್ಷೀರಕಶಾಕೇನ ಕಾಲಶಾಕೇನ ಚಾಪ್ಯಥ ।
ಶಿಂಬೀಧಾನ್ಯೈಸ್ತಥಾ ಧಾನ್ಯೈಃ ಸರ್ವೈರ್ನಿರವಶೇಷತಃ ॥೩೨॥

ಔಷಧೀಭಿರ್ವಿಚಿತ್ರಾಭಿರ್ದೀಪ್ಯಮಾನಾಭಿರೇವ ಚ ।
ಆಯುಷ್ಯಾಭಿರ್ಯಶಸ್ಯಾಭಿರ್ಬಲ್ಯಾಭಿಶ್ಚ ನರಾಧಿಪ ॥೩೩॥

ಜರಾಮೃತ್ಯುಭಯಘ್ನೀಭಿಃ ಕ್ಷುದ್ಭಯಘ್ನೀಭಿರೇವ ಚ
ಸೌಭಾಗ್ಯಜನನೀಭಿಶ್ಚ ಕೃತ್ಸ್ನಾಭಿಶ್ಚಾಪ್ಯನೇಕಶಃ ॥೩೪॥

---

೨೯-೩೧. ಹಲಸು, ಮೂಲಂಗಿ, ಬಗೆಬಗೆಯ ಗೆಣಸುಗಳು, ನೈದಿಲೆ, ನೆಲಗುಂಬಳ, ರುರೂಟ, ನೆಗ್ಗಿಲು, ಮಂಜಿಷ್ಠೆ, ವಿದೂಸಾರ, ಅರನೇರಿಳೆ, ಮುಡಿವಾಳ, ಸೂರ್ಯಕಾಂತಿ, ನಾನಾಜಾತಿಯ ಸಾಸುವೆ, ಕಾಕೋಲಿ, ಕ್ಷೀರಕಾಕೋಲಿ, ಕೊತ್ತಂಬರಿ, ಗಂಜನೀಹುಲ್ಲು, ಎಸಗದ ಗಿಡ, ಸಾಲವೃಕ್ಷ, ಶಿವನೀಮರ, ಹೆಬ್ಬಿದಿರು ಮುಂತಾದ ಗಿಡಮರಗಳು ತುಂಬಿ ಬೆಳೆದಿದ್ದುವು.

೩೨-೩೪. ಹಾಲೇಸೊಪ್ಪು, ಕಾಲಶಾಕ, ಶಿಂಬೀಧಾನ್ಯಗಳು, ಇನ್ನೂ ಉಳಿದ ಬಗೆ ಬಗೆಯ ಧಾನ್ಯಗಳು ಇವೆಲ್ಲವೂ ಆ ಪ್ರದೇಶದಲ್ಲಿ ಬೆಳೆದಿದ್ದುವು. ಅಲ್ಲಿದ್ದ ಮೂಲಿಕೆಗಳು ಬಹು ವಿಚಿತ್ರವಾಗಿದ್ದುವು. ಅವು ತೇಜೋಮಯಗಳಾಗಿ ಆಯುಸ್ಸು, ಯಶಸ್ಸು ಮತ್ತು ಬಲಗಳನ್ನು ಹೆಚ್ಚಿಸತಕ್ಕುವಾಗಿದ್ದುವು. ಅವುಗಳಿಂದ ಮುಪ್ಪು ಸಾವು ಮತ್ತು ಹಸಿವುಗಳ ಭಯವು ದೂರವಾಗುತ್ತಿತ್ತು. ಸಕಲವಿಧವಾದ ಸೌಭಾಗ್ಯವೂ ಉಂಟಾಗುತ್ತಿತ್ತು.

**ತತ್ರ ವೇಣುಲತಾಭಿಶ್ಚ ತಥಾ ಕೀಚಕವೇಣುಭಿಃ ।**
**ಕಾಶೈಃ ಶಶಾಂಕಕಾಶೈಶ್ಚ ಶರಗುಲ್ಮೈಸ್ತಥೈವ ಚ ॥೩೫॥**

**ಕುಶಗುಲ್ಮೈಸ್ತಥಾ ರಮ್ಯೈರ್ಗುಲ್ಮೈಶ್ಚೇಕ್ಷೋರ್ಮನೋರಮ್ಯೈಃ ।**
**ಕಾರ್ಪಾಸಜಾತಿವರ್ಗೇಣ ದುರ್ಲಭೇನ ಶುಭೇನ ಚ ॥೩೬॥**

**ತಥಾ ಚ ಕದಲೀಖಂಡೈರ್ಮನೋಹಾರಿಭಿರುತ್ತಮೈಃ ।**
**ತಥಾ ಮರಕತಪ್ರಖ್ಯೈಃ ಪ್ರದೇಶೈಃ ಶಾದ್ವಲಾನ್ವಿತೈಃ ॥೩೭॥**

**ಇರಾಪುಷ್ಪಸಮಾಯುಕ್ತೈಃ ಕುಂಕುಮೈಃ ಸ ಚ ಭಾಗಶಃ ।**
**ತಗರಾತಿವಿಷಾಮಾಂಸೀಗ್ರಂಥಿಕೈಸ್ತು ಸುರಾಗದೈಃ ॥೩೮॥**

**ಸುವರ್ಣಪುಷ್ಪೈಶ್ಚ ತಥಾ ಭೂಮಿಪುಷ್ಪೈಸ್ತಥಾಪರೈಃ ।**
**ಜಂಬೀರಕೈರ್ಭೂಸ್ತೃಣಕೈಃ ಸರಸೈಃ ಸಶುಕೈಸ್ತಥಾ ॥೩೯॥**

---

೩೫–೩೬. ಬಳ್ಳಿಯಂತೆ ಕೋಮಲವಾಗಿರುವ ಕಿರಿಬಿದಿರುಗಳೂ, ಗಾಳಿಯಿಂದ ಇಂಪಾಗಿ ಧ್ವನಿಮಾಡುವ ತೂತುಬಿದ್ದ ಬಿದಿರುಗಳೂ ಒತ್ತೊತ್ತಾಗಿ ಬೆಳೆದಿದ್ದುವು. ಚಂದ್ರನ ಕಿರಣಗಳಂತೆ ಶುಭ್ರವಾಗಿದ್ದ ಕಾಶವೆಂಬ ಹುಲ್ಲುಗಳು, ಜೊಂಡಿನ ಪೊದೆಗಳು, ರಮ್ಯವಾದ ದರ್ಭೆಯ ಹುಲ್ಲಿನ ಬೊಡ್ಡೆಗಳು, ಮನಸ್ಸನ್ನು ಸೂರೆಗೊಳ್ಳುವ ಕಬ್ಬಿನ ತೆಂಡೆಗಳು, ಅಪೂರ್ವವಾದ ಒಳ್ಳೆಯ ಜಾತಿಯ ಹತ್ತಿಗಳು ಇವುಗಳಿಂದ ವನಪ್ರದೇಶವು ಕಣ್ಣುಗಳಿಗೆ ಹಬ್ಬವನ್ನು ಕೊಡುತ್ತಿತ್ತು.

೩೭–೩೮. ಒಳ್ಳೆಯ ಜಾತಿಯ ಬಾಳೆಯ ಗಿಡಗಳು ಮನೋಹರವಾಗಿ ಬೆಳೆದಿದ್ದುವು. ಹಸುರು ಹುಲ್ಲಿನಿಂದ ತುಂಬಿದ್ದ ಪ್ರದೇಶವು ಪಚ್ಚೆಯ ರತ್ನವನ್ನು ಹಾಸಿದಂತೆ ಕಂಗೊಳಿಸುತ್ತಿತ್ತು. ಅಲ್ಲಲ್ಲಿ ಮಧುಪುಷ್ಪಗಳೂ ಕೇಸರಪುಷ್ಪಗಳೂ ವಿರಾಜಿಸುತ್ತಿದ್ದುವು. ತಗರ, ಅತಿಬಜೆ, ಜಟಾಮಾಂಸಿ, ಒಪ್ಪಲಿ ಈ ಮೂಲಿಕೆಗಳು ಮನಸ್ಸಿಗೆ ಹರ್ಷವನ್ನು ಬೀರುತ್ತಿದ್ದುವು.

೩೯–೪೧. ಸುವರ್ಣಪುಷ್ಪಗಳೂ, ಭೂಮಿಪುಷ್ಪಗಳೂ, ಇನ್ನೂ ಬಗೆಬಗೆಯ ಹೂಗಳೂ ಶೋಭಿಸುತ್ತಿದ್ದುವು. ಸಿಂಬೆಯ ಗಿಡಗಳು ಸೊಂಪಾಗಿ ಕಂಗೊಳಿಸಿದುವು.

ಶೃಂಗವೇರಾಜಮೋದಾಭಿಃ ಕುಬೇರಕಪ್ರಿಯಾಲಕೈಃ ।
ಜಲಜೈಶ್ಚ ತಥಾ ವರ್ಣೈರ್ನಾನಾವರ್ಣೈಃ ಸುಗಂಧಿಭಿಃ ॥೪೦॥

ಉದಯಾದಿತ್ಯಸಂಕಾಶೈಃ ಸೂರ್ಯಚಂದ್ರನಿಭೈಸ್ತಥಾ ।
ತಪನೀಯಸವರ್ಣೈಶ್ಚ ಅತಸೀಪುಷ್ಪಸನ್ನಿಭೈಃ ॥೪೧॥

ಶುಕಪತ್ರನಿಭೈಶ್ಚಾನ್ಯೈಃ ಸ್ಥಲಪತ್ರೈಶ್ಚ ಭಾಗಶಃ ।
ಪಂಚವರ್ಣೈಃ ಸಮಾಕೀರ್ಣೈರ್ಬಹುವರ್ಣೈಸ್ತಥೈವ ಚ ॥೪೨॥

ದೃಷ್ಟುರ್ದೃಷ್ಟ್ಯಾ ಹಿತಮುದ್ಯೈಃ ಕುಮುದ್ಯೈಶ್ಚಂದ್ರಸನ್ನಿಭೈಃ ।
ತಥಾ ವಹ್ನಿಶಿಖಾಕಾರೈರ್ಗಜವಕ್ತ್ರೋತ್ಪಲೈಃ ಶುಭೈಃ ॥೪೩॥

ನೀಲೋತ್ಪಲೈಃ ಸಕಲ್ಹಾರೈರ್ಗುಂಜಾತಕಕಸೇರುಕೈಃ ।
ಶೃಂಗಾಟಕಮೃಣಾಲೈಶ್ಚ ಕರಟೈ ರಾಜತೋತ್ಪಲೈಃ ॥೪೪॥

---

ಸೊಗಸಾಗಿ ಬೆಳೆದಿರುವ ಚೇಣೀ ಹುಲ್ಲು ಗಿಳಿಗಳ ನೆಲೆವೀಡಾಗಿತ್ತು. ಶೃಂಗವೇರ, ಅಜಾಮೋದ, ನಂದೀಮುರ ಮತ್ತು ಮೊರಟೀ ಗಿಡಗಳು ಹುಲುಸಾಗಿ ಬೆಳೆದಿದ್ದುವು. ಬಗೆಬಗೆಯ ಬಣ್ಣದಿಂದ ಕೂಡಿ ಪರಿಮಳವನ್ನು ಬೀರುತ್ತಿರುವ ತಾವರೆಗಳು ನೀರಿನಲ್ಲಿ ಹುಟ್ಟಿದ್ದುವು. ಅವುಗಳಲ್ಲಿ ಕೆಲವು ಉದಿಸುತ್ತಿರುವ ಸೂರ್ಯನಂತೆ ಪ್ರಕಾಶಿಸುತ್ತಿದ್ದುವು. ಇನ್ನು ಕೆಲವು ಚಂದ್ರಸೂರ್ಯರನ್ನು ಹೋಲುತ್ತಿದ್ದುವು. ಮತ್ತೆ ಕೆಲವು ಚಿನ್ನದ ಬಣ್ಣವನ್ನು ಅನುಕರಿಸುತ್ತಿದ್ದುವು. ಉಳಿದುವು ಅಗಸೆಯ ಹೂವಿನ ಬಣ್ಣವನ್ನು ತಳೆದಿದ್ದುವು.

೪೨-೪೩. ಇನ್ನೂ ಕೆಲವು ತಾವರೆಗಳು ಗಿಳಿಯ ರೆಕ್ಕೆಯ ಬಣ್ಣದಿಂದ ಕೂಡಿದ್ದುವು. ಒಂದೊಂದರ ಎಲೆಗಳು ನೆಲದ ಮೇಲೆ ಬೆಳೆಯುವ ಗಿಡಗಳ ಎಲೆಗಳಂತೆ ಇದ್ದುವು. ಐದು ಬಣ್ಣಗಳು ಒಟ್ಟುಗೂಡಿದ ಸಂಕರವರ್ಣದವು ಕೆಲವು. ಬಹುವರ್ಣದವು ಮತ್ತೆ ಕೆಲವು. ನೈದಿಲೆಗಳು ನೋಡಿದವರ ಕಣ್ಣುಗಳಿಗೆ ಆನಂದವನ್ನು ಕೊಡುತ್ತಿದ್ದುವು. ಅವು ಬಣ್ಣದಲ್ಲಿ ಚಂದ್ರನನ್ನೂ, ಅಗ್ನಿಜ್ವಾಲೆಯನ್ನೂ, ಆನೆಯ ಬಾಯಿಯನ್ನೂ ಹೋಲುತ್ತಿದ್ದುವು.

೪೪. ನೀಲೋತ್ಪಲ, ಕಲ್ಹಾರ, ಗುಂಜಾತಕ, ಕಸೇರುಕ, ಶೃಂಗಾಟಕ, ಮೃಣಾಲ, ಕರಟ ಮತ್ತು ರಾಜತೋತ್ಪಲಗಳೆಂಬ ಪುಷ್ಪವಿಶೇಷಗಳು ಮನೋರವಾಗಿ ಶೋಭಿಸುತ್ತಿದ್ದುವು.

**ಜಲಜೈಃ ಸ್ಥಲಜೈರ್ಮೂಲೈಃ ಫಲೈಃ ಪುಷ್ಪೈರ್ವಿಶೇಷತಃ ।**
**ವಿವಿಧೈಶ್ಚೈವ ನೀವಾರೈರ್ಮುನಿಭೋಜ್ಯೈರ್ನರಾಧಿಪ ॥೪೫॥**

**ನ ತದ್ಧಾನ್ಯಂ ನ ತತ್ಸಸ್ಯಂ ನ ತಚ್ಛಾಕಂ ನ ತತ್ಫಲಂ**
**ನ ತನ್ಮೂಲಂ ನ ತತ್ಕಂದಂ ನ ತತ್ಪುಷ್ಪಂ ನರಾಧಿಪ ॥೪೬॥**

**ನಾಗಲೋಕೋದ್ಭವಂ ದಿವ್ಯಂ ನರಲೋಕಭವಂ ಚ ಯತ್ ।**
**ಅನೂಪೋತ್ಥಂ ವನೋತ್ಥಂ ಚ ತತ್ರ ಯನ್ನಾಸ್ತಿ ಪಾರ್ಥಿವಃ ॥೪೭॥**

**ಸದಾ ಪುಷ್ಪಫಲಂ ಸರ್ವಮಜರ್ಯವ್ಯತುಯೋಗತಃ ।**
**ಮದ್ರೇಶ್ವರಃ ಸ ದದೃಶೇ ತಪಸಾ ಹ್ಯತಿಯೋಗತಃ ॥೪೮॥**

**ದದೃಶೇ ಚ ತಥಾ ತತ್ರ ನಾನಾರೂಪಾನ್ ಪತತ್ರಿಣಃ ।**
**ಮಯೂರಾನ್ ಶತಪತ್ರಾಂಶ್ಚ ಕಲವಿಂಕಾಂಶ್ಚ ಕೋಕಿಲಾನ್ ॥೪೯॥**

**ತಥಾ ಕಾದಂಬಕಾನ್ ಹಂಸಾನ್ ಕೋಯಷ್ಟೀನ್ ಖಂಜರೀಟಕಾನ್ ।**
**ಕುರರಾನ್ ಕಾಲಕೂಟಾಂಶ್ಚ ಖಟ್ವಾಂಗಾಂಲ್ಲುಬ್ಧಕಾಂಸ್ತಥಾ ॥೫೦॥**

---

೪೫. ಓ ರಾಜಾ, ನೀರಿನಲ್ಲೂ ನೆಲದಲ್ಲೂ ಹುಟ್ಟುವ ಗೆಣಸುಗಳು, ಹಣ್ಣುಗಳು, ಹೂಗಳು ಇವೆಲ್ಲವೂ ಅಲ್ಲಿ ವಿಶೇಷವಾಗಿದ್ದುವು. ಮುನಿಗಳಿಗೆ ಆಹಾರವಾದ ವಿಧವಿಧವಾದ ತೃಣಧಾನ್ಯಗಳು ಬೆಳೆದಿದ್ದುವು.

೪೬-೪೭. ನರೇಂದ್ರಾ, ಆ ಹಿಮವತ್ಪರ್ವತದಲ್ಲಿ ಇಲ್ಲದ ಧಾನ್ಯ, ಸಸ್ಯ, ಕಾಯಿಪಲ್ಯ, ಹಣ್ಣು, ಗೆಡ್ಡೆ, ಗೆಣಸು, ಹೂ ಇವುಗಳು ನಾಗಲೋಕ, ಸ್ವರ್ಗಲೋಕ, ಮನುಷ್ಯಲೋಕ ಇವುಗಳಲ್ಲೆಲ್ಲಿಯೂ ಹುಟ್ಟಲಾರವು. ಜಲಸಮೃದ್ಧವಾದ ಸ್ಥಳದಲ್ಲಾಗಲಿ ಕಾಡಿನಲ್ಲಾಗಲಿ ಅವು ಬೆಳೆಯವು. ಪುರೂರವರಾಜನು ಅವುಗಳನ್ನೆಲ್ಲ ಅಲ್ಲಿ ನೋಡಿದನು.

೪೮. ಆ ವನದಲ್ಲಿ ಎಲ್ಲ ಋತುಗಳ ಧರ್ಮವೂ ಸದಾ ಇರುತ್ತಿತ್ತು. ಆದುದರಿಂದ ನಾನಾಜಾತಿಯ ಫಲಪುಷ್ಪಗಳು ಬಾಡದೆ, ಕುಗ್ಗದೆ ತುಂಬಿರುತ್ತಿದ್ದುವು. ತನ್ನ ತಪಸ್ಸಿನ ಮಹಿಮೆಯಿಂದ ಮದ್ರೇಶ್ವರನು ಅದನ್ನೆಲ್ಲ ಕಂಡನು.

೪೯-೫೦. ಪುರೂರವರಾಜನು ನಾನಾ ಜಾತಿಯ ಪಕ್ಷಿಗಳನ್ನೂ ಕೂಡ ನೋಡಿದನು. ನವಿಲು, ಮರಕುಟಿಕ, ಗುಬ್ಬಚ್ಚಿ, ಕೋಗಿಲೆ, ಕಲಹಂಸ, ಹಂಸ, ಟಿಟ್ಟಿಭ, ಗೀಜಗ, ಕುರುವ, ನೀರುಕಾಗೆ ಖಟ್ವಾಂಗ ಮತ್ತು ಲುಬ್ಧಕಗಳೆಂಬ ಪಕ್ಷಿಗಳು ಅವನ ಕಣ್ಣಿಗೆ ಬಿದ್ದುವು.

ಗೋಕ್ಷ್ವೇಡಕಾಂಸ್ತಥಾ ಕುಂಭಾನ್ ಧಾರ್ತರಾಷ್ಟ್ರಾಞ್ಛುಕಾನ್ ಬಕಾನ್ ।
ಘಾತುಕಾಂಶ್ಚಕ್ರವಾಕಾಂಶ್ಚ ಕಟುಕಾನ್ ಟಿಟ್ಟಿಭಾನ್ ಭಟಾನ್ ॥೫೦॥

ಪುತ್ರಪ್ರಿಯಾನ್ ಲೋಹಪೃಷ್ಠಾನ್ ಗೋಚರ್ಮಗಿರಿವರ್ತಕಾನ್ ।
ಪಾರಾವತಾಂಶ್ಚ ಕಮಲಾನ್ ಸಾರಿಕಾ ಜೀವಜೀವಕಾನ್ ॥೫೧॥

ಲಾವವರ್ತಕವಾರ್ತಾಕಾನ್ ರಕ್ತವರ್ತ್ಮಪ್ರಭದ್ರಕಾನ್ ।
ತಾಮ್ರಚೂಡಾನ್ ಸ್ವರ್ಣಚೂಡಾನ್ ಕುಕ್ಕುಟಾನ್ ಕಾಷ್ಠಕುಕ್ಕುಟಾನ್ ॥೫೨॥

ಕಪಿಂಜಲಾನ್ ಕಲವಿಂಕಾಸ್ತಥಾ ಕುಂಕುಮಚೂಡಕಾನ್ ।
ಭೃಂಗರಾಜಾನ್ ಸೀರಪಾದಾನ್ ಭುಲಿಂಗಾನ್ ಡಿಂಡಿವಾನ್ ನವಾನ್ ॥೫೪॥

ಮಂಜುಲೀತಕದಾತ್ಯೂಹಾನ್ ಭಾರದ್ವಾಜಾಂಸ್ತಥಾ ಚಷಾನ್ ।
ಏತಾಂಶ್ಚಾನ್ಯಾಂಶ್ಚ ಸುಬಹೂನ್ ಪಕ್ಷಿಸಂಘಾನ್ ಮನೋಹರಾನ್ ॥೫೫॥

ಶ್ವಾಪದಾನ್ ವಿವಿಧಾಕಾರಾನ್ ಮೃಗಾಂಶ್ಚೈವ ಮಹಾಮೃಗಾನ್ ।
ವ್ಯಾಘ್ರಾನ್ ಕೇಸರಿಣಃ ಸಿಹ್ಮಾನ್ ದ್ವೀಪಿನಃ ಶರಭಾನ್ ವೃಕಾನ್ ॥೫೬॥

---

೫೧-೫೫. ಗೋಕ್ಷ್ವೇಡಕ, ಕುಂಭ, ಹಂಸ, ಗಿಳಿ, ಬಕ, ಘಾತುಕ, ಚಕ್ರವಾಕ, ಕಟುಕ, ಟಿಟ್ಟಿಭ, ಭಟ, ಪುತ್ರಪ್ರಿಯ, ಲೋಹಪೃಷ್ಠ ಗೋಚರ್ಮ, ಗಿರಿವರ್ತಕ, ಪಾರಿವಾಳ, ಕಮಲ, ಸಾರಿಕೆ, ಜೀವಜೀವಿಕ, ಲಾವ, ವರ್ತಕ, ವಾರ್ತಾಕ, ರಕ್ತವರ್ತ್ಮ, ಪ್ರಭದ್ರಕ, ತಾಮ್ರಚೂಡ, ಸ್ವರ್ಣಚೂಡ, ಕುಕ್ಕುಟ, ಕಾಷ್ಠಕುಕ್ಕುಟ, ಕಪಿಂಜಲ, ಗುಬ್ಬಚ್ಚಿ, ಕುಂಕುಮಚೂಡ, ಭೃಂಗರಾಜ, ಸೀರ ಪಾದ, ಭುಲಿಂಗ, ಡಿಂಡಿಮ, ಮಂಜುಲೀತಕ, ದಾತ್ಯೂಹ, ಭಾರದ್ವಾಜ, ಚಷಕ ಮುಂತಾದ ಬಗೆಬಗೆಯ ಮನೋಹರವಾದ ಎಷ್ಟೋ ಪಕ್ಷಿಗಳು ಅವನಿಗೆ ಗೋಚರವಾದುವು.

೫೬-೫೮. ಆ ರಾಜನು ಬಗೆಬಗೆಯ ಕ್ರೂರಮೃಗಗಳನ್ನೂ, ಇನ್ನೂ ಎಷ್ಟೋ ಜಾತಿಯ ಕಾಡುಪ್ರಾಣಿಗಳನ್ನೂ ನೋಡಿದನು. ಜಿಂಕೆಗಳು, ದೊಡ್ಡದೊಡ್ಡ ಮೃಗ ಗಳು, ಹುಲಿಗಳು, ಸಿಹ್ಮಗಳು, ದೊಡ್ಡಜಾತಿಯ ಹುಲಿಗಳು, ಶರಭಗಳು, ತೋಳ ಗಳು, ಕರಡಿಗಳು, ಇಬ್ಬಗಳು, ಕಪಿಗಳು ಶಶಲೋಮಗಳು, ಕಾದಂಬಗಳು ಗಾಳಿ

ಋಕ್ಷಾಂಸ್ತರಕ್ಷೂಂಶ್ಚ ಬಹೂನ್ ಗೋಲಾಂಗೂಲಾನ್ ಸವಾನರಾನ್ ।
ಶಶಲೋಮಾನ್ ಸಕಾದಂಬಾನ್ ಮಾರ್ಜಾರಾನ್ ವಾಯುವೇಗಿನಃ ॥೫೭॥

ತಥಾ ಮತ್ತಾಂಶ್ಚ ಮಾತಂಗಾನ್ ಮಹಿಷಾನ್ ಗವಯಾನ್ ವೃಷಾನ್ ।
ಚಮರಾನ್ ಸೃಮರಾಂಶ್ಚೈವ ತಥಾ ಗೌರಖರಾನಪಿ ॥೫೮॥

ಉರಭ್ರಾಂಶ್ಚ ತಥಾ ಮೇಷಾನ್ ಸಾರಂಗನಾಥ ಕುಕ್ಕುರಾನ್ ।
ನೀಲಾಂಶ್ಚೈವ ಮಹಾನೀಲಾನ್ ಕರಾಲಾನ್ ಮೃಗಮಾತೃಕಾನ್ ॥೫೯॥

ಸದಂಷ್ಟ್ರಾಲೋಮಶರಭಾನ್ ಕ್ರೌಂಚಕಾರಕಶಂಬರಾನ್ ।
ಕರಾಲಾನ್ ಕೃತಮಾಲಾಂಶ್ಚ ಕಾಲಪುಚ್ಛಾಂಶ್ಚ ತೋರಣಾನ್ ॥೬೦॥

ದಂಷ್ಟ್ರಾನ್ ಖಡ್ಗಾನ್ ವರಾಹಾಂಶ್ಚ ತುರಂಗಾನ್ ಖರಗರ್ದಭಾನ್ ।
ಏತಾನದ್ವಿಷ್ಟಾನ್ ಮದ್ರೇಶೋ ವಿರುದ್ಧಾಂಶ್ಚ ಪರಸ್ಪರಂ ॥೬೧॥

ಅವಿರುದ್ಧಾನ್ ವನೇ ದೃಷ್ಟ್ವಾ ವಿಸ್ಮಯಂ ಪರಮಂ ಯಯೌ ।
ತಚ್ಚಾಶ್ರಮಪದಂ ಪುಣ್ಯಂ ಬಭೂವಾತ್ರೇಃ ಪುರಾ ನೃಪ ॥೬೨॥

---

ಯಂತೆ ವೇಗಶಾಲಿಗಳಾದ ಬೆಕ್ಕುಗಳು, ಮದಹತ್ತಿದ ಆನೆಗಳು, ಕಾಡುಕೋಣಗಳು, ಕಾಡೆತ್ತುಗಳು, ಎತ್ತುಗಳು, ಚಮರಮೃಗಗಳು, ಕತ್ತೆಕಿರುಬಗಳು, ಕತ್ತೆಗಳು ಇವುಗಳೆಲ್ಲ ಅಲ್ಲಿ ಬೇಕಾದಷ್ಟಿದ್ದುವು.

೫೯–೬೧. ಕುರಿ, ಆಡು, ಜಿಂಕೆ, ನಾಯಿ, ಮಾಸಲು ಕಪ್ಪಾದ ಮತ್ತು ಅಚ್ಚ ಕಪ್ಪಾದ ಭೀಕರಮೃಗಗಳು, ಕೂದಲೂ ಕೋರೆದಾಡೆಗಳೂ ಇರುವ ಶರಭಗಳು, ಕ್ರೌಂಚಗಳು, ಕಾರಕಗಳು, ಶಂಬರಗಳು, ಕ್ರೂರವಾದ ಕೃತಮಾಲಗಳು, ಕಾಲಪುಚ್ಛಗಳು, ತೋರಣಗಳು, ಕೋರೆಹಲ್ಲಿನ ಘಾತುಕಜಂತುಗಳು, ಖಡ್ಗಮೃಗಗಳು, ಹಂದಿಗಳು, ಕುದುರೆಗಳು, ಬಗೆಬಗೆಯ ಕತ್ತೆಗಳು, ಮುಂತಾದ ಪ್ರಾಣಿಗಳನ್ನು ಆ ರಾಜನು ನೋಡಿದನು. ಪರಸ್ಪರ ಶತ್ರುಗಳಾಗಿದ್ದರೂ ಆ ಸ್ಥಳದ ಮಹಿಮೆಯಿಂದ ಅವು ಒಂದನ್ನೊಂದು ದ್ವೇಷಿಸುತ್ತಿರಲಿಲ್ಲ.

೬೨. ಓ ರಾಜಾ, ಆ ಮೃಗಗಳು ಒಂದರ ಮೇಲೊಂದು ದ್ವೇಷಬಿಟ್ಟಿರುವುದನ್ನು ಕಂಡು ಆ ಮದ್ರಭೂಪತಿಗೆ ಬಹಳ ಆಶ್ಚರ್ಯವಾಯಿತು. ಆ ಪ್ರದೇಶವು ಹಿಂದೆ ಅತ್ರಿಮಹರ್ಷಿಯ ಆಶ್ರಮವಾಗಿತ್ತು.

ತತ್ಪ್ರಸಾದಾತ್ಪ್ರಭಾಯುಕ್ತಂ ಸ್ಥಾವರೈರ್ಜಂಗಮೈಸ್ತಥಾ ।
ಹಿಂಸಂತಿ ಹಿ ನ ಚಾನ್ಯೋನ್ಯಂ ಹಿಂಸಕಾಸ್ತು ಪರಸ್ಪರಂ ||೬೩||

ಕ್ರವ್ಯಾದಾಃ ಪ್ರಾಣಿನಸ್ತತ್ರ ಸರ್ವೇ ಕ್ಷೀರಫಲಾಶನಾಃ ।
ನಿರ್ಮಿತಾಸ್ತತ್ರ ಚಾತ್ಯರ್ಥಮತ್ರಿಣಾ ಸುಮಹಾತ್ಮನಾ ||೬೪||

ಶೈಲಾನ್ನಿತಂಬದೇಶೇಷು ನ್ಯವಸಚ್ಚ ಸ್ವಯಂ ನೃಪಃ ।
ಪಯಃ ಕ್ಷರಂತಿ ತೇ ದಿವ್ಯಮಮೃತಸ್ವಾದುಕಂಟಕಂ ||೬೫||

ಕ್ವಚಿದ್ರಾರ್ಜ ಮಹಿಷ್ಯಶ್ಚ ಕ್ವಚಿದಾಜಾಶ್ಚ ಸರ್ವಶಃ ।
ಶಿಲಾಃ ಕ್ಷೀರೇಣ ಸಂಪೂರ್ಣಾ ದಧ್ನಾ ಚಾನ್ಯತ್ರ ವಾ ಬಹಿಃ ||೬೬||

ಸಂಪಶ್ಯನ್ ಪರಮಾಂ ಪ್ರೀತಿಮವಾಪ ವಸುಧಾಧಿಪಃ ।
ಸರಾಂಸಿ ತತ್ರ ದಿವ್ಯಾನಿ ನದ್ಯಶ್ಚ ವಿಮಲೋದಕಾಃ ||೬೭||

---

೬೩. ಆ ಮಹಾತ್ಮನ ಅನುಗ್ರಹದಿಂದ ಅಲ್ಲಿನ ಸ್ಥಾವರಜಂಗಮಗಳು ತೇಜೋವಿಶೇಷದಿಂದ ಕೂಡಿದ್ದುವು. ಹಿಂಸಿಸುವ ಸ್ವಭಾವದ ಜಂತುಗಳೂ ಕೂಡ ಒಂದನ್ನೊಂದು ಬಾಧೆಪಡಿಸುತ್ತಿರಲಿಲ್ಲ.

೬೪. ಮಾಂಸಾಹಾರಿಗಳಾದ ಪ್ರಾಣಿಗಳೆಲ್ಲ ಹಾಲನ್ನೂ ಹಣ್ಣನ್ನೂ ಭಕ್ಷಿಸುತ್ತಿದ್ದುವು. ಇದು ಮಹಾತ್ಮನಾದ ಆ ಅತ್ರಿಮಹರ್ಷಿಯ ಕಟ್ಟಳೆ.

೬೫. ಆ ರಾಜನು ಬೆಟ್ಟದ ಹೊರವಳಯದ ತಪ್ಪಲು ನೆಲಗಳಲ್ಲಿ ವಾಸಮಾಡುತ್ತಿದ್ದನು. ಅಲ್ಲಿ ಸ್ವರ್ಗೀಯವಾದ ಕ್ಷೀರಪ್ರವಾಹವು ಹರಿಯುತ್ತಿತ್ತು. ಅದು ಅಮೃತವಂತೆ ಮಧುರವಾಗಿದ್ದು ರೋಮಾಂಚವನ್ನು ಹುಟ್ಟಿಸುತ್ತಿತ್ತು.

೬೬. ಓ ರಾಜಾ, ಒಂದು ಕಡೆ ಎಮ್ಮೆಗಳೂ, ಇನ್ನೊಂದು ಕಡೆ ಆಡುಗಳೂ ತಾವಾಗಿಯೇ ಹಾಲು ಕರೆಯುತ್ತಿದ್ದುವು. ಬಂಡೆಗಳ ಸಂದುಗಳಲ್ಲೂ ಹಳ್ಳಗಳಲ್ಲೂ ಹಾಲು ಮೊಸರುಗಳು ತುಂಬಿ ನಿಂತಿದ್ದುವು.

೬೭. ದಿವ್ಯವಾದ ಸರಸ್ಸುಗಳೂ ನಿರ್ಮಲೋದಕದಿಂದ ಪೂರ್ಣವಾದ ನದಿಗಳೂ ಅಲ್ಲಿ ಕಂಗೊಳಿಸಿದುವು. ಅದನ್ನೆಲ್ಲ ನೋಡಿ ಆ ರಾಜನಿಗೆ ಬಹು ಸಂತೋಷವಾಯಿತು.

**ಪ್ರಣಾಲಿಕಾನಿ ಚೋಷ್ಣಾನಿ ಶೀತಲಾನಿ ಚ ಭಾಗಶಃ ।**
**ಕಂದರಾಣಿ ಚ ಶೈಲಸ್ಯ ಸುಸೇವ್ಯಾನಿ ಪದೇ ಪದೇ ॥೧೮॥**

**ಹಿಮಪಾತೋ ನ ತತ್ರಾಸ್ತಿ ಸಮಂತಾತ್ಪಂಚಯೋಜನಂ ।**
**ಉಪತ್ಯಕಾಸು ಶೈಲಸ್ಯ ಶಿಖರೇಷು ನ ವಿದ್ಯತೇ ॥೧೯॥**

**ತತ್ರಾಸ್ತಿ ರಾಜಞ್ಛಿಖರಂ ಪರ್ವತೇಂದ್ರಸ್ಯ ಪಾಂಡುರಂ ।**
**ಹಿಮಪಾತಂ ಘನಾ ಯತ್ರ ಕುರ್ವಂತಿ ಸಹಿತಾಃ ಸದಾ ॥೨೦॥**

**ತತ್ರಾಸ್ತಿ ಚಾಪರಂ ಶೃಂಗಂ ಯತ್ರ ತೋಯಘನಾ ಘನಾಃ ।**
**ನಿತ್ಯಮೇವಾಭಿವರ್ಷಂತಿ ಶಿಲಾಭಿಃ ಶಿಖರಂ ವರಂ ॥೨೧॥**

**ತದಾಶ್ರಮಂ ಮನೋಹಾರಿ ಯತ್ರ ಕಾಮಧರಾ ಧರಾ ।**
**ಸುರಮುಖ್ಯೋಪಯೋಗಿತ್ವಾಚ್ಛಾಖಿನಾಂ ಸಫಲಾಃ ಫಲಾಃ ॥೨೨॥**

---

೧೮. ಕಾಲುವೆಗಳಲ್ಲಿ ಬಿಸಿನೀರೂ ತಣ್ಣೀರೂ ಬೇರೆ ಬೇರೆಯಾಗಿ ಹರಿಯುತ್ತಿದ್ದುವು. ಹೆಜ್ಜೆ ಹೆಜ್ಜೆಗೂ ಆ ಪರ್ವತದಲ್ಲಿ ಗುಹೆಗಳಿದ್ದುವು. ಅವು ರಮ್ಯವಾಗಿಯೂ ಹಿತಕರವಾಗಿಯೂ ಇದ್ದುವು.

೧೯. ಆ ಆಶ್ರಮಪ್ರದೇಶದ ಸುತ್ತಲೂ ಐದು ಯೋಜನಗಳ ವಿಸ್ತಾರದಲ್ಲಿ ಮಂಜು ಬೀಳದು. ಹೀಗೆಯೇ ಬೆಟ್ಟದ ತಪ್ಪಲಿನಲ್ಲೂ ಶಿಖರಗಳಲ್ಲೂ ಅದರ ಬಾಧೆಯಿಲ್ಲ.

೨೦. ಓ ಭೂಪಾಲಕಾ, ಶ್ರೇಷ್ಠವಾದ ಆ ಹಿಮವತ್ಪರ್ವತದ ಶಿಖರವು ಬೆಳ್ಳಗಿದೆ. ಅಲ್ಲಿ ಯಾವಾಗಲೂ ಮೋಡಗಳು ದಟ್ಟವಾಗಿ ಮಂಜನ್ನು ಕರೆಯುತ್ತವೆ.

೨೧. ಅಲ್ಲಿ ಮತ್ತೊಂದು ಶಿಖರವುಂಟು. ಜಲಪೂರ್ಣವಾದ ಮೇಘಗಳು ಅದರ ಮೇಲೆ ಎಡೆಬಿಡದೆ ಆಲಿಕಲ್ಲುಗಳನ್ನು ಸುರಿಸುವುವು.

೨೨. ಆ ಆಶ್ರಮವು ರಮ್ಯವಾಗಿದೆ. ಅಲ್ಲಿನ ಭೂಮಿಯು ಕೋರಿದ ಬಯಕೆಯೆಲ್ಲವನ್ನೂ ಸಲ್ಲಿಸುತ್ತದೆ. ಮರಗಳಲ್ಲಿ ಬಿಡುವ ಹಣ್ಣುಗಳನ್ನು ಸ್ವಯಂ ದೇವೇಂದ್ರನೇ ಉಪಯೋಗಿಸುತ್ತಾನೆ. ಇದರಿಂದ ಅವು ಸಾರ್ಥಕವಾಗುತ್ತವೆ.

**ಸದೋಪಗೀತಭ್ರಮರಸುರಸ್ತ್ರೀಸೇವಿತಂ ಪರಂ ।**
**ಸರ್ವಪಾಪಕ್ಷಯಕರಂ ಶೈಲಸ್ಯೇವ ಪ್ರಹಾರಕಂ ॥೭೩॥**

**ವಾನರೈಃ ಕ್ರೀಡಮಾನೈಶ್ಚ ದೇಶಾದ್ದೇಶಾನ್ನರಾಧಿಪ ।**
**ಹಿಮಪುಂಜಾಃ ಕೃತಾಸ್ತತ್ರ ಚಂದ್ರಬಿಂಬಸಮಪ್ರಭಾಃ ॥೭೪॥**

**ತದಾಶ್ರಮಂ ಸಮಂತಾಚ್ಚ ಹಿಮಸಂರುದ್ಧಕಂದರೈಃ ।**
**ಶೈಲವಾಟ್ಯೈಃ ಪರಿವೃತಮಗಮ್ಯಂ ಮನುಜೈಃ ಸದಾ ॥೭೫॥**

**ಪೂರ್ವಾರಾಧಿತಭಾವೋಽಸೌ ಮಹಾರಾಜಃ ಪುರೂರವಾಃ ।**
**ತದಾಶ್ರಮಪದಂ ಪ್ರಾಪ್ತೋ ದೇವದೇವಪ್ರಸಾದತಃ ॥೭೬॥**

**ತದಾಶ್ರಮಂ ಶ್ರಮಶಮನಂ ಮನೋಹರಂ**
**ಮನೋಹರೈಃ ಕುಸುಮಶತೈರಲಂಕೃತಂ ।**

---

೭೩. ಆ ಪುಣ್ಯಾರಣ್ಯದಲ್ಲಿ ದುಂಬಿಗಳು ಎಡೆಬಿಡದೆ ಝೇಂಕರಿಸುತ್ತಿರುವುವು. ದೇವತಾಸ್ತ್ರೀಯರು ಸೇವೆಮಾಡುತ್ತಿರುವರು. ಸಕಲಪಾಪಗಳೂ ಪರಿಹಾರವಾಗುವುವು ಅದು ಹಿಮವಂತನು ಧರಿಸಿದ ಶ್ರೇಷ್ಠವಾದ ಹಾರವೋ ಎನ್ನುವಂತೆ ವಿರಾಜಿಸುವುದು.

೭೪. ಎಲೈ ರಾಜನೇ, ಕಪಿಗಳು ಆಟವಾಡುತ್ತ ಒಂದೆಡೆಯಿಂದ ಮತ್ತೊಂದೆಡೆಗೆ ಹೋಗುತ್ತಿದ್ದುವು. ಅಲ್ಲಿ ಅವು ಮಂಜನ್ನು ಕೂಡಿಸಿ ರಾಶಿ ಹಾಕುತ್ತಿದ್ದುವು. ಆ ರಾಶಿಗಳು ಚಂದ್ರಬಿಂಬದಂತೆ ಶುಭ್ರವಾಗಿ ಪ್ರಕಾಶಿಸುತ್ತಿದ್ದುವು.

೭೫. ಆ ಆಶ್ರಮದ ನಾಲ್ಕುಕಡೆಯೂ ಮಂಜಿನಿಂದ ತುಂಬಿದ ಗವಿಗಳೂ, ಬೆಟ್ಟದ ಸಾಲುಗಳೂ ಸುತ್ತುವರಿದಿದ್ದುವು. ಅದು ಮನುಷ್ಯರ ಸಂಚಾರಕ್ಕೆ ಅಸಾಧ್ಯವಾದ ಸ್ಥಳವಾಗಿತ್ತು.

೭೬. ಪುರೂರವಮಹಾರಾಜನು ಹಿಂದಿನ ಜನ್ಮದಲ್ಲಿ ದೃಢಭಕ್ತಿಯಿಂದ ಭಗವಂತನನ್ನು ಆರಾಧನಮಾಡಿದ್ದನು. ಅದಕಾರಣ ಆ ದೇವದೇವನ ಅನುಗ್ರಹದಿಂದ ಆವನು ಆಶ್ರಮಸ್ಥಳವನ್ನು ಸೇರಿದನು.

೭೭. ಮನೋಹರವಾದ ಆ ಆಶ್ರಮವು ಆಯಾಸವನ್ನು ಪರಿಹರಿಸುತ್ತಿತ್ತು. ರಮ್ಯವಾದ ನೂರಾರು ಬಗೆಯ ಹೂಗಳಿಂದ ಅಲಂಕೃತವಾಗಿತ್ತು. ಸಾಲದುದಕ್ಕೆ

**ಕೃತಂ ಸ್ವಯಂ ರುಚಿರಮಥಾತ್ರಿಣಾ ಶುಭಂ**
**ಶುಭಾವಹಂ ಚ ಹಿ ದದೃಶೇ ಸ ಮದ್ರರಾಟ್ ॥೭೭॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಭುವನಕೋಶೇ ಆತ್ರಮವರ್ಣನಂ ನಾಮಾಷ್ಟಾದಶಾಧಿಕ ಶತತಮೋಽಧ್ಯಾಯಃ**

---

ಅತ್ರಿಮಹರ್ಷಿಯು ಅದನ್ನು ಮತ್ತಷ್ಟು ಸುಂದರವಾಗಿ ಮಾಡಿದ್ದನು. ಇಂತಹ ಶುಭಪ್ರದವಾದ ತಪೋವನವನ್ನು ಮದ್ರೇಶ್ವರನು ನೋಡಿದನು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಹಿಮಾಚಲದ ಪುಣ್ಯಾಶ್ರಮವನ್ನು ವರ್ಣಿಸಿದೆ.

ಪುರೂರವರಾಜನು ಮುಂದೆ ನಡೆಯುತ್ತ ಐರಾವತೀನದಿಯ ಉತ್ಪತ್ತಿ ಸ್ಥಾನವಾದ ಹಿಮವತ್ಪರ್ವತದ ಬಳಿಗೆ ಹೋದನು. ಅದು ಬಹು ಮನೋಹರವಾದ ಸ್ಥಳವಾಗಿದ್ದಿತು. ಎಲ್ಲಬಗೆಯ ಗಿಡಮರಗಳೂ, ಹೂ ಬಳ್ಳಿಗಳೂ ಅಲ್ಲಿ ಬೆಳೆದಿದ್ದುವು. ಅಲ್ಲಿ ಕಾಣದ ಹೂ, ಹಣ್ಣು, ಕಾಯಿಪಲ್ಯ, ಧಾನ್ಯ ಮುಂತಾದುವನ್ನು ಮತ್ತೆಲ್ಲಿಯೂ ನೋಡುವಂತಿರಲಿಲ್ಲ. ನಾನಾಜಾತಿಯ ಪಶುಗಳೂ ಮೃಗಪಕ್ಷಿಗಳೂ ಅಲ್ಲಿ ವಾಸಿಸುತ್ತಿದ್ದುವು. ಆದರೆ ಅವು ಪರಸ್ಪರ ವೈರವನ್ನು ಬಿಟ್ಟಿದ್ದುವು. ಮಾಂಸಾಹಾರಿಗಳಾದ ಮೃಗಗಳು ಹಾಲು ಹಣ್ಣುಗಳಿಂದ ಜೀವಿಸುತ್ತಿದ್ದುವು. ಏಕೆಂದರೆ ಅದು ಅತ್ರಿಮಹರ್ಷಿಯ ತಪೋವನವಾಗಿದ್ದಿತು. ಆದಕಾರಣ ಅಲ್ಲಿ ಸತ್ವಗುಣವು ನೆಲೆಸಿದ್ದಿತು. ಅದು ಮನುಷ್ಯರಿಗೆ ಅಗಮ್ಯವಾದ ಸ್ಥಳ. ಆದರೂ ಜನ್ಮಾಂತರದ ಪೂಜಾ ಫಲದಿಂದ ಪುರೂರವ ಮಹಾರಾಜನು ಅಲ್ಲಿಗೆ ಹೋಗಿ ಸೇರಿದನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಭುವನಕೋಶದೊಳಗೆ ಆಶ್ರಮವರ್ಣನವೆಂಬ ನೂರ ಹದಿನೆಂಟನೆಯ ಅಧ್ಯಾಯವು ಮುಗಿದುದು.

## ಅಥ ಏಕೋನವಿಂಶತ್ಯಧಿಕಶತತಮೋಽಧ್ಯಾಯಃ

॥ ಸೂತ ಉವಾಚ ॥

ತತ್ರ ಯೌ ತೌ ಮಹಾಶೃಂಗೌ ಮಹಾವರ್ಣೌ ಮಹಾಹಿಮೌ ।
ತೃತೀಯಂ ತು ತಯೋರ್ಮಧ್ಯೇ ಶೃಂಗಮತ್ಯಂತಮುಚ್ಛ್ರಿತಂ ॥ ೧ ॥

ನಿತ್ಯಾತಪ್ತಶಿಲಾಜಾಲಂ ಸದಾಭ್ರಪರಿವರ್ಜಿತಂ ।
ತಸ್ಯಾಧಸ್ತಾದ್ವೃಕ್ಷಗಣೋ ದಿಶಾಂ ಭಾಗೇ ಚ ಪಶ್ಚಿಮೇ ॥ ೨ ॥

ಜಾತೀಲತಾಪರಿಕ್ಷಿಪ್ತಂ ವಿವರಂ ಚಾರುದರ್ಶನಂ ।
ದೃಷ್ಟ್ವೈವ ಕೌತುಕಾವಿಷ್ಟಸ್ತಂ ವಿವೇಶ ಮಹೀಪತಿಃ ॥ ೩ ॥

ತಮಸಾ ಜಾತಿನಿಬಿಡಂ ನಲ್ವಮಾತ್ರಂ ಸುಸಂಕಟಂ ।
ನಲ್ವಮಾತ್ರಮತಿಕ್ರಮ್ಯ ಸ್ವಪ್ರಭಾಭರಣೋಜ್ಜ್ವಲಂ ॥ ೪ ॥

---

೧. ಸೂತಪೌರಾಣಿಕನು ಹೇಳಿದನು.—ದಟ್ಟವಾದ ಮಂಜಿನಿಂದ ತುಂಬಿ ಶುಭ್ರವರ್ಣದಿಂದ ಪ್ರಕಾಶಿಸುವ ಎರಡು ಶಿಖರಗಳುಂಟೆಂದು ಹೇಳಿದೆನಲ್ಲವೇ! ಅವುಗಳ ನಡುವೆ ಬಹಳ ಎತ್ತರವಾದ ಮೂರನೆಯ ಶಿಖರವು ಮತ್ತೊಂದಿರುವುದು.

೨. ಅದರ ಬಂಡೆಗಳು ಯಾವಾಗಲೂ ಬಿಸಿಲಿನಿಂದ ಕಾದು ಬಹಳ ಬಿಸಿಯಾಗಿರುವುವು. ಮೋಡವು ಅಲ್ಲಿ ಎಂದೂ ಸುಳಿಯದು. ಅದರ ಕೆಳಗಡೆ ಪಶ್ಚಿಮ ಭಾಗದಲ್ಲಿ ಮರಗಳು ಗುಂಪಾಗಿರುವುವು.

೩. ಅಲ್ಲೊಂದು ಸುಂದರವಾದ ಗವಿಯಿದೆ. ಅದರ ಸುತ್ತಲೂ ಜಾಜಿಯ ಬಳ್ಳಿಗಳು ಬೆಳೆದು ದಟ್ಟವಾಗಿ ಕವಿಚಿಕೊಂಡಿವೆ. ಪುರೂರವರಾಜನು ಅದನ್ನು ಕಂಡು ಕುತೂಹಲದಿಂದ ಒಳಗೆ ಪ್ರವೇಶಿಸಿದನು.

೪. ನಾನೂರು ಮೊಳದಷ್ಟು ದೂರ ಅದು ಬಲು ಇಕ್ಕಟ್ಟಾಗಿ ಕಗ್ಗತ್ತಲೆಯಿಂದ ತುಂಬಿದ್ದಿತು. ಅಲ್ಲಿಂದ ಮುಂದೆ ಪ್ರಕಾಶದಿಂದ ಬೆಳಗುತ್ತಿತ್ತು.

ತಮುಚ್ಛ್ರಿತಮಥಾತ್ಯಂತಂ ಗಂಭೀರಂ ಪರಿವರ್ತುಲಂ ।
ನ ತತ್ರ ಸೂರ್ಯಸ್ತಪತಿ ನ ವಿರಾಜತಿ ಚಂದ್ರಮಾಃ ॥ ೫ ॥

ತಥಾಪಿ ದಿವಸಾಕಾರಂ ಪ್ರಕಾಶಂ ತದಹರ್ನಿಶಂ ।
ಕ್ರೋಶಾಧಿಕಪರೀಮಾಣಂ ಸರಸಾ ಚ ವಿರಾಜಿತಂ ॥ ೬ ॥

ಸಮಂತಾತ್ಸರಸಸ್ತಸ್ಯ ಶೈಲಲಗ್ನಾ ತು ವೇದಿಕಾ ।
ಸೌವರ್ಣೈ ರಾಜತೈರ್ವೃಕ್ಷೈರ್ವಿದ್ರುಮೈರುಪಶೋಭಿತಂ ॥ ೭ ॥

ನಾನಾಮಾಣಿಕ್ಯಕುಸುಮೈಃ ಸುಪ್ರಭಾಭರಣೋಜ್ಜ್ವಲೈಃ ।
ತಸ್ಮಿನ್ ಸರಸಿ ಪದ್ಮಾನಿ ಪದ್ಮರಾಗಚ್ಛದಾನಿ ತು ॥ ೮ ॥

ವಜ್ರಕೇಸರಜಾಲಾನಿ ಸುಗಂಧೀನಿ ತಥಾ ಯುತಂ ।
ಪತ್ರೈರ್ಮರಕತೈರ್ನೀಲೈರ್ವೈದೂರ್ಯಸ್ಯ ಮಹೀಪತೇ ॥ ೯ ॥

---

೫. ಆ ಗುಹೆಯು ಬಲು ಎತ್ತರವಾಗಿಯೂ ವರ್ತುಲಾಕಾರವಾಗಿಯೂ ಇದ್ದಿತು. ನಿಶ್ಶಬ್ದವಾಗಿ ಪ್ರಶಾಂತತೆಯಿಂದ ತುಂಬಿದ್ದಿತು. ಅಲ್ಲಿ ಚಂದ್ರನಾಗಲಿ ಸೂರ್ಯನಾಗಲಿ ಪ್ರಕಾಶಿಸುತ್ತಿರಲಿಲ್ಲ.

೬. ಆದರೂ ಹಗಲು ರಾತ್ರಿಗಳೆರಡರಲ್ಲೂ ಒಂದೇ ಸಮನಾದ ಪ್ರಕಾಶ ವಿರುತ್ತಿತ್ತು. ಅದು ಒಂದು ಯೋಜನಕ್ಕಿಂತಲೂ ಹೆಚ್ಚು ವಿಸ್ತಾರವಾಗಿತ್ತು. ಅದರಲ್ಲಿ ಒಂದು ಸರೋವರವು ಕಂಗೊಳಿಸುತ್ತಿತ್ತು.

೭. ಆ ಸರೋವರದ ಸುತ್ತಲೂ ಬೆಟ್ಟಕ್ಕೆ ಸೇರಿಕೊಂಡಂತೆ ಒಂದು ಜಗಲಿ ಯಿತ್ತು. ಚಿನ್ನ, ಬೆಳ್ಳಿ, ಹವಳ ಇವುಗಳ ಮರಗಳಿಂದ ಆ ಪ್ರದೇಶವು ಶೋಭಿಸುತ್ತಿತ್ತು.

೮-೯. ಆ ಮರಗಳಲ್ಲಿ ಬಗೆಬಗೆಯ ರತ್ನದ ಹೂಗಳೂ, ಹೊಳೆಹೊಳೆವ ಆಭರಣಗಳೂ ಬಿಟ್ಟಿದ್ದುವು. ಆ ಸರೋವರದ ತಾವರೆಗಳ ಎಸಳು ಪದ್ಮರಾಗಮಯ ವಾಗಿತ್ತು. ಕೇಸರಗಳು ವಜ್ರದಿಂದ ಆಗಿದ್ದುವು. ಆದರೂ ಪರಿಮಳಕ್ಕೆ ಯಾವ ಕೊರತೆಯೂ ಇರಲಿಲ್ಲ. ಓ ರಾಜಾ, ಎಲೆಗಳು ಪಚ್ಚೆ, ನೀಲ ಮತ್ತು ವೈಡೂರ್ಯ ಗಳಿಂದ ರಚಿತವಾಗಿದ್ದುವು.

ಕರ್ಣಿಕಾಶ್ಚ ತಥಾ ತೇಷಾಂ ಜಾತರೂಪಸ್ಯ ಪಾರ್ಥಿವ ।
ತಸ್ಮಿನ್ ಸರಸಿ ಯಾ ಭೂಮಿರ್ನ ಸಾ ವಜ್ರಸಮಾಕುಲಾ ॥೧೦॥

ನಾನಾರತ್ನೈರುಪಚಿತಾ ಜಲಜಾನಾಂ ಸಮಾಶ್ರಯಾ ।
ಕಪರ್ದಿಕಾನಾಂ ಶುಕ್ತೀನಾಂ ಶಂಖಾನಾಂ ಚ ಮಹೀಪತೇ ॥೧೧॥

ಮಕರಾಣಾಂ ಚ ಮತ್ಸ್ಯಾನಾಂ ಚಂಡಾನಾಂ ಕಚ್ಛಪೈಃ ಸಹ ।
ತತ್ರ ಮರಕತಖಂಡಾನಿ ವಜ್ರಾಣಾಂ ಚ ಸಹಸ್ರಶಃ ॥೧೨॥

ಪದ್ಮರಾಗೇಂದ್ರನೀಲಾನಿ ಮಹಾನೀಲಾನಿ ಪಾರ್ಥಿವ ।
ಪುಷ್ಪರಾಗಾಣಿ ಸರ್ವಾಣಿ ತಥಾ ಕರ್ಕೋಟಕಾನಿ ಚ ॥೧೩॥

ತುತ್ಥಕಸ್ಯ ತು ಖಂಡಾನಿ ತಥಾ ಶೇಷಸ್ಯ ಭಾಗಶಃ ।
ರಾಜಾವರ್ತಸ್ಯ ಮುಖ್ಯಸ್ಯ ರುಚಿರಾಕ್ಷಸ್ಯ ಚಾಪ್ಯಥ ॥೧೪॥

ಸೂರ್ಯೇಂದುಕಾಂತಯಶ್ಚೈವ ನೀಲೋ ವರ್ಣಾಂತಿಮಶ್ಚ ಯಃ ।
ಜ್ಯೋತೀರಸಸ್ಯ ರಮ್ಯಸ್ಯ ಸ್ಯಮಂತಸ್ಯ ಚ ಭಾಗಶಃ ॥೧೫॥

---

೧೦-೧೧. ಅವುಗಳ ಕರ್ಣಿಕೆಗಳೂ ಕೂಡ ಚಿನ್ನದಿಂದಲೇ ನಿರ್ಮಿತವಾಗಿದ್ದುವು. ಆ ಸರೋವರದ ಭೂಮಿ ಒರಿಯು ವಜ್ರದಿಂದ ಮಾತ್ರವೇ ತುಂಬಿರಲಿಲ್ಲ; ನಾನಾಜಾತಿಯ ರತ್ನಗಳಿಗೆ ಅದು ಎಡೆಯಾಗಿತ್ತು. ತಾವರೆಗಳಿಗೆ ಆಶ್ರಯವಾಗಿದ್ದಿತು. ಕವಡೆ, ಕಪ್ಪೆಯ ಚಿಪ್ಪು, ಶಂಖ, ಮೊಸಳೆ, ಭಯಂಕರವಾದ ಮೀನು ಮತ್ತು ಆನೆಗಳು ಇವುಗಳಿಗೆಲ್ಲ ಅದು ಆಸರೆಯಾಗಿತ್ತು.

೧೨-೧೫. ಪಚ್ಚೆ, ವಜ್ರ, ಪದ್ಮರಾಗ, ಇಂದ್ರನೀಲ, ಮಹಾನೀಲ ಮತ್ತು ಪುಷ್ಪರಾಗ ಮಣಿಗಳು ಅಲ್ಲಿ ದೇದೀಪ್ಯಮಾನವಾಗಿದ್ದುವು. ಕರ್ಕೋಟಕ, ತುತ್ಥಕ, ಶೇಷ, ರಾಜಾವರ್ತ, ರುಚಿರಾಕ್ಷ ಎಂಬ ಮುಖ್ಯ ಸರ್ಪಗಳ ಫಣಾರತ್ನಗಳು ವಿರಾಜಿಸುತ್ತಿದ್ದುವು. ಸೂರ್ಯಕಾಂತ ಮತ್ತು ಚಂದ್ರಕಾಂತ ಮಣಿಗಳೂ, ಶ್ರೇಷ್ಠವರ್ಣದ ನೀಲರತ್ನವೂ ಬೆಳಗುತ್ತಿದ್ದುವು. ರಮ್ಯವಾದ ಜ್ಯೋತೀರಸ ಮತ್ತು ಸ್ಯಮಂತಕಗಳೆಂಬ ರತ್ನ ವಿಶೇಷಗಳ ಪ್ರಭೆಯೂ ಅಲ್ಲಿ ವ್ಯಾಪಿಸಿದ್ದಿತು.

**ಸುರೋರಗವಲಕ್ಷ್ಮಾಣಾಂ ಸ್ಫಟಿಕಸ್ಯ ತಥೈವ ಚ ।**
**ಗೋಮೇದಪಿತ್ತಕಾನಾಂ ಚ ಧೂಲೀಮರಕತಸ್ಯ ಚ ॥೧೬॥**

**ವೈದೂರ್ಯಸೌಗಂಧಿಕಯೋಸ್ತಥಾ ರಾಜಮಣೇರ್ನೃಪ ।**
**ವಜ್ರಸ್ಯೈವ ಚ ಮುಖ್ಯಸ್ಯ ತಥಾ ಬ್ರಹ್ಮಮಣೇರಪಿ ॥೧೭॥**

**ಮುಕ್ತಾಫಲಾನಿ ಮುಕ್ತಾನಾಂ ತಾರಾವಿಗ್ರಹಧಾರಿಣಾಂ ॥೧೮॥**

**ಸುಖೋಷ್ಣಂ ಚೈವ ತತ್ತೋಯಂ ಸ್ನಾನಾಚ್ಛೀತವಿನಾಶನಂ ।**
**ವೈದೂರ್ಯಸ್ಯ ಶಿಲಾ ಮಧ್ಯೇ ಸರಸಸ್ತಸ್ಯ ಶೋಭನಾ ॥೧೯॥**

**ಪ್ರಮಾಣೇನ ತಥಾ ಸಾ ಚ ದ್ವೇ ಚ ರಾಜನ್ ಧನುಶ್ಶತೇ ।**
**ಚತುರಸ್ರಾ ತಥಾ ರಮ್ಯಾ ತಪಸಾ ನಿರ್ಮಿತಾತ್ರಿಣಾ ॥೨೦॥**

---

೧೬-೧೮. ಆದಿಶೇಷನಂತೆ ಶುಭ್ರವಾದ ರತ್ನಗಳು, ಸ್ಫಟಿಕಮಣಿಗಳು, ಗೋಮೇದಕ, ಪಚ್ಚೆಯ ಹುಡಿ, ವೈಡೂರ್ಯ, ಸೌಗಂಧಿಕ, ರಾಜಮಣಿ, ವಜ್ರ ಮತ್ತು ಬ್ರಹ್ಮಮಣಿ ಇವುಗಳ ಕಾಂತಿಯು ಪ್ರಕಾಶಿಸುತ್ತಿತ್ತು. ಅಲ್ಲಿ ಹುಟ್ಟಿದ ಮುತ್ತುಗಳು ನಕ್ಷತ್ರಗಳ ರೂಪವನ್ನು ಧರಿಸಿದ. ಮುಕ್ತರು ಧರಿಸುವಂತಹವುಗಳಾಗಿದ್ದವು. ಅವುಗಳ ಕಾಂತಿಯು ಎಲ್ಲೆಡೆಯಲ್ಲೂ ಪ್ರಸರಿಸುತ್ತಿತ್ತು.

೧೯. ಅಲ್ಲಿನ ನೀರು ಸುಖೋಷ್ಣವಾಗಿದ್ದಿತು. ಅದರಲ್ಲಿ ಸ್ನಾನಮಾಡಿದರೆ ಶೀತವು ಪರಿಹಾರವಾಗುತ್ತಿತ್ತು. ಆ ಸರೋವರದ ಮಧ್ಯದಲ್ಲಿ ಸೊಗಸಾದ ವೈಡೂರ್ಯ ರತ್ನದ ಶಿಲೆಯಿದ್ದಿತು.

೨೦. ಓ ಭೂಪಾಲಾ, ಆ ಶಿಲೆಯು ಚಚ್ಚೌಕವಾಗಿ ಎರಡು ನೂರು ಧನುಷ್ಪ್ರಮಾಣ ಎಂದರೆ ಎಂಟು ನೂರು ಮೊಳ ಅಳತೆಯುಳ್ಳದಾಗಿತ್ತು. ಅದು ಅತ್ರಿಮಹರ್ಷಿಯ ತಪಃಪ್ರಭಾವದಿಂದ ನಿರ್ಮಿತವಾಗಿತ್ತು.

**ಬಿಲದ್ವಾರಸಮೋ ದೇಶೋ ಯತ್ರ ಯತ್ರ ಹಿರಣ್ಮಯಃ ।**
**ಪ್ರದೇಶಃ ಸ ತು ರಾಜೇಂದ್ರ ದ್ವೀಪೇ ತಸ್ಮಿನ್ ಮನೋರಮೇ ॥೨೦॥**

**ತಥಾ ಪುಷ್ಕರಿಣೀ ರಮ್ಯಾ ತಸ್ಮಿನ್ ರಾಜಞ್ಛಿಲಾತಲೇ ।**
**ಸುಶೀತಾಮಲಪಾನೀಯಾ ಜಲಜೈಶ್ಚ ವಿರಾಜಿತಾ ॥೨೧॥**

**ಆಕಾಶಪ್ರತಿಮಾ ರಾಜಂಶ್ಚತುರಸ್ರಾ ಮನೋಹರಾ ।**
**ತಸ್ಯಾಸ್ತದುದಕಂ ಸ್ವಾದು ಲಘು ಶೀತಂ ಸುಗಂಧಿಕಂ ॥೨೨॥**

**ನ ಕ್ಷಿಣೋತಿ ಯಥಾ ಕಂಠಂ ಕುಕ್ಷಿಂ ನಾಪೂರಯತ್ಯಪಿ ।**
**ತೃಪ್ತಿಂ ವಿಧತ್ತೇ ಪರಮಾಂ ಶರೀರೇ ಚ ಮಹತ್ಸುಖಂ ॥೨೩॥**

---

೨೦. ಓ ರಾಜೇಂದ್ರಾ, ಮನೋಹರವಾದ ಆ ದ್ವೀಪದಲ್ಲಿ ಎತ್ತಕಡೆ ನೋಡಿದರೂ ನೆಲವು ಬಿಲದ ಬಾಗಿಲ ಬಳಿಯಿದ್ದಂತೆಯೇ ಮನೋಹರವಾಗಿತ್ತು. ಅಷ್ಟೇ ಅಲ್ಲ ; ಅದು ಸುವರ್ಣಮಯವೂ ಆಗಿದ್ದಿತು. ಅದರಲ್ಲೂ ಸರೋವರವಿದ್ದ ಪ್ರದೇಶವಂತೂ ಅತ್ಯಂತ ರಮಣೀಯವಾಗಿತ್ತು.

೨೧. ಆ ಶಿಲಾತಲದಲ್ಲಿ ರಮ್ಯವಾದ ಪುಷ್ಕರಿಣಿಯೊಂದುಂಟು. ಅದರ ನೀರು ತಂಪಾಗಿಯೂ ನಿರ್ಮಲವಾಗಿಯೂ ಇದ್ದಿತು. ಅದರಲ್ಲಿ ತಾವರೆಗಳು ಅರಳಿ ಕಂಗೊಳಿಸುತ್ತಿದ್ದುವು.

೨೨. ಓ ರಾಜಾ, ಮನೋಹರವಾದ ಆ ಕೊಳವು ಆಕಾಶದಂತೆ ನಿರ್ಮಲವಾಗಿ ಚಚ್ಚೌಕವಾಗಿತ್ತು. ಅದರ ನೀರು ಮಧುರವೂ, ಸ್ವಚ್ಛವೂ, ಶೀತಲವೂ, ಸುಗಂಧವೂ ಆಗಿದ್ದಿತು.

೨೩. ಆ ನೀರನ್ನು ಕುಡಿದರೆ ಗಂಟಲು ಕಟ್ಟದು ; ಹೊಟ್ಟೆಯಲ್ಲಿ ಭಾಧೆಯೂ ಆಗದು. ಅದು ಪರಿಪೂರ್ಣವಾದ ತೃಪ್ತಿಯನ್ನು ಕೊಟ್ಟು ಶರೀರಕ್ಕೆ ಸುಖವನ್ನು ಉಂಟುಮಾಡುತ್ತಿತ್ತು.

ಮಧ್ಯೇ ತು ತಸ್ಯಾಃ ಪ್ರಾಸಾದಂ ನಿರ್ಮಿತಂ ತಪಸಾತ್ರಿಣಾ ।
ರುಕ್ಮಸೇತುಪ್ರವೇಶಾಂತಂ ಸರ್ವರತ್ನಮಯಂ ಶುಭಂ ॥೨೫॥

ಶಶಾಂಕರಶ್ಮೇಃ ಸಂಕಾಶಂ ಪ್ರಾಸಾದಂ ರಾಜತಂ ಹಿತಂ ।
ರಮ್ಯವೈಡೂರ್ಯಸೋಪಾನಂ ವಿದ್ರುಮಾಮಲಸಾರಕಂ ॥೨೬॥

ಇಂದ್ರನೀಲಮಹಾಸ್ತಂಭಂ ಮರಕತಾಸಕ್ತವೇದಿಕಂ ।
ವಜ್ರಾಂಶುಜಾಲೈಃ ಸ್ಫುರಿತಂ ರಮ್ಯಂ ದೃಷ್ಟಿಮನೋರಮಂ ॥೨೭॥

ಪ್ರಾಸಾದೇ ತತ್ರ ಭಗವಾನ್ ದೇವದೇವೋ ಜನಾರ್ದನಃ ।
ಭೋಗಿಭೋಗಾವಲೀಸುಪ್ತಃ ಸರ್ವಾಲಂಕಾರಭೂಷಿತಃ ॥೨೮॥

ಜಾನುನಾ ಕುಂಚಿತಸ್ತ್ವೇಕೋ ದೇವದೇವಸ್ಯ ಚಕ್ರಿಣಃ ।
ಫಣೀಂದ್ರಸನ್ನಿವಿಷ್ಟೋಽಂಘ್ರಿರ್ದ್ವಿತೀಯಶ್ಚ ತಥಾನಘ ॥೨೯॥

---

೨೫. ಆ ಪುಷ್ಕರಿಣಿಯ ನಡುವೆ ಅತ್ರಿಮಹರ್ಷಿಯು ತನ್ನ ತಪಸ್ಸಿನ ಮಹಿಮೆಯಿಂದ ಒಂದು ದೇವಾಲಯವನ್ನು ನಿರ್ಮಿಸಿದ್ದನು. ಅದು ಸಕಲ ರತ್ನಮಯವಾಗಿ ಶುಭಕರವಾಗಿದ್ದಿತು. ಅಲ್ಲಿಗೆ ಹೋಗುವುದಕ್ಕೆ ಅನುಕೂಲಿಸುವಂತೆ ಚಿನ್ನದ ಸೇತುವೆಯೊಂದು ರಚಿತವಾಗಿದ್ದಿತು.

೨೬-೨೭. ಬೆಳ್ಳಿಯಿಂದ ಕಟ್ಟಿದ ಆ ಪ್ರಾಸಾದವು ಚಂದ್ರನ ಕಿರಣಗಳಂತೆ ಪ್ರಕಾಶಿಸುತ್ತಿತ್ತು. ಅದರ ಮೆಟ್ಟಲುಗಳು ಸುಂದರವಾದ ವೈಡೂರ್ಯ ರತ್ನಗಳಿಂದ ನಿರ್ಮಿತವಾಗಿದ್ದುವು. ಸೊಗಸಾದ ಹವಳಗಳಿಂದ ಅವು ಅಲಂಕೃತವಾಗಿದ್ದುವು. ಕಂಬಗಳನ್ನು ಇಂದ್ರನೀಲರತ್ನದಿಂದಲೂ, ಜಗಲಿಯನ್ನು ಪಚ್ಚೆಯ ರತ್ನದಿಂದಲೂ ಮಾಡಿದ್ದರು. ವಜ್ರಗಳ ಕಾಂತಿಯು ಪ್ರಸರಿಸುತ್ತ ಕಣ್ಮನಗಳನ್ನು ಸೆಳೆಯುತ್ತಿತ್ತು.

೨೮. ಆ ದೇವಸ್ಥಾನದಲ್ಲಿ ಷಡ್ಗುಣಪರಿಪೂರ್ಣನೂ, ದೇವದೇವನೂ ಆದ ಜನಾರ್ದನನು ಸರ್ವಾಲಂಕಾರಭೂಷಿತನಾಗಿ ಆದಿಶೇಷನ ದಿವ್ಯದೇಹದ ಮೇಲೆ ಪವಡಿಸಿದ್ದನು.

೨೯-೩೦. ದೇವಾಧಿದೇವನಾದ ಮಹಾವಿಷ್ಣುವು ಒಂದು ಪಾದವನ್ನು ಸ್ವಲ್ಪ ಮಡಿಸಿಕೊಂಡು ಆದಿಶೇಷನ ಮೇಲೆಯೂ, ಇನ್ನೊಂದನ್ನು ಲಕ್ಷ್ಮೀದೇವಿಯ ತೊಡೆ

**ಲಕ್ಷ್ಮ್ಯುತ್ಸಂಗಗತೋಽಂಘ್ರಿಸ್ತು ಶೇಷಭೋಗಪ್ರಶಾಯಿನಃ ।**
**ಫಣೀಂದ್ರಭೋಗಸಂನ್ಯಸ್ತ ಬಾಹುಃ ಕೇಯೂರಭೂಷಣಃ ॥೩೦॥**

**ಅಂಗುಲೀಪೃಷ್ಠವಿನ್ಯಸ್ತದೇವಶೀರ್ಷಧರಂ ಶುಭಂ ।**
**ಏಕಂ ವೈ ದೇವದೇವಸ್ಯ ದ್ವಿತೀಯಂ ವೈ ಪ್ರಸಾರಿತಂ ॥೩೧॥**

**ಸಮಾಕುಂಚಿತಜಾನುಸ್ಥಮಣಿಬಂಧೇನ ಶೋಭಿತಂ ।**
**ಕಿಂಚಿದಾಕುಂಚಿತಂ ಚೈವ ನಾಭಿದೇಶಕರಸ್ಥಿತಂ ॥೩೨॥**

**ತೃತೀಯಂ ತು ಭುಜಂ ತಸ್ಯ ಚತುರ್ಥಂ ತು ತಥಾ ಶೃಣು ।**
**ಆತ್ತಸಂತಾನಕುಸುಮಂ ಘ್ರಾಣದೇಶಾನುಸರ್ಪಿಣಂ ॥೩೩॥**

**ಲಕ್ಷ್ಮ್ಯಾ ಸಂವಾಹ್ಯಮಾನಾಂಘ್ರಿಃ ಪದ್ಮಪತ್ರನಿಭೈಃ ಕರೈಃ ।**
**ಸಂತಾನಮಾಲಾಮುಕುಟಂ ಹಾರಕೇಯೂರಭೂಷಿತಂ ॥೩೪॥**

---

ಗಳ ಮೇಲೆಯೂ ಇಟ್ಟಿದ್ದನು. ಕೇಯೂರಗಳಿಂದ ಅಲಂಕೃತವಾಗಿದ್ದ ಒಂದು ಬಾಹುವನ್ನು ಆದಿಶೇಷನ ಮೈಮೇಲೆ ಇರಿಸಿದ್ದನು.

೩೧. ಭಗವಂತನು ತನ್ನ ತಲೆಯನ್ನು ಕೈಯ ಬೆರಳುಗಳ ಮೇಲೆ ಇಟ್ಟುಕೊಂಡಿದ್ದನು. ಮತ್ತೊಂದು ತೋಳನ್ನು ನೀಡಿದ್ದನು.

೩೨-೩೩. ಈ ಕೈಯ ಮಣಿಕಟ್ಟು ಸ್ವಲ್ಪ ಮಡಿಸಿಕೊಂಡಿದ್ದ ಮೊಣಕಾಲನ್ನು ಮುಟ್ಟುತ್ತಿತ್ತು. ಮೂರನೆಯ ಕೈಯೂ ಸಹ ಸ್ವಲ್ಪ ಮಡಿಸಿಕೊಂಡಿದ್ದು ನಾಭಿಸ್ಥಲವನ್ನು ಸ್ಪರ್ಶಿಸುತ್ತಿತ್ತು. ಭಗವಂತನು ತನ್ನ ನಾಲ್ಕನೆಯ ಹಸ್ತದಲ್ಲಿ ಪಾರಿಜಾತ ಪುಷ್ಪವನ್ನು ಹಿಡಿದುಕೊಂಡು ಆಘ್ರಾಣಮಾಡುತ್ತಿದ್ದನು.

೩೪. ಲಕ್ಷ್ಮೀದೇವಿಯು ತಾವರೆಯ ಎಸಳಿನಂತೆ ಕೋಮಲವಾದ ತನ್ನ ಕೈಗಳಿಂದ ದೇವದೇವನ ಪಾದಗಳನ್ನು ಒತ್ತುತ್ತಿದ್ದಳು. ಆತನು ಪಾರಿಜಾತ ಕುಸುಮದ ಕಿರೀಟವನ್ನು ಧರಿಸಿ, ತೋಳುಬಳೆಗಳನ್ನು ತೊಟ್ಟು ಹಾರಗಳನ್ನು ಹಾಕಿಕೊಂಡಿದ್ದನು.

**ಭೂಷಿತಂ ಚ ತಥಾ ದೇವಮಂಗದೈರಂಗುಲೀಯಕೈಃ ।**
**ಫಣೀಂದ್ರಫಣವಿನ್ಯಸ್ತ ಚಾರುರತ್ನಶಿಖೋದ್ವಹಂ ॥೩೫॥**

**ಅಜ್ಞಾತವಸ್ತುಚರಿತಂ ಪ್ರತಿಷ್ಠಿತಮಥಾತ್ರಿಣಾ ।**
**ಸಿದ್ಧಾನುಪೂಜ್ಯಂ ಸತತಂ ಸಂತಾನಕುಸುಮಾರ್ಚಿತಂ ॥೩೬॥**

**ದಿವ್ಯಗಂಧಾನುಲಿಪ್ತಾಂಗಂ ದಿವ್ಯಧೂಪೇನ ಧೂಪಿತಂ ।**
**ಸುರಸೈಃ ಸುಫಲೈರ್ಹೃದ್ಯೈಃ ಸಿದ್ಧೈರುಪಹೃತೈಃ ಸದಾ ॥೩೭॥**

**ಶೋಭಿತೋತ್ತಮಪಾರ್ಶ್ವಂ ತಂ ದೇವಮುತ್ಪಲಶೀರ್ಷಕಂ ।**
**ತತಃ ಸಂಮುಖಮುದ್ವೀಕ್ಷ್ಯ ವವಂದೇ ಸ ನರಾಧಿಪಃ ॥೩೮॥**

**ಜಾನುಭ್ಯಾಂ ಶಿರಸಾ ಚೈವ ಗತ್ವಾ ಭೂಮಿಂ ಯಥಾವಿಧಿ ।**
**ನಾಮ್ನಾಂ ಸಹಸ್ರೇಣ ತದಾ ತುಷ್ಟಾವ ಮಧುಸೂದನಂ ॥೩೯॥**

---

೩೫. ಆತನ ಕೈಯಲ್ಲಿ ಬಳೆಗಳೂ ಬೆರಳುಗಳಲ್ಲಿ ಉಂಗುರುಗಳೂ ಹೊಳೆಯುತ್ತಿದ್ದುವು. ಆದಿಶೇಷನ ಹೆಡೆಯ ದಿವ್ಯರತ್ನಗಳ ಕಾಂತಿಯು ಅವನ ಮೇಲೆ ಪ್ರಸರಿಸುತ್ತಿತ್ತು.

೩೬. ಆ ಪರಮಪುರುಷನ ಚರಿತ್ರವನ್ನು ಇಷ್ಟೇ ಸರಿಯೆಂದು ತಿಳಿಯಲು ಅಸಾಧ್ಯ. ಅತ್ರಿಮಹರ್ಷಿಯು ಆತನನ್ನು ಅಲ್ಲಿ ಪ್ರತಿಷ್ಠೆಮಾಡಿದನು. ಸಿದ್ಧರು ಅವನನ್ನು ನಿತ್ಯವೂ ಪೂಜಿಸಿ ಪಾರಿಜಾತ ಕುಸುಮಗಳಿಂದ ಅರ್ಚಿಸುತ್ತಿದ್ದರು.

೩೭–೩೮. ಆ ಲಕ್ಷ್ಮೀಲೋಲನ ದಿವ್ಯದೇಹವು ಪರಿಮಳ ಗಂಧದಿಂದ ಲಿಪ್ತವಾಗಿದ್ದಿತು. ಒಳ್ಳೆಯ ಧೂಪದ ವಾಸನೆಯು ಸುತ್ತಲೂ ವ್ಯಾಪಿಸುತ್ತಿತ್ತು. ಸಿದ್ಧರು ಒಪ್ಪಿಸಿದ ಮನೋಹರವೂ, ರಸಭರಿತವೂ ಆದ ಫಲಗಳು ಸಮೀಪದಲ್ಲಿ ಪ್ರಕಾಶಿಸುತ್ತಿದ್ದುವು. ಆತನ ಕಿರೀಟವು ನೈದಿಲೆ ಹೂಗಳಿಂದ ಅಲಂಕೃತವಾಗಿದ್ದಿತು. ಪುರೂರವರಾಜನು ಆ ದಿವ್ಯಮಂಗಳ ವಿಗ್ರಹವನ್ನು ನೋಡಿ ನಮಸ್ಕಾರಮಾಡಿದನು.

೩೯. ಮೊಣಕಾಲುಗಳೂ ತಲೆಯೂ ನೆಲಕ್ಕೆ ತಗಲುವಂತೆ ಶಾಸ್ತ್ರೋಕ್ತವಾಗಿ ಪ್ರಣಾಮವನ್ನು ಮಾಡಿ, ಸಾವಿರ ದಿವ್ಯನಾಮಗಳನ್ನು ಉಚ್ಚರಿಸಿ ಸ್ತುತಿಸಿದನು.

ಪ್ರದಕ್ಷಿಣಮಥೋ ಚಕ್ರೇ ಸ ತೂತ್ಥಾಯ ಪುನಃ ಪುನಃ ।
ರಮ್ಯಮಾಯತನಂ ದೃಷ್ಟ್ವಾ ತತ್ರೋವಾಸಾಶ್ರಮೇ ಪುನಃ ॥೪೦॥

ಬಿಲಾದ್ಬಹಿರ್ಗುಹಾಂ ಕಾಂಚಿದಾಶ್ರಿತ್ಯ ಸುಮನೋಹರಾಂ ।
ತಪಶ್ಚಕಾರ ತತ್ರೈವ ಪೂಜಯನ್ಮಧುಸೂದನಂ ॥೪೧॥

ನಾನಾವಿಧೈಸ್ತಥಾ ಪುಣ್ಯೈಃ ಫಲಮೂಲೈಃ ಸಗೋರಸೈಃ ।
ನಿತ್ಯಂ ತ್ರಿಷವಣಸ್ನಾಯೀ ವಹ್ನಿಪೂಜಾಪರಾಯಣಃ ॥೪೨॥

ದೇವವಾಪೀಜಲೈಃ ಕುರ್ವನ್ ಸತತಂ ಪ್ರಾಣಧಾರಣಂ ।
ಸರ್ವಾಹಾರಪರಿತ್ಯಾಗಂ ಕೃತ್ವಾ ತು ಮನುಜೇಶ್ವರಃ ॥೪೩॥

ಅನಾಸ್ತೃತಗುಹಾಶಾಯೀ ಕಾಲಂ ನಯತಿ ಪಾರ್ಥಿವಃ ।
ತ್ಯಕ್ತಾಹಾರಕ್ರಿಯಶ್ಚೈವ ಕೇವಲಂ ತೋಯತೋ ನೃಪಃ
ನ ತಸ್ಯ ಗ್ಲಾನಿಮಾಯಾತಿ ಶರೀರಂ ಚ ತದದ್ಭುತಂ ॥೪೪॥

---

೪೦. ಅವನು ಮೇಲಕ್ಕೆ ಎದ್ದು ಮತ್ತೆ ಮತ್ತೆ ಪ್ರದಕ್ಷಿಣವನ್ನು ಮಾಡಿದನು. ಆ ಆಶ್ರಮದಲ್ಲಿ ರಮಣೀಯವಾದ ಆಲಯವೊಂದನ್ನು ನೋಡಿ ಅಲ್ಲಿ ವಾಸಿಸಿದನು.

೪೧-೪೨. ಭೂಪಾಲಕನು ಆ ಬಿಲದ ಹೊರಗಡೆ ಒಂದಾನೊಂದು ಗುಹೆಯಲ್ಲಿ ತಪಸ್ಸುಮಾಡುತ್ತಿದ್ದನು. ನಾನಾವಿಧವಾದ ಹಣ್ಣುಗಳು, ಶಾಸ್ತ್ರೀಯವಾದ ಗೆಡ್ಡೆಗೆಣಸುಗಳು, ಹಸುವಿನ ಹಾಲು ಇವುಗಳನ್ನು ನೈವೇದ್ಯಮಾಡಿ ನಾರಾಯಣನನ್ನು ಪೂಜಿಸುತ್ತಿದ್ದನು. ಪ್ರತಿದಿನವೂ ಮೂರು ವೇಳೆಗಳಲ್ಲಿ ಸ್ನಾನಮಾಡುತ್ತಿದ್ದನು. ಓಪಾಸನ, ಅಗ್ನಿಹೋತ್ರ ಇವುಗಳನ್ನು ತಪ್ಪದೆ ನಡೆಸುತ್ತಿದ್ದನು.

೪೩. ಆ ರಾಜನು ಎಲ್ಲ ಬಗೆಯ ಆಹಾರವನ್ನೂ ತೊರೆದನು. ದಿವ್ಯವಾದ ಆ ಪುಷ್ಕರಣಿಯ ಜಲಪಾನದಿಂದಲೇ ಪ್ರಾಣಧಾರಣವನ್ನು ಮಾಡಿಕೊಂಡಿದ್ದನು.

೪೪. ಆ ಭೂಪಾಲಕನು ಗುಹೆಯಲ್ಲಿ ಬರಿಯ ನೆಲದ ಮೇಲೆಯೇ ಮಲಗುತ್ತಿದ್ದನು. ಆಹಾರವನ್ನು ಸಂಪೂರ್ಣವಾಗಿ ತೊರೆದು ಕೇವಲ ಜಲಪಾನದಿಂದ ಕಾಲಕಳೆಯುತ್ತಿದ್ದರೂ ಆತನ ದೇಹವು ಕೃಶವಾಗಲಿಲ್ಲ. ಇದು ಅತ್ಯಾಶ್ಚರ್ಯ.

**ಏವಂ ಸ ರಾಜಾ ತಪಸಿ ಪ್ರಸಕ್ತಃ**
**ಸಂಪೂಜಯನ್ ದೇವವರಂ ಸದೈವ।**
**ತತ್ರಾಶ್ರಮೇ ಕಾಲಮುವಾಸ ಕಂಚಿತ್**
**ಸ್ವರ್ಗೋಪಮೇ ದುಃಖಮವಿಂದಮಾನಃ ॥೪೫॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಭುವನಕೋಶೇ ಆಯತನ ವರ್ಣನಂ ನಾಮೈಕೋನವಿಂಶತ್ಯಧಿಕಶತತಮೋಽಧ್ಯಾಯಃ**

---

೪೫. ಹೀಗೆ ಆ ರಾಜನು ತಪಸ್ಸಿನಲ್ಲಿ ನಿರತನಾಗಿ ಯಾವಾಗಲೂ ದೇವ ದೇವನಾದ ಜನಾರ್ದನನನ್ನು ಪೂಜಿಸುತ್ತಿದ್ದನು. ಸ್ವರ್ಗಸದೃಶವಾದ ಆ ಆಶ್ರಮದಲ್ಲಿ ದುಃಖವೆಂಬುದನ್ನೇ ಕಾಣದೆ ಕೆಲವು ಕಾಲ ವಾಸವಾಗಿದ್ದನು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಪುರೂರವರಾಜನು ನೋಡಿದ ದೇವಾಲಯವನ್ನು ವರ್ಣಿಸಿದೆ.

ಹಿಮವತ್ಪರ್ವತದ ತಪ್ಪಲಿನಲ್ಲಿ ದೊಡ್ಡ ಬಿಲವಿತ್ತು. ಪುರೂರವರಾಜನು ಅದರ ಒಳಹೊಕ್ಕನು. ಸ್ವಲ್ಪ ದೂರ ಕತ್ತಲೆ ಕವಿದಿದ್ದರೂ, ಮುಂದೆ ಅದು ವಿಶಾಲವಾಗಿ ಪ್ರಕಾಶದಿಂದ ತುಂಬಿದ್ದಿತು. ಅಲ್ಲಿ ರಮಣೀಯವಾದ ಒಂದು ಸರೋವರವೂ, ಅದರ ನಡುವೆ ವಜ್ರಮಯವಾದ ದೊಡ್ಡ ಶಿಲೆಯೂ ಇದ್ದುವು. ಆ ಶಿಲಾತಲದಲ್ಲಿ ಒಂದು ಪುಷ್ಕರಣಿಯಿತ್ತು. ಅದರ ಮಧ್ಯದಲ್ಲಿ ರತ್ನಖಚಿತವಾದ ದೇವಸ್ಥಾನವಿದ್ದಿತು. ಅಲ್ಲಿ ಶೇಷಶಾಯಿಯಾದ ಮಹಾವಿಷ್ಣುವಿನ ದಿವ್ಯಮಂಗಳ ವಿಗ್ರಹವು ವಿರಾಜಿಸುತ್ತಲಿದ್ದಿತು. ದೇವತೆಗಳು ನಿತ್ಯವೂ ಬಂದು ಆ ಭಗವಂತನನ್ನು ಪೂಜಿಸುತ್ತಿದ್ದರು. ರಾಜನು ಬಹು ಭಕ್ತಿಯಿಂದ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ, ಮಹಾವಿಷ್ಣುವನ್ನು ಅರ್ಚಿಸುತ್ತ, ಅಲ್ಲೇ ಒಂದು ಗುಹೆಯಲ್ಲಿ ವಾಸಿಸುತ್ತಿದ್ದನು. ಅವನು ಆಹಾರವನ್ನು ತೊರೆದು ಜಲಪಾನದಿಂದಲೇ ಶರೀರ ಧಾರಣವನ್ನು ಮಾಡಿಕೊಂಡಿದ್ದನು. ಆದರೂ ಅವನಿಗೆ ಶ್ರಮವೇ ತೋರಲಿಲ್ಲ.

ಶ್ರೀಮತ್ಸ್ಯಮಹಾಪುರಾಣದಲ್ಲಿ ಭುವನಕೋಶದೊಳಗೆ ಆಯತನವರ್ಣನವೆಂಬ ನೂರಹತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

## ಅಥ ವಿಂಶತ್ಯಧಿಕಶತತಮೋಽಧ್ಯಾಯಃ

॥ ಸೂತ ಉವಾಚ ॥

ಸ ತ್ವಾಶ್ರಮಪದೇ ರಮ್ಯೇ ತ್ಯಕ್ತ್ವಾಹಾರಪರಿಚ್ಛದಃ ।
ಕ್ರೀಡಾವಿಹಾರಂ ಗಂಧರ್ವೈಃ ಪಶ್ಯತ್ಯಪ್ಸರಸಾಂ ಸಹ ॥ ೧ ॥

ಕೃತ್ವಾ ಪುಷ್ಪೋಚ್ಚಯಂ ಭೂರಿ ಗ್ರಥಯಿತ್ವಾ ತಥಾ ಸ್ರಜಃ ।
ಅಗ್ರ್ಯಂ ನಿವೇದ್ಯ ದೇವಾಯ ಗಂಧರ್ವೇಭ್ಯಸ್ತದಾ ದದೌ ॥ ೨ ॥

ಪುಷ್ಪೋಚ್ಚಯಪ್ರಸಕ್ತಾನಾಂ ಕ್ರೀಡಂತೀನಾಂ ಯಥಾಸುಖಂ ।
ಚೇಷ್ಟಾ ನಾನಾವಿಧಾಕಾರಾಃ ಪಶ್ಯನ್ನಪಿ ನ ಪಶ್ಯತಿ ॥ ೩ ॥

ಕಾಚಿತ್ಪುಷ್ಪೋಚ್ಚಯೇ ಸಕ್ತಾ ಲತಾಜಾಲೇನ ವೇಷ್ಟಿತಾ ।
ಸಖೀಜನೇನ ಸಂತ್ಯಕ್ತಾ ಕಾಂತೇನಾಭಿಸಮುಜ್ಝಿತಾ ॥ ೪ ॥

---

೧. ಸೂತಪೌರಾಣಿಕನು ಹೇಳಿದನು.—ಮನೋಹರವಾದ ಆ ಆಶ್ರಮದಲ್ಲಿ ರಾಜನು ಆಹಾರಾದಿ ಸಕಲಭೋಗಗಳನ್ನೂ ತೊರೆದು ವಾಸಿಸುತ್ತಿದ್ದನು. ಗಂಧರ್ವರು ಅಪ್ಸರ ಸ್ತ್ರೀಯರೊಡಗೂಡಿ ಬಂದು ಕ್ರೀಡಾವಿಹಾರಗಳಲ್ಲಿ ತೊಡಗಿದ್ದುದನ್ನು ಅವನು ಕಂಡನು.

೨. ಆತನು ಬೇಕಾದಷ್ಟು ಹೂಗಳನ್ನು ಕೊಯ್ದು, ಮಾಲೆಗಳನ್ನು ಕಟ್ಟಿ, ಮೊದಲು ಭಗವಂತನಿಗೆ ಧಾರಣಮಾಡಿ ಬಳಿಕ ಗಂಧರ್ವರಿಗೆ ಕೊಡುತ್ತಿದ್ದನು.

೩. ಹೂಗಳನ್ನು ಆರಿಸುತ್ತ ಮನಸ್ಸಿಗೆ ತೋರಿದಂತೆ ಆಟವಾಡುತ್ತಿರುವ ಅಪ್ಸರಸ್ತ್ರೀಯರು ಕಣ್ಣಿಗೆ ಬಿದ್ದರೂ ಅವನು ಅವರನ್ನು ಗಮನಿಸಿ ನೋಡಲಿಲ್ಲ.

೪. ಒಬ್ಬಾಕೆಯು ಹೂಗಳನ್ನು ಕೀಳುತ್ತ ಕೀಳುತ್ತ ಬಳ್ಳಿಗಳೊಳಗೆ ಸಿಕ್ಕಿ ಬಿದ್ದಳು. ಅವಳ ಗೆಳತಿಯರೂ, ಪ್ರಿಯನೂ ಅವಳಿರುವ ಸ್ಥಳವನ್ನು ಕಾಣದೆ ಅವಳನ್ನು ಬಿಟ್ಟು ನಡೆದರು.

ಕಾಚಿತ್ಕಮಲಗಂಧಾಭಾ ನಿಶ್ವಾಸಪವನಾಹೃತೈಃ ।
ಮಧುಪೈರಾಕುಲಮುಖೀ ಕಾಂತೇನ ಪರಿಮೋಚಿತಾ ॥ ೫ ॥

ಮಕರಂದಸಮಾಕ್ರಾಂತನಯನಾ ಕಾಚಿದಂಗನಾ ।
ಕಾಂತನಿಶ್ವಾಸವಾತೇನ ನೀರಜಸ್ಕಕೃತೇಕ್ಷಣಾ ॥ ೬ ॥

ಕಾಚಿದುಚ್ಚಿಯ ಪುಷ್ಪಾಣಿ ದದೌ ಕಾಂತಸ್ಯ ಭಾಮಿನೀ ।
ಕಾಂತಸಂಗ್ರಥಿತೈಃ ಪುಷ್ಪೈ ರರಾಜ ಕೃತಶೇಖರಾ ॥ ೭ ॥

ಉಚ್ಚಿಯ ಸ್ವಯಮುದ್ಗ್ರಥ್ಯ ಕಾಂತೇನ ಕೃತಶೇಖರಾ ।
ಕೃತಕೃತ್ಯಮಿವಾತ್ಮಾನಂ ಮೇನೇ ಮನ್ಮಥವರ್ಧಿನೀ ॥ ೮ ॥

ಅಸ್ತ್ಯಸ್ಮಿನ್ ಗಹನೇ ಕುಂಜೇ ವಿಶಿಷ್ಟಕುಸುಮಾ ಲತಾ ।
ಕಾಚಿದೇವಂ ರಹೋ ನೀತಾ ರಮಣೇನ ರಿರಂಸುನಾ ॥ ೯ ॥

---

೫. ಕಮಲಗಂಧಿಯೆನಿಸಿದ್ದ ಮತ್ತೊಬ್ಬಳ ಉಸಿರಿನ ವಾಸನೆಗಾಗಿ ದುಂಬಿಗಳು ನಾಲ್ಕು ಕಡೆಯಿಂದಲೂ ಒಂದು ಮುಖಕ್ಕೆ ಮುತ್ತಿಕೊಂಡುವು. ಅವಳು ಗಾಬರಿಯಿಂದ ಬಳಲಿರಲು ಅವಳ ಪತಿಯು ಅವಳನ್ನು ಅವುಗಳಿಂದ ಪಾರು ಮಾಡಿದನು.

೬. ಒಬ್ಬ ನಾರೀಮಣಿಯ ಕಣ್ಣುಗಳಲ್ಲಿ ಹೂವಿನ ಧೂಳಿಯು ತುಂಬಿಕೊಂಡಿತು. ಅವಳ ಕಾಂತನು ತನ್ನ ನಿಶ್ವಾಸಮಾರುತದಿಂದ ಅದನ್ನು ಹೋಗಲಾಡಿಸಿ, ಅವಳ ಕಣ್ಣುಗಳು ಚೆನ್ನಾಗಿ ಕಾಣುವಂತೆ ಮಾಡಿದನು.

೭. ಮತ್ತೊಬ್ಬಳು ಹೂಗಳನ್ನು ಕೊಯ್ದು ತನ್ನ ಕಾಂತನ ಕೈಯಲ್ಲಿ ಕೊಟ್ಟಳು. ಅವನು ಅವುಗಳನ್ನು ಮಾಲೆಯಾಗಿ ಕಟ್ಟಿ ಅವಳ ಜಡೆಗೆ ಅಂದವಾಗಿ ಮುಡಿಸಿದನು.

೮. ಪ್ರಿಯನೊಬ್ಬನು ತಾನೇ ಹೂಗಳನ್ನು ಆರಿಸಿ, ಮಾಲೆಯಾಗಿ ಪೋಣಿಸಿ ತನ್ನ ಪ್ರಿಯಳಿಗೆ ಮುಡಿಸಲು, ಆ ಸೌಭಾಗ್ಯವತಿಯು ತನ್ನ ಜನ್ಮವು ಸಾರ್ಥಕವಾಯಿತೆಂದು ತಿಳಿದಳು.

೯. "ಇಗೋ! ಈ ವಟ್ಟವಾದ ಹೊದರಿನಲ್ಲಿ ಹೂಗಳಿಂದ ಕಿಕ್ಕಿರಿದ ಸೊಗಸಾದ ಬಳ್ಳಿಯಿದೆ" ಎಂದು ಹೇಳಿ ಕ್ರೀಡಾಭಿಲಾಷಿಯಾದ ರಮಣನು ತನ್ನ ಪ್ರಿಯಳನ್ನು ಏಕಾಂತಸ್ಥಳಕ್ಕೆ ಉಪಾಯದಿಂದ ಕರೆದೊಯ್ದನು.

**ಕಾಂತಸನ್ನಾಮಿತಲತಾ ಕುಸುಮಾನಿ ವಿಚಿನ್ವತೀ ।**
**ಸರ್ವಾಭ್ಯಃ ಕಾಚಿದಾತ್ಮಾನಂ ಮೇನೇ ಸರ್ವಗುಣಾಧಿಕಂ ॥೧೦॥**

**ಕಾಶ್ಚಿತ್ಪಶ್ಯಂತಿ ಭೂಪಾಲಂ ನಲಿನೀಷು ಪೃಥಕ್ಪೃಥಕ್ ।**
**ಕ್ರೀಡಮಾನಾಸ್ತು ಗಂಧರ್ವೈರ್ದೇವರಾಮಾ ಮನೋರಮಾಃ ॥೧೧॥**

**ಕಾಚಿದಾತಾಡಯತ್ಕಾಂತಮುದಕೇನ ಶುಚಿಸ್ಮಿತಾ ।**
**ತಾಡ್ಯಮಾನಾಥ ಕಾಂತೇನ ಪ್ರೀತಿಂ ಕಾಚಿದುಪಾಯಯೌ ॥೧೨॥**

**ಕಾಂತಂ ಚ ತಾಡಯಾಮಾಸ ಜಾತಖೇದಾ ವರಾಂಗನಾ ।**
**ಅದೃಶ್ಯತ ವರಾರೋಹಾ ಶ್ವಾಸನೃತ್ಯತ್ಪಯೋಧರಾ ॥೧೩॥**

**ಕಾಂತಾಂಬುತಾಡನೋದ್ವೃಷ್ಟ ಕೇಶಪಾಶನಿಬಂಧನಾ ।**
**ಕೇಶಾಕುಲಮುಖೀ ಭಾತಿ ಮಧುಪೈರಿವ ಪದ್ಮಿನೀ ॥೧೪॥**

---

೧೦. ಪ್ರಿಯನು ಬಳ್ಳಿಯನ್ನು ಬಗ್ಗಿಸಲು ಹೂಗಳನ್ನು ಕೊಯ್ಯುತ್ತ ಕಾಮಿನಿಯೊಬ್ಬಳು ಮಿಕ್ಕವರೆಲ್ಲರಿಗಿಂತ ತಾನೇ ಗುಣದಲ್ಲಿಯೂ ಅದೃಷ್ಟದಲ್ಲಿಯೂ ಮೇಲಾದವಳೆಂದು ಭಾವಿಸಿದಳು.

೧೧. ಸುಂದರಿಯರಾದ ದೇವತಾಸ್ತ್ರೀಯರು ಕೆಲವರು ಗಂಧರ್ವರೊಡಗೂಡಿ ತಾವರೆಯ ಕೊಳಗಳಲ್ಲಿ ವಿಹರಿಸುತ್ತಿದ್ದರು. ಆಗ ಪುರೂರವರಾಜನನ್ನು ಅವರು ನೋಡಿದರು.

೧೨. ಸುರಸುಂದರಿಯೊಬ್ಬಳು ಮುಗುಳ್ನಗೆ ನಗುತ್ತ ತನ್ನ ಕಾಂತನ ಮೇಲೆ ನೀರನ್ನೆರಚಿದಳು. ಅವನೂ ಸಹ ಪ್ರತಿಯಾಗಿ ನೀರಿನಿಂದಲೇ ಆಕೆಯನ್ನು ಪ್ರಹರಿಸಿದನು. ಆಗ ಅವಳಿಗೆ ಪರಮಾನಂದವಾಯಿತು.

೧೩. ಕಾಂತನು ನೀರನ್ನೆರಚಲು ರಮಣಿಯೊಬ್ಬಳು ಆಯಾಸಗೊಂಡು, 'ರೇಗಿ ಅವನನ್ನೇ ಹೊಡೆದಳು. ಆ ಶ್ರಮದಿಂದ ಅವಳಿಗೆ ಮೇಲುಸಿರು ಬಂದಿತು. ಸ್ತನಗಳು ಅದುರುತ್ತಿದ್ದುವು.

೧೪. ಪ್ರಿಯನು ನೀರನ್ನೆರಚಲಾಗಿ ರಮಣಿಯ ತಲೆಯ ತುರುಬು ಬಿಚ್ಚಿಹೋಯಿತು. ಮುಖಕ್ಕೆ ಕೂದಲು ಕವಿದುಕೊಂಡಿತು. ಆಗ ಅವಳು ದುಂಬಿಗಳು ಮುತ್ತಿಕೊಂಡ ತಾವರೆ ಬಳ್ಳಿಯಂತೆ ಶೋಭಿಸಿದಳು.

ಸ್ವಚಕ್ಷುಸ್ಸದೃಶೈಃ ಪುಷ್ಪೈಃ ಸಂಛನ್ನೇ ನಲಿನೀವನೇ ।
ಛನ್ನಾ ಕಾಚಿಚ್ಚಿರಾತ್ಪ್ರಾಪ್ತಾ ಕಾಂತೇನಾನ್ವಿಷ್ಯ ಯತ್ನತಃ ॥೧೫॥

ಸ್ನಾತ್ವಾ ಶೀತಾಪದೇಶೇನ ಕಾಚಿತ್ಪ್ರಾಹಾಂಗನಾ ಭೃಶಂ ।
ರಮಣಾಲಿಂಗನಂ ಚಕ್ರೇ ಮನೋಽಭಿಲಷಿತಂ ಚಿರಂ ॥೧೬॥

ಜಲಾರ್ದ್ರವಸನಂ ಸೂಕ್ಷ್ಮಮಂಗಲೀನಂ ಶುಚಿಸ್ಮಿತಾ ।
ಧಾರಯಂತೀ ಜನಂ ಚಕ್ರೇ ಕಾಚಿತ್ತತ್ರ ಸಮನ್ಮಥಂ ॥೧೭॥

ಕಂಠಮಾಲ್ಯಗುಣೈಃ ಕಾಚಿತ್ಕಾಂತೇನಾಕೃಷ್ಯತಾಂಭಸಿ ।
ತ್ರುಟ್ಯತ್ಸ್ರಗ್ದಾಮಪತಿತಂ ರಮಣಂ ಪ್ರಾಹಸಚ್ಚಿರಂ ॥೧೮॥

ಕಾಚಿನ್ಮತ್ತಸಖೀದತ್ತಜಾನುದೇಶೇ ನಖಕ್ಷತಾ ।
ಸಂಭ್ರಾಂತಾ ಕಾಂತಶರಣಂ ಮಗ್ನಾ ಕಾಚಿದ್ಗತಾ ಚಿರಂ ॥೧೯॥

---

೧೫. ನೈದಿಲೆಯ ವನದಲ್ಲಿ ಒಬ್ಬ ಸುಂದರಿಯು ಅವಿತುಕೊಂಡಳು. ಅವಳ ಕಣ್ಣುಗಳು ಆ ಹೂಗಳನ್ನೇ ಹೋಲುತ್ತಿದ್ದುವು. ಆದುದರಿಂದ ಅವಳನ್ನು ಹುಡುಕಿ ಕಂಡುಹಿಡಿಯುವುದಕ್ಕೆ ಅವಳ ಪ್ರಿಯನು ಎಷ್ಟೋ ಹೊತ್ತು ಪ್ರಯಾಸಪಡಬೇಕಾಯಿತು.

೧೬. ಸ್ನಾನಮಾಡಿ ಚಳಿಯಾಯಿತೆಂಬ ನೆವದಿಂದ ಒಬ್ಬ ನಾರೀಮಣಿಯು ಮನಸ್ಸುಬಂದಂತೆ ಮಾತನಾಡತೊಡಗಿದಳು. ಆಗ ಪ್ರಿಯನು ಬರಲು ಅವನನ್ನು ಗಾಢವಾಗಿ ಆಲಂಗಿಸಿಕೊಂಡು ತನ್ನ ಮನೋರಥವನ್ನು ಪೂರೈಸಿಕೊಂಡಳು.

೧೭. ಮಂದಹಾಸಿನಿಯೊಬ್ಬಳು ಉಟ್ಟಿದ್ದ ತೆಳುವಾದ ಸೀರೆಯು ನೀರಿನಲ್ಲಿ ಚೆನ್ನಾಗಿ ನೆನೆದು ಮೈಗೆ ಅಂಟಿಕೊಂಡಿತ್ತು. ಆಗ ಅವಳನ್ನು ನೋಡಿದ ಜನರ ಮನಸ್ಸಿನಲ್ಲಿ ಕಾಮವಿಕಾರವು ತಲೆದೋರುತ್ತಿತ್ತು.

೧೮. ಕಾಂತನೊಬ್ಬನು ತನ್ನ ಪ್ರಿಯೆಯು ಕೊರಳಲ್ಲಿ ಹಾಕಿಕೊಂಡಿದ್ದ ಮಾಲೆಯನ್ನು ಹಿಡಿದೆಳೆದನು. ಅದು ಕಿತ್ತುಹೋಯಿತು. ಅವನು ನೀರಿನಲ್ಲಿ ಬಿದ್ದನು. ಅವನ್ನು ನೋಡಿ ಆಕೆಯು ಬಹಳ ಹೊತ್ತು ನಕ್ಕಳು.

೧೯. ಒಬ್ಬ ತರುಣಿಯ ಮೊಣಕಾಲಿಗೆ ಸೊಕ್ಕೇರಿದ ಅವಳ ಗೆಳತಿಯ ಕಾಲಿನ ಉಗುರು ತಗಲಿ ಗಾಯವಾಯಿತು. ಕೂಡಲೆ ಅವಳು ಗಾಬರಿಗೊಂಡು, ರಕ್ಷಣೆಯ ಸಲುವಾಗಿ ಕಾಂತನನ್ನು ಕೂಗಿಕೊಂಡು ನೀರಿನಲ್ಲಿ ಮುಳುಗಿಹೋದಳು.

**ಕಾಚಿತ್ಪೃಷ್ಠಕೃತಾದಿತ್ಯಾ ಕೇಶನಿಸ್ತೋಯಕಾರಿಣೀ ।**
**ಶಿಲಾತಲಗತಾ ಭರ್ತ್ರಾ ದೃಷ್ಟ್ವಾ ಕಾಮಾರ್ತಚಕ್ಷುಷಾ ॥೨೦॥**

**ಕೃತ್ತಮಾಲ್ಯಂ ವಿಲುಲಿತಂ ಸಂಕ್ರಾಂತಕುಚಕುಂಕುಮಂ ।**
**ರತಿಕ್ರೀಡಿತಕಾಂತೇವ ರರಾಜ ತತ್ಸರೋದಕಂ ॥೨೦॥**

**ಸುಸ್ನಾತದೇವಗಂಧರ್ವದೇವರಾಮಾಗಣೇನ ಚ ।**
**ಪೂಜ್ಯಮಾನಂ ಚ ದದೃಶೇ ದೇವದೇವಂ ಜನಾರ್ದನಂ ॥೨೨॥**

**ಕ್ವಚಿಚ್ಚ ದದೃಶೇ ರಾಜಾ ಲತಾಗೃಹಗತಾಃ ಸ್ತ್ರಿಯಃ ।**
**ಮಂಡಯಂತೀಃ ಸ್ವಗಾತ್ರಾಣಿ ಕಾಂತಸಂನ್ಯಸ್ತಮಾನಸಾಃ ॥೨೩॥**

**ಕಾಚಿದಾದರ್ಶನಕರಾ ವ್ಯಗ್ರಾ ದೂತೀಮುಖೋದ್ಗತಂ ।**
**ಶೃಣ್ವತೀ ಕಾಂತವಚನಮಧಿಕಾ ತು ತಥಾ ಬಭೌ ॥೨೪॥**

---

೨೦. ಇನ್ನೊಬ್ಬಳು ಸೂರ್ಯನ ಕಡೆಗೆ ಬೆನ್ನುಮಾಡಿ ಕೂದಲನ್ನು ಆರಿಸಿಕೊಳ್ಳುತ್ತ ಬಂಡೆಯ ಮೇಲೆ ಕುಳಿತಿದ್ದಳು. ಪತಿಯು ಅವಳನ್ನು ನೋಡಿ ಕಾಮುಪರವಶನಾದನು.

೨೧. ಆ ಸರೋವರದಲ್ಲಿ ಹಾರಗಳು ಹರಿದು ತುಂಡುತುಂಡಾಗಿ ಬಿದ್ದಿದ್ದುವು. ನೀರು ಬಗ್ಗಡವಾಗಿತ್ತು. ದೇವತಾಸ್ತ್ರೀಯರ ಕುಚಕುಂಕುಮವು ಅದರಲ್ಲಿ ಬೆರೆತಿತ್ತು. ಇದನ್ನು ನೋಡಿದರೆ ರತಿಕ್ರೀಡೆಯನ್ನಾಡಿದ ಕಾಂತೆಯಂತೆ ಅದು ಕಂಗೊಳಿಸುತ್ತಿತ್ತು.

೨೨. ಇನ್ನೊಂದು ಕಡೆ ಶಾಸ್ತ್ರೋಕ್ತ ವಿಧಾನದಿಂದ ಸ್ನಾನಮಾಡಿ ದೇವತೆಗಳೂ, ಗಂಧರ್ವರೂ, ದೇವತಾಸ್ತ್ರೀಯರೂ ದೇವದೇವನಾದ ಜನಾರ್ದನನನ್ನು ಪೂಜಿಸುತ್ತಿದ್ದರು. ರಾಜನು ಅದನ್ನೂ ನೋಡಿದನು.

೨೩. ಮತ್ತೊಂದು ಕಡೆ ಲತಾಗೃಹಗಳಲ್ಲಿದ್ದ ಸ್ತ್ರೀಯರು, ಮನಸ್ಸು ಪ್ರಿಯರ ಮೇಲೆ ನಾಟಿರಲು, ತಮ್ಮ ಅಂಗಗಳನ್ನು ವಿಧವಿಧವಾದ ಭೂಷಣಗಳಿಂದ ಅಲಂಕರಿಸಿಕೊಳ್ಳುತ್ತಿದ್ದುದನ್ನು ರಾಜನು ದಿಟ್ಟಿಸಿದನು.

೨೪. ಒಬ್ಬಳು ಕೈಯಲ್ಲಿ ಕನ್ನಡಿಯನ್ನು ಹಿಡಿದುಕೊಂಡು ದೂತಿಯ ಮುಖದಿಂದ ತನ್ನ ಕಾಂತನ ವೃತ್ತಾಂತವನ್ನು ಆಸಕ್ತಿಯೊಡನೆ ಕೇಳುತ್ತಿದ್ದಳು. ಹಾಗೆ ಕೇಳುತ್ತಿದ್ದ ಹಾಗೆಯೇ ಅವಳ ಕಾಂತಿಯು ಮತ್ತಷ್ಟು ಹೆಚ್ಚಾಯಿತು.

ಕಾಚಿತ್ಸತ್ವರಿತಾ ದೂತ್ಯಾ ಭೂಷಣಾನಾಂ ವಿಪರ್ಯಯಂ ।
ಕುರ್ವಾಣಾ ನೈವ ಬುಬುಧೇ ಮನ್ಮಥಾವಿಷ್ಟಚೇತನಾ ॥೨೫॥

ವಾಯುನುನ್ನಾತಿಸುರಭಿಕುಸುಮೋತ್ಕರಮಂಡಿತೇ ।
ಕಾಚಿತ್ಪಿಬಂತೀ ದದೃಶೇ ಮೈರೇಯಂ ನೀಲಶಾದ್ವಲೇ ॥೨೬॥

ಪಾಯಯಾಮಾಸ ರಮಣಂ ಸ್ವಯಂ ಕಾಚಿದ್ವರಾಂಗನಾ ।
ಕಾಚಿತ್ಪಪೌ ವರಾರೋಹಾ ಕಾಂತಪಾಣಿಸಮರ್ಪಿತಂ ॥೨೭॥

ಕಾಚಿತ್ಸ್ವನೇತ್ರಚಪಲನೀಲೋತ್ಪಲಯುತಂ ಪಯಃ ।
ಪೀತ್ವಾ ಪಪ್ರಚ್ಛ ರಮಣಂ ಕ್ವ ಗತೇ ತೇ ಮಮೋತ್ಪಲೇ ॥೨೮॥

ತ್ವಯೈವ ಪೀತೌ ತೌ ನೂನಮಿತ್ಯುಕ್ತಾ ರಮಣೇನ ಸಾ ।
ತಥಾ ವಿದಿತ್ವಾ ಮುಗ್ಧತ್ವಾದ್ಬಭೂವ ವ್ರೀಡಿತಾ ಭೃಶಂ ॥೨೯॥

---

೨೫. ಪ್ರೀತಿಯು ತ್ವರೆಪಡಿಸಲು ಮನ್ಮಥವಶಳಾದ ಕಾಮಿನಿಯೊಬ್ಬಳು ಒಡವೆಗಳನ್ನು ಹಿಂದುಮುಂದಾಗಿ ಹಾಕಿಕೊಂಡಳು. ಆ ಸಡಗರದಲ್ಲಿ ಅವಳಿಗೆ ಅದು ಗೊತ್ತಾಗಲೇ ಇಲ್ಲ.

೨೬. ಗಾಳಿಯಿಂದ ಹೂಗಳು ಉದುರಿ ಪರಿಮಳವು ಸುತ್ತಲೂ ವ್ಯಾಪಿಸುತ್ತಿರಲು, ಹಸುರು ಹುಲ್ಲಿನ ನೆಲದ ಮೇಲೆ ಕುಳಿತು ಒಬ್ಬ ರಮಣಿಯು ಮದ್ಯವನ್ನು ಪಾನಮಾಡುತ್ತಿದ್ದಳು.

೨೭. ಸುಂದರಿಯೊಬ್ಬಳು ತನ್ನ ರಮಣನಿಗೆ ತಾನೇ ಮಧುವನ್ನು ಪಾನಮಾಡಿಸಿದಳು. ಇನ್ನೊಬ್ಬ ನಾರೀಮಣಿಗೆ ಅವಳ ಕಾಂತನು ತನ್ನ ಕೈಯಾರೆ ಮದ್ಯವನ್ನಿತ್ತು ಕುಡಿಸಿದನು.

೨೮. ಮತ್ತೊಬ್ಬಳು ಕನ್ನೈದಿಲೆಯಂತೆ ಚಂಚಲವಾದ ತನ್ನ ಕಣ್ಣುಗಳು ಪ್ರತಿಬಿಂಬಿಸುತ್ತಿದ್ದ ನೀರನ್ನು ಕುಡಿದುಬಿಟ್ಟು "ನನ್ನ ನೈದಿಲೆಗಳೆರಡೂ ಎಲ್ಲಿ ಹೋದುವು"? ಎಂದು ತನ್ನ ಪ್ರಿಯನನ್ನು ಕೇಳಿದಳು.

೨೯. "ನೀನೇ ಅವುಗಳನ್ನು ಕುಡಿದೆಯಲ್ಲವೇ?" ಎಂದು ಕಾಂತನು ಉತ್ತರವಿತ್ತನು. ಮುಗ್ಧಸ್ವಭಾವದವಳಾದುದರಿಂದ "ಹಾಗೆಯೇ ಸರಿ" ಎಂದು ತಿಳಿದುಕೊಂಡು ಆಕೆಯು ಬಹಳ ನಾಚಿಕೊಂಡಳು.

ಕಾಚಿತ್ಕಾಂತಾರ್ಪಿತಂ ಸುಭ್ರೂಃ ಕಾಂತಪೀತಾವಶೇಷಿತಂ ।
ಸವಿಶೇಷರಸಂ ಪಾನಂ ಪಪೌ ಮನ್ಮಥವರ್ಧನಂ ॥೩೦॥

ಆಪಾನಗೋಷ್ಠೀಷು ತಥಾ ತಾಸಾಂ ಸ ನರಪುಂಗವಃ ।
ಶುಶ್ರಾವ ವಿವಿಧಂ ಗೀತಂ ತಂತ್ರೀಸ್ವರವಿಮಿಶ್ರಿತಂ ॥೩೧॥

ಪ್ರದೋಷಸಮಯೇ ತಾಶ್ಚ ದೇವದೇವಂ ಜನಾರ್ದನಂ ।
ರಾಜನ್ ಸದೋಪನೃತ್ಯಂತಿ ನಾನಾವಾದ್ಯಪುರಸ್ಸರಾಃ ॥೩೨॥

ಯಾಮಮಾತ್ರೇ ಗತೇ ರಾತ್ರೌ ವಿನಿರ್ಗತ್ಯ ಗುಹಾಮುಖಾತ್ ।
ಅವರ್ಸ ಸಂಯುತಾಃ ಕಾಂತೈಃ ಪರರ್ಧಿರಚಿತಾಂ ಗುಹಾಂ ॥೩೩॥

ನಾನಾಗಂಧಾನ್ವಿತಲತಾಂ ನಾನಾಗಂಧಸುಗಂಧಿನೀಂ ।
ನಾನಾವಿಚಿತ್ರಶಯನಾಂ ಕುಸುಮೋತ್ಕರಮಂಡಿತಾಂ ॥೩೪॥

---

೩೦. ಪ್ರಿಯನು ತಾನು ಮದ್ಯವನ್ನು ಕುಡಿದು ಮಿಕ್ಕುದನ್ನು ಕೊಡಲು, ಅವನ ಪ್ರೇಯಸಿಯು ಅದನ್ನು ಸವಿದಳು. ಅವಳಿಗೆ ಅದು ಬಹು ಮಧುರವಾಗಿ ತೋರಿತು; ಮತ್ತು ಮನ್ಮಥವಿಕಾರವನ್ನು ಹೆಚ್ಚಿಸಿತು.

೩೧. ಮಧುಪಾನ ಗೋಷ್ಠಿಗಳಲ್ಲಿ ಆ ಸುರಸುಂದರಿಯರು ವೀಣೆಯ ಧ್ವನಿಗೆ ತಕ್ಕಂತೆ ಇಂಪಾಗಿ ಹಾಡುತ್ತಿದ್ದರು. ಪುರೂರವಮಹಾರಾಜನು ಅದನ್ನು ಕೇಳಿ ಆನಂದಪಟ್ಟನು.

೩೨. ಓ ಭೂಪಾಲಕಾ, ಅವರು ಸಂಧ್ಯಾಕಾಲದಲ್ಲಿ ದೇವದೇವನಾದ ಜನಾರ್ದನನನ್ನು ಸೇವಿಸಿ ಬಗೆಬಗೆಯ ವಾದ್ಯಧ್ವನಿಗಳೊಡನೆ ನರ್ತನ ಮಾಡುತ್ತಿದ್ದರು.

೩೩. ರಾತ್ರಿಯಲ್ಲಿ ಒಂದು ಜಾವವು ಕಳೆದ ಬಳಿಕ ಆ ಸುರಸುಂದರಿಯರು ಗುಹೆಯಿಂದ ಹೊರಕ್ಕೆ ಬಂದು, ಸಕಲ ಸಂಪತ್ಸಮೃದ್ಧವಾದ ಬೇರೆ ಗುಹೆಗೆ ಹೋಗಿ ತಮ್ಮ ಪ್ರಿಯರೊಡಗೂಡಿ ವಿಹರಿಸುತ್ತಿದ್ದರು.

೩೪. ಆ ಗುಹೆಯಲ್ಲಿ ಸುಗಂಧ ಪುಷ್ಪಗಳಿಂದ ತುಂಬಿದ ಬಗೆಬಗೆಯ ಬಳ್ಳಿಗಳಿದ್ದುವು. ಪುನುಗು, ಜವಾಜಿ ಮುಂತಾದ ಪರಿಮಳ ದ್ರವ್ಯಗಳು ಸುವಾಸನೆಯನ್ನು ಬೀರುತ್ತಿದ್ದುವು. ವಿಧವಿಧವಾದ ಶಯನಗಳು ಹೂಮಾಲೆಗಳಿಂದ ಅಲಂಕೃತವಾಗಿ ಆಶ್ಚರ್ಯವನ್ನು ಹುಟ್ಟಿಸುತ್ತಿದ್ದುವು.

ಏವಮಪ್ಸರಸಾಂ ಪಶ್ಯನ್ ಕ್ರೀಡಿತಾನಿ ಸ ಪರ್ವತೇ ।
ತಪಸ್ತೇಪೇ ಮಹಾರಾಜನ್ ಕೇಶವಾರ್ಪಿತಮಾನಸಃ ॥೩೫॥

ತಮೂಚುರ್ನೃಪತಿಂ ಗತ್ವಾ ಗಂಧರ್ವಾಪ್ಸರಸಾಂ ಗಣಾಃ ।
ರಾಜನ್ ಸ್ವರ್ಗೋಪಮಂ ದೇಶಮಿಮಂ ಪ್ರಾಪ್ತೋಽಸ್ಯರಿಂದಮ॥ ॥೩೬॥

ವಯಂ ಹಿ ತೇ ಪ್ರದಾಸ್ಯಾಮೋ ಮನಸಃ ಕಾಂಕ್ಷಿತಾನ್ ವರಾನ್ ।
ತಾನಾದಾಯ ಗೃಹಂ ಗಚ್ಛ ತಿಷ್ಠೇಹ ಯದಿ ವಾ ಪುನಃ ॥೩೭॥

॥ ರಾಜೋವಾಚ ॥

ಅಮೋಘದರ್ಶನಾಃ ಸರ್ವೇ ಭವಂತಸ್ತ್ವಮಿತೌಜಸಃ ।
ವಯಂ ವಿತರತಾದ್ಯೈವ ಪ್ರಸಾದಂ ಮಧುಸೂದನಾತ್ ॥೩೮॥

ಏವಮಸ್ತ್ವಿತ್ಯಥೋಕ್ತಸ್ತೈಃ ಸ ತು ರಾಜಾ ಪುರೂರವಾಃ ।
ತತ್ರೋವಾಸ ಸುಖೀ ಮಾಸಂ ಪೂಜಯಾನೋ ಜನಾರ್ದನಂ ॥೩೯॥

---

೩೫. ಎಲೈ ರಾಜಾ, ಪುರೂರವನು ಹೀಗೆ ಆ ಪರ್ವತದಲ್ಲಿ ಅಪ್ಸರಸ್ತ್ರೀಯರ ಕ್ರೀಡೆಗಳನ್ನು ನೋಡುತ್ತ, ಜಿತೇಂದ್ರಿಯನಾಗಿ ಜನಾರ್ದನನಲ್ಲಿ ಮನಸ್ಸನ್ನು ಸ್ಥಿರಗೊಳಿಸಿ ತಪಸ್ಸು ಮಾಡುತ್ತಿದ್ದನು.

೩೬-೩೭. ಗಂಧರ್ವರೂ ಅಪ್ಸರಸ್ತ್ರೀಯರೂ ಅವನ ಬಳಿಗೆ ಹೋಗಿ ಇಂತೆಂದರು. "ಎಲೈ ಭೂಪಾಲಕಾ, ಸ್ವರ್ಗದಂತಿರುವ ಈ ಸ್ಥಲಕ್ಕೆ ನೀನು ಬಂದಿರುವೆ. ನಿನ್ನ ಮನಸ್ಸಿಗೆ ಬೇಕಾದ ವರಗಳನ್ನು ನಾವು ಕೊಡುವೆವು. ಓ ಅರಿಮರ್ದನಾ, ಅವುಗಳನ್ನು ಪಡೆದುಕೊಂಡು ನಿನ್ನ ಮನೆಗೆ ತೆರಳು; ಇಲ್ಲವೇ ಇಲ್ಲಿಯಾದರೂ ನಿಲ್ಲು."

೩೮. ಪುರೂರವರಾಜನು ಹೇಳಿದನು.—"ನಿಮ್ಮೆಲ್ಲರ ದರ್ಶನವೂ ಜನ್ಮವನ್ನು ಸಾರ್ಥಕಗೊಳಿಸುವಂತಹುದು. ನಿಮ್ಮ ತೇಜಸ್ಸು ಅಸಾಧಾರಣವಾದುದು. ಮಹಾವಿಷ್ಣುವಿನ ಅನುಗ್ರಹವು ನನಗೆ ದೊರೆಯುವಂತೆ ವರವನ್ನು ಈಗಲೇ ಕರುಣಿಸಿ."

೩೯. ಹಾಗೆಯೇ ಆಗಲೆಂದು ಅವರು ಹೇಳಲು, ಪುರೂರವರಾಜನು ಜನಾರ್ದನನನ್ನು ಪೂಜಿಸುತ್ತ ಅಲ್ಲಿ ಒಂದು ತಿಂಗಳ ಕಾಲ ಸುಖವಾಗಿ ವಾಸ ಮಾಡಿದನು.

**ಕಾಚಿತ್ಕಾಂತಾರ್ಪಿತಂ ಸುಭ್ರೂಃ ಕಾಂತಪೀತಾವಶೇಷಿತಂ ।**
**ಸವಿಶೇಷರಸಂ ಪಾನಂ ಪಪೌ ಮನ್ಮಥವರ್ಧನಂ ॥೩೦॥**

**ಆಪಾನಗೋಷ್ಠೀಷು ತಥಾ ತಾಸಾಂ ಸ ನರಪುಂಗವಃ ।**
**ಶುಶ್ರಾವ ವಿವಿಧಂ ಗೀತಂ ತಂತ್ರೀಸ್ವರವಿಮಿಶ್ರಿತಂ ॥೩೧॥**

**ಪ್ರದೋಷಸಮಯೇ ತಾಶ್ಚ ದೇವದೇವಂ ಜನಾರ್ದನಂ ।**
**ರಾರ್ಜ ಸದೋಪಸನೃತ್ಯಂತಿ ನಾನಾವಾದ್ಯಪುರಸ್ಸರಾಃ ॥೩೨॥**

**ಯಾಮಮಾತ್ರೇ ಗತೇ ರಾತ್ರೌ ವಿನಿರ್ಗತ್ಯ ಗುಹಾಮುಖಾತ್ ।**
**ಆವರ್ಜ ಸಂಯುತಾಃ ಕಾಂತೈಃ ಪರರ್ಧಿರಚಿತಾಂ ಗುಹಾಂ ॥೩೩॥**

**ನಾನಾಗಂಧಾನ್ವಿತಲತಾಂ ನಾನಾಗಂಧಸುಗಂಧಿನೀಂ ।**
**ನಾನಾವಿಚಿತ್ರಶಯನಾಂ ಕುಸುಮೋತ್ಕರಮಂಡಿತಾಂ ॥೩೪॥**

---

೩೦. ಪ್ರಿಯನು ತಾನು ಮದ್ಯವನ್ನು ಕುಡಿದು ಮಿಕ್ಕುದನ್ನು ಕೊಡಲು, ಅವನ ಪ್ರೇಯಸಿಯು ಅದನ್ನು ಸವಿದಳು. ಅವಳಿಗೆ ಅದು ಬಹು ಮಧುರವಾಗಿ ತೋರಿತು ; ಮತ್ತು ಮನ್ಮಥವಿಕಾರವನ್ನು ಹೆಚ್ಚಿಸಿತು.

೩೧. ಮಧುಪಾನ ಗೋಷ್ಠಿಗಳಲ್ಲಿ ಆ ಸುರಸುಂದರಿಯರು ವೀಣೆಯ ಧ್ವನಿಗೆ ತಕ್ಕಂತೆ ಇಂಪಾಗಿ ಹಾಡುತ್ತಿದ್ದರು. ಪುರೂರವಮಹಾರಾಜನು ಅದನ್ನು ಕೇಳಿ ಆನಂದಪಟ್ಟನು.

೩೨. ಓ ಭೂಪಾಲಕಾ, ಅವರು ಸಂಧ್ಯಾಕಾಲದಲ್ಲಿ ದೇವದೇವನಾದ ಜನಾರ್ದನನನ್ನು ಸೇವಿಸಿ ಬಗೆಬಗೆಯ ವಾದ್ಯಧ್ವನಿಗಳೊಡನೆ ನರ್ತನ ಮಾಡುತ್ತಿದ್ದರು.

೩೩. ರಾತ್ರಿಯಲ್ಲಿ ಒಂದು ಜಾವವು ಕಳೆದ ಬಳಿಕ ಆ ಸುರಸುಂದರಿಯರು ಗುಹೆಯಿಂದ ಹೊರಕ್ಕೆ ಬಂದು, ಸಕಲ ಸಂಪತ್ಸಮೃದ್ಧವಾದ ಬೇರೆ ಗುಹೆಗೆ ಹೋಗಿ ತಮ್ಮ ಪ್ರಿಯರೊಡಗೂಡಿ ವಿಹರಿಸುತ್ತಿದ್ದರು.

೩೪. ಆ ಗುಹೆಯಲ್ಲಿ ಸುಗಂಧ ಪುಷ್ಪಗಳಿಂದ ತುಂಬಿದ ಬಗೆಬಗೆಯ ಬಳ್ಳಿಗಳಿದ್ದುವು. ಪುನುಗು, ಜವಾಜಿ ಮುಂತಾದ ಪರಿಮಳ ದ್ರವ್ಯಗಳು ಸುವಾಸನೆಯನ್ನು ಬೀರುತ್ತಿದ್ದುವು. ವಿಧವಿಧವಾದ ಶಯನಗಳು ಹೂಮಾಲೆಗಳಿಂದ ಅಲಂಕೃತವಾಗಿ ಆಶ್ಚರ್ಯವನ್ನು ಹುಟ್ಟಿಸುತ್ತಿದ್ದುವು.

ಏವಮಪ್ಸರಸಾಂ ಪಶ್ಯನ್ ಕ್ರೀಡಿತಾನಿ ಸ ಪರ್ವತೇ ।
ತಪಸ್ತೇಪೇ ಮಹಾರಾಜನ್ ಕೇಶವಾರ್ಪಿತಮಾನಸಃ ॥೩೫॥

ತಮೂಚುರ್ನೃಪತಿಂ ಗತ್ವಾ ಗಂಧರ್ವಾಪ್ಸರಸಾಂ ಗಣಾಃ ।
ರಾಜನ್ ಸ್ವರ್ಗೋಪಮಂ ದೇಶಮಿಮಂ ಪ್ರಾಪ್ತೋಽಸ್ಯರಿಂದಮ॥ ॥೩೬॥

ವಯಂ ಹಿ ತೇ ಪ್ರದಾಸ್ಯಾಮೋ ಮನಸಃ ಕಾಂಕ್ಷಿತಾನ್ ವರಾನ್ ।
ತಾನಾದಾಯ ಗೃಹಂ ಗಚ್ಛ ತಿಷ್ಠೇಹ ಯದಿ ವಾ ಪುನಃ ॥೩೭॥

॥ ರಾಜೋವಾಚ ॥

ಅಮೋಘದರ್ಶನಾಃ ಸರ್ವೇ ಭವಂತಸ್ತ್ವಮಿತೌಜಸಃ ।
ವಯಂ ವಿತರತಾದ್ಯೈವ ಪ್ರಸಾದಂ ಮಧುಸೂದನಾತ್ ॥೩೮॥

ಏವಮುಸ್ತ್ವಿತ್ಯಥೋಕ್ತಸ್ತೈಃ ಸ ತು ರಾಜಾ ಪುರೂರವಾಃ ।
ತತ್ರೋವಾಸ ಸುಖೀ ಮಾಸಂ ಪೂಜಯಾನೋ ಜನಾರ್ದನಂ ॥೩೯॥

---

೩೫. ಎಲೈ ರಾಜಾ, ಪುರೂರವನು ಹೀಗೆ ಆ ಪರ್ವತದಲ್ಲಿ ಅಪ್ಸರಸ್ತ್ರೀಯರ ಕ್ರೀಡೆಗಳನ್ನು ನೋಡುತ್ತ, ಜಿತೇಂದ್ರಿಯನಾಗಿ ಜನಾರ್ದನನಲ್ಲಿ ಮನಸ್ಸನ್ನು ಸ್ಥಿರಗೊಳಿಸಿ ತಪಸ್ಸು ಮಾಡುತ್ತಿದ್ದನು.

೩೬-೩೭. ಗಂಧರ್ವರೂ ಅಪ್ಸರಸ್ತ್ರೀಯರೂ ಅವನ ಬಳಿಗೆ ಹೋಗಿ ಇಂತೆಂದರು. "ಎಲೈ ಭೂಪಾಲಕಾ, ಸ್ವರ್ಗದಂತಿರುವ ಈ ಸ್ಥಲಕ್ಕೆ ನೀನು ಬಂದಿರುವೆ. ನಿನ್ನ ಮನಸ್ಸಿಗೆ ಬೇಕಾದ ವರಗಳನ್ನು ನಾವು ಕೊಡುವೆವು. ಓ ಅರಿಮರ್ದನಾ, ಅವುಗಳನ್ನು ಪಡೆದುಕೊಂಡು ನಿನ್ನ ಮನೆಗೆ ತೆರಳು; ಇಲ್ಲವೇ ಇಲ್ಲಿಯಾದರೂ ನಿಲ್ಲು."

೩೮. ಪುರೂರವರಾಜನು ಹೇಳಿದನು.—"ನಿಮ್ಮೆಲ್ಲರ ದರ್ಶನವೂ ಜನ್ಮವನ್ನು ಸಾರ್ಥಕಗೊಳಿಸುವಂತಹುದು. ನಿಮ್ಮ ತೇಜಸ್ಸು ಅಸಾಧಾರಣವಾದುದು. ಮಹಾವಿಷ್ಣುವಿನ ಅನುಗ್ರಹವು ನನಗೆ ದೊರೆಯುವಂತೆ ವರವನ್ನು ಈಗಲೇ ಕರುಣಿಸಿ."

೩೯. ಹಾಗೆಯೇ ಆಗಲೆಂದು ಅವರು ಹೇಳಲು, ಪುರೂರವರಾಜನು ಜನಾರ್ದನನನ್ನು ಪೂಜಿಸುತ್ತ ಅಲ್ಲಿ ಒಂದು ತಿಂಗಳ ಕಾಲ ಸುಖವಾಗಿ ವಾಸ ಮಾಡಿದನು.

ಪ್ರಿಯ ಏವ ಸದೈವಾಸೀದ್ಗಂಧರ್ವಾಪ್ಸರಸಾಂ ನೃಪಃ ।
ತುತೋಷ ಸ ಜನೋ ರಾಜ್ಞಸ್ತಸ್ಯಾಲೌಲ್ಯೇನ ಕರ್ಮಣಾ ॥೪೦॥

ಮಾಘಸ್ಯ ಮಧ್ಯೇ ಸ ನೃಪಃ ಪ್ರವಿಷ್ಟ
ಸ್ತದಾಶ್ರಮಂ ರತ್ನಸಹಸ್ರಚಿತ್ರಂ ।
ತೋಯಾಶನಸ್ತತ್ರ ಹ್ಯುವಾಸ ಮಾಸಂ
ಯಾವತ್ಸಿತಾಂತೋ ನೃಪ ಫಾಲ್ಗುನಸ್ಯ ॥೪೧॥

ಫಾಲ್ಗುನಾಮಲಪಕ್ಷಾಂತೇ ರಾಜಾ ಸ್ವಪ್ನೇ ಪುರೂರವಾಃ ।
ತಸ್ಯೈವ ದೇವದೇವಸ್ಯ ಶ್ರುತವಾ ಗದಿತಂ ಶುಭಂ ॥೪೨॥

ರಾತ್ರ್ಯಾಮಸ್ಯಾಂ ವ್ಯತೀತಾಯಾಮತ್ರಿಣಾ ತ್ವಂ ಸಮೇಷ್ಯಸಿ ।
ತೇನ ರಾಜ ಸಮಾಗಮ್ಯ ಕೃತಕೃತ್ಯೋ ಭವಿಷ್ಯಸಿ ॥೪೩॥

ಸ್ವಪ್ನಮೇವಂ ಸ ರಾಜರ್ಷಿರ್ದೃಷ್ಟ್ವಾ ದೇವೇಂದ್ರವಿಕ್ರಮಃ ।
ಪ್ರತ್ಯೂಷಕಾಲೇ ವಿಧಿವತ್ಸ್ನಾತಃ ಸ ಪ್ರಯತೇಂದ್ರಿಯಃ ॥೪೪॥

---

೪೦. ರಾಜನು ಆ ಗಂಧರ್ವರಿಗೂ ಅಪ್ಸರಸ್ತ್ರೀಯರಿಗೂ ಯಾವಾಗಲೂ ಪ್ರಿಯನಾಗಿಯೇ ಇದ್ದನು. ಧೈರ್ಯಸ್ಥೈರ್ಯಗಳಿಂದ ಕೂಡಿದ ಆತನ ತಪಶ್ಚರ್ಯೆಯನ್ನು ನೋಡಿ ಅವರು ಸಂತೋಷಪಟ್ಟರು.

೪೧. ಪುರೂರವರಾಜನು ಸಾವಿರಾರು ರತ್ನಗಳಿಂದ ಚಿತ್ರವರ್ಣವಾಗಿ ಬೆಳಗುವ ಆ ಆಶ್ರಮಕ್ಕೆ ಮಾಘಮಾಸದ ಮಧ್ಯದಲ್ಲಿ ಹೋದನು. ನರೇಂದ್ರಾ, ಅವನು ಜಲಪಾನಮಾತ್ರದಿಂದಲೇ ದೇಹಧಾರಣಮಾಡುತ್ತ ಫಾಲ್ಗುನಮಾಸದ ಶುಕ್ಲಪಕ್ಷದ ಕೊನೆಯವರೆಗೆ ಒಂದು ತಿಂಗಳ ಕಾಲ ಅಲ್ಲಿ ವಾಸಮಾಡಿದನು.

೪೨-೪೩. ಫಾಲ್ಗುನ ಶುದ್ಧ ಹುಣ್ಣಿಮೆಯ ರಾತ್ರಿ ದೇವಾಧಿದೇವನಾದ ಜನಾರ್ದನನು ಆ ಅರಸನಿಗೆ ಸ್ವಪ್ನದಲ್ಲಿ ಕಾಣಿಸಿಕೊಂಡು ಶುಭವಚನದಿಂದ ಹೀಗೆ ಹೇಳಿದನು. "ರಾಜಾ, ರಾತ್ರಿ ಕಳೆದು ಬೆಳಗಾದ ಕೂಡಲೇ ನಿನಗೆ ಅತ್ರಿಮಹರ್ಷಿಯ ಸಮಾಗಮವು ಒದಗುವುದು. ಬಳಿಕ ನೀನು ಕೃತಕೃತ್ಯನಾಗುವೆ."

೪೪-೪೫. ದೇವೇಂದ್ರನಂತೆ ಪರಾಕ್ರಮಶಾಲಿಯಾದ ಆ ರಾಜರ್ಷಿಯು ಹೀಗೆ ಸ್ವಪ್ನವನ್ನು ಕಂಡು, ಬೆಳಗಿನ ಜಾವದಲ್ಲಿ ಶಾಸ್ತ್ರೋಕ್ತವಾಗಿ ಸ್ನಾನವನ್ನು ಮಾಡಿ, ಜಿತೇಂದ್ರಿಯನಾಗಿ, ಮನಸ್ಸಿಗೆ ತೃಪ್ತಿಯಾಗುವಂತೆ ಮಹಾವಿಷ್ಣುವನ್ನು

**ಕೃತಕೃತ್ಯೋ ಯಥಾಕಾಮಂ ಪೂಜಯಿತ್ವಾ ಜನಾರ್ದನಂ ।**
**ದದರ್ಶಾತ್ರಿಂ ಮುನಿಂ ರಾಜಾ ಪ್ರತ್ಯಕ್ಷಂ ತಪಸಾಂ ನಿಧಿಂ ||೪೫||**

**ಸ್ವಪ್ನಂ ತು ದೇವದೇವಸ್ಯ ನ್ಯವೇದಯತ ಧಾರ್ಮಿಕಃ ।**
**ತತಃ ಶುಶ್ರಾವ ವಚನಂ ದೇವತಾನಾಂ ಸಮೀರಿತಂ ||೪೬||**

**ಏವಮೇತನ್ಮಹೀಪಾಲ ನಾತ್ರ ಕಾರ್ಯಾ ವಿಚಾರಣಾ ।**
**ಏವಂ ಪ್ರಸಾದಂ ಸಂಪ್ರಾಪ್ಯ ದೇವದೇವಾಜ್ಜನಾರ್ದನಾತ್ ||೪೭||**

**ಕೃತದೇವಾರ್ಚನೋ ರಾಜಾ ತಥಾ ಹುತಹುತಾಶನಃ ।**
**ಸರ್ವಾನ್ ಕಾಮಾನವಾಪ್ತೋಽಸೌ ವರದಾನೇನ ಕೇಶವಾತ್ ||೪೮||**

**ಇತಿ ಶ್ರೀಮತ್ಸ್ಯೇ ಮಹಾಪುರಾಣೇ ಭುವನಕೋಶೇ ಐಲಾಶ್ರಮ ವರ್ಣನಂ ನಾಮ ವಿಂಶತ್ಯಧಿಕಶತತಮೋಽಧ್ಯಾಯಃ**

---

ಪೂಜಿಸಿ ತನ್ನ ಪ್ರಯತ್ನವು ಸಾರ್ಥಕವಾಯಿತೆಂದು ತಿಳಿದನು. ಆ ವೇಳೆಗೆ ತಪೋನಿಧಿಯಾದ ಅತ್ರಿಮಹರ್ಷಿಯು ಅವನಿಗೆ ಸಾಕ್ಷಾತ್ತಾಗಿ ಗೋಚರಿಸಿದನು.

೪೬. ಧರ್ಮಶೀಲನಾದ ಆ ರಾಜನು ದೇವಾಧಿದೇವನಾದ ಮಹಾವಿಷ್ಣುವು ಸ್ವಪ್ನದಲ್ಲಿ ಹೇಳಿದ ಮಾತನ್ನು ಅತ್ರಿಮುನಿಗೆ ಹೇಳಿದನು. ಬಳಿಕ ಅವನು ಕೇಳುವಂತೆ ದೇವತೆಗಳು ಹೀಗೆ ಹೇಳಿದರು. "ಎಲೈ ಮಹೀಪತಿಯೇ, ಇದು ಹೀಗೆಯೇ ಸರಿ. ಇದರಲ್ಲಿ ನಿನಗೆ ಸಂದೇಹ ಬೇಡ."

೪೮. ಪುರೂರವರಾಜನು ದೇವೋತ್ತಮನಾದ ಮಹಾವಿಷ್ಣುವಿನಿಂದ ಹೀಗೆ ಅನುಗ್ರಹವನ್ನು ಪಡೆದು, ಆ ಭಗವಂತನನ್ನು ಪೂಜಿಸಿ ಅಗ್ನಿಹೋತ್ರವನು ನೆರವೇರಿಸಿದನು. ನಾರಾಯಣನ ವರದಿಂದ ಅವನ ಸಕಲ ಮನೋರಥಗಳೂ ಈಡೇರಿದುವು.

## ಅಧ್ಯಾಯದ ಸಾರಾಂಶ

ಪುರೂರವರಾಜನು ಹಿಮವತ್ಪರ್ವತದ ಆ ಪುಣ್ಯಾಶ್ರಮದಲ್ಲಿ ತಪಸು ಮಾಡುತ್ತಿರುವಾಗ ಅಲ್ಲಿ ದೇವತೆಗಳೂ, ದೇವತಾಸ್ತ್ರೀಯರೂ ವಿಧವಿಧವಾಗಿ ಕ್ರೀಡಿಸುತ್ತಿದ್ದರು. ಅದೆಲ್ಲವನ್ನೂ ಅವನು ನೋಡಿದನು. ಆದರೂ ಸ್ಥಿರಚಿತ್ತನಾಗಿ ಜನಾರ್ದನನನ್ನು ಧ್ಯಾನಿಸುತ್ತಿದ್ದನು. ಫಾಲ್ಗುಣಮಾಸದ ಹುಣ್ಣಿಮೆಯ ರಾತ್ರಿ ಮಹಾವಿಷ್ಣು ಅವನಿಗೆ ಸ್ವಪ್ನದಲ್ಲಿ ಕಾಣಿಸಿಕೊಂಡು, ಮರುದಿನ ಬೆಳಗ್ಗೆ ಅತ್ರಿ ಮಹರ್ಷಿಯ ದರ್ಶನವಾಗುವುದೆಂದೂ, ಅವನ ಇಷ್ಟಾರ್ಥಗಳೆಲ್ಲ ಈಡೇರುವುವೆಂದೂ ಹೇಳಿದನು. ಬೆಳಗಾಗಲು ರಾಜನು ಸ್ನಾನಾದಿಗಳಿಂದ ಶುಚಿರ್ಭೂತನಾಗಿ ನಿರೀಕ್ಷಿಸಿಕೊಂಡಿರಲು ಆ ಮಹರ್ಷಿ ಗೋಚರನಾದನು. ಮಹಾರಾಜನ ಮನೋರಥಗಳು ಪೂರ್ಣವಾದುವು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಭುವನಕೋಶದೊಳಗೆ ಐಲಾಶ್ರಮವರ್ಣನವೆಂಬ ನೂರಿಪ್ಪತ್ತನೆಯ ಅಧ್ಯಾಯವು ಮುಗಿದುದು.



## ಅಥ ಏಕವಿಂಶತ್ಯಧಿಕಶತತಮೋಽಧ್ಯಾಯಃ

|| ಸೂತ ಉವಾಚ ||

ತಸ್ಯಾಶ್ರಮಸ್ಯೋತ್ತರತಸ್ತ್ರಿಪುರಾರಿನಿಷೇವಿತಃ ।
ನಾನಾರತ್ನಮಯೈಃ ಶೃಂಗೈಃ ಕಲ್ಪದ್ರುಮಸಮನ್ವಿತೈಃ || ೧ ||

ಮಧ್ಯೇ ಹಿಮವತಃ ಪೃಷ್ಠೇ ಕೈಲಾಸೋ ನಾಮ ಪರ್ವತಃ ।
ತಸ್ಮಿನ್ ನಿವಸತಿ ಶ್ರೀಮಾನ್ ಕುಬೇರಃ ಸಹ ಗುಹ್ಯಕೈಃ || ೨ ||

ಅಪ್ಸರೋಽನುಗತೋ ರಾಜಾ ಮೋದತೇ ಹ್ಯಲಕಾಧಿಪಃ ।
ಕೈಲಾಸಪಾದಸಂಭೂತಂ ಪುಣ್ಯಂ ಶೀತಜಲಂ ಶುಭಂ || ೩ ||

ಮಂದೋದಕಂ ನಾಮ ಸರಃ ಪಯಸ್ತು ದಧಿಸನ್ನಿಭಂ ।
ತಸ್ಮಾತ್ಪ್ರವಹತೇ ದಿವ್ಯಾ ನದೀ ಮಂದಾಕಿನೀ ಶುಭಾ || ೪ ||

ದಿವ್ಯಂ ಚ ನಂದನಂ ತತ್ರ ತಸ್ಯಾಸ್ತೀರೇ ಮಹದ್ವನಂ ।
ಪ್ರಾಗುತ್ತರೇಣ ಕೈಲಾಸಾದ್ದಿವ್ಯಂ ಸೌಗಂಧಿಕಂ ಗಿರಿಂ || ೫ ||

---

೧-೨. ಸೂತಪೌರಾಣಿಕನು ಹೇಳಿದನು.—ಆ ಆಶ್ರಮಕ್ಕೆ ಉತ್ತರದಲ್ಲಿ ಹಿಮವತ್ಪರ್ವತದ ಮೇಲ್ಗಡೆ ನಟ್ಟನಡುವೆ ಕೈಲಾಸವೆಂಬ ಪರ್ವತವುಂಟು. ಅದರ ಶಿಖರಗಳು ಬಗೆಬಗೆಯ ರತ್ನಗಳಿಂದಲೂ ಕಲ್ಪವೃಕ್ಷಗಳಿಂದಲೂ ರಂಜಿಸುತ್ತಿರುವುವು. ಅದು ಮಹೇಶ್ವರನ ಆವಾಸಸ್ಥಾನವಾಗಿರುವುದು. ಧನಾಧಿಪತಿಯಾದ ಕುಬೇರನು ಯಕ್ಷರೊಡಗೂಡಿ ಅಲ್ಲಿ ವಾಸಿಸುತ್ತಿರುವನು.

೩-೪. ಅಪ್ಸರಸ್ತ್ರೀಸಹಿತನಾಗಿ ಅವನು ಅಲಕಾನಗರಿಯಲ್ಲಿ ಸುಖದಿಂದಿರುವನು. ಕೈಲಾಸಪರ್ವತದ ತಪ್ಪಲಿನಲ್ಲಿ ಶೀತಲಜಲಪೂರ್ಣವಾದ ಮಂದೋದಕವೆಂಬ ಸರೋವರವಿದೆ. ಅದು ಶುಭಕರವೂ ಪವಿತ್ರವೂ ಆಗಿದೆ. ಅದರ ನೀರು ಮೊಸರಿನಂತಿರುವುದು. ಅಲ್ಲಿಂದ ಮಂದಾಕಿನಿಯೆಂಬ ಪಾವನವಾದ ನದಿ ಹರಿಯುತ್ತದೆ.

೫-೬. ಅದರ ತೀರದಲ್ಲಿ ನಂದನವೆಂಬ ದಿವ್ಯೋದ್ಯಾನವಿರುವುದು. ಕೈಲಾಸಕ್ಕೆ ಈಶಾನ್ಯದಲ್ಲಿ ದಿವ್ಯಪರಿಮಳಯುಕ್ತವೂ, ಸರ್ವಧಾತುಮಯವೂ ಆದ

**ಸರ್ವಧಾತುಮಯಂ ದಿವ್ಯಂ ಸುವೇಲಂ ಪರ್ವತಂ ಪ್ರತಿ ।**
**ಚಂದ್ರಪ್ರಭೋ ನಾಮ ಗಿರಿಃ ಯಃ ಶುಭ್ರೋ ರತ್ನಸಂನಿಭಃ ॥ ೬ ॥**

**ತತ್ಸಮೀಪೇ ಸರೋ ದಿವ್ಯಮಚ್ಛೋದಂ ನಾಮ ವಿಶ್ರುತಂ ।**
**ತಸ್ಮಾತ್ಪ್ರಭವತೇ ದಿವ್ಯಾ ನದೀ ಹ್ಯಚ್ಛೋದಕಾ ಶುಭಾ ॥ ೭ ॥**

**ತಸ್ಯಾಸ್ತೀರೇ ವನಂ ದಿವ್ಯಂ ಮಹಚ್ಚೈತ್ರರಥಂ ಶುಭಂ ।**
**ತಸ್ಮಿನ್ ಗಿರೌ ನಿವಸತಿ ಮಣಿಭದ್ರಃ ಸಹಾನುಗಃ ॥ ೮ ॥**

**ಯಕ್ಷಸೇನಾಪತಿಃ ಕ್ರೂರೈರ್ಗುಹ್ಯಕೈಃ ಪರಿವಾರಿತಃ ।**
**ಪುಣ್ಯಾ ಮಂದಾಕಿನೀ ನಾಮ ನದೀ ಹ್ಯಚ್ಛೋದಕಾ ಶುಭಾ ॥ ೯ ॥**

**ಮಹೀಮಂಡಲಮಧ್ಯೇ ತು ಪ್ರವಿಷ್ಟೇ ತು ಮಹೋದಧಿಂ ।**
**ಕೈಲಾಸದಕ್ಷಿಣೇ ಪ್ರಾಚ್ಯಾಂ ಶಿವಂ ಸರ್ವೌಷಧಿಂ ಗಿರಿಂ ॥೧೦॥**

---

ಸುವೇಲವೆಂಬ ಪರ್ವತವಿದೆ. ಅದರ ಎದುರಿಗೆ ಚಂದ್ರಪ್ರಭವೆಂಬ ಬೆಟ್ಟವುಂಟು. ಅದು ಶುಭ್ರವರ್ಣವಾಗಿ ವೈಡೂರ್ಯರತ್ನದ ರಾಶಿಯನ್ನು ಹೋಲುತ್ತಿರುವುದು.

೭. ಅದರ ಬಳಿಯಲ್ಲಿ ಪ್ರಸಿದ್ಧವಾದ ಅಚ್ಛೋದವೆಂಬ ದಿವ್ಯಸರಸ್ಸಿದೆ. ಅದರಿಂದ ಅಚ್ಛೋದಕವೆಂಬ ಪವಿತ್ರವಾದ ನದಿಯು ಹುಟ್ಟಿ ಹರಿಯುತ್ತದೆ.

೮. ಅದರ ತೀರದಲ್ಲಿ ಚೈತ್ರರಥವೆಂಬ ಶ್ರೇಷ್ಠವೂ ರಮಣೀಯವೂ ಆದ ದೊಡ್ಡವನವಿದೆ. ಆ ಚಂದ್ರಪ್ರಭಗಿರಿಯಲ್ಲಿ ಮಣಿಭದ್ರನೆಂಬ ಯಕ್ಷನು ತನ್ನ ಅನುಚರರೊಡನೆ ವಾಸಿಸುತ್ತಿರುವನು.

೯. ಅವನು ಯಕ್ಷಸೈನ್ಯದ ಅಧಿಪತಿ. ಕ್ರೂರರಾದ ಯಕ್ಷರು ಅವನನ್ನು ಅನುವರ್ತಿಸುತ್ತಿರುವರು. ಮಂದಾಕಿನಿ ಮತ್ತು ಅಚ್ಛೋದಕೆಗಳೆಂಬ ಪುಣ್ಯ ನದಿಗಳೆರಡೂ ಭೂಮಂಡಲದ ಮಧ್ಯದಲ್ಲಿ ಹರಿದು ಪಶ್ಚಿಮ ಸಮುದ್ರವನ್ನು ಸೇರುವುವು.

೧೦-೧೧. ಕೈಲಾಸಪರ್ವತಕ್ಕೆ ಆಗ್ನೇಯದಲ್ಲಿ ಮಂಗಳಕರವೂ, ಸಕಲ ಮೂಲಿಕೆಗಳ ಉತ್ಪತ್ತಿಸ್ಥಾನವೂ ಆದ ಸುವೇಲವೆಂಬ ಪರ್ವತವಿದೆ. ಅದು ಮೆಣ

**ಮನಃಶಿಲಾಮಯಂ ದಿವ್ಯಂ ಸುವೇಲಂ ಪರ್ವತಂ ಪ್ರತಿ।**
**ಲೋಹಿತೋ ಹೇಮಶೃಂಗಸ್ತು ಗಿರಿಃ ಸೂರ್ಯಪ್ರಭೋ ಮಹಾನ್ ॥೧೧॥**

**ತಸ್ಯ ಪಾದೇ ಮಹದ್ದಿವ್ಯಂ ಲೋಹಿತಂ ಸುಮಹತ್ಸರಃ।**
**ತಸ್ಮಾತ್ಪ್ರಭವತೇ ಪುಣ್ಯೋ ಲೌಹಿತ್ಯಶ್ಚ ನದೋ ಮಹಾನ್ ॥೧೨॥**

**ದಿವ್ಯಾರಣ್ಯಂ ವಿಶೋಕಂ ಚ ತಸ್ಯ ತೀರೇ ಮಹದ್ವನಂ।**
**ತಸ್ಮಿನ್ ಗಿರೌ ನಿವಸತಿ ಯಕ್ಷೋ ಮಣಿಧರೋ ವಶೀ ॥೧೩॥**

**ಸೌಮ್ಯೈಃ ಸುಧಾರ್ಮಿಕೈಶ್ಚೈವ ಗುಹ್ಯಕೈಃ ಪರಿವಾರಿತಃ।**
**ಕೈಲಾಸಾತ್ಪಶ್ಚಿಮೋದೀಚ್ಯಾಂ ಕಕುದ್ಮಾನೌಷಧೀಗಿರಿಃ ॥೧೪॥**

**ಕಕುದ್ಮತಿ ಚ ರುದ್ರಸ್ಯ ಹ್ಯುತ್ಪತ್ತಿಶ್ಚ ಕಕುದ್ಮತಃ।**
**ತದಂಜನಂ ತ್ರೈಕಕುದಂ ಶೈಲಂ ತ್ರಿಕಕುದಂ ಪ್ರತಿ ॥೧೫॥**

---

ಸಿಲೆಯೆಂಬ ಧಾತುವಿನಿಂದ ತುಂಬಿದೆ. ಅದರ ಎದುರಿಗೆ ಸೂರ್ಯನ ಹಾಗೆ ಬೆಳಗುವ ಲೋಹಿತವೆಂಬ ದೊಡ್ಡ ಬೆಟ್ಟವುಂಟು.

೧೨. ಅದರ ತಪ್ಪಲಿನಲ್ಲಿ ಲೋಹಿತವೆಂಬ ವಿಶಾಲವಾದ ದಿವ್ಯಸರೋವರವೊಂದಿದೆ. ಅದರಿಂದ ಪುಣ್ಯಕರವಾದ ಲೌಹಿತ್ಯವೆಂಬ ದೊಡ್ಡ ಹೊಳೆ ಹುಟ್ಟಿ ಹರಿಯುತ್ತದೆ.

೧೩. ಅದರ ತೀರದಲ್ಲಿ ಶೋಕರಹಿತವಾದ ದಿವ್ಯಾರಣ್ಯವೆಂಬ ದೊಡ್ಡ ವನವಿದೆ. ಆ ಲೋಹಿತಪರ್ವತದಲ್ಲಿ ಮಣಿಧರನೆಂಬ ಯಕ್ಷನು ವಾಸಿಸುತ್ತಿದ್ದಾನೆ. ಅವನು ಜಿತೇಂದ್ರಿಯ; ಅವನ ಪರಿವಾರದವರೂ ಯಕ್ಷರೇ. ಅವರೂ ಸಹ ಸೌಮ್ಯಸ್ವಭಾವದವರು ; ಮತ್ತು ಧಾರ್ಮಿಕರು.

೧೪-೧೫. ಕೈಲಾಸಪರ್ವತಕ್ಕೆ ವಾಯುವ್ಯದಲ್ಲಿ ಕಕುದ್ಮಂತವೆಂಬ ಬೆಟ್ಟವಿದೆ. ಅದು ಮೂಲಿಕೆಗಳ ಉತ್ಪತ್ತಿಸ್ಥಳ. ಈಶ್ವರನ ವಾಹನವಾದ ವೃಷಭವು ಜನಿಸಿದುದು ಅಲ್ಲಿಯೇ. ಅದನ್ನೇ ಅಂಜನಾದ್ರಿಯೆಂದೂ ತ್ರೈಕಕುದವೆಂದೂ ಹೇಳುತ್ತಾರೆ. ಅದರ ಎದುರಿಗೆ ಎಲ್ಲ ಬಗೆಯ ಖನಿಜಗಳಿಂದಲೂ ತುಂಬಿದ ವೈದ್ಯುತವೆಂಬ ಮಹಾಗಿರಿ

ಸರ್ವಧಾತುಮಯಸ್ತತ್ರ ಸುಮಹಾನ್ ವೈದ್ಯುತೋ ಗಿರಿಃ ।
ತಸ್ಯ ಪಾದೇ ಮಹದ್ದಿವ್ಯಂ ಮಾನಸಂ ಸಿದ್ಧಸೇವಿತಂ ॥೧೭॥

ತಸ್ಮಾತ್ಪ್ರಭವತೇ ಪುಣ್ಯಾ ಸರಯೂರ್ಲೋಕಪಾವನೀ ।
ಯಸ್ಯಾಸ್ತೀರೇ ವನಂ ದಿವ್ಯಂ ವೈಭ್ರಾಜಂ ನಾಮ ವಿಶ್ರುತಂ ॥೧೭॥

ಕುಬೇರಾನುಚರಸ್ತಸ್ಮಿನ್ ಪ್ರಹೇತಿತನಯೋ ವಶೀ ।
ಬ್ರಹ್ಮಧಾತಾ ನಿವಸತಿ ರಾಕ್ಷಸೋಽನಂತವಿಕ್ರಮಃ ॥೧೮॥

ಕೈಲಾಸಾತ್ಪಶ್ಚಿಮಾಮಾಶಾಂ ದಿವ್ಯಃ ಸರ್ವೌಷಧಿರ್ಗಿರಿಃ ।
ವರುಣಃ ಪರ್ವತಶ್ರೇಷ್ಠೋ ರುಕ್ಮಧಾತುವಿಭೂಷಿತಃ ॥೧೯॥

ಭವಸ್ಯ ದಯಿತಃ ಶ್ರೀಮಾನ್ ಪರ್ವತೋ ಹೈಮಸನ್ನಿಭಃ ।
ಶಾತಕೌಂಭಮಯೈರ್ದಿವ್ಯೈಃ ಶಿಲಾಜಾಲೈಃ ಸಮಾಚಿತಃ ॥೨೦॥

ಶತಸಂಖ್ಯೈಸ್ತಾಪನೀಯೈಃ ಶೃಂಗೈರ್ದಿವಮಿವೋಲ್ಲಿಖನ್ ।
ಶೃಂಗವಾನ್ ಸುಮಹಾದಿವ್ಯೋ ದುರ್ಗಃ ಶೈಲೋ ಮಹಾಚಿತಃ ॥೨೧॥

---

ಯುಂಟು. ಅದರ ತಪ್ಪಲಿನಲ್ಲಿ ಮಾನಸವೆಂಬ ಶ್ರೇಷ್ಠವಾದ ಸರೋವರವಿದೆ. ಸಿದ್ಧರು ಬಂದು ಅದನ್ನು ಸೇವಿಸುತ್ತಾರೆ.

೧೭. ಲೋಕವನ್ನೆಲ್ಲ ಪಾವನಗೊಳಿಸುವ ಸರಯೂ ನದಿಯು ಆ ಸರೋವರದಲ್ಲಿ ಹುಟ್ಟುತ್ತದೆ. ಅದರ ದಡದಲ್ಲಿ ಪ್ರಖ್ಯಾತವಾದ ವೈಭ್ರಾಜವೆಂಬ ದಿವ್ಯವನವಿರುವುದು.

೧೮. ಕುಬೇರನ ಅನುಚರನೂ, ಪ್ರಹೇತಿಪುತ್ರನೂ, ಜಿತೇಂದ್ರಿಯನೂ ಆದ ಬ್ರಹ್ಮಧಾತನೆಂಬ ಮಹಾಶೂರನಾದ ರಾಕ್ಷಸನು ಅಲ್ಲಿ ವಾಸಮಾಡುತ್ತಾನೆ.

೧೯. ಕೈಲಾಸಪರ್ವತಕ್ಕೆ ಪಶ್ಚಿಮದಲ್ಲಿ ಸಕಲ ವಿಧವಾದ ಓಷಧಿಗಳಿಗೂ ಆವಾಸಸ್ಥಾನವಾಗಿ, ಸುವರ್ಣಪೂರ್ಣವಾದ ವರುಣವೆಂಬ ಮಹಾಗಿರಿಯಿದೆ.

೨೦. ಸಂಪದ್ಯುಕ್ತವಾದ ಈ ಪರ್ವತವು ಈಶ್ವರನಿಗೆ ಪ್ರಿಯವಾಗಿದೆ. ಇದು ಮೇರುಪರ್ವತದಂತಿರುವುದು. ಇದರ ಬಂಡೆಗಳೂ ಸಹ ಬಂಗಾರದಿಂದಲೇ ಆಗಿವೆ.

೨೧. ಸುವರ್ಣಮಯವಾದ ಇದರ ನೂರಾರು ಶಿಖರಗಳು ಮೇಘಮಂಡಲವನ್ನು ಭೇದಿಸುತ್ತಿರುವಂತೆ ಕಂಗೊಳಿಸುವುವು. ಈ ಮಹಾಪರ್ವತವು ಬಹು ದುರ್ಗಮವಾಗಿದೆ.

ತಸ್ಮಿನ್ ಗಿರೌ ನಿವಸತಿ ಗಿರಿಶೋ ಧೂಮ್ರಲೋಚನಃ ।
ತಸ್ಯ ಪಾದಾತ್ಪ್ರಭವತಿ ಶೈಲೋದಂ ನಾಮ ತತ್ಸರಃ ॥೨೨॥

ತಸ್ಮಾತ್ಪ್ರಭವತೇ ಪುಣ್ಯಾ ನದೀ ಶೈಲೋದಕಾ ಶುಭಾ ।
ಸಾ ಚಕ್ಷುಸೀತಯೋರ್ಮಧ್ಯೇ ಪ್ರವಿಷ್ಟಾ ಪಶ್ಚಿಮೋದಧಿಂ ॥೨೩॥

ಅಸ್ತ್ಯುತ್ತರೇಣ ಕೈಲಾಸಾಚ್ಛಿವಃ ಸರ್ವೌಷಧೋ ಗಿರಿಃ ।
ಗೌರಂ ತು ಪರ್ವತಶ್ರೇಷ್ಠಂ ಹರಿತಾಲಮಯಂ ಪ್ರತಿ ॥೨೪॥

ಹಿರಣ್ಯಶೃಂಗಃ ಸುಮಹಾದಿವ್ಯೌಷಧಿಮಯೋ ಗಿರಿಃ ।
ತಸ್ಯ ಪಾದೇ ಮಹದ್ದಿವ್ಯಂ ಸರಃ ಕಾಂಚನವಾಲುಕಂ ॥೨೫॥

ರಮ್ಯಂ ಬಿಂದುಸರೋ ನಾಮ ಯತ್ರ ರಾಜಾ ಭಗೀರಥಃ ।
ಗಂಗಾರ್ಥೇ ಸ ತು ರಾಜರ್ಷಿರುವಾಸ ಬಹುಲಾಃ ಸಮಾಃ ॥೨೬॥

---

೨೨. ಪರಮೇಶ್ವರನು ಧೂಮ್ರವರ್ಣದ ವಿಲೋಚನಗಳಿಂದ ವಿರಾಜಿಸುತ್ತ ಅಲ್ಲಿ ವಾಸಿಸುವನು. ಅದರ ತಪ್ಪಲಿನಲ್ಲಿ ಶೈಲೋದವೆಂಬ ಸರೋವರವು ನಿರ್ಮಿತವಾಗಿದೆ.

೨೩. ಅದರಿಂದ ಪುಣ್ಯಕರವಾದ ಶೈಲೋದಕಾನದಿಯು ಜನಿಸುವುದು. ಅದು ಚಕ್ಷು ಮತ್ತು ಸೀತೆಗಳೆಂಬ ಗಂಗಾಪ್ರವಾಹಗಳ ನಡುವೆ ಹರಿದು ಪಶ್ಚಿಮ ಸಮುದ್ರವನ್ನು ಸೇರುತ್ತದೆ.

೨೪-೨೫. ಕೈಲಾಸಕ್ಕೆ ಉತ್ತರದಲ್ಲಿ ಹರಿತಾಲವೃಕ್ಷಗಳಿಂದ ತುಂಬಿದ ಗೌರವೆಂಬ ಪರ್ವತವುಂಟು. ಅದಕ್ಕೆ ಅಭಿಮುಖವಾಗಿ ಸರ್ವೌಷಧವೆಂಬ ಮಂಗಳಕರವಾದ ಬೆಟ್ಟವಿದೆ. ಅದರ ಶಿಖರಗಳು ಹಿರಣ್ಮಯವಾದುವು. ಶ್ರೇಷ್ಠವಾದ ಮೂಲಿಕೆಗಳು ಅಲ್ಲಿ ದೊರಕುವುವು. ಅದರ ತಪ್ಪಲಿನಲ್ಲಿ ವಿಶಾಲವಾದ ದಿವ್ಯಸರಸ್ಸೊಂದಿರುವುದು. ಅದರ ಮರಳು ಸುವರ್ಣಮಯವಾಗಿದೆ.

೨೬. ರಮಣೀಯವಾದ ಆ ಸರೋವರಕ್ಕೆ ಬಿಂದುಸರಸ್ಸೆಂದು ಹೆಸರು. ರಾಜರ್ಷಿಯಾದ ಭಗೀರಥನು ಗಂಗಾನದಿಯನ್ನು ಭೂಲೋಕಕ್ಕೆ ತರುವುದಕ್ಕಾಗಿ ಎಷ್ಟೋ ವರ್ಷಗಳ ಕಾಲ ತಪಸ್ಸುಮಾಡುತ್ತ ಅಲ್ಲಿ ವಾಸಿಸಿದನು.

**ದಿವಂ ಯಾಸ್ಯಂತು ಮೇ ಸರ್ವೇ ಗಂಗಾತೋಯಾಪ್ಲುತಾಸ್ಥಿಕಾಃ ।**
**ತತ್ರ ತ್ರಿಪಥಗಾ ದೇವೀ ಪ್ರಥಮಂ ತು ಪ್ರತಿಷ್ಠಿತಾ ॥೨೭॥**

**ಸೋಮಪಾದಾತ್ಪ್ರಸೂತಾ ಸಾ ಸಪ್ತಧಾ ಪ್ರವಿಭಜ್ಯತೇ ।**
**ಯೂಪಾ ಮಣಿಮಯಾಸ್ತತ್ರ ವಿಮಾನಾಶ್ಚ ಹಿರಣ್ಮಯಾಃ ॥೨೮॥**

**ತತ್ರೇಷ್ಟ್ವಾ ಕ್ರತುಭಿಃ ಸಿದ್ಧಃ ಶಕ್ರಃ ಸುರಗಣೈಃ ಸಹ ।**
**ದಿವ್ಯಚ್ಛಾಯಾಪಥಸ್ತತ್ರ ನಕ್ಷತ್ರಾಣಾಂ ತುಂ ಮಂಡಲಂ ॥೨೯॥**

**ದೃಶ್ಯತೇ ಭೂಸುರಾ ರಾತ್ರೌ ದೇವೀ ತ್ರಿಪಥಗಾ ತು ಸಾ ।**
**ಅಂತರಿಕ್ಷಂ ದಿವಂ ಚೈವ ಭಾವಯಿತ್ವಾ ಭುವಂ ಗತಾ ॥೩೦॥**

**ಭವೋತ್ತಮಾಂಗೇ ಪತಿತಾ ಸಂರುದ್ಧಾ ಯೋಗಮಾಯಯಾ ।**
**ತಸ್ಯಾ ಯೇ ಬಿಂದವಃ ಕೇಚಿತ್ಕ್ರುದ್ಧಾಯಾಃ ಪತಿತಾ ಭುವಿ ॥೩೧॥**

---

೨೭. "ನನ್ನ ಪಿತೃಗಳ ಮೂಳೆಗಳು ಗಂಗಾನದಿಯ ಜಲದಲ್ಲಿ ಕೊಚ್ಚಿ ಹೋಗಲಿ; ಅವರೆಲ್ಲರೂ ಸ್ವರ್ಗಕ್ಕೆ ಹೋಗಲಿ" ಎಂಬುದೇ ಅವನ ಮನೋರಥ. ಗಂಗಾದೇವಿಯು ಮೊತ್ತಮೊದಲು ಆವಿರ್ಭವಿಸಿದುದು ಆ ಪ್ರದೇಶದಲ್ಲಿಯೇ.

೨೮. ಅದು ಚಂದ್ರನ ಕಿರಣಗಳಿಂದ ಉತ್ಪನ್ನವಾಗಿ ಏಳು ಕವಲುಗಳಾಗಿ ಒಡೆಯುತ್ತದೆ. ಆ ಪ್ರದೇಶದಲ್ಲಿ ರತ್ನ ಖಚಿತವಾದ ಯೂಪಸ್ತಂಭಗಳೂ, ಸುವರ್ಣ ಮಯವಾದ ವಿಮಾನಗಳೂ ಇರುವುವು.

೨೯-೩೦. ಇಂದ್ರನು ದೇವತೆಗಳೊಡನೆ ಕೂಡಿ, ಯಾಗಗಳನ್ನು ಮಾಡಿ ಅಲ್ಲಿ ಸಿದ್ಧಿಯನ್ನು ಪಡೆದನು. ಸ್ವರ್ಗಲೋಕದ ಛಾಯಾಪಥವೂ, ನಕ್ಷತ್ರಮಂಡಲವೂ ರಾತ್ರಿಯ ವೇಳೆಯಲ್ಲಿ ಬಹು ಪ್ರಕಾಶವಾಗಿ ಅಲ್ಲಿ ಕಾಣುವುವು. ಗಂಗಾದೇವಿಯು ಅಂತರಿಕ್ಷವನ್ನೂ ಸ್ವರ್ಗವನ್ನೂ ಪವಿತ್ರಗೊಳಿಸಿ ಭೂಮಿಗೆ ಇಳಿದಳು.

೩೧. ಆಕೆಯು ಈಶ್ವರನ ತಲೆಯ ಮೇಲೆ ಬಿದ್ದಾಗ ಅವನು ಅವಳನ್ನು ತನ್ನ ಯೋಗಶಕ್ತಿಯಿಂದ ತಡೆದನು. ಅವಳಿಗೆ ಕೋಪ ಬಂದಿತು. ನೆಲದ ಮೇಲೆ ಹಲವು ನೀರಿನ ಹನಿಗಳು ಬಿದ್ದುವು. ಅವುಗಳಿಂದ ಅಲ್ಲಿ ದೊಡ್ಡ ಸರೋವರವು ಏರ್ಪಟ್ಟಿತು. ಅದನ್ನೇ ಬಿಂದುಸರಸ್ಸೆನ್ನುವರು.

ಕೃತಂ ತು ತ್ರೈರ್ಬಾಹು ಸರಸ್ತತೋ ಬಿಂದುಸರಃ ಸ್ಮೃತಂ ।
ತತಸ್ತಸ್ಯಾ ನಿರುದ್ಧಾಯಾ ಭವೇನ ಸಹಸಾ ರುಷಾ ॥೩೨॥

ಜ್ಞಾತ್ವಾ ತಸ್ಯಾ ಹ್ಯಭಿಪ್ರಾಯಂ ಕ್ರೂರಂ ದೇವ್ಯಾಶ್ಚಿಕೀರ್ಷಿತಂ ।
ಭಿತ್ವಾ ವಿಶಾಮಿ ಪಾತಾಲಂ ಸ್ರೋತಸಾ ಗೃಹ್ಯ ಶಂಕರಂ ॥೩೩॥

ಅಥಾವಲೇಪಂ ತಂ ಜ್ಞಾತ್ವಾ ತಸ್ಯಾಃ ಕ್ರುದ್ಧಸ್ತು ಶಂಕರಃ ।
ತಿರೋಭಾವಯಿತುಂ ಬುದ್ಧಿರಾಸೀದಂಗೇಷು ತಾಂ ನದೀಂ ॥೩೪॥

ಏತಸ್ಮಿನ್ನೇವ ಕಾಲೇ ತು ದೃಷ್ಟ್ವಾ ರಾಜಾನಮಗ್ರತಃ ।
ಧಮನೀಸಂತತಂ ಕ್ಷೀಣಂ ಕ್ಷುಧಾ ವ್ಯಾಕುಲಿತೇಂದ್ರಿಯಂ ॥೩೫॥

ಅನೇನ ತೋಷಿತಶ್ಚಾಹಂ ನದ್ಯರ್ಥೇ ಪೂರ್ವಮೇವ ತು ।
ಬುದ್ಧ್ವಾಸ್ಯ ವರದಾನಂ ತು ತತಃ ಕೋಪಂ ನ್ಯಯಚ್ಛತ ॥೩೬॥

---

೩೨-೩೩. ಈಶ್ವರನು ಥಟ್ಟನೆ ತಡೆದು ನಿಲ್ಲಿಸಲು ಗಂಗಾದೇವಿಗೆ ಸಿಟ್ಟು ಬಂದಿತು "ಭೂಲೋಕವನ್ನೇ ಭೇದಿಸಿ, ಪ್ರವಾಹದಲ್ಲಿ ಶಂಕರನನ್ನೂ ಕೊಚ್ಚಿಕೊಂಡು ಪಾತಾಳಕ್ಕೆ ಇಳಿದು ಬಿಡುತ್ತೇನೆ" ಎಂದು ಅವಳು ನೆನೆದಳು ಅವಳ ಅಭಿಪ್ರಾಯವೂ, ಅವಳು ಮಾಡಬೇಕೆಂದಿದ್ದ ಕ್ರೂರಕಾರ್ಯವೂ ಮಹಾದೇವನಿಗೆ ತಿಳಿದುವು.

೩೪. ಅವಳ ಆ ಗರ್ವವನ್ನು ನೋಡಿ ಶಂಕರನಿಗೆ ಕೋಪ ಹುಟ್ಟಿತು. ತನ್ನ ಶರೀರದಲ್ಲಿಯೇ ಆಕೆಯನ್ನು ಅಡಗಿಸಿಬಿಡಬೇಕೆಂದು ಅವನು ಆಲೋಚಿಸಿದನು.

೩೫. ಆದರೆ ಅದೇ ವೇಳೆಯಲ್ಲಿ ತನ್ನ ಮುಂದೆ ಭಗೀರಥನು ನಿಂತಿರುವುದನ್ನು ಕಂಡನು. ಆ ರಾಜನು ಕಂಗೆಟ್ಟಿದ್ದನು. ಅವನ ನರಗಳೆಲ್ಲವೂ ಮೈಮೇಲೆ ಎದ್ದು ಕಾಣುತ್ತಿದ್ದುವು. ಹಸಿವಿನಿಂದ ಅವನು ಬಳಲಿದ್ದನು. ಅವನ ಇಂದ್ರಿಯಗಳು ಶಕ್ತಿಗುಂದಿದ್ದುವು.

೩೬. "ಗಂಗಾನದಿಯು ಸಲುವಾಗಿ ಈತನು ಮೊದಲೇ ನನ್ನನ್ನು ತನ್ನ ತಪಸ್ಸಿನಿಂದ ಮೆಚ್ಚಿಸಿದ್ದಾನೆ. ಇವನಿಗೆ ನಾನು ವರವನ್ನು ಕೊಟ್ಟಿದ್ದೇನೆ" ಎಂಬ ವಿಚಾರವು ಪರಮೇಶ್ವರನ ನೆನಪಿಗೆ ಬಂದಿತು. ಆಗ ಅವನು ಕೋಪವನ್ನು ತಡೆದುಕೊಂಡನು.

**ಬ್ರಹ್ಮಣೋ ವಚನಂ ಶ್ರುತ್ವಾ ಯದುಕ್ತಂ ಧಾರಯನ್ನದೀಂ ।**
**ತತೋ ವಿಸರ್ಜಯಾಮಾಸ ಸಂರುದ್ಧಾಂ ಸ್ವೇನ ತೇಜಸಾ ॥೩೭॥**

**ನದೀಂ ಭಗೀರಥಸ್ಯಾರ್ಥೇ ತಪಸೋಗ್ರೇಣ ತೋಷಿತಃ ।**
**ತತೋ ವಿಸರ್ಜಯಾಮಾಸ ಸಪ್ತ ಸ್ರೋತಾಂಸಿ ಗಂಗಯಾ ॥೩೮॥**

**ತ್ರೀಣಿ ಪ್ರಾಚೀಮಭಿಮುಖಂ ಪ್ರತೀಚೀಂ ತ್ರೀಣ್ಯಥೈವ ತು ।**
**ಸ್ರೋತಾಂಸಿ ತ್ರಿಪಥಾಯಾಸ್ತು ಪ್ರತ್ಯಪದ್ಯಂತ ಸಪ್ತಧಾ ॥೩೯॥**

**ನಲಿನೀ ಹ್ಲಾದಿನೀ ಚೈವ ಪಾವನೀ ಚೈವ ಪ್ರಾಚ್ಯಗಾ ।**
**ಸೀತಾ ಚಕ್ಷುಶ್ಚ ಸಿಂಧುಶ್ಚ ತಿಸ್ರಸ್ತಾ ವೈ ಪ್ರತೀಚ್ಯಗಾಃ ॥೪೦॥**

**ಸಪ್ತಮೀ ತ್ವನುಗಾ ತಾಸಾಂ ದಕ್ಷಿಣೇನ ಭಗೀರಥಂ ।**
**ತಸ್ಮಾದ್ಭಾಗೀರಥೀ ಸಾ ವೈ ಪ್ರವಿಷ್ಟಾ ದಕ್ಷಿಣೋದಧಿಂ ॥೪೧॥**

---

೩೭. ಅದುವರೆಗೂ ತನ್ನ ತೇಜಸ್ಸಿನ ಬಲದಿಂದ ತಡೆದು ನಿಲ್ಲಿಸಿದ್ದ ಗಂಗಾ ನದಿಯನ್ನು ಮಹಾದೇವನು ಬ್ರಹ್ಮನು ಹೇಳಿದ ಮಾತನ್ನು ಕೇಳಿ ಹೊರಗೆ ಬಿಟ್ಟನು.

೩೮. ಭಗೀರಥನ ಉಗ್ರವಾದ ತಪಸ್ಸಿನಿಂದ ಪರಮೇಶ್ವರನು ಪ್ರಸನ್ನನಾಗಿ, ಅವನ ಹಿತಕ್ಕೋಸ್ಕರವಾಗಿ ಗಂಗಾನದಿಯನ್ನು ಏಳು ಪ್ರವಾಹಗಳ ರೂಪದಿಂದ ಹೊರಕ್ಕೆ ಕಳುಹಿಸಿದನು.

೩೯. ಗಂಗಾನದಿಯ ಏಳು ಪ್ರವಾಹಗಳಲ್ಲಿ ಮೂರು ಪೂರ್ವಾಭಿಮುಖವಾಗಿಯೂ, ಇನ್ನು ಮೂರು ಪಶ್ಚಿಮಾಭಿಮುಖವಾಗಿಯೂ ಹರಿದುವು.

೪೦. ನಲಿನಿ, ಹ್ಲಾದಿನಿ ಮತ್ತು ಪಾವನಿಗಳೆಂಬ ಮೂರು ಶಾಖೆಗಳು ಪೂರ್ವಕ್ಕೆ ಹೊರಟುವು. ಸೀತೆ, ಚಕ್ಷು ಮತ್ತು ಸಿಂಧುಗಳೆಂಬ ಮೂರು ಪಶ್ಚಿಮದ ಕಡೆಗೆ ಹರಿದುವು.

೪೧. ಏಳನೆಯ ಪ್ರವಾಹವಾದರೋ ಭಗೀರಥನನ್ನು ಅನುಸರಿಸಿ ದಕ್ಷಿಣಕ್ಕೆ ಹೊರಟಿತು. ಆದುದರಿಂದಲೇ ಅದಕ್ಕೆ ಭಾಗೀರಥಿಯೆಂದು ಹೆಸರು ಬಂದಿತು. ಅದು ದಕ್ಷಿಣ ಸಮುದ್ರವನ್ನು ಸೇರುತ್ತದೆ.

**ಸಪ್ತ ಚೈತಾಃ ಪ್ಲಾವಯಂತಿ ವರ್ಷಂ ತು ಹಿಮಸಾಹ್ವಯಂ ।**
**ಪ್ರಸೂತಾಃ ಸಪ್ತ ನದ್ಯಸ್ತು ಶುಭಾ ಬಿಂದುಸರೋದ್ಭವಾಃ ॥೪೨॥**

**ತಾನ್ ದೇಶಾನ್ ಪ್ಲಾವಯಂತಿ ಸ್ಮ ಮ್ಲೇಚ್ಛಪ್ರಾಯಾಂಶ್ಚ ಸರ್ವಶಃ ।**
**ಸಶೈಲಾನ್ ಕುಕುರಾನ್ ರೌಧ್ರಾನ್ ಬರ್ಬರಾನ್ ಯವನಾನ್ ಖಸಾನ್ ॥೪೩॥**

**ಪುಲಿಕಾಂಶ್ಚ ಕುಲತ್ಥಾಂಶ್ಚ ಅಂಗಲೋಕ್ಯಾನ್ ವರಾಂಶ್ಚ ಯಾನ್ ।**
**ಕೃತ್ವಾ ದ್ವಿಧಾ ಹಿಮವಂತಂ ಪ್ರವಿಷ್ಟಾ ದಕ್ಷಿಣೋದಧಿಂ ॥೪೪॥**

**ಅಥ ವೀರಮರೂಂಶ್ಚೈವ ಕಾಲಿಕಾಂಶ್ಚೈವ ಶೂಲಿಕಾನ್ ।**
**ತುಷಾರಾನ್ ಬರ್ಬರಾಕಾರಾನ್ ಪಹ್ಲವಾನ್ ಪಾರದಾಞ್ಛಕಾನ್ ॥೪೫॥**

**ಏತಾಞ್ಜನಪದಾಂಶ್ಚಕ್ಷುಃ ಪ್ಲಾವಯಿತ್ವೋದಧಿಂ ಗತಾ ।**
**ದರದೋರ್ಜಗುಡಾಂಶ್ಚೈವ ಗಾಂಧಾರಾನೌರಸಾನ್ ಕುಹೂನ್ ॥೪೬॥**

---

೪೨. ಬಿಂದುಸರಸ್ಸಿನಲ್ಲಿ ಹುಟ್ಟಿದ ಪವಿತ್ರವಾದ ಈ ಏಳುನದಿಗಳೂ ಹೈಮವತವೆಂದು ಪ್ರಸಿದ್ಧವಾದ ಈ ಭಾರತವರ್ಷದಲ್ಲಿ ಹರಿಯುತ್ತವೆ.

೪೩-೪೪. ಮ್ಲೇಚ್ಛರಿಂದ ತುಂಬಿ ಎಲ್ಲ ಕಡೆಗಳಲ್ಲಿಯೂ ಬೆಟ್ಟಗಳಿಂದ ಆವೃತವಾದ ಕುಕುರ, ರೌಧ್ರ, ಬರ್ಬರ, ಯವನ ಮತ್ತು ಖಸಗಳೆಂಬ ಜನಪದ ಗಳಲ್ಲಿಯೂ ಪುಲಿಕ, ಕುಲತ್ಥ, ಅಂಗಲೋಕ್ಯ ಮುಂತಾದ ಸಂಪತ್ಸಮೃದ್ಧವಾದ ದೇಶಗಳಲ್ಲಿಯೂ ಈ ನದಿಗಳು ಪ್ರವಹಿಸುವುವು. ಭಾಗೀರಥಿಯು ಹಿಮವತ್ಪರ್ವತ ವನ್ನು ಇಬ್ಭಾಗಮಾಡಿಕೊಂಡು ಹರಿದು ದಕ್ಷಿಣಸಮುದ್ರಕ್ಕೆ ಹೋಗಿ ಬೀಳುವುದು.

೪೫. ಚಕ್ಷುವೆಂಬ ಗಂಗಾಪ್ರವಾಹವು ವೀರಮರು, ಕಾಲಿಕ, ಶೂಲಿಕ, ಬರ್ಬರದೇಶವನ್ನು ಹೋಲುವ ತುಷಾರ, ಪಹ್ಲವ, ಪಾರದ ಮತ್ತು ಶಕಗಳೆಂದು ಪ್ರಸಿದ್ಧವಾದ ದೇಶಗಳಲ್ಲಿ ಪ್ರವಹಿಸಿ ಸಮುದ್ರವನ್ನು ಸೇರುತ್ತದೆ.

೪೬-೪೭. ದರದ, ಊರ್ಜ, ಗುಡ, ಗಾಂಧಾರ, ಔರಸ, ಕುಹು, ಶಿವ, ಪೌರ, ಇಂದ್ರಮರು, ವಸತಿ, ಸಮತೇಜಸ, ಸೈಂಧವ, ಉರ್ವಸ, ಬರ್ಬ, ಕುಪಥ,

**ಶಿವಪೌರಾನಿಂದ್ರಮರೂನ್ವಸತೀರ್ ಸಮತೇಜಸಂ ।**
**ಸೈಂಧವಾನುರ್ವಸಾರ್ ಬರ್ಬಾರ್ ಕುಪಥಾರ್ ಭೀಮರೋಮಕಾರ್ ॥೪೭॥**

**ಶುನಾಮುಖಾಂಶ್ಚೋರ್ದಮರೂರ್ ಸಿಂಧುರೇತಾನ್ನಿಷೇವತೇ ।**
**ಗಂಧರ್ವಾರ್ ಕಿನ್ನರಾರ್ ಯಕ್ಷಾರ್ ರಕ್ಷೋವಿದ್ಯಾಧರೋರಗಾರ್ ॥೪೮॥**

**ಕಲಾಪಗ್ರಾಮಕಾಂಶ್ಚೈವ ತಥಾ ಕಿಂಪುರುಷಾನ್ನರಾರ್ ।**
**ಕಿರಾತಾಂಶ್ಚ ಪುಲಿಂದಾಂಶ್ಚ ಕುರೂನ್ಸೈ ಭಾರತಾನಪಿ ॥೪೯॥**

**ಪಾಂಚಾಲಾರ್ ಕೌಶಿಕಾರ್ ಮತ್ಸ್ಯಾರ್ ಮಾಗಧಾಂಗಾಂಸ್ತಥೈವ ಚ ।**
**ಬ್ರಹ್ಮೋತ್ತರಾಂಶ್ಚ ವಂಗಾಂಶ್ಚ ತಾಮ್ರಲಿಪ್ತಾಂಸ್ತಥೈವ ಚ ॥೫೦॥**

**ಏತಾಞ್ಜನಪದಾನಾರ್ಯಾರ್ ಗಂಗಾ ಭಾವಯತೇ ಶುಭಾ ।**
**ತತಃ ಪ್ರತಿಹತಾ ವಿಂಧ್ಯೇ ಪ್ರವಿಷ್ಟಾ ದಕ್ಷಿಣೋದಧಿಂ ॥೫೧॥**

**ತತಸ್ತು ಹ್ಲಾದಿನೀ ಪುಣ್ಯಾ ಪ್ರಾಚೀನಾಭಿಮುಖೀ ಯಯೌ ।**
**ಪ್ಲಾವಯಂತ್ಯುಪಕಾಂಶ್ಚೈವ ನಿಷಾದಾನಪಿ ಸರ್ವಶಃ ॥೫೨॥**

---

ಭೀಮರೋಮಕ, ಶುನಾಮುಖ, ಊರ್ದಮರು ಈ ದೇಶಗಳಲ್ಲಿ ಸಿಂಧುವೆಂಬ ಪ್ರವಾಹವು ಹರಿಯುತ್ತದೆ.

೪೮-೫೧. ಗಂಧರ್ವ, ಕಿನ್ನರ, ಯಕ್ಷ, ರಾಕ್ಷಸ, ವಿದ್ಯಾಧರ, ಉರಗ, ಕಿಂಪುರುಷ ಮತ್ತು ಮನುಷ್ಯರು ವಾಸಮಾಡುವ ದೇಶಗಳಲ್ಲಿಯೂ, ಕಲಾಪ ಗ್ರಾಮಗಳಲ್ಲಿಯೂ ಗಂಗಾನದಿಯು ಪ್ರವಹಿಸುವುದು. ಕಿರಾತ, ಪುಲಿಂದ, ಕುರು, ಭಾರತ, ಪಾಂಚಾಲ, ಕೌಶಿಕ, ಮತ್ಸ್ಯ, ಮಾಗಧ, ಅಂಗ, ಬ್ರಹ್ಮೋತ್ತರ, ವಂಗ ಮತ್ತು ತಾಮ್ರಲಿಪ್ತಗಳೆಂಬ ಆರ್ಯದೇಶಗಳನ್ನು ಪವಿತ್ರಗೊಳಿಸುವುದು. ತರುವಾಯ ವಿಂಧ್ಯ ಪರ್ವತದಿಂದ ತಡೆಯಲ್ಪಟ್ಟು ದಕ್ಷಿಣ ಸಮುದ್ರಕ್ಕೆ ಹೋಗಿ ಬೀಳುವುದು.

೫೨-೫೪. ಪೂರ್ವಾಭಿಮುಖವಾಗಿ ಹೊರಟ ಹ್ಲಾದಿನಿಯೆಂಬ ಪುಣ್ಯನದಿಯು ಉಪಕ, ನಿಷಾದ, ಧೀವರ, ಋಷಿಕ, ನೀಲಮುಖ, ಕೇಕರ, ಏಕವರ್ಣ ಕಿರಾತ, ಕಾಲಂಜರ, ವಿಕರ್ಣ, ಕುಶಿಕ, ಮತ್ತು ಸ್ವರ್ಗಭೌಮಕಗಳೆಂಬ ದೇಶಗಳಲ್ಲಿ ಪ್ರವ

ಧೀವರಾನೃಷಿಕಾಂಶ್ಚೈವ ತಥಾ ನೀರಮುಖಾನಪಿ ।
ಕೇಕರಾನೇಕಕರ್ಣಾಂಶ್ಚ ಕಿರಾತಾನಪಿ ಚೈವ ಹಿ ||೫೩||

ಕಾಲಂಜರಾನ್ ವಿಕರ್ಣಾಂಶ್ಚ ಕುಶಿಕಾನ್ ಸ್ವರ್ಗಭೌಮಕಾನ್ ।
ಸಾ ಮಂಡಲೇ ಸಮುದ್ರಸ್ಯ ತೀರೇ ಭೂತ್ವಾ ಚತುರ್ದಶ ||೫೪||

ತತಸ್ತು ನಲಿನೀ ಚಾಪಿ ಪ್ರಾಚೀಮೇವ ದಿಶಂ ಯಯೌ ।
ಕುಪಥಾನ್ ಪ್ಲಾವಯಂತೀ ಸಾ ಇಂದ್ರದ್ಯುಮ್ನಸರಾಂಸ್ಯಪಿ ||೫೫||

ತಥಾ ಖರಪಥಾನ್ ದೇಶಾನ್ ವೇತ್ರಶಂಕುಪಥಾನಪಿ ।
ಮಧ್ಯೇನೋಜ್ಜಾನಕಮರೂನ್ ಕುಥಪ್ರಾವರಣಾನ್ಯಯೌ ||೫೬||

ಇಂದ್ರದ್ವೀಪಸಮೀಪೇ ತು ಪ್ರವಿಷ್ಟಾ ಲವಣೋದಧಿಂ ।
ತತಸ್ತು ಪಾವನೀ ಪ್ರಾಯಾತ್ಪ್ರಾಚೀಮಾಶಾಂ ಜವೇನ ತು ||೫೭||

ತೋಮರಾನ್ ಪ್ಲಾವಯಂತೀ ಚ ಹಂಸಮಾರ್ಗಾನ್ ಸಮೂಹಕಾನ್ ।
ಪೂರ್ವಾನ್ ದೇಶಾಂಶ್ಚ ಸೇವಂತೀ ಭಿತ್ತ್ವಾ ಸಾ ಬಹುಧಾ ಗಿರಿಂ ।
ಕರ್ಣಪ್ರಾವರಣಾನ್ ಪ್ರಾಪ್ಯ ಗತಾ ಸಾಶ್ವಮುಖಾನಪಿ ||೫೮||

---

ಹಿಸುತ್ತ ಮಂಡಲಾಕಾರವಾದ ಸಮುದ್ರತೀರದಲ್ಲಿ ಹದಿನಾಲ್ಕು ಕವಲುಗಳಾಗಿ ಒಡೆದು ಸಮುದ್ರವನ್ನು ಸೇರುತ್ತದೆ.

೫೫-೫೬. ನಲಿನಿಯೂ ಸಹ ಪೂರ್ವದಿಕ್ಕಿಗೇ ಹೊರಟಿತು. ಅದು ಕುಪಥ ದೇಶವನ್ನೂ ಇಂದ್ರದ್ಯುಮ್ನ ಸರೋವರವನ್ನೂ ಜಲಭರಿತವಾಗಿ ಮಾಡಿತು. ಹಾಗೆಯೇ ಖರಪಥ, ವೇತ್ರಪಥ, ಶಂಕುಪಥಗಳೆಂಬ ದೇಶಗಳಲ್ಲಿ ಹರಿದು, ಉಜ್ಜಾನಕ ಮರುಪ್ರದೇಶದ ಮಧ್ಯದಲ್ಲಿ ಪ್ರವಹಿಸಿ, ಕುಥಪ್ರಾವರಣವನ್ನು ಹೊಕ್ಕು ಇಂದ್ರದ್ವೀಪದ ಸಮೀಪದಲ್ಲಿ ಲವಣಸಮುದ್ರವನ್ನು ಪ್ರವೇಶಿಸುತ್ತದೆ.

೫೭-೫೮. ತರುವಾಯ ಪಾವನಿಯು ವೇಗದಿಂದ ಪೂರ್ವದಿಕ್ಕಿಗೆ ಹರಿಯಿತು. ಅದು ತೋಮರ, ಹಂಸಮಾರ್ಗ, ಸಮೂಹಕ ಮುಂತಾದ ಪೂರ್ವದೇಶಗಳಲ್ಲಿ ಪ್ರವಹಿಸಿ, ಹಲವು ಬೆಟ್ಟಗಳನ್ನು ಕೊರೆದು ಕರ್ಣಪ್ರಾವರಣ ಮತ್ತು ಅಶ್ವಮುಖಗಳೆಂಬ ನಾಡುಗಳನ್ನು ತಲಪಿತು.

ಸಿಕ್ತ್ವಾ ಪರ್ವತಮೇರುಂ ಸಾ ಗತ್ವಾ ವಿದ್ಯಾಧರಾನಪಿ ।
ಶೈಮಿಮಂಡಲಕೋಷ್ಠಂ ತು ಸಾ ಪ್ರವಿಷ್ಟಾ ಮಹತ್ಸರಃ ॥೫೯॥

ತಾಸಾಂ ನದ್ಯುಪನದ್ಯೋಽನ್ಯಾಃ ಶತಶೋಽಥ ಸಹಸ್ರಶಃ ।
ಉಪಗಚ್ಛಂತಿ ತಾ ನದ್ಯೋ ಯತೋ ವರ್ಷತಿ ವಾಸವಃ ॥೬೦॥

ತೀರೇ ವಂಶೌಕಸಾರಾಯಾಃ ಸುರಭಿರ್ನಾಮ ತದ್ವನಂ ।
ಹಿರಣ್ಯಶೃಂಗೋ ವಸತಿ ವಿದ್ವಾನ್ ಕೌಬೇರಕೋ ವಶೀ ॥೬೧॥

ಯಜ್ಞಾದಪೇತಃ ಸುಮಹಾನಮಿತೌಜಾಃ ಸುವಿಕ್ರಮಃ ।
ತತ್ರಾಗಸ್ತ್ಯೈಃ ಪರಿವೃತಾ ವಿದ್ವದ್ಭಿರ್ಬ್ರಹ್ಮರಾಕ್ಷಸೈಃ ॥೬೨॥

ಕುಬೇರಾನುಚರಾ ಹ್ಯೇತೇ ಚತ್ವಾರಸ್ತತ್ಸಮಾಶ್ರಿತಾಃ ।
ಏವಮೇವ ತು ವಿಜ್ಞೇಯಾ ಸಿದ್ಧಿಃ ಪರ್ವತವಾಸಿನಾಂ ॥೬೩॥

---

೫೯. ಪರ್ವತಮೇರುವನ್ನು ತನ್ನ ಜಲದಿಂದ ಸೇಚನಮಾಡಿ, ವಿದ್ಯಾಧರ ದೇಶದಲ್ಲಿ ಪ್ರವಹಿಸಿ, ಶೈಮಿಮಂಡಲದ ಮಧ್ಯಭಾಗದಲ್ಲಿ ದೊಡ್ಡ ಸರೋವರವನ್ನು ಸೇರುತ್ತದೆ.

೬೦. ಈ ನದಿಗಳೊಡನೆ ಕೂಡುವ ಬೇರೆಬೇರೆ ನದಿಗಳೂ, ಉಪನದಿಗಳೂ ಸಾವಿರಗಟ್ಟಲೆಯಾಗಿವೆ. ಇವುಗಳು ಹರಿಯುವ ಸ್ಥಳದಲ್ಲಿ ಇಂದ್ರನು ಚೆನ್ನಾಗಿ ಮಳೆಯನ್ನು ಕರೆಯುತ್ತಾನೆ.

೬೧. ವಂಶೌಕಸಾರೆಯೆಂಬ ನದಿಯ ತೀರದಲ್ಲಿ ಸುರಭಿಯೆಂಬ ವನವುಂಟು. ಅಲ್ಲಿ ವಿದ್ಯಾವಂತನೂ ಜಿತೇಂದ್ರಿಯನೂ ಆದ ಹಿರಣ್ಯಶೃಂಗನೆಂಬ ಕುಬೇರನ ಅನುಚರನು ವಾಸಿಸುತ್ತಾನೆ.

೬೨-೬೩. ಅವನು ಯಜ್ಞಬಾಹಿರನು; ಬಹುಪ್ರಸಿದ್ಧನು; ಅತಿಶಯವಾದ ವೀರ್ಯವೂ ಪರಾಕ್ರಮವೂ ಇರತಕ್ಕವನು. ವಿದ್ಯಾವಂತರೂ, ಅಗಸ್ತ್ಯ ಶಿಷ್ಯರೂ ಆದ ಬ್ರಹ್ಮರಾಕ್ಷಸರೊಡಗೂಡಿದ ಕುಬೇರನ ಅನುಚರರು ನಾಲ್ವರು ಅವನನ್ನು ಆಶ್ರಯಿಸಿಕೊಂಡಿರುವರು. ಹೇಮಕೂಟವೇ ಮೊದಲಾದ ಉಳಿದ ಪರ್ವತಗಳ ಪ್ರಾಂತದಲ್ಲಿ ವಾಸಮಾಡುವವರಿಗೂ ಸಹ ಸಿದ್ಧಿಯು ದೊರಕುವುದು ಹೀಗೆಯೇ ಎಂದು ತಿಳಿಯಬೇಕು.

ಪರಸ್ಪರೇಣ ದ್ವಿಗುಣಾ ಧರ್ಮತಃ ಕಾಮತೋಽರ್ಥತಃ ।
ಹೇಮಕೂಟಸ್ಯ ಪೃಷ್ಠೇ ತು ಸರ್ಪಾಣಾಂ ತತ್ಸರಃ ಸ್ಮೃತಂ ॥೬೪॥

ಸರಸ್ವತೀ ಪ್ರಭವತಿ ತಸ್ಮಾಜ್ಜ್ಯೋತಿಷ್ಮತೀ ತು ಯಾ ।
ಅವಗಾಢೇ ಹ್ಯುಭಯತಃ ಸಮುದ್ರೌ ಪೂರ್ವಪಶ್ಚಿಮೌ ॥೬೫॥

ಸರೋ ವಿಷ್ಣುಪದಂ ನಾಮ ನಿಷಧೇ ಪರ್ವತೋತ್ತಮೇ ।
ಯಸ್ಮಾದಗ್ರೇ ಪ್ರಭವತಿ ಗಂಧರ್ವಾನುಕುಲೇ ಚ ತೇ ॥೬೬॥

ಮೇರೋಃ ಪಾರ್ಶ್ವಾತ್ಪ್ರಭವತಿ ಹ್ರದಶ್ಚಂದ್ರಪ್ರಭೋ ಮಹಾನ್ ।
ಜಂಬೂಶ್ಚೈವ ನದೀ ಪುಣ್ಯಾ ಯಸ್ಯಾಂ ಜಾಂಬೂನದಂ ಸ್ಮೃತಂ ॥೬೭॥

ಪಯೋದಸ್ತು ಹ್ರದೋ ನೀಲಃ ಸ ಶುಭ್ರಃ ಪುಂಡರೀಕವಾನ್ ।
ಪುಂಡರೀಕಾ ಪಯೋದಾ ಚ ತಸ್ಮಾದ್ದ್ವೇ ಸಂಪ್ರಸೂಯತಾಂ ॥೬೮॥

---

೬೪. ಉತ್ತರಕ್ಕೆ ಹೋದಂತೆಲ್ಲ ಒಂದು ವರ್ಷಕ್ಕಿಂತ ಮತ್ತೊಂದರಲ್ಲಿ ಧರ್ಮಾರ್ಥಕಾಮಗಳು ಇಮ್ಮಡಿಯಾಗಿ ಹೆಚ್ಚುವುವು. ಹೇಮಕೂಟದ ಮೇಲೆ ಇರುವ ಸರೋವರಕ್ಕೆ ಸರ್ಪಸರಸ್ಸೆಂದು ಹೆಸರು.

೬೫. ಅದರಿಂದ ಸರಸ್ವತಿ ಮತ್ತು ಜ್ಯೋತಿಷ್ಮತಿಗಳೆಂಬ ನದಿಗಳು ಹುಟ್ಟುತ್ತವೆ. ಅವು ಕ್ರಮವಾಗಿ ಎರಡು ದಿಕ್ಕುಗಳಿಗೂ ಹರಿದು ಪೂರ್ವ ಮತ್ತು ಪಶ್ಚಿಮ ಸಮುದ್ರಗಳನ್ನು ಸೇರುತ್ತವೆ.

೬೬. ನಿಷಧಪರ್ವತದಲ್ಲಿ ವಿಷ್ಣುಪದವೆಂಬ ಸರೋವರವಿದೆ. ಅದರಿಂದ ಗಂಧರ್ವೆ ಮತ್ತು ಅನುಕುಲೆಗಳೆಂಬ ಎರಡು ನದಿಗಳು ಜನಿಸುತ್ತವೆ.

೬೭. ಮೇರುಪರ್ವತದ ಪಾರ್ಶ್ವದಲ್ಲಿ ಚಂದ್ರಪ್ರಭವೆಂಬ ಮಡುವುಂಟು. ಅದರಿಂದ ಪವಿತ್ರವಾದ ಜಂಬೂನದಿ ಹುಟ್ಟುತ್ತದೆ. ಅದರ ತೀರದಲ್ಲಿ ಉತ್ಪನ್ನವಾದ ಕಾರಣದಿಂದ ಚಿನ್ನವನ್ನು ಜಾಂಬೂನದವೆಂದು ಕರೆಯುತ್ತಾರೆ.

೬೮. ನೀಲಪರ್ವತದಲ್ಲಿ ಪಯೋದವೆಂಬ ನಿರ್ಮಲವಾದ ಮಡುವಿದೆ. ಅದರಲ್ಲಿ ತಾವರೆಗಳು ವಿಶೇಷವಾಗಿವೆ. ಪುಂಡರೀಕೆ ಮತ್ತು ಪಯೋದೆಗಳೆಂಬ ಎರಡು ನದಿಗಳು ಅದರಲ್ಲಿ ಜನಿಸುತ್ತವೆ.

ಪರಂ ತು ಶೀತಶೈಲಸ್ಯ ಸ್ಮೃತಮುತ್ತರಮಾನಸಂ ।
ಜ್ಯೋತ್ಸ್ನಾ ಚಾಮೃತಕಾಂತಾ ಚ ತಸ್ಮಾದ್ದ್ವೇ ಸಂಪ್ರಸೂಯತೇ ॥೬೯॥

ಹ್ರದಾಃ ಕುರುಷು ವಿಖ್ಯಾತಾಃ ಪದ್ಮಮೀನಕುಲಾಕುಲಾಃ ।
ನಾಮ್ನಾ ತೇ ವೈಜಯಾ ನಾಮ ದ್ವಾದಶೋದಧಿಸನ್ನಿಭಾಃ ॥೭೦॥

ತೇಭ್ಯಃ ಶಾಂತೀ ಚ ಮಧ್ವೀ ಚ ದ್ವೇ ನದ್ಯೌ ಸಂಪ್ರಸೂಯತಾಂ ।
ಕಿಂಪುರುಷಾದ್ಯಾನಿ ಯಾನ್ಯಷ್ಟೌ ತೇಷು ದೇವೋ ನ ವರ್ಷತಿ ॥೭೧॥

ಉದ್ಭಿದಾನ್ಯುದಕಾನ್ಯತ್ರ ಪ್ರವಹಂತಿ ಸರಿದ್ವರಾಃ ।
ಬಲಾಹಕಶ್ಚ ಋಷಭೋ ಚಕ್ರೋ ಮೈನಾಕ ಏವ ಚ ॥೭೨॥

ವಿನಿವಿಷ್ಟಾಃ ಪ್ರತಿದಿಶಂ ನಿಮಗ್ನಾ ಲವಣಾಂಬುಧಿಂ ।
ಚಂದ್ರಕಾಂತಸ್ತಥಾ ದ್ರೋಣಃ ಸುಮಹಾಂಶ್ಚ ಶಿಲೋಚ್ಚಯಃ ॥೭೩॥

---

೬೯. ಹಿಮವತ್ಪರ್ವತದ ಆಚೆ ಉತ್ತರಮಾನಸವೆಂಬ ಸರೋವರವಿದೆ. ಅದರಿಂದ ಜ್ಯೋತ್ಸ್ನ ಮತ್ತು ಅಮೃತಕಾಂತೆಗಳೆಂಬ ನದಿಗಳೆರಡು ಹುಟ್ಟುತ್ತವೆ.

೭೦. ಕುರುವರ್ಷದಲ್ಲಿ ತಾವರೆಗಳಿಂದಲೂ ಮೀನುಗಳಿಂದಲೂ ತುಂಬಿ ಪ್ರಕಾಶಿಸುವ ಹನ್ನೆರಡು ಮಡುಗಳಿವೆ. ಅವುಗಳಿಗೆ ವೈಜಯಗಳೆಂದು ಹೆಸರು. ಒಂದೊಂದೂ ಸಮುದ್ರವನ್ನು ಹೋಲುತ್ತದೆ.

೭೧. ಅವುಗಳಿಂದ ಶಾಂತಿ ಮತ್ತು ಮಧ್ವಿಗಳೆಂಬ ಎರಡು ನದಿಗಳು ಹುಟ್ಟುತ್ತವೆ. ಕಿಂಪುರುಷ ಮೊದಲಾದ ಎಂಟು ವರ್ಷಗಳಲ್ಲಿ ಇಂದ್ರನು ಮಳೆಯನ್ನು ಸುರಿಸುವುದಿಲ್ಲ.

೭೨. ಇಲ್ಲಿ ನೀರು ನೆಲದಿಂದ ಮೇಲಕ್ಕೆ ಉಕ್ಕಿಬರುತ್ತದೆ. ದೊಡ್ಡ ದೊಡ್ಡ ನದಿಗಳು ಹರಿಯುತ್ತವೆ. ಬಲಾಹಕ, ಋಷಭ, ಚಕ್ರ ಮತ್ತು ಮೈನಾಕಗಳೆಂಬ ನಾಲ್ಕು ಪರ್ವತಗಳು ಒಂದೊಂದು ದಿಕ್ಕಿನಲ್ಲಿಯೂ ಲವಣಸಮುದ್ರದಲ್ಲಿ ಮುಳುಗಿವೆ.

೭೩. ಚಂದ್ರಕಾಂತ, ದ್ರೋಣ, ಮಹಾಪರ್ವತ ಎಂಬ ದೊಡ್ಡಬೆಟ್ಟಗಳು ಉತ್ತರದಿಕ್ಕಿನಲ್ಲಿ ವಿಸ್ತಾರವಾಗಿ ಹಬ್ಬಿ ಸಾಗರದೊಳಗೆ ಪ್ರವೇಶಿಸಿವೆ.

ಉದಗಾಯತಾ ಉದೀಚ್ಯಾಂ ತು ಅವಗಾಢಾ ಮಹೋದಧಿಂ ।
ಚಕ್ರೋ ಬಧಿರಕಶ್ಚೈವ ತಥಾ ನಾರದಪರ್ವತಃ ॥೭೪॥

ಪ್ರತೀಚೀಮಾಯತಾಸ್ತೇ ವೈ ಪ್ರತಿಷ್ಠಾಸ್ತೇ ಮಹೋದಧಿಂ ।
ಜೀಮೂತೋ ದ್ರಾವಣಶ್ಚೈವ ಮೈನಾಕಶ್ಚಂದ್ರಪರ್ವತಃ ॥೭೫॥

ಆಯತಾಸ್ತೇ ಮಹಾಶೈಲಾಃ ಸಮುದ್ರಂ ದಕ್ಷಿಣಂ ಪ್ರತಿ ।
ಚಕ್ರಮೈನಾಕಯೋರ್ಮಧ್ಯೇ ದಿವಿ ಸನ್ದಕ್ಷಿಣಾಪಥೇ ॥೭೬॥

ತತ್ರ ಸಂವರ್ತಕೋ ನಾಮ ಸೋಽಗ್ನಿಃ ಪಿಬತಿ ತಜ್ಜಲಂ ।
ಅಗ್ನಿಃ ಸಮುದ್ರವಾಸಸ್ತು ಔರ್ವೋಽಸೌ ಬಡವಾಮುಖಃ ॥೭೭॥

ಇತ್ಯೇತೇ ಪರ್ವತಾವಿಷ್ಟಾಶ್ಚತ್ವಾರೋ ಲವಣೋದಧಿಂ ।
ಛಿದ್ಯಮಾನೇಷು ಪಕ್ಷೇಷು ಪುರಾ ಇಂದ್ರಸ್ಯ ವೈ ಭಯಾತ್ ॥೭೮॥

---

೭೪. ಚಕ್ರ, ಬಧಿರಕ ಮತ್ತು ನಾರದಗಳೆಂಬ ಪರ್ವತಗಳು ಪಶ್ಚಿಮದಲ್ಲಿ ಪ್ರಸರಿಸಿ ಸಮುದ್ರವನ್ನು ಹೊಕ್ಕಿರುವುವು.

೭೫. ಜೀಮೂತ, ದ್ರಾವಣ, ಮೈನಾಕ ಮತ್ತು ಚಂದ್ರ ಪರ್ವತಗಳು ದಕ್ಷಿಣ ಸಮುದ್ರದ ಕಡೆಗೆ ವಿಸ್ತಾರವಾಗಿ ಹಬ್ಬಿರುವುವು.

೭೬-೭೭. ದಕ್ಷಿಣದಿಕ್ಕಿನಲ್ಲಿ ಚಕ್ರ ಮತ್ತು ಮೈನಾಕಪರ್ವತಗಳ ನಡುವೆ ನೆಲೆಸಿ ಸಂವರ್ತಕವೆಂಬ ಅಗ್ನಿಯು ಸಮುದ್ರದ ನೀರನ್ನು ಪಾನಮಾಡುತ್ತದೆ. ಸಮುದ್ರದಲ್ಲಿ ವಾಸಿಸುವ ಅಗ್ನಿಗೆ ಔರ್ವವೆಂದು ಹೆಸರು. ಬಡಬಾ ಎಂದರೆ ಹೆಣ್ಣು ಕುದುರೆಯ ಬಾಯಿಯಲ್ಲಿ ಇರುವ ಕಾರಣ ಅದನ್ನು ಬಡಬಾಗ್ನಿಯೆಂದೂ ಹೇಳುವರು.

೭೮. ಪೂರ್ವದಲ್ಲಿ ಇಂದ್ರನು ಪರ್ವತಗಳ ರೆಕ್ಕೆಗಳನ್ನು ಕತ್ತರಿಸತೊಡಗಿದ ನಷ್ಟೆ! ಆಗ ನಾಲ್ಕು ಪರ್ವತಗಳೂ ಭಯಪಟ್ಟು ಹಾರಿಬಂದು ಲವಣಸಮುದ್ರದೊಳಗೆ ಅಡಗಿಕೊಂಡವು.

**ತೇಷಾಂ ತು ದೃಶ್ಯತೇ ಚಂದ್ರಃ ಶುಕ್ಲೇ ಕೃಷ್ಣೇ ಸಮಾಕೃತಿಃ ।**
**ತೇ ಭಾರತಸ್ಯ ವರ್ಷಸ್ಯ ಭೇದಾ ಯೇ ನವ ಕೀರ್ತಿತಾಃ ॥೭೯॥**

**ಇಹೋದಿತಸ್ಯ ದೃಶ್ಯಂತೇ ಅನ್ಯೇ ತ್ವನ್ಯತ್ರ ಚೋದಿತಾಃ ।**
**ಉತ್ತರೋತ್ತರಮೇತೇಷಾಂ ವರ್ಷಮುದ್ರಿಚ್ಯತೇ ಗುಣೈಃ ॥೮೦॥**

**ಆರೋಗ್ಯಾಯುಃಪ್ರಮಾಣಾಭ್ಯಾಂ ಧರ್ಮತಃ ಕಾಮತೋಽರ್ಥತಃ ।**
**ಸಮನ್ವಿತಾನಿ ಭೂತಾನಿ ತೇಷು ವರ್ಷೇಷು ಭಾಗಶಃ ॥೮೧॥**

**ವಸಂತಿ ನಾನಾಜಾತೀನಿ ತೇಷು ಸರ್ವೇಷು ತಾನಿ ವೈ ।**
**ಇತ್ಯೇವಂ ಧಾರಯದ್ವಿಶ್ವಂ ಪೃಥ್ವೀಂ ಜಗದಿದಂ ಸ್ಥಿತಾಃ ॥೮೨॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಭುವನಕೋಶೇ ಜಂಬೂದ್ವೀಪ ವರ್ಣನಂ ನಾಮೈಕವಿಂಶತ್ಯಧಿಕ ಶತತಮೋಽಧ್ಯಾಯಃ**

---

೭೯. ಆ ಪರ್ವತಗಳಿಗೆ ಸಮಾನವಾದ ಆಕಾರವು ಶುಕ್ಲಪಕ್ಷದಲ್ಲಿಯೂ ಕೃಷ್ಣಪಕ್ಷದಲ್ಲಿಯೂ ಚಂದ್ರನಲ್ಲಿ ಕಾಣಬರುತ್ತದೆ. ಇಂದ್ರದ್ವೀಪ, ಕಶೇರು ಮುಂತಾದ ಭಾರತವರ್ಷದ ಒಂಬತ್ತು ಭಾಗಗಳನ್ನು ಹೇಳಿದುದಾಯಿತು. ಮಿಕ್ಕ ವರ್ಷಗಳನ್ನು ಬೇರೆ ಕಡೆ ಹೇಳಿದೆ.

೮೦-೮೨. ಈ ಪರ್ವತಗಳಿಂದ ಏರ್ಪಟ್ಟಿರುವ ವರ್ಷಗಳು ಎಂದರೆ ಭೂಖಂಡಗಳು ಉತ್ತರಕ್ಕೆ ಹೋಗುತ್ತ ಹೋಗುತ್ತ ಆರೋಗ್ಯ, ಆಯುಃಪ್ರಮಾಣ, ಧರ್ಮ, ಅರ್ಥ, ಕಾಮ ಮುಂತಾದ ಗುಣಗಳಲ್ಲಿ ಒಂದನ್ನೊಂದು ಮೀರಿಸುವುವು. ಈ ಗುಣಗಳಿಂದ ಕೂಡಿದ ನಾನಾಜಾತಿಯ ಪ್ರಾಣಿಗಳು ಈ ವರ್ಷಗಳಲ್ಲೆಲ್ಲ ವಾಸಿಸುವುವು. ಹೀಗೆ ಈ ಪರ್ವತಗಳು ವಿಶ್ವವನ್ನೂ, ಭೂಮಂಡಲವನ್ನೂ, ಈ ಜಗತ್ತನ್ನೂ ಧಾರಣಮಾಡುತ್ತಿರುವುವು.

## ಅಧ್ಯಾಯ ೧೨೧

### ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಜಂಬೂದ್ವೀಪವನ್ನು ವರ್ಣಿಸಿದೆ. ಈ ದ್ವೀಪದಲ್ಲಿ ಕೈಲಾಸವೇ ಮೊಲಾದ ಪವಿತ್ರವಾದ ಎಷ್ಟೋ ಪರ್ವತಗಳಿವೆ. ಅವುಗಳಲ್ಲಿ ಪ್ರಸಿದ್ಧ ವಾದ ಸರೋವರಗಳುಂಟು. ಅವುಗಳಿಂದ ನದಿಗಳು ಉತ್ಪನ್ನವಾಗಿ ನಾನಾ ದೇಶಗಳಲ್ಲಿ ಹರಿಯುವುವು. ಪರಮೇಶ್ವರನ ವಾಸಸ್ಥಾನವಾದ ಕೈಲಾಸಪರ್ವತದ ಸುತ್ತಲೂ ಬೇರೆ ಬೇರೆ ಪರ್ವತಗಳಿರುವುವು. ಅವುಗಳಲ್ಲಿ ಕುಬೇರನ ಪರಿವಾರದವರು ವಾಸಿಸುವರು.

ಬಿಂದುಸರಸ್ಸಿನ ಬಳಿಯಲ್ಲಿ ಭಗೀರಥ ಮಹಾರಾಜನು ಈಶ್ವರನನ್ನು ಕುರಿತು ತಪಸ್ಸುಮಾಡಿದನು. ಅದರಿಂದ ತುಷ್ಟನಾದ ಮಹಾದೇವನು ಗಂಗೆಯನ್ನು ತನ್ನ ಶಿರಸ್ಸಿನಲ್ಲಿ ಧರಿಸಿ ತರುವಾಯ ಹೊರಗೆ ಬಿಟ್ಟನು. ಅದು ಹ್ಲಾದಿನಿ, ಪಾವನಿ ಮುಂತಾದ ಏಳು ಶಾಖೆಗಳಾಗಿ ಹರಿಯಿತು. ಒಂದೊಂದು ಕವಲೂ ಹಲವು ದೇಶಗಳಲ್ಲಿ ಪ್ರವಹಿಸಿ ಸಮುದ್ರವನ್ನು ಸೇರಿತು.

ಹೇಮಕೂಟ, ನೀಲ ಮುಂತಾದ ಪರ್ವತಗಳಿಂದ ಹಿರಣ್ಮಕ, ಕಿಂಪುರುಷ ಮುಂತಾದ ವರ್ಷಗಳು ಏರ್ಪಟ್ಟಿವೆ. ಅವು ಆರೋಗ್ಯ, ಆಯುಃಪ್ರಮಾಣ, ಧರ್ಮ, ಅರ್ಥ, ಕಾಮ ಮುಂತಾದ ಗುಣಗಳಲ್ಲಿ ಒಂದನ್ನೊಂದು ಮೀರಿಸಿರುವುವು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಭುವನಕೋಶದೊಳಗೆ ಜಂಬೂದ್ವೀಪ
ವರ್ಣನವೆಂಬ ನೂರಿಪ್ಪತ್ತೊಂದನೆಯ ಅಧ್ಯಾಯವು ಮುಗಿದುದು.



## ಅಥ ದ್ವಾವಿಂಶತ್ಯಧಿಕಶತತಮೋಽಧ್ಯಾಯಃ

॥ ಸೂತ ಉವಾಚ ॥

ಶಾಕದ್ವೀಪಸ್ಯ ವಕ್ಷ್ಯಾಮಿ ಯಥಾವದಿಹ ನಿಶ್ಚಯಂ ।
ಕಥ್ಯಮಾನಂ ನಿಬೋಧಧ್ವಂ ಶಾಕದ್ವೀಪಂ ದ್ವಿಜೋತ್ತಮಾಃ ॥ ೧ ॥

ಜಂಬೂದ್ವೀಪಸ್ಯ ವಿಸ್ತಾರಾದ್ದ್ವಿಗುಣಸ್ತಸ್ಯ ವಿಸ್ತರಃ ।
ವಿಸ್ತಾರಾತ್ತ್ರಿಗುಣಶ್ಚಾಪಿ ಪರಿಣಾಹಃ ಸಮಂತತಃ ॥ ೨ ॥

ತೇನಾವೃತಃ ಸಮುದ್ರೋಽಯಂ ದ್ವೀಪೇನ ಲವಣೋದಧಿಃ ।
ತತ್ರ ಪುಣ್ಯಾ ಜನಪದಾ ಚಿರಾಚ್ಚ ಮ್ರಿಯತೇ ಜನಃ ॥ ೩ ॥

ಕುತ ಏವ ಚ ದುರ್ಭಿಕ್ಷಂ ಕ್ಷಮಾತೇಜೋಯುತೇಷ್ವಿಹ ।
ತತ್ರಾಪಿ ಪರ್ವತಾಃ ಶುಭ್ರಾಃ ಸಪ್ತೈವ ಮಣಿಭೂಷಿತಾಃ ॥ ೪ ॥

---

೧. ಸೂತಪೌರಾಣಿಕನು ಹೇಳಿದನು.—ಶಾಕದ್ವೀಪದ ಸ್ವರೂಪವನ್ನು ಯಥಾವತ್ತಾಗಿ ಹೇಳುವೆನು. ಎಲೈ ಬ್ರಾಹ್ಮಣೋತ್ತಮರೇ, ಗಮನವಿಟ್ಟು ಕೇಳಿರಿ.

೨. ಅದರ ವ್ಯಾಸವು ಜಂಬೂದ್ವೀಪದ ವ್ಯಾಸದ ಎರಡರಷ್ಟಿದೆ. ಸುತ್ತಳತೆ ಯಾವರೋ ಅಡ್ಡಳತೆಯ (ವ್ಯಾಸದ) ಮೂರರಷ್ಟಿರುವುದು.

೩. ಈ ದ್ವೀಪವು ಲವಣಸಮುದ್ರದ ಎರಡರಷ್ಟು ವಿಸ್ತಾರವಾಗಿದೆ. ಇದು ಅದನ್ನು ಸುತ್ತಲೂ ಆವರಿಸಿಕೊಂಡಿದೆ. ಇದರಲ್ಲಿ ಪುಣ್ಯಾಕರವಾದ ದೇಶಗಳಿವೆ. ಜನರು ಬಹುಕಾಲ ಸುಖದಿಂದ ಜೀವಿಸಿ ಬಳಿಕ ಮೃತರಾಗುವರು.

೪. ಅವರಲ್ಲಿ ತಾಳ್ಮೆಯೂ ತೇಜಸ್ಸೂ ತುಂಬಿರುವುವು. ಅಂತಹವರಿಗೆ ಕ್ಷಾಮವೆಂದರೇನು? ಅದು ಅವರ ಹತ್ತಿರದಲ್ಲಿ ಕೂಡ ಸುಳಿಯದು. ಆ ದ್ವೀಪದಲ್ಲಿಯೂ ಸಹ ವರ್ಷಪರ್ವತಗಳು ಏಳಿರುವುವು. ಅವು ಶುಭ್ರವಾಗಿ ರತ್ನಗಳಿಂದ ಅಲಂಕೃತವಾಗಿರುವುವು.

**ಶಾಕದ್ವೀಪಾದಿಷು ಜ್ಞೇಯಂ ಸಪ್ತ ಸಪ್ತ ಸವಾಶ್ರಿತಾಃ।**
**ಋಜ್ವಾಯತಾಃ ಪ್ರತಿದಿಶಂ ನಿವಿಷ್ಟಾ ವರ್ಷಪರ್ವತಾಃ ॥ ೫ ॥**

**ರತ್ನಾಕರಾ ದ್ವಿನಾಮಾನಃ ಸಾರವಂತೋ ಮಹಾಬಲಾಃ।**
**ಸಮೋದಿತಾಃ ಪ್ರತಿದಿಶಂ ದ್ವೀಪವಿಸ್ತಾರಮಾನತಃ ॥ ೬ ॥**

**ಉಭಯತ್ರಾವಗಾಢೌ ಚ ಲವಣಕ್ಷೀರಸಾಗರೌ।**
**ಶಾಕದ್ವೀಪೇ ತು ವಕ್ಷ್ಯಾಮಿ ಸಪ್ತ ದಿವ್ಯಾನ್ ಮಹಾಚಲಾನ್ ॥ ೭ ॥**

**ದೇವರ್ಷಿಗಂಧರ್ವಯುತಃ ಪ್ರಥಮೋ ಮೇರುರುಚ್ಯತೇ।**
**ಪ್ರಾಗಾಯತಃ ಸ ಸೌವರ್ಣ ಉದಯೋ ನಾಮ ಪರ್ವತಃ ॥ ೮ ॥**

**ತತ್ರ ಮೇಘಾಸ್ತು ವೃಷ್ಟ್ಯರ್ಥಂ ಪ್ರಭವಂತ್ಯಪಯಾಂತಿ ಚ।**
**ತಸ್ಯಾಪರೇಣ ಸುಮಹಾನ್ ಜಲಧಾರೋ ಮಹಾಗಿರಿಃ ॥ ೯ ॥**

---

೫. ಶಾಕದ್ವೀಪವೇ ಮೊದಲಾದುವುಗಳಲ್ಲಿ ಏಳೇಳು ವರ್ಷಪರ್ವತಗಳಿವೆ. ಅವು ಒಂದೊಂದು ದಿಕ್ಕಿನಲ್ಲಿಯೂ ನೇರವಾಗಿಯೂ ಉದ್ದವಾಗಿಯೂ ಹಬ್ಬಿಕೊಂಡಿವೆ.

೬. ಅವು ರತ್ನಗಳಿಗೆ ನೆಲೆಯೆನಿಸಿವೆ. ಒಂದೊಂದಕ್ಕೂ ಎರಡೆರಡು ಹೆಸರುಗಳುಂಟು. ವಿಶೇಷವಾದ ಸ್ಥೈರ್ಯದಿಂದಲೂ ಬಲದಿಂದಲೂ ಕೂಡಿ, ದ್ವೀಪದ ವಿಸ್ತಾರಕ್ಕೆ ತಕ್ಕಂತೆ ಅವು ಪ್ರತಿಯೊಂದು ದಿಕ್ಕಿನಲ್ಲಿಯೂ ಸಮಾನವಾದ ಎತ್ತರವುಳ್ಳವುಗಳಾಗಿವೆ.

೭. ಮತ್ತು ಅವು ಒಂದು ಕಡೆ ಲವಣಸಮುದ್ರವನ್ನೂ ಇನ್ನೊಂದು ಕಡೆ ಕ್ಷೀರಸಮುದ್ರವನ್ನೂ ಮುಟ್ಟುತ್ತಿವೆ. ಇನ್ನು ಮುಂದೆ ಶಾಕದ್ವೀಪದ ಏಳು ವರ್ಷಪರ್ವತಗಳ ಹೆಸರನ್ನು ಹೇಳುವೆನು ಕೇಳಿ.

೮. ದೇವತೆಗಳು, ಋಷಿಗಳು, ಗಂಧರ್ವರು ಇವರಿಗೆ ವಾಸಸ್ಥಾನವೆನಿಸಿದ ಮೇರುಪರ್ವತವೇ ಮೊದಲನೆಯದು. ಅದು ಸುವರ್ಣಮಯವಾಗಿ ಪಶ್ಚಿಮದಿಂದ ಪೂರ್ವಕ್ಕೆ ಹಬ್ಬಿಕೊಂಡಿದೆ. ಅದಕ್ಕೆ ಉದಯಪರ್ವತವೆಂದೂ ಹೆಸರುಂಟು.

೯. ಅಲ್ಲಿ ಮೇಘಗಳು ಉತ್ಪನ್ನವಾಗಿ ಮಳೆಯನ್ನು ಸುರಿಸುವುದಕ್ಕೋಸ್ಕರ ಬೇರೆಬೇರೆ ಕಡೆಗೆ ಹೊರಟುಹೋಗುವುವು. ಅದರ ಪಶ್ಚಿಮಕ್ಕೆ ಜಲಧಾರವೆಂಬ ದೊಡ್ಡ ಪರ್ವತವಿದೆ.

**ಸ ವೈ ಚಂದ್ರಃ ಸಮಾಖ್ಯಾತಃ ಸರ್ವೌಷಧಿಸಮನ್ವಿತಃ ।**
**ತಸ್ಮಾನ್ನಿತ್ಯಮುಪಾದತ್ತೇ ವಾಸವಃ ಪರಮಂ ಜಲಂ ॥೧೦॥**

**ನಾರದೋ ನಾಮ ಸ ಪ್ರೋಕ್ತೋ ದುರ್ಗಃ ಶೈಲೋ ಮಹಾಚಲಃ ।**
**ತತ್ರಾಪಿ ಚ ಸಮುತ್ಪನ್ನೌ ಪೂರ್ವಂ ನಾರದಪರ್ವತೌ ॥೧೧॥**

**ತಸ್ಯಾಪರೇಣ ಸುಮಹಾ ಶ್ಯಾಮೋ ನಾಮ ಮಹಾಗಿರಿಃ ।**
**ಯತ್ರ ಶ್ಯಾಮತ್ವಮಾಪನ್ನಾಃ ಪ್ರಜಾಃ ಪೂರ್ವಮಿಮಾಃ ಕಿಲ ॥೧೨॥**

**ಸ ಏವ ದುಂದುಭಿರ್ನಾಮ ಶ್ಯಾಮಃ ಪರ್ವತಸತ್ತಮಃ ।**
**ಶಬ್ದಮೃತ್ಯುಃ ಪುರಾ ತಸ್ಮಿನ್ ದುಂದುಭಿಸ್ತಾಡಿತಃ ಸುರೈಃ ॥೧೩॥**

**ರತ್ನಮಾಲಾಂತರಮಯಃ ಶಾಲ್ಮಲಶ್ಚಾಂತರಾಲಕೃತ್ ।**
**ತಸ್ಯಾಪರೇಣ ರಜತೋ ಮಹಾನಸ್ತೋ ಗಿರಿಃ ಸ್ಮೃತಃ ॥೧೪॥**

---

೧೦. ಅದಕ್ಕೆ ಚಂದ್ರಪರ್ವತವೆಂದೂ ಪ್ರಸಿದ್ಧಿಯಿದೆ. ಅದು ಸಕಲವಿಧವಾದ ಮೂಲಿಕೆಗಳಿಗೆ ಬೀಡೆನಿಸಿಕೊಂಡಿದೆ. ಇಂದ್ರನು ಮಳೆಗೋಸ್ಕರವಾಗಿ ಬೇಕಾಗುವ ನೀರೆಲ್ಲವನ್ನೂ ಅಲ್ಲಿಂದಲೇ ನಿತ್ಯವೂ ಆಕರ್ಷಿಸುವನು.

೧೧. ದುರ್ಗವೆಂಬ ಮತ್ತೊಂದು ಮಹಾಪರ್ವತವಿದೆ. ಅದಕ್ಕೆ ನಾರದಾದ್ರಿ ಯೆಂದೂ ಹೆಸರುಂಟು. ಪೂರ್ವದಲ್ಲಿ ನಾರದನೂ ಪರ್ವತನೂ ಅಲ್ಲಿ ಜನಿಸಿದರು.

೧೨. ಅದರ ಪಶ್ಚಿಮದಲ್ಲಿ ಶ್ಯಾಮವೆಂಬ ದೊಡ್ಡ ಬೆಟ್ಟವಿದೆ. ಪ್ರಜೆಗಳಿಗೆ ಮೊದಲು ಶ್ಯಾಮವರ್ಣವು ಬಂದುದು ಅಲ್ಲಿನ ವಾಸದಿಂದಲೇ.

೧೩. ಶ್ರೇಷ್ಠವಾದ ಆ ಶ್ಯಾಮಪರ್ವತವನ್ನೇ ದುಂದುಭಿಯೆಂದೂ ಕರೆಯು ವರು. ಪೂರ್ವದಲ್ಲಿ ಶಬ್ದಕಂಟಕನೆನಿಸಿದ್ದ ದುಂದುಭಿಯೆಂಬ ರಾಕ್ಷಸನನ್ನು ದೇವತೆ ಗಳು ಅಲ್ಲಿ ಸಂಹರಿಸಿದರು.

೧೪. ಅದರ ಹಿಂದೆ ರಜತಮಯವೂ ಮಹೋನ್ನತವೂ ಆದ ಅಸ್ತಗಿರಿ ಯೆಂಬುದಿದೆ. ಅದರಲ್ಲಿ ರತ್ನಗಳ ಕಾಂತಿಯು ಮಾಲಾಕಾರವಾಗಿ ಪ್ರಸರಿಸಿದೆ. ಅದು ನಡುನಡುವೆ ಶಾಲ್ಮಲವೃಕ್ಷಗಳಿಂದ ತುಂಬಿದೆ.

ಸ ವೈ ಗೋಮುಕ ಇತ್ಯುಕ್ತೋ ದೇವೈರ್ಯತ್ರಾಮೃತಂ ಪುರಾ ।
ಸಂಭೃತಂ ಚ ಹೃತಂ ಚೈವ ಮಾತುರರ್ಥೇ ಗರುತ್ಮತಾ ||೧೫||

ತಸ್ಯಾಪರೇ ಚಾಂಬಿಕೇಯಃ ಸುಮನಾಶ್ಚೈವ ಸ ಸ್ಮೃತಃ ।
ಹಿರಣ್ಯಾಕ್ಷೋ ವರಾಹೇಣ ತಸ್ಮಿಞ್ಛೈಲೇ ನಿಷೂದಿತಃ ||೧೬||

ಆಂಬಿಕೇಯಾತ್ಪರೋ ರಮ್ಯಃ ಸರ್ವೌಷಧಿನಿಷೇವಿತಃ ।
ವಿಭ್ರಾಜಸ್ತು ಸಮಾಖ್ಯಾತಃ ಸ್ಫಾಟಿಕಸ್ತು ಮಹಾನ್ ಗಿರಿಃ ||೧೭||

ಯಸ್ಮಾದ್ವಿಭ್ರಾಜತೇ ವಹ್ನಿರ್ವಿಭ್ರಾಜಸ್ತೇನ ಸ ಸ್ಮೃತಃ ।
ಸೈವೇಹ ಕೇಶವೇತ್ಯುಕ್ತೋ ಯತೋ ವಾಯುಃ ಪ್ರವಾತಿ ಚ ||೧೮||

ತೇಷಾಂ ವರ್ಷಾಣಿ ವಕ್ಷ್ಯಾಮಿ ಪರ್ವತಾನಾಂ ದ್ವಿಜೋತ್ತಮಾಃ ।
ಶೃಣುಧ್ವಂ ನಾಮತಸ್ತಾನಿ ಯಥಾವದನುಪೂರ್ವಶಃ ||೧೯||

---

೧೫. ಅದಕ್ಕೆ ಸೋಮುಕಪರ್ವತವೆಂದೂ ಹೆಸರು. ಹಿಂದೆ ಅಲ್ಲಿ ದೇವತೆಗಳು ಕೂಡಿಟ್ಟಿದ್ದ ಅಮೃತವನ್ನು ಗರುಡನು ತನ್ನ ತಾಯಿಗೋಸ್ಕರವಾಗಿ ಅಪಹರಿಸಿದನು.

೧೬. ಅದರ ಆಚೆ ಆಂಬಿಕೇಯವೆಂಬ ಪರ್ವತವಿದೆ. ಅದನ್ನು ಸುಮನಸ್ಸೆಂದೂ ಕರೆಯುವರು. ಹಿರಣ್ಯಾಕ್ಷನು ವರಾಹರೂಪಿಯಾದ ನಾರಾಯಣನಿಂದ ಹತನಾದುದು ಅಲ್ಲಿಯೇ.

೧೭. ಆಂಬಿಕೇಯ ಪರ್ವತದಿಂದ ಅತ್ತ ರಮ್ಯಕವೆಂಬ ಪರ್ವತವಿದೆ. ಎಲ್ಲ ಬಗೆಯ ಮೂಲಿಕೆಗಳಿಗೂ ಅದು ತೌರುಮನೆಯೆನಿಸಿದೆ. ಅದಕ್ಕೆ ವಿಭ್ರಾಜವೆಂದೂ ಪ್ರಸಿದ್ಧಿಯುಂಟು. ಆ ಮಹಾಗಿರಿಯು ಸ್ಫಟಿಕಮಯವಾಗಿ ಕಂಗೊಳಿಸುತ್ತಿರುವುದು.

೧೮. ಅಲ್ಲಿ ಯಾವಾಗಲೂ ಅಗ್ನಿಯು ಜ್ವಲಿಸುತ್ತಿರುವುದರಿಂದ ಅದಕ್ಕೆ ವಿಭ್ರಾಜವೆಂಬ ಹೆಸರು ಬಂದಿದೆ. ಅದನ್ನೇ ಕೇಶವಗಿರಿಯೆಂದೂ ಕರೆಯುವರು. ವಾಯುವು ಬೀಸುವುದು ಅಲ್ಲಿಂದಲೇ.

೧೯. ಬ್ರಾಹ್ಮಣೋತ್ತಮರೇ, ಆ ಪರ್ವತಗಳಿಂದ ಏರ್ಪಟ್ಟಿರುವ ಭೂಖಂಡಗಳನ್ನು ಇನ್ನು ವಿವರಿಸುವೆನು. ಅವುಗಳ ಹೆಸರನ್ನು ಕೇಳಿರಿ.

**ದ್ವಿನಾಮಾನ್ಯೇವ ವರ್ಷಾಣಿ ಯಥೈವ ಗಿರಯಸ್ತಥಾ ।**
**ಉದಯಸ್ಯೋದಯಂ ವರ್ಷಂ ಜಲಧಾರೇತಿ ವಿಶ್ರುತಂ ॥೨೦॥**

**ನಾಮ್ನಾ ಗತಭಯಂ ನಾಮ ವರ್ಷಂ ತತ್ಪ್ರಥಮಂ ಸ್ಮೃತಂ ।**
**ದ್ವಿತೀಯಂ ಜಲಧಾರಸ್ಯ ಸುಕುಮಾರಮಿತಿ ಸ್ಮೃತಂ ॥೨೧॥**

**ತದೇವ ಶೈಶಿರಂ ನಾಮ ವರ್ಷಂ ತತ್ಪರಿಕೀರ್ತಿತಂ ।**
**ನಾರದಸ್ಯ ಚ ಕೌಮಾರಂ ತದೇವ ಚ ಸುಖೋದಯಂ ॥೨೨॥**

**ಶ್ಯಾಮಪರ್ವತವರ್ಷಂ ತದನೀಚಕ್ರಮಿತಿ ಸ್ಮೃತಂ ।**
**ಆನಂದಕಮಿತಿ ಪ್ರೋಕ್ತಂ ತದೇವ ಮುನಿಭಿಃ ಶುಭಂ ॥೨೩॥**

**ಸೋಮಕಸ್ಯ ಶುಭಂ ವರ್ಷಂ ವಿಜ್ಞೇಯಂ ಕುಸುಮೋತ್ಕರಂ ।**
**ತದೇವಾಸಿತಮಿತ್ಯುಕ್ತಂ ವರ್ಷಂ ಸೋಮಕಸಂಜ್ಞಿತಂ ॥೨೪॥**

---

೨೦. ವರ್ಷಪರ್ವತಗಳಂತೆಯೇ ವರ್ಷಗಳಿಗೂ ಕೂಡ ಎರಡೆರಡು ಹೆಸರುಗಳಿವೆ. ಉದಯಪರ್ವತದಿಂದ ಅಂಕಿತವಾದ ವರ್ಷಕ್ಕೆ ಉದಯವರ್ಷವೆಂದು ಹೆಸರು. ಅದು ಜಲಧಾರೆಯೆಂದೂ ಪ್ರಖ್ಯಾತವಾಗಿದೆ.

೨೧. ಅದಕ್ಕೆ ಗತಭಯವೆಂದೂ ಮತ್ತೊಂದು ಹೆಸರು. ಅದೇ ಮೊದಲನೆಯ ವರ್ಷ. ಜಲಧಾರಪರ್ವತದಿಂದ ವಿಭಕ್ತವಾದ ವರ್ಷವೇ (ಭೂಖಂಡವೇ) ಎರಡನೆಯದು. ಅದನ್ನು ಸುಕುಮಾರವೆನ್ನುವರು.

೨೨. ಅದನ್ನೇ ಶೈಶಿರವರ್ಷವೆಂದೂ ಹೇಳುತ್ತಾರೆ. ನಾರದಪರ್ವತದಿಂದ ಏರ್ಪಟ್ಟ ವರ್ಷಕ್ಕೆ ಕೌಮಾರ ಅಥವಾ ಸುಖೋದಯವೆಂದು ಹೆಸರು.

೨೩. ಶ್ಯಾಮಪರ್ವತದ ವರ್ಷವನ್ನು ಅನೀಚಕ್ರವೆಂದು ಕರೆಯುತ್ತಾರೆ. ಮಹರ್ಷಿಗಳು ಅದಕ್ಕೆ ಆನಂದಕವೆಂಬ ಹೆಸರನ್ನೂ ಕೊಟ್ಟಿರುವರು.

೨೪. ಸೋಮಕಪರ್ವತದಿಂದ ಲಕ್ಷಿತವಾದ ಭೂಖಂಡವು ಕುಸುಮೋತ್ಕರ ವರ್ಷವೆನಿಸಿಕೊಳ್ಳುವುದು. ಅದನ್ನು ಅಸಿತವರ್ಷವೆಂದು ಹೇಳುತ್ತಾರೆ.

**ಆಂಬಿಕೇಯಸ್ಯ ಮೈನಾಕಂ ಕ್ಷೇಮಕಂ ಚೈವ ತತ್ಸ್ಮೃತಂ ।**
**ಕೈಶೋರಪರ್ವತಸ್ಯಾಪಿ ಮಹಾದ್ರುಮಮಿತಿ ಸ್ಮೃತಂ ।**
**ತದೇವ ಧ್ರುವಮಿತ್ಯುಕ್ತಂ ವರ್ಷಂ ವಿಭ್ರಾಜಸಂಜ್ಞಿತಂ ॥೨೫॥**

**ದ್ವೀಪಸ್ಯ ಪರಿಣಾಹಂ ಚ ಹ್ರಸ್ವದೀರ್ಘತ್ವಮೇವ ಚ ।**
**ಜಂಬೂದ್ವೀಪೇನ ಸಂಖ್ಯಾತಂ ತಸ್ಯ ಮಧ್ಯೇ ವನಸ್ಪತಿಃ ॥೨೬॥**

**ಶಾಕೋ ನಾಮ ಮಹಾವೃಕ್ಷಃ ಪ್ರಜಾಸ್ತಸ್ಯ ಮಹಾನುಗಾಃ ।**
**ಏತೇಷು ದೇವಗಂಧರ್ವಾಃ ಸಿದ್ಧಾಶ್ಚ ಸಹ ಚಾರಣೈಃ ॥೨೭॥**

**ವಿಹರಂತಿ ರಮಂತೇ ಚ ದೃಶ್ಯಮಾನಾಶ್ಚ ತೈಃ ಸಹ ।**
**ತತ್ರ ಪುಣ್ಯಾ ಜನಪದಾಶ್ಚಾತುರ್ವರ್ಣ್ಯಸಮನ್ವಿತಾಃ ॥೨೮॥**

**ತೇಷು ನದ್ಯಶ್ಚ ಸಪ್ತೈವ ಪ್ರತಿವರ್ಷಂ ಸಮುದ್ರಗಾಃ ।**
**ದ್ವಿನಾಮ್ನ್ಯಾ ಚೈವ ತಾಃ ಸರ್ವಾ ಗಂಗಾಃ ಸಪ್ತವಿಧಾಃ ಸ್ಮೃತಾಃ ॥೨೯॥**

---

೨೫. ಅಂಬಿಕೇಯ ಪರ್ವತಕ್ಕೆ ಸೇರಿದ ಭೂಖಂಡಕ್ಕೆ ಮೈನಾಕ ಇಲ್ಲವೇ ಕ್ಷೇಮಕವರ್ಷವೆಂದು ಹೆಸರು. ವಿಭ್ರಾಜ ಅಥವಾ ಕೈಶೋರಪರ್ವತದ ವರ್ಷವನ್ನು ಮಹಾದ್ರುಮವೆನ್ನುವರು. ಇದಕ್ಕೆ ಧ್ರುವವೆಂದೂ ಮತ್ತೊಂದು ಹೆಸರುಂಟು.

೨೬. ದ್ವೀಪದ ವೈಶಾಲ್ಯವೂ, ಕಿರಿದಾಗಿಯೂ ಅಗಲವಾಗಿಯೂ ಇರುವ ಪ್ರದೇಶಗಳೂ ಜಂಬೂದ್ವೀಪದಷ್ಟೇ ಇವೆ. ಇದರ ನಟ್ಟನಡುವೆ ಶಾಕವೆಂಬ ದೊಡ್ಡ ಮರವಿದೆ. ಪ್ರಜೆಗಳು ಅದರ ದಿವ್ಯವಾದ ಪರಿಮಳವನ್ನು ಆಶ್ರಯಿಸಿಕೊಂಡಿರುವರು.

೨೭-೨೮. ದೇವತೆಗಳು, ಗಂಧರ್ವರು, ಸಿದ್ಧರು ಚಾರಣರು ಮುಂತಾದ ದಿವ್ಯಪುರುಷರು ಅಲ್ಲಿನ ಪ್ರಜೆಗಳಿಗೆ ಕಾಣಿಸಿಕೊಂಡು ಅವರೊಡನೆ ವಿಹರಿಸುವರು. ಈ ದ್ವೀಪದ ಭೂಖಂಡದಲ್ಲಿ ಎಷ್ಟೋ ದೇಶಗಳಿವೆ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರೆಂಬ ನಾಲ್ಕು ವರ್ಣದವರೂ ಅಲ್ಲಿ ವಾಸಿಸುವರು.

೨೯. ಒಂದೊಂದು ವರ್ಷದಲ್ಲಿಯೂ ಸಮುದ್ರಗಾಮಿನಿಗಳಾದ ಮಹಾ ನದಿಗಳು ಏಳು ಮಾತ್ರ ಇವೆ. ಅವುಗಳಿಗೆಲ್ಲ ಎರಡೆರಡು ಹೆಸರುಂಟು. ಗಂಗಾ ನದಿಯ ಏಳು ಶಾಖೆಗಳು ಅಲ್ಲಿ ಹರಿಯುತ್ತವೆ.

**ಪ್ರಥಮಾ ಸುಕುಮಾರೀತಿ ಗಂಗಾ ಶಿವಜಲಾ ಶುಭಾ ।**
**ಮುನಿತಪ್ತಾ ಚ ನಾಮ್ನೈಷಾ ನದೀ ಸಂಪರಿಕೀರ್ತಿತಾ ॥೩೦॥**

**ಸುಕುಮಾರೀ ತಪಸ್ಸಿದ್ಧಾ ದ್ವಿತೀಯಾ ನಾಮತಃ ಸತೀ ।**
**ನಂದಾ ಚ ಪಾವನೀ ಚೈವ ತೃತೀಯಾ ಪರಿಕೀರ್ತಿತಾ ॥೩೧॥**

**ಶಿಬಿಕಾ ಚ ಚತುರ್ಥೀ ಸ್ಯಾದ್ದ್ವಿವಿಧಾ ಚ ಪುನಃ ಸ್ಮೃತಾ ।**
**ಇಕ್ಷುಶ್ಚ ಪಂಚಮೀ ಜ್ಞೇಯಾ ತಥೈವ ಚ ಪುನಃ ಕುಹೂಃ ॥೩೨॥**

**ವೇಣುಕಾ ಚಾಮೃತಾ ಚೈವ ಷಷ್ಠೀ ಸಂಪರಿಕೀರ್ತಿತಾ ।**
**ಸುಕೃತಾ ಚ ಗಭಸ್ತೀ ಚ ಸಪ್ತಮೀ ಪರಿಕೀರ್ತಿತಾ ॥೩೩॥**

**ಏತಾಃ ಸಪ್ತ ಮಹಾಭಾಗಾಃ ಪ್ರತಿವರ್ಷಂ ಶಿವೋದಕಾಃ ।**
**ಭಾವಯಂತಿ ಜನಂ ಸರ್ವಂ ಶಾಕದ್ವೀಪನಿವಾಸಿನಂ ॥೩೪॥**

---

೩೦. ಮೊದಲನೆಯದೆಂದರೆ ಪಾವನಜಲದಿಂದ ಪರಿಶೋಭಿಸುವ ಸುಕುಮಾರಿಯೆಂಬ ಗಂಗಾನದಿ. ಇದಕ್ಕೆ ಮುನಿತಪ್ತೆಯೆಂದೂ ಹೆಸರುಂಟು.

೩೧. ಎರಡನೆಯ ಪವಿತ್ರವಾದ ನದಿಯನ್ನು ಸುಕುಮಾರಿಯೆಂದೂ ತಪಸ್ಸಿದ್ಧೆಯೆಂದೂ ಕರೆಯುವರು. ಮೂರನೆಯದಕ್ಕೆ ನಂದೆಯೆಂದು ಹೆಸರು. ಇದನ್ನು ಪಾವನಿಯೆಂದೂ ಹೇಳುವರು.

೩೨. ನಾಲ್ಕನೆಯ ನದಿಯು ಶಿಬಿಕೆಯೆಂದೂ ದ್ವಿವಿಧೆಯೆಂದೂ ಪ್ರಸಿದ್ಧವಾಗಿರುವುದು. ಐದನೆಯದನ್ನು ಇಕ್ಷುವೆಂದೂ ಕುಹುವೆಂದೂ ಕರೆಯುವರು.

೩೩. ಆರನೆಯ ನದಿಯನ್ನು ವೇಣುಕೆ ಅಥವಾ ಅಮೃತೆಯೆಂದೂ, ಏಳನೆಯದನ್ನು ಸುಕೃತೆ ಇಲ್ಲವೇ ಗಭಸ್ತಿಯೆಂದೂ ಹೇಳುವರು.

೩೪. ಈ ಮೇಲೆ ಹೇಳಿದ ಏಳೂ ವಿಶೇಷವಾದ ಮಹಿಮೆಯುಳ್ಳ ಮಹಾನದಿಗಳು. ಒಂದೊಂದು ವರ್ಷದಲ್ಲಿಯೂ ಅವುಗಳು ಪವಿತ್ರವಾದ ಜಲದಿಂದ ತುಂಬಿ ಹರಿಯುವುವು. ಶಾಕದ್ವೀಪದ ನಿವಾಸಿಗಳೆಲ್ಲರಿಗೂ ಅವು ಜೀವನಾಧಾರವಾಗಿರುವುವು.

**ಅಭಿಗಚ್ಛಂತಿ ತಾಸ್ತಾನ್ಯಾ ನದನದ್ಯಃ ಸರಾಂಸಿ ಚ ।**
**ಬಹೂದಕಪರಿಸ್ರಾವಾ ಯತೋ ವರ್ಷತಿ ವಾಸವಃ ॥೩೫॥**

**ತಾಸಾಂ ತು ನಾಮಧೇಯಾನಿ ಪರಿಮಾಣಂ ತಥೈವ ಚ ।**
**ನ ಶಕ್ಯಂ ಪರಿಸಂಖ್ಯಾತುಂ ಪುಣ್ಯಾಸ್ತಾಃ ಸರಿದುತ್ತಮಾಃ ॥೩೬॥**

**ತಾಃ ಪಿಬಂತಿ ಸದಾ ಹೃಷ್ಟಾ ನದೀರ್ಜನಪದಾಸ್ತು ತೇ ।**
**ಏತೇ ಶಾಂತಭಯಾಃ ಪ್ರೋಕ್ತಾಃ ಪ್ರಮೋದಾ ಯೇ ಚ ವೈ ಶಿವಾಃ ॥೩೭॥**

**ಆನಂದಾಶ್ಚ ಸುಖಾಶ್ಚೈವ ಕ್ಷೇಮಕಾಶ್ಚ ನವೈಃ ಸಹ ।**
**ವರ್ಣಾಶ್ರಮಾಚಾರಯುತಾ ದೇಶಾಸ್ತೇ ಸಪ್ತ ವಿಶ್ರುತಾಃ ॥೩೮॥**

**ಆರೋಗ್ಯಾ ಬಲಿನಶ್ಚೈವ ಸರ್ವೇ ಮರಣವರ್ಜಿತಾಃ ।**
**ಅವಸರ್ಪಿಣೀ ನ ತೇಷ್ವಸ್ತಿ ತಥೈವೋತ್ಸರ್ಪಿಣೀ ಪುನಃ ॥೩೯॥**

---

೩೫. ಅಪರಿಮಿತವಾದ ಜಲದಿಂದ ತುಂಬಿ ಹರಿಯುವ ಇನ್ನೂ ಎಷ್ಟೋ ಹೊಳೆಗಳೂ, ನದಿಗಳೂ, ಸರೋವರಗಳೂ ಅವುಗಳೊಡನೆ ಸಂಗಮವಾಗುವುವು. ಇಂದ್ರನು ಅಲ್ಲಿ ಚೆನ್ನಾಗಿ ಮಳೆಯನ್ನು ಸುರಿಸುವನು.

೩೬. ಅವುಗಳ ಹೆಸರುಗಳನ್ನೂ ಅಳತೆಯನ್ನೂ ಲೆಕ್ಕಮಾಡಿ ಹೇಳಲು ಸಾಧ್ಯವಿಲ್ಲ. ಅವೆಲ್ಲವೂ ಪುಣ್ಯನದಿಗಳೆನಿಸಿಕೊಂಡಿವೆ.

೩೭-೩೮. ಆ ದೇಶದ ನಿವಾಸಿಗಳು ಆ ನದಿಗಳ ನೀರನ್ನು ಸಂತೋಷದಿಂದ ಸದಾ ಪಾನಮಾಡುವರು. ಶಾಂತಭಯ, ಪ್ರಮೋದ, ಶಿವ, ಆನಂದ, ಸುಖ, ಕ್ಷೇಮಕ, ನವ ಎಂಬ ಏಳು ದೇಶಗಳು ಅಲ್ಲಿ ಪ್ರಸಿದ್ಧವಾಗಿವೆ. ಅವುಗಳಲ್ಲಿ ವರ್ಣಾಶ್ರಮಧರ್ಮಗಳು ನಿಯತವಾಗಿ ಆಚರಣೆಯಲ್ಲಿರುವುವು.

೩೯. ಅಲ್ಲಿನ ಜನರೆಲ್ಲರೂ ರೋಗರಹಿತರು, ಬಲಿಷ್ಠರು, ಮರಣವಿಲ್ಲದವರು. ತಮ್ಮ ವರ್ಣಾಶ್ರಮಧರ್ಮವನ್ನು ಉಳಿದು ಅದಕ್ಕಿಂತ ಮೇಲಾದ ಅಥವಾ ಕೀಳಾದ ಧರ್ಮವನ್ನು ಎಂದಿಗೂ ಅವರು ಅನುಸರಿಸರು.

ನ ತತ್ರಾಸ್ತಿ ಯುಗಾವಸ್ಥಾ ಚತುರ್ಯುಗಕೃತಾ ಕ್ವಚಿತ್ ।
ತ್ರೇತಾಯುಗಸಮಃ ಕಾಲಸ್ತಥಾ ತತ್ರ ಪ್ರವರ್ತತೇ ॥೪೦॥

ಶಾಕದ್ವೀಪಾದಿಷು ಜ್ಞೇಯಂ ಪಂಚಸ್ವೇತೇಷು ಸರ್ವಶಃ ।
ದೇಶಸ್ಯ ತು ವಿಚಾರೇಣ ಕಾಲಃ ಸ್ವಾಭಾವಿಕಃ ಸ್ಮೃತಃ ॥೪೧॥

ನ ತೇಷು ಸಂಕರಃ ಕಶ್ಚಿದ್ವರ್ಣಾಶ್ರಮಕೃತಃ ಕ್ವಚಿತ್ ।
ಧರ್ಮಸ್ಯ ಚಾವ್ಯಭೀಚಾರಾದೇಕಾಂತಸುಖಿನಃ ಪ್ರಜಾಃ ॥೪೨॥

ನ ತೇಷು ಮಾಯಾ ಲೋಭೋ ವಾ ಈರ್ಷ್ಯಾಸೂಯಾ ಭಯಂ ಕುತಃ ।
ವಿಪರ್ಯಯೋ ನ ತೇಷ್ವಸ್ತಿ ತದ್ವೈ ಸ್ವಾಭಾವಿಕಂ ಸ್ಮೃತಂ ॥೪೩॥

ಕಾಲೋ ನೈವ ಚ ತೇಷ್ವಸ್ತಿ ನ ದಂಡೋ ನ ಚ ದಾಂಡಿಕಃ ।
ಸ್ವಧರ್ಮೇಣ ಚ ಧರ್ಮಜ್ಞಾಸ್ತೇ ರಕ್ಷಂತಿ ಪರಸ್ಪರಂ ॥೪೪॥

---

೪೦. ಕೃತ, ತ್ರೇತಾ, ದ್ವಾಪರ ಮತ್ತು ಕಲಿಗಳೆಂಬ ನಾಲ್ಕು ಯುಗಗಳಿಂದಾಗುವ ಕಾಲಭೇದವು ಅಲ್ಲಿ ತೋರದು. ತ್ರೇತಾಯುಗದ ಧರ್ಮವೇ ಯಾವಾಗಲೂ ಪ್ರಚಾರದಲ್ಲಿರುವುದು.

೪೧. ದೇಶದ ಸ್ಥಿತಿಯನ್ನು ವಿಚಾರಿಸಿದರೆ ಶಾಕ ಮುಂತಾದ ಈ ಐದು ದ್ವೀಪಗಳಲ್ಲಿ ಎಲ್ಲ ಕಡೆಯಲ್ಲಿಯೂ ಕಾಲವು ಸ್ವಾಭಾವಿಕ ಧರ್ಮದಿಂದಲೇ ಕೂಡಿರುವುದೆಂದು ಹೇಳಬಹುದು.

೪೨. ಪ್ರಜೆಗಳಲ್ಲಿ ವರ್ಣಾಶ್ರಮಧರ್ಮದ ಸಾಂಕರ್ಯವು ಎಂದಿಗೂ ಉಂಟಾಗದು. ಧರ್ಮದಲ್ಲಿ ಲೋಪವು ಬಾರದಿರುವುದರಿಂದ ಅವರು ಬಹಳ ಸುಖದಿಂದ ಜೀವಿಸುವರು.

೪೩. ಅವರಲ್ಲಿ ಮಾಯೆ, ಲೋಭ, ಈರ್ಷ್ಯೆ, ಅಸೂಯೆ ಇವ್ಯೊಂದೂ ಇಲ್ಲ. ಹೀಗೆಂದ ಮೇಲೆ ಭಯವೆಲ್ಲಿಯದು ? ನಡೆವಳಿಕೆಯಲ್ಲಿ ವ್ಯತ್ಯಾಸವೆಂಬುದೇ ಇಲ್ಲ. ಇದನ್ನೇ ಸ್ವಾಭಾವಿಕ ಧರ್ಮವೆನ್ನುವರು.

೪೪. ದುಷ್ಕಾಲ, ದಂಡ, ದಂಡಿಸುವವ ಎಂಬುದೊಂದೂ ಆ ಜನರಿಗೆ ತಿಳಿಯದು. ಎಲ್ಲರೂ ಧರ್ಮವನ್ನು ಬಲ್ಲವರು. ತಮ್ಮ ತಮ್ಮ ಧರ್ಮದಲ್ಲಿದ್ದು ಕೊಂಡು ಒಬ್ಬರನ್ನೊಬ್ಬರು ರಕ್ಷಿಸುವರು.

ಪರಿಮಂಡಲಸ್ತು ಸುಮಹಾನ್ ದ್ವೀಪೋ ವೈ ಕುಶಸಂಜ್ಞಕಃ ।
ನದೀಜಲೈಃ ಪರಿವೃತಃ ಪರ್ವತೈಶ್ಚಾಭ್ರಸನ್ನಿಭೈಃ ॥೪೫॥

ಸರ್ವಧಾತುವಿಚಿತ್ರೈಶ್ಚ ಮಣಿವಿದ್ರುಮಭೂಷಿತೈಃ ।
ಅನ್ಯೈಶ್ಚ ವಿವಿಧಾಕಾರೈ ರಮ್ಯೈರ್ಜನಪದೈಸ್ತಥಾ ॥೪೬॥

ವೃಕ್ಷೈಃ ಪುಷ್ಪಫಲೋಪೇತೈಃ ಸರ್ವತೋ ಧನಧಾನ್ಯವಾನ್ ।
ನಿತ್ಯಂ ಪುಷ್ಪಫಲೋಪೇತಃ ಸರ್ವರತ್ನಸಮಾವೃತಃ ॥೪೭॥

ಆವೃತಃ ಪಶುಭಿಃ ಸರ್ವೈರ್ಗ್ರಾಮಾರಣ್ಯೈಶ್ಚ ಸರ್ವಶಃ ।
ಅನುಪೂರ್ವ್ಯಾತ್ಸಮಾಸೇನ ಕುಶದ್ವೀಪಂ ನಿಬೋಧತ ॥೪೮॥

ಅಥ ತೃತೀಯಂ ವಕ್ಷ್ಯಾಮಿ ಕುಶದ್ವೀಪಂ ಚ ಕೃತ್ಸ್ನಶಃ ।
ಕುಶದ್ವೀಪೇನ ಕ್ಷೀರೋದಃ ಸರ್ವತಃ ಪರಿವಾರಿತಃ ॥೪೯॥

---

೪೫-೪೬. ಶಾಕದ್ವೀಪದ ತರುವಾಯ ಮಂಡಲಾಕಾರವಾದ ಕುಶದ್ವೀಪವಿದೆ. ಅದು ಬಹಳ ದೊಡ್ಡದು. ನದಿಗಳ ನೀರು ಅಲ್ಲಿ ಯಥೇಚ್ಛವಾಗಿ ಹಾಯುತ್ತದೆ. ಬೆಟ್ಟಗಳು ಮೋಡಗಳಂತೆ ವಿಧವಿಧವಾದ ಆಕಾರಗಳಿಂದ ಶೋಭಿಸುತ್ತಿವೆ. ಅವು ಎಲ್ಲ ಬಗೆಯ ಖನಿಜಗಳಿಂದಲೂ ತುಂಬಿ ಮುತ್ತುಗಳಿಂದಲೂ ಹವಳಗಳಿಂದಲೂ ಅಲಂಕೃತವಾಗಿವೆ. ಅಲ್ಲದೆ ರಮಣೀಯವಾದ ಹಲವು ದೇಶಗಳು ಕಂಗೊಳಿಸುತ್ತಿವೆ. ಅವುಗಳ ಆಕೃತಿಯು ವಿಧವಿಧವಾಗಿದೆ.

೪೭. ಮರಗಳು ಹೂಹಣ್ಣುಗಳಿಂದ ಕಿಕ್ಕಿರಿಯುತ್ತಿವೆ. ಆ ದ್ವೀಪವು ಎಲ್ಲ ಕಡೆಯಲ್ಲಿಯೂ ಧನಧಾನ್ಯಗಳಿಂದ ಸಮೃದ್ಧವಾಗಿ, ಫಲಪುಷ್ಪಗಳಿಂದ ವಿರಾಜಿಸುತ್ತ, ಸಕಲವಿಧವಾದ ರತ್ನಗಳಿಂದ ಪರಿಶೋಭಿಸುತ್ತಿರುವುದು.

೪೮. ಗ್ರಾಮದ ಮತ್ತು ಅರಣ್ಯದ ಎಲ್ಲ ಬಗೆಯ ಪಶುಗಳೂ ಅಲ್ಲಿ ವಾಸಿಸುತ್ತವೆ. ಇನ್ನು ಕ್ರಮವರಿತು ಕುಶದ್ವೀಪವನ್ನು ಸಂಗ್ರಹವಾಗಿ ವರ್ಣಿಸುವೆನು ಕೇಳಿರಿ.

೪೯. ಇನ್ನು ಮುಂದೆ ಮೂರನೆಯದಾದ ಕುಶದ್ವೀಪವನ್ನು ಸಮಗ್ರವಾಗಿ ಬಣ್ಣಿಸುವೆನು. ಈ ದ್ವೀಪವು ಕ್ಷೀರಸಮುದ್ರವನ್ನು ಎಲ್ಲಕಡೆಯೂ ಸುತ್ತುಗಟ್ಟಿರುವುದು.

ಶಾಕದ್ವೀಪಸ್ಯ ವಿಸ್ತಾರಾದ್ದ್ವಿಗುಣೇನ ಸಮನ್ವಿತಃ ।
ತತ್ರಾಪಿ ಪರ್ವತಾಃ ಸಪ್ತ ವಿಜ್ಞೇಯಾ ರತ್ನಯೋನಯಃ ॥೫೦॥

ರತ್ನಾಕರಾಸ್ತಥಾ ನದ್ಯಸ್ತೇಷಾಂ ನಾಮಾನಿ ಮೇ ಶೃಣು ।
ದ್ವಿನಾಮಾನಶ್ಚ ತೇ ಸರ್ವೇ ಶಾಕದ್ವೀಪೇ ಯಥಾ ತಥಾ ॥೫೧॥

ಪ್ರಥಮತಃ ಸೂರ್ಯಸಂಕಾಶಃ ಕುಮುದೋ ನಾಮ ಪರ್ವತಃ ।
ವಿದ್ರುಮೋಚ್ಚಯ ಇತ್ಯುಕ್ತಃ ಸ ಏವ ಚ ಮಹೀಧರಃ ॥೫೨॥

ಸರ್ವಧಾತುಮಯೈಃ ಶೃಂಗೈಃ ಶಿಲಾಜಾಲಸಮನ್ವಿತೈಃ ।
ದ್ವಿತೀಯಃ ಪರ್ವತಸ್ತತ್ರ ಉನ್ನತೋ ನಾಮ ವಿಶ್ರುತಃ ॥೫೩॥

ಹೇಮಪರ್ವತ ಇತ್ಯುಕ್ತಃ ಸ ಏವ ಚ ಮಹೀಧರಃ ।
ಹರಿತಾಲಮಯೈಃ ಶೃಂಗೈರ್ದ್ವೀಪಮಾವೃತ್ಯ ಸರ್ವಶಃ ॥೫೪॥

---

೫೦. ಇದು ವಿಸ್ತಾರದಲ್ಲಿ ಶಾಕದ್ವೀಪಕ್ಕೆ ಇಮ್ಮಡಿಯಾಗಿದೆ. ಇದರಲ್ಲಿಯೂ ಸಹ ರತ್ನಗಳ ಉತ್ಪತ್ತಿಸ್ಥಾನವೆನಿದ ಏಳು ಪರ್ವತಗಳಿವೆ.

೫೧. ನದಿಗಳೂ ಕೂಡ ರತ್ನಗಳಿಗೆ ಆಶ್ರಯವಾಗಿವೆ. ಆ ಪರ್ವತಗಳ ಹೆಸರನ್ನು ಹೇಳುವೆನು ಕೇಳು. ಶಾಕದ್ವೀಪದಲ್ಲಿ ಇರುವಂತೆಯೇ ಇಲ್ಲಿಯೂ ಅವುಗಳಿಗೆ ಎರಡೆರಡು ಹೆಸರುಂಟು.

೫೨. ಕುಮುದವೆಂಬ ಪರ್ವತವೇ ಮೊದಲನೆಯದು. ಅದು ಸೂರ್ಯನಂತೆ ಬೆಳಗುತ್ತಿರುವುದು. ವಿದ್ರುಮೋಚ್ಚಯವೆಂದೂ ಅದಕ್ಕೆ ಹೆಸರುಂಟು.

೫೩. ಎರಡನೆಯ ಪರ್ವತವನ್ನು ಉನ್ನತವೆಂದು ಕರೆಯುತ್ತಾರೆ. ಅದು ಬಹಳ ಪ್ರಸಿದ್ಧವಾದುದು. ಅದರ ಶಿಖರಗಳು ಎಲ್ಲ ಬಗೆಯ ಖನಿಜಗಳಿಂದಲೂ ವಿಧವಿಧವಾದ ಶಿಲೆಗಳಿಂದಲೂ ಕೂಡಿವೆ.

೫೪. ಅದಕ್ಕೆ ಹೇಮಪರ್ವತವೆಂದೂ ಮತ್ತೊಂದು ಹೆಸರಿದೆ. ಅದರ ಶಿಖರಗಳು ಹರಿದಳವೆಂಬ ಧಾತುವಿಶೇಷದಿಂದ ತುಂಬಿ ದ್ವೀಪದ ಎಲ್ಲ ಭಾಗವನ್ನೂ ಕಾಂತಿಯಿಂದ ಬೆಳಗುವುವು.

**ಬಲಾಹಕಸ್ತೃತೀಯಸ್ತು ಜಾತ್ಯಂಜನಮಯೋ ಗಿರಿಃ ।**
**ದ್ಯುತಿಮಾನ್ನಾಮತಃ ಪ್ರೋಕ್ತಃ ಸ ಏವ ಚ ಮಹೀಧರಃ ॥೫೫॥**

**ಚತುರ್ಥಃ ಪರ್ವತೋ ದ್ರೋಣೋ ಯತ್ರೌಷಧ್ಯೋ ಮಹಾಗಿರೌ ।**
**ವಿಶಲ್ಯಕರಣೀ ಚೈವ ಮೃತಸಂಜೀವನೀ ತಥಾ ॥೫೬॥**

**ಪುಷ್ಪವಾನ್ನಾಮ ಸೈವೋಕ್ತಃ ಪರ್ವತಃ ಸುಮಹಾಚಿತಃ ।**
**ಕಂಕಸ್ತು ಪಂಚಮಸ್ತೇಷಾಂ ಪರ್ವತೋ ರತ್ನಸಾನುಮಾನ್ ॥೬೭॥**

**ಕುಶೇಶಯ ಇತಿ ಪ್ರೋಕ್ತಃ ಪುನಃ ಸ ಪೃಥಿವೀಧರಃ ।**
**ದಿವ್ಯಪುಷ್ಪಫಲೋಪೇತೋ ದಿವ್ಯವೀರುತ್ಸಮನ್ವಿತಃ ॥೫೮॥**

**ಷಷ್ಠಸ್ತು ಪರ್ವತಸ್ತತ್ರ ಮಹಿಷೋ ಮೇಘಸನ್ನಿಭಃ ।**
**ಸ ಏವ ತು ಪುನಃ ಪ್ರೋಕ್ತೋ ಹರಿರಿತ್ಯಭಿವಿಶ್ರುತಃ ॥೫೯॥**

---

೫೫. ಉತ್ತಮವಾದ ಅಂಜನಮಣಿಗಳಿಂದ ಪೂರ್ಣವಾದ ಬಲಾಹಕವೆಂಬ ಪರ್ವತವು ಮೂರನೆಯದು. ಅದನ್ನು ದ್ಯುತಿಮಂತವೆಂತಲೂ ಕರೆಯುತ್ತಾರೆ.

೫೬. ದ್ರೋಣಪರ್ವತವು ನಾಲ್ಕನೆಯದು. ಇದರಲ್ಲಿ ಗಾಯವನ್ನು ಕೂಡಲೆ ಗುಣಪಡಿಸುವ ಮತ್ತು ಸತ್ತವರನ್ನು ಬದುಕಿಸುವ ಮಹೌಷಧಿಗಳಿವೆ. ಇವುಗಳನ್ನು ವಿಶಲ್ಯಕರಣಿ ಮತ್ತು ಮೃತಸಂಜೀವನಿಯೆನ್ನುತ್ತಾರೆ. ಬಹು ಎತ್ತರವಾದ ಆ ಪರ್ವತಕ್ಕೆ ಪುಷ್ಪವಂತವೆಂದೂ ಹೆಸರುಂಟು.

೫೭–೫೮. ಕಂಕವೆಂಬುದು ಐದನೆಯ ಪರ್ವತ. ಅದರ ತಪ್ಪಲು ನೆಲವು ರತ್ನಗಳಿಂದ ಶೋಭಿಸುತ್ತಿರುವುದು. ಅದನ್ನು ಕುಶೇಶಯವೆಂದೂ ಹೇಳುತ್ತಾರೆ. ಅದು ಉತ್ತಮವಾದ ಹೂಹಣ್ಣುಗಳಿಂದಲೂ ಬಳ್ಳಿಗಳಿಂದಲೂ ಕೂಡಿರುವುದು.

೫೯. ಆರನೆಯ ಪರ್ವತಕ್ಕೆ ಮಹಿಷವೆಂದು ಹೆಸರು. ಅದು ಮೇಘದಂತೆ ಕಂಗೊಳಿಸುತ್ತದೆ. ಅದನ್ನು ಹರಿಪರ್ವತವೆಂತಲೂ ಕರೆಯುತ್ತಾರೆ. ಅದು ಬಹಳ ಪ್ರಸಿದ್ಧವಾದುದು. ನೀರಿನಲ್ಲಿ ಹುಟ್ಟಿದ ಮಹಿಷವೆಂಬ ಅಗ್ನಿಯು ಅಲ್ಲಿ ವಾಸಮಾಡುತ್ತದೆ.

**ತಸ್ಮಿನ್ ಸೋಽಗ್ನಿರ್ನಿವಸತಿ ಮಹಿಷೋ ನಾಮ ಯೋಽಪ್ಸುಜಃ ।**
**ಸಪ್ತಮಃ ಪರ್ವತಸ್ತತ್ರ ಕಕುದ್ಮಾನ್ ಸ ಹಿ ಭಾಷ್ಯತೇ ॥೬೦॥**

**ಮಂದರಃ ಸೈವ ವಿಜ್ಞೇಯಃ ಸರ್ವಧಾತುಮಯಃ ಶುಭಃ ।**
**ಮಂದ ಇತ್ಯೇಷ ಯೋ ಧಾತುರಪಾಮರ್ಥೇ ಪ್ರಕಾಶತೇ ॥೬೧॥**

**ಅಪಾಂ ವಿದಾರಣಾಚ್ಚೈವ ಮಂದರಃ ಸ ನಿಗದ್ಯತೇ ।**
**ತತ್ರ ರತ್ನಾನ್ಯನೇಕಾನಿ ಸ್ವಯಂ ರಕ್ಷತಿ ವಾಸವಃ ॥೬೨॥**

**ಪ್ರಜಾಪತಿರುಪಾದಾಯ ಪ್ರಜಾಭ್ಯೋ ಹ್ಯದದಾತ್ಸ್ವಯಂ ।**
**ತೇಷಾಮಂತರವಿಷ್ಕಂಭೋ ದ್ವಿಗುಣಃ ಸಮುದಾಹೃತಃ ॥೬೩॥**

**ಇತ್ಯೇತೇ ಪರ್ವತಾಃ ಸಪ್ತ ಕುಶದ್ವೀಪೇ ಪ್ರಭಾಷಿತಾಃ ।**
**ತೇಷಾಂ ವರ್ಷಾಣಿ ವಕ್ಷ್ಯಾಮಿ ಸಪ್ತೈವ ತು ವಿಭಾಗಶಃ ॥೬೪॥**

---

೬೦. ಏಳನೆಯ ಪರ್ವತವನ್ನು ಕಕುದ್ಮಂತವೆಂದು ಹೇಳುತ್ತಾರೆ. ಅದಕ್ಕೆ ಮಂದರವೆಂತಲೂ ಹೆಸರುಂಟು. ಅದು ಸಕಲ ವಿಧವಾದ ಧಾತುಗಳಿಂದ ರಂಜಿಸುವ ಮಹಾಪರ್ವತವೆನಿಸಿದೆ.

೬೧-೬೨. ಮಂದ ಎಂಬ ಧಾತುವು ಜಲಾರ್ಥವಾಚಕವಾಗಿದೆ. ನೀರನ್ನು ಭೇದಿಸುವ ಕಾರಣ ಈ ಪರ್ವತವನ್ನು ಮಂದರವೆನ್ನುತ್ತಾರೆ. ಅದರಲ್ಲಿ ಅನೇಕ ರತ್ನಗಳುಂಟು. ಸಾಕ್ಷಾದ್ದೇವೇಂದ್ರನು ಅವುಗಳನ್ನು ರಕ್ಷಿಸುತ್ತಿದ್ದಾನೆ. ಪ್ರಜೆಗಳ ಸಲುವಾಗಿ ಬ್ರಹ್ಮದೇವನೇ ಆ ರತ್ನಗಳನ್ನು ತಂದುಕೊಟ್ಟನು.

೬೩-೬೪. ಈ ಪರ್ವತಗಳಲ್ಲಿ ಒಂದರಿಂದ ಮತ್ತೊಂದಕ್ಕೆ ಇರುವ ದೂರವು ಶಾಕದ್ವೀಪದ ಪರ್ವತಗಳ ಪರಸ್ಪರ ದೂರಕ್ಕಿಂತ ಇಮ್ಮಡಿಯಾಗಿರುವುದು. ಕುಶ ದ್ವೀಪದ ಏಳು ವರ್ಷಪರ್ವತಗಳನ್ನೂ ಹೇಳಿದುದಾಯಿತು. ಇನ್ನು ಅದರ ಭೂಖಂಡಗಳನ್ನು ಹೇಳುವೆನು ಕೇಳು. ಅವುಗಳ ಸಂಖ್ಯೆಯೂ ಸಹ ಏಳೇ.

ಕುಮುದಸ್ಯ ಸ್ಮೃತಃ ಶ್ವೇತ ಉನ್ನತಶ್ಚೈವ ಸ ಸ್ಮೃತಃ ।
ಉನ್ನತಸ್ಯ ತು ವಿಜ್ಞೇಯಂ ವರ್ಷಂ ಲೋಹಿತಸಂಜ್ಞಕಂ ॥೬೫॥

ವೇಣುಮಂಡಲಕಂ ಚೈವ ತಥೈವ ಪರಿಕೀರ್ತಿತಂ ।
ಬಲಾಹಕಸ್ಯ ಜೀಮೂತಃ ಸ್ವೈರಥಾಕಾರಮಿತ್ಯಪಿ ॥೬೬॥

ದ್ರೋಣಸ್ಯ ಹರಿಕಂ ನಾಮ ಲವಣಂ ಚ ಪುನಃ ಸ್ಮೃತಂ ।
ಕಂಕಸ್ಯಾಪಿ ಕಕುನ್ನಾಮ ಧೃತಿಮಚ್ಚೈವ ತತ್ಸ್ಮೃತಂ ॥೬೭॥

ಮಹಿಷಂ ಮಹಿಷಸ್ಯಾಪಿ ಪುನಶ್ಚಾಪಿ ಪ್ರಭಾಕರಂ ।
ಕಕುದ್ಮಿನಸ್ತು ತದ್ವರ್ಷಂ ಕಪಿಲಂ ನಾಮ ವಿಶ್ರುತಂ ॥೬೮॥

ಏತಾನ್ಯಪಿ ವಿಶಿಷ್ಟಾನಿ ಸಪ್ತ ಸಪ್ತ ಪೃಥಕ್ಪೃಥಕ್ ।
ವರ್ಷಾಣಿ ಪರ್ವತಾಶ್ಚೈವ ನದೀಸ್ತೇಷು ನಿಬೋಧತ ॥೬೯॥

---

೬೫. ಕುಮುದಪರ್ವತದಿಂದ ಆದ ವರ್ಷವನ್ನು ಶ್ವೇತವೆಂದು ಕರೆಯುವರು. ಅದಕ್ಕೆ ಉನ್ನತವರ್ಷವೆಂಬ ಮತ್ತೊಂದು ಹೆಸರೂ ಉಂಟು. ಉನ್ನತಪರ್ವತವು ಲೋಹಿತವರ್ಷದ ಎಲ್ಲೆಕಟ್ಟಿನಲ್ಲಿದೆ.

೬೬. ಅದನ್ನು ವೇಣುಮಂಡಲವೆಂದೂ ಹೇಳುತ್ತಾರೆ. ಬಲಾಹಕಗಿರಿಯ ವರ್ಷವು ಮೂರನೆಯದು. ಅದಕ್ಕೆ ಜೀಮೂತವೆಂದೂ ರಥಾಕಾರವೆಂದೂ ಪ್ರಸಿದ್ಧಿಯಿದೆ.

೬೭. ದ್ರೋಣಪರ್ವತದಿಂದ ಹರಿಕ ಅಥವಾ ಲವಣವೆಂಬ ವರ್ಷವು ಏರ್ಪಟ್ಟಿವೆ. ಕಂಕಪರ್ವತದ ವರ್ಷಕ್ಕೆ ಕಕುತ್ತೆಂದು ಹೆಸರು. ಅದನ್ನೇ ಧೃತಿ ಮತ್ತೆಂದೂ ಕರೆಯುತ್ತಾರೆ.

೬೮. ಮಹಿಷಪರ್ವತದ ವರ್ಷಕ್ಕೆ ಮಹಿಷವೆಂದೂ ಪ್ರಭಾಕರವೆಂದೂ ಪ್ರಖ್ಯಾತಿಯಿದೆ. ಕಕುದ್ಮಿಪರ್ವತದಿಂದ ಕಕುದ್ಮಿ ಅಥವಾ ಕಪಿಲವೆಂಬ ವರ್ಷವು ಉಂಟಾಗಿದೆ.

೬೯. ಪ್ರಸಿದ್ಧವಾದ ಈ ಏಳು ಭೂಖಂಡಗಳನ್ನೂ, ಪರ್ವತಗಳನ್ನೂ ಬೇರೆ ಬೇರೆಯಾಗಿ ವಿವರಿಸಿದೆನು. ಇನ್ನು ಇವುಗಳಲ್ಲಿ ಉತ್ಪನ್ನವಾಗಿ ಪ್ರವಹಿಸುವ ನದಿಗಳನ್ನು ಕೇಳಿರಿ.

**ತತ್ರಾಪಿ ನದ್ಯಃ ಸಪ್ತೈವ ಪ್ರತಿವರ್ಷಂ ಹಿ ತಾಃ ಸ್ಮೃತಾಃ ।**
**ದ್ವಿನಾಮವತ್ಯಸ್ತಾಃ ಸರ್ವಾಃ ಸರ್ವಾಃ ಪುಣ್ಯಜಲಾಃ ಸ್ಮೃತಾಃ ॥೭೦॥**

**ಧೂತಪಾಪಾ ನದೀ ನಾಮ ಯೋನಿಶ್ಚೈವ ಪುನಃ ಸ್ಮೃತಾ ।**
**ಸೀತಾ ದ್ವಿತೀಯಾ ವಿಜ್ಞೇಯಾ ಸಾ ಚೈವ ಹಿ ನಿಶಾ ಸ್ಮೃತಾ ॥೭೧॥**

**ಪವಿತ್ರಾ ತೃತೀಯಾ ವಿಜ್ಞೇಯಾ ವಿತೃಷ್ಣಾಪಿ ಚ ಯಾ ಪುನಃ ।**
**ಚತುರ್ಥೀ ಹ್ಲಾದಿನೀತ್ಯುಕ್ತಾ ಚಂದ್ರಭಾ ಇತಿ ಚ ಸ್ಮೃತಾ ॥೭೨॥**

**ವಿದ್ಯುಚ್ಚ ಪಂಚಮೀ ಪ್ರೋಕ್ತಾ ಶುಕ್ಲಾ ಚೈವ ವಿಭಾವ್ಯತೇ ।**
**ಪುಂಡ್ರಾ ಷಷ್ಠೀ ತು ವಿಜ್ಞೇಯಾ ಪುನಶ್ಚೈವ ವಿಭಾವರೀ ॥೭೩॥**

**ಮಹತೀ ಸಪ್ತಮೀ ಪ್ರೋಕ್ತಾ ಪುನಶ್ಚೈಷಾ ಧೃತಿಃ ಸ್ಮೃತಾ ।**
**ಅನ್ಯಾಸ್ತಾಭ್ಯೋಽಪಿ ಸಂಜಾತಾಃ ಶತಶೋಽಥ ಸಹಸ್ರಶಃ ॥೭೪॥**

---

೭೦. ಹಿಂದಿನ ದ್ವೀಪಗಳಂತೆಯೇ ಈ ದ್ವೀಪದಲ್ಲಿಯೂ ಸಹ ಪ್ರತಿಯೊಂದು ಭೂಖಂಡದಲ್ಲಿಯೂ ಏಳೇಳು ನದಿಗಳಿವೆ. ಅವುಗಳೆಲ್ಲಕ್ಕೂ ಎರಡೆರಡು ಹೆಸರುಗಳಿವೆ. ಅವುಗಳಲ್ಲಿನ ಜಲವು ಪವಿತ್ರವಾಗಿರುವುದು.

೭೧. ಮೊದಲನೆಯ ನದಿಗೆ ಧೂತಪಾಪೆ ಅಥವಾ ಯೋನಿಯೆಂದು ಹೇಳುತ್ತಾರೆ. ಎರಡನೆಯದೇ ಸೀತೆ; ಅದಕ್ಕೆ ನಿಶೆಯೆಂದೂ ಹೆಸರುಂಟು.

೭೨. ಮೂರನೆಯ ನದಿಯು ಪವಿತ್ರೆಯೆಂದೂ ವಿತೃಷ್ಣೆಯೆಂದೂ ಪ್ರಸಿದ್ಧವಾಗಿದೆ. ನಾಲ್ಕನೆಯದನ್ನು ಹ್ಲಾದಿನಿಯೆನ್ನುತ್ತಾರೆ. ಅದಕ್ಕೆ ಚಂದ್ರಭೆಯೆಂದೂ ಪ್ರಖ್ಯಾತಿಯಿದೆ.

೭೩. ಐದನೆಯ ನದಿಗೆ ವಿದ್ಯುತ್ತೆಂದೂ ಶುಕ್ಲೆಯೆಂದೂ ಹೇಳುತ್ತಾರೆ. ಪುಂಡ್ರೆ ಮತ್ತು ವಿಭಾವರಿಯೆಂಬುವು ಆರನೆಯ ನದಿಯ ಹೆಸರುಗಳು.

೭೪. ಏಳನೆಯದೇ ಕೊನೆಯ ನದಿ. ಅದು ಮಹತಿಯೆಂದೂ ಧೃತಿಯೆಂದೂ ಕರೆಯಿಸಿಕೊಳ್ಳುತ್ತದೆ. ಇವುಗಳಲ್ಲದೆ ಇನ್ನೂ ನೂರಾರು, ಸಾವಿರಾರು ನದಿಗಳು ಅಲ್ಲಿ ಹರಿಯುತ್ತವೆ.

ಅಭಿಗಚ್ಛಂತಿ ತಾ ನದ್ಯೋ ಯತೋ ವರ್ಷತಿ ವಾಸವಃ ।
ಇತ್ಯೇಷ ಸನ್ನಿವೇಶೋ ವಃ ಕುಶದ್ವೀಪಸ್ಯ ವರ್ಣಿತಃ ॥೭೫॥

ಶಾಕದ್ವೀಪೇನ ವಿಸ್ತಾರಃ ಪ್ರೋಕ್ತಸ್ತಸ್ಯ ಸನಾತನಃ ।
ಕುಶದ್ವೀಪಃ ಸಮುದ್ರೇಣ ಘೃತಮಂಡೋದಕೇನ ಚ ॥೭೬॥

ಸರ್ವತಃ ಸುಮಹಾನ್ ದ್ವೀಪಶ್ಚಂದ್ರವತ್ಪರಿವೇಷ್ಟಿತಃ ।
ವಿಸ್ತಾರಾನ್ಮಂಡಲಾಚ್ಚೈವ ಕ್ಷೀರೋದಾದ್ದ್ವಿಗುಣೋ ಮತಃ ॥೭೭॥

ತತಃ ಪರಂ ಪ್ರವಕ್ಷ್ಯಾಮಿ ಕ್ರೌಂಚದ್ವೀಪಂ ಯಥಾ ತಥಾ ।
ಕುಶದ್ವೀಪಸ್ಯ ವಿಸ್ತಾರಾದ್ದ್ವಿಗುಣಸ್ತಸ್ಯ ವಿಸ್ತರಃ ॥೭೮॥

ಘೃತೋದಕಃ ಸಮುದ್ರೋ ವೈ ಕ್ರೌಂಚದ್ವೀಪೇನ ಸಂವೃತಃ ।
ಚಕ್ರನೇಮಿಪ್ರಮಾಣೇನ ವೃತ್ತೋ ವೃತ್ತೇನ ಸರ್ವಶಃ ॥೭೯॥

---

೭೫. ದೇವೇಂದ್ರನು ಚೆನ್ನಾಗಿ ಮಳೆಯನ್ನು ಕರೆಯುವುದರಿಂದ ಆ ನದಿಗಳು ಜಲಪೂರ್ಣವಾಗಿ ಎಲ್ಲ ಕಡೆಗಳಲ್ಲಿಯೂ ಹರಿಯುತ್ತವೆ. ಈ ರೀತಿಯಾಗಿ ಕುಶ ದ್ವೀಪದ ಸನ್ನಿವೇಶವನ್ನು ನಿಮಗೆ ಬಣ್ಣಿಸಿರುವೆನು.

೭೬-೭೭. ಶಾಕದ್ವೀಪದ ವರ್ಣನೆಯೊಡನೆಯೇ ಅದರ ವಿಸ್ತಾರವನ್ನೂ ತಿಳಿಸಿದೆ. ತುಪ್ಪದ ಸಮುದ್ರವು ವಿಸ್ತೃತವಾದ ಕುಶದ್ವೀಪವನ್ನು ಚಂದ್ರಾಕಾರವಾಗಿ ಎಲ್ಲ ಕಡೆಗಳಲ್ಲಿಯೂ ಬಳಸಿಕೊಂಡಿದೆ. ಇದು ಅಡ್ಡಳತೆಯಲ್ಲಿಯೂ ಸುತ್ತಳತೆ ಯಲ್ಲಿಯೂ ಕ್ಷೀರಸಮುದ್ರದ ಎರಡರಷ್ಟಿದೆ.

೭೮. ಇನ್ನು ಮುಂದೆ ಕ್ರೌಂಚದ್ವೀಪವನ್ನು ಯಥಾಕ್ರಮವಾಗಿ ವರ್ಣಿಸು ವೆನು. ಇದು ಕುಶದ್ವೀಪದ ಎರಡರಷ್ಟು ವಿಸ್ತಾರವಾಗಿದೆ.

೭೯. ಚಕ್ರವನ್ನು ಪಟ್ಟಿಯು ಸುತ್ತಿಕೊಂಡಿರುವಂತೆ ವೃತ್ತಾಕಾರವಾದ ಕ್ರೌಂಚದ್ವೀಪವು ಮಂಡಲಾಕಾರವಾಗಿರುವ ಘೃತಸಮುದ್ರವನ್ನು ಸುತ್ತುಗಟ್ಟಿ ಕೊಂಡಿದೆ.

ತಸ್ಮಿನ್ ದ್ವೀಪೇ ನಗಾಃ ಶ್ರೇಷ್ಠಾ ದೇವನೋ ಗಿರಿರುಚ್ಯತೇ ।
ದೇವನಾತ್ಪರತಶ್ಚಾಪಿ ಗೋವಿಂದೋ ನಾಮ ಪರ್ವತಃ ॥೮೦॥

ಗೋವಿಂದಾತ್ಪರತಶ್ಚಾಪಿ ಕ್ರೌಂಚಸ್ತು ಪ್ರಥಮೋ ಗಿರಿಃ ।
ಕ್ರೌಂಚಾತ್ಪರೇ ಪಾವನಕಃ ಪಾವನಾದಂಧಕಾರಕಃ ॥೮೧॥

ಅಂಧಕಾರಾತ್ಪರೇ ಚಾಪಿ ದೇವಾವೃನ್ನಾಮ ಪರ್ವತಃ ।
ದೇವಾವೃತಃ ಪರೇಣಾಪಿ ಪುಂಡರೀಕೋ ಮಹಾನ್ ಗಿರಿಃ ॥೮೨॥

ಏತೇ ರತ್ನಮಯಾಃ ಸಪ್ತ ಕ್ರೌಂಚದ್ವೀಪಸ್ಯ ಪರ್ವತಾಃ ।
ಪರಸ್ಪರಸ್ಯ ದ್ವಿಗುಣೋ ವಿಷ್ಕಂಭೋ ವರ್ಷಪರ್ವತಃ ॥೮೩॥

ವರ್ಷಾಣಿ ತಸ್ಯ ವಕ್ಷ್ಯಾಮಿ ನಾಮತಸ್ತು ನಿಬೋಧತ ।
ಕ್ರೌಂಚಸ್ಯ ಕುಶಲೋ ದೇಶೋ ವಾಮನಸ್ಯ ಮನೋನುಗಃ ॥೮೪॥

---

೮೦. ಆ ದ್ವೀಪದಲ್ಲಿ ಶ್ರೇಷ್ಠವಾದ ಪರ್ವತಗಳಿವೆ. ಮೊದಲನೆಯದಕ್ಕೆ ದೇವನವೆಂದು ಹೆಸರು. ಅದರ ತರುವಾಯ ಗೋವಿಂದವೆಂಬ ಪರ್ವತವಿರುವುದು.

೮೧. ಗೋವಿಂದಗಿರಿಯ ಅನಂತರ ಕ್ರೌಂಚವೆಂಬ ಪರ್ವತವಿರುವುದು. ಇದು ಬಹಳ ಮುಖ್ಯವಾದುದು. ಇದರ ತರುವಾಯ ಪಾವನಕಪರ್ವತವೂ ಅದರ ಮುಂದೆ ಅಂಧಕಾರಕಗಿರಿಯೂ ಇರುವುವು.

೮೨. ಅಂಧಕಾರಪರ್ವತದಿಂದಾಚೆಗೆ ದೇವಾವೃತ್ತೆಂಬ ಪರ್ವತವೂ, ಅದರ ಮುಂದೆ ಪುಂಡರೀಕವೆಂಬ ಮಹಾಗಿರಿಯೂ ಇರುವುವು.

೮೩. ಈ ಏಳೂ ಕ್ರೌಂಚದ್ವೀಪದಲ್ಲಿರುವ ರತ್ನಮಯವಾದ ವರ್ಷಪರ್ವತಗಳು. ಇವುಗಳ ಅಡ್ಡಗಲದ ಅಳತೆಯು ಉತ್ತರೋತ್ತರವಾಗಿ ದ್ವಿಗುಣವಾಗುವುದು.

೮೪. ಆ ದ್ವೀಪದ ವರ್ಷಗಳ (ಭೂಖಂಡಗಳ) ಹೆಸರನ್ನು ಹೇಳುವೆನು ಕೇಳಿರಿ. ಕ್ರೌಂಚಪರ್ವತದ ವರ್ಷಕ್ಕೆ ಕುಶಲವೆಂದೂ, ವಾಮನಶೈಲದ ವರ್ಷಕ್ಕೆ ಮನೋನುಗವೆಂದೂ ಸಂಜ್ಞೆ.

**ಮನೋಽನುಗಾತ್ಪರೇ ಚೋಷ್ಣಸ್ತೃತೀಯೋಽಪಿ ಸ ಉಚ್ಯತೇ ।**
**ಉಷ್ಣಾತ್ಪರೇ ಪಾವನಕಃ ಪಾವನಾದಂಧಕಾರಕಃ ॥೮೫॥**

**ಅಂಧಕಾರಕದೇಶಾತ್ತು ಮುನಿದೇಶಸ್ತಥಾ ಪರಃ ।**
**ಮುನಿದೇಶಾತ್ಪರೇ ಚಾಪಿ ಪ್ರೋಚ್ಯತೇ ದುಂದುಭಿಸ್ವನಃ ॥೮೬॥**

**ಸಿದ್ಧಚಾರಣಸಂಕೀರ್ಣೋ ಗೌರಪ್ರಾಯಃ ಶುಚಿರ್ಜನಃ ।**
**ಶ್ರುತಾಸ್ತತ್ರೈವ ನದ್ಯಸ್ತು ಪ್ರತಿವರ್ಷಂ ಗತಾಃ ಶುಭಾಃ ॥೮೭॥**

**ಗೌರೀ ಕುಮುದ್ವತೀ ಚೈವ ಸಂಧ್ಯಾ ರಾತ್ರಿರ್ಮನೋಜವಾ ।**
**ಖ್ಯಾತೀ ಚ ಪುಂಡರೀಕಾ ಚ ಗಂಗಾ ಸಪ್ತವಿಧಾ ಸ್ಮೃತಾ ॥೮೮॥**

**ತಾಸಾಂ ಸಹಸ್ರಶಶ್ಚಾನ್ಯಾ ನದ್ಯಃ ಪಾರ್ಶ್ವಸಮೀಪಗಾಃ ।**
**ಅಭಿಗಚ್ಛಂತಿ ತಾ ನದ್ಯೋ ಬಹುಲಾಶ್ಚ ಬಹೂದಕಾಃ ॥೮೯॥**

---

೮೫. ಮನೋಽನುಗದಿಂದಾಚೆಗೆ ಉಷ್ಣವೆಂಬ ಮೂರನೆಯ ವರ್ಷವಿರುವುದು. ಇದರ ತರುವಾಯ ಪಾವನಕವೂ, ಅಲ್ಲಿಂದ ಮುಂದೆ ಅಂಧಕಾರಕ ವರ್ಷವೂ ಇವೆ.

೮೬. ಅಂಧಕಾರದೇಶವಾದ ಮೇಲೆ ಮುನಿದೇಶವೂ, ಅದರ ಅನಂತರ ದುಂದುಭಿಸ್ವನವೆಂಬ ದೇಶವೂ ಇರುವುವು.

೮೭. ಅಲ್ಲಿಯ ನಿವಾಸಿಗಳೆಂದರೆ ವಿಶೇಷವಾಗಿ ಸಿದ್ಧರು ಮತ್ತು ಚಾರಣರು. ಅವರು ಶುಚಿರ್ಭೂತರು. ಸಾಮಾನ್ಯವಾಗಿ ಬಿಳಿಯ ಬಣ್ಣದವರು. ಆ ದ್ವೀಪದ ಒಂದೊಂದು ವರ್ಷದಲ್ಲಿಯೂ ಪವಿತ್ರವಾದ ನದಿಗಳು ಹರಿಯುತ್ತವೆ.

೮೮. ಗೌರಿ, ಕುಮುದ್ವತಿ, ಸಂಧ್ಯೆ, ರಾತ್ರಿ, ಮನೋಜವೆ, ಖ್ಯಾತಿ, ಪುಂಡರೀಕೆ ಎಂದು ಗಂಗಾನದಿಯು ಏಳು ವಿಧವಾಗಿ ಅಲ್ಲಿ ಪ್ರವಹಿಸುವುದು.

೮೯. ಅವುಗಳೊಡನೆ ಇನ್ನೂ ಬೇರೆ ಬೇರೆ ಸಾವಿರಾರು ನದಿಗಳು ಉಭಯ ಪಾರ್ಶ್ವಗಳಲ್ಲಿಯೂ ಬಂದು ಸೇರುವುವು. ಅವು ಒಂದೊಂದೂ ಪೂರ್ಣಪ್ರವಾಹದಿಂದ ಹರಿಯುತ್ತವೆ.

ತೇಷಾಂ ನಿಸರ್ಗೋ ದೇಶಾನಾಮಾನುಪೂರ್ವ್ಯೇಣ ಸರ್ವಶಃ ।
ನ ಶಕ್ಯೋ ವಿಸ್ತರಾದ್ವಕ್ತುಮಪಿ ವರ್ಷಶತೈರಪಿ ॥೯೦॥

ನೋಪಸರ್ಗಃ ಪ್ರಜಾನಾಂ ತು ಸಂಹಾರೋ ಯಶ್ಚ ತೇಷು ವೈ ।
ಅತ ಊರ್ಧ್ವಂ ಪ್ರವಕ್ಷ್ಯಾಮಿ ಶಾಲ್ಮಲಸ್ಯ ನಿಬೋಧತ ॥೯೧॥

ಶಾಲ್ಮಲೋ ದ್ವಿಗುಣೋ ದ್ವೀಪಃ ಕ್ರೌಂಚದ್ವೀಪಸ್ಯ ವಿಸ್ತರಾತ್ ।
ಪರಿವಾರ್ಯ ಸಮುದ್ರಂ ತು ದಧಿಮಂಡೋದಕಂ ಸ್ಥಿತಃ ॥೯೨॥

ತತ್ರ ಪುಣ್ಯಾ ಜನಪದಾಶ್ಚಿರಾಚ್ಚ ಮ್ರಿಯತೇ ಜನಃ ।
ಕುತ ಏವ ತು ದುರ್ಭಿಕ್ಷಂ ಕ್ಷಮಾತೇಜೋಯುತಾ ಹಿ ತೇ ॥೯೩॥

ಪ್ರಥಮಃ ಸೂರ್ಯಸಂಕಾಶಃ ಸುಮನಾ ನಾಮ ಪರ್ವತಃ ।
ಪೀತಸ್ತು ಮಧ್ಯಮಸ್ತತ್ರ ಶಾತಕೌಂಭಮಯೋ ಗಿರಿಃ ॥೯೪॥

---

೯೦. ಆ ದೇಶಗಳ ಸ್ವಾಭಾವಿಕ ಲಕ್ಷಣವನ್ನು ವಿಸ್ತಾರವಾಗಿಯೂ ಯಥಾಕ್ರಮವಾಗಿಯೂ ವರ್ಣಿಸುವುದಕ್ಕೆ ನೂರಾರು ವರ್ಷಗಳಾದರೂ ಸಾಧ್ಯವಾಗದು. ಪ್ರಜೆಗಳಿಗೆ ಉತ್ಪಾತ, ಸಂಹಾರ ಮುಂತಾದ ಯಾವ ಬಗೆಯ ಅನಿಷ್ಟಗಳೂ ಅಲ್ಲಿ ಒದಗುವುದಿಲ್ಲ.

೯೧-೯೨. ಇನ್ನು ಮೇಲೆ ಶಾಲ್ಮಲದ್ವೀಪದ ವಿಚಾರವನ್ನು ಕೇಳಿರಿ. ಈ ದ್ವೀಪವು ಕ್ರೌಂಚದ್ವೀಪದ ಎರಡರಷ್ಟು ವಿಸ್ತಾರವಾಗಿದೆ. ಇದು ಮೊಸರಿನ ಸಮುದ್ರವನ್ನು ಸುತ್ತಲೂ ಬಳಸಿಕೊಂಡಿದೆ.

೯೩. ಅಲ್ಲಿನ ದೇಶಗಳು ಪುಣ್ಯಮಯವಾದುವು. ಜನರು ಬಹುಕಾಲ ಸುಖವಾಗಿ ಜೀವಿಸಿದ ತರುವಾಯ ಮೃತರಾಗುವರು. ಅವರು ಕ್ಷಮೆ, ತೇಜಸ್ಸು ಮುಂತಾದ ಆತ್ಮಗುಣಗಳಿಂದ ಪೂರ್ಣರಾಗಿರುವರು. ಹೀಗಿರುವಾಗ ಅಲ್ಲಿ ಕ್ಷಾಮವೆಂದರೇನು?

೯೪. ಸೂರ್ಯನಂತೆ ಪ್ರಕಾಶಯುಕ್ತವಾದ ಸುಮನಸ್ಸೆಂಬ ಪರ್ವತವೇ ಮೊದಲನೆಯದು. ಎರಡನೆಯದನ್ನು ಪೀತಪರ್ವತವೆಂದು ಕರೆಯುತ್ತಾರೆ. ಅದು ಸುವರ್ಣಮಯವಾದುದು.

**ನಾಮ್ನಾ ಸರ್ವಮುಖೋ ನಾಮ ದಿವ್ಯೌಷಧಿಸಮನ್ವಿತಃ।**
**ತೃತೀಯಶ್ಚೈವ ಸೌವರ್ಣೋ ಭೃಂಗಪತ್ರನಿಭೋ ಗಿರಿಃ ॥೯೫॥**

**ಸುಮಹಾನ್ ರೋಹಿತೋ ನಾಮ ದಿವ್ಯೋ ಗಿರಿವರೋ ಹಿ ಸಃ।**
**ಸುಮನಾಃ ಕುಶಲೋ ದೇಶಃ ಸುಖೋದರ್ಕಃ ಸುಖೋದಯಃ ॥೯೬॥**

**ರೋಹಿತೋ ಯಸ್ತೃತೀಯಸ್ತು ರೋಹಿಣೋ ನಾಮ ವಿಶ್ರುತಃ।**
**ತತ್ರ ರತ್ನಾನ್ಯನೇಕಾನಿ ಸ್ವಯಂ ರಕ್ಷತಿ ವಾಸವಃ ॥೯೭॥**

**ಪ್ರಜಾಪತಿರುಪಾದಾಯ ಪ್ರಸನ್ನೋ ವ್ಯದಧತ್ಸ್ವಯಂ।**
**ನ ತತ್ರ ಮೇಘಾ ವರ್ಷಂತಿ ಶೀತೋಷ್ಣಂ ಚ ನ ತದ್ವಿಧಂ ॥೯೮॥**

**ವರ್ಣಾಶ್ರಮಾಣಾಂ ವಾರ್ತಾ ವಾ ತ್ರಿಷು ದ್ವೀಪೇಷು ವಿದ್ಯತೇ।**
**ನ ಗ್ರಹೋ ನ ಚ ಚಂದ್ರೋಽಸ್ತಿ ಈರ್ಷ್ಯಾಸೂಯಾಭಯಂ ತಥಾ ॥೯೯॥**

---

೯೫. ಅದಕ್ಕೆ ಸರ್ವಮುಖವೆಂಬ ಪ್ರಸಿದ್ಧವಾದ ಹೆಸರಿದೆ. ಅದರಲ್ಲಿ ಬಹು ಶ್ರೇಷ್ಠವಾದ ಮೂಲಿಕೆಗಳುಂಟು. ಸೌವರ್ಣವೆಂಬುದು ಮೂರನೆಯ ಪರ್ವತ. ಅದರ ಬಣ್ಣವು ಲವಂಗಪತ್ರೆಯ ಬಣ್ಣವನ್ನು ಹೋಲುತ್ತದೆ.

೯೬. ಅದು ಬಹಳ ದೊಡ್ಡಪರ್ವತ; ಅದಕ್ಕೆ ರೋಹಿತವೆಂಬ ಪ್ರಸಿದ್ಧವಾದ ಹೆಸರೂ ಉಂಟು. ಸುಮನಸ್ಸೆಂಬ ಪರ್ವತದ ದೇಶವು ಶುಭಮಯವಾದುದು. ಸುಖೋದರ್ಕವೆಂಬ ವರ್ಷವು ಸುಖದ ಉತ್ಪತ್ತಿಸ್ಥಾನವೆನಿಸಿದೆ.

೯೭. ರೋಹಿತಪರ್ವತದ ಎಲ್ಲೆಗಟ್ಟಿನಿಂದ ಪ್ರಾರಂಭವಾದ ಭೂಖಂಡವು ಮೂರನೆಯದು. ಅದು ರೋಹಿಣವೆಂದು ಪ್ರಖ್ಯಾತವಾಗಿದೆ. ಅಲ್ಲಿ ಲೆಕ್ಕವಿಲ್ಲದಷ್ಟು ರತ್ನಗಳಿವೆ. ಅವುಗಳನ್ನು ಇಂದ್ರನೇ ಸಾಕ್ಷಾತ್ತಾಗಿ ರಕ್ಷಿಸುತ್ತಿರುವನು.

೯೮. ಬ್ರಹ್ಮದೇವನು ಪ್ರಸನ್ನನಾಗಿ ತಾನಾಗಿಯೇ ಆ ರತ್ನಗಳನ್ನು, ಇಂದ್ರನಿಗೆ ಅನುಗ್ರಹಿಸಿದನು. ಅಲ್ಲಿ ಮೋಡಗಳು ಮಳೆಗರೆಯವು. ಶೀತೋಷ್ಣಗಳು ಬಾಧಿಸವು.

೯೯. ಕುಶ, ಕ್ರೌಂಚ ಮತ್ತು ಶಾಲ್ಮಲಗಳೆಂಬ ಮೂರು ದ್ವೀಪಗಳಲ್ಲಿ ವರ್ಣಾಶ್ರಮಗಳ ಸುದ್ದಿಯೇ ಇಲ್ಲ. ಗ್ರಹಗಳ ಮತ್ತು ಚಂದ್ರಸೂರ್ಯರ ಸಂಚಾರವಿಲ್ಲ. ಈರ್ಷ್ಯೆ, ಅಸೂಯೆ, ಭಯ ಇವುಗಳ ಕಾಟವಿಲ್ಲ.

ಉದ್ಭಿದಾನ್ಯುದಕಾನ್ಯತ್ರ ಗಿರಿಪ್ರಸ್ರವಣಾನಿ ಚ ।
ಭೋಜನಂ ಷಡ್ರಸಂ ತತ್ರ ತೇಷಾಂ ಸ್ವಯಮುಪಸ್ಥಿತಂ ॥೧೦೦॥

ಅಧಮೋತ್ತಮೋ ನ ತೇಷ್ವಸ್ತಿ ನ ಲೋಭೋ ನ ಪ್ರರಿಗಹಃ ।
ಅಶೋಕಾ ಬಲವಂತಶ್ಚ ಏಕಾಂತಸುಖಿನಃ ಪ್ರಜಾಃ ॥೧೦೧॥

ತ್ರಿಂಶದ್ವರ್ಷಸಹಸ್ರಾಣಿ ಮಾನಸೀಂ ಸಿದ್ಧಿಮಾಸ್ಥಿತಾಃ ।
ಸುಖಮಾಯುಶ್ಚ ರೂಪಂ ಚ ಧರ್ಮೈರ್ಶ್ವರ್ಯಂ ತಥೈವ ಚ ॥೧೦೨॥

ಶಾಲ್ಮಲಾಂತೇಷು ವಿಜ್ಞೇಯಂ ದ್ವೀಪೇಷು ತ್ರಿಷು ಸರ್ವತಃ ।
ವ್ಯಾಖ್ಯಾತಃ ಶಾಲ್ಮಲಾಂತಾನಾಂ ದ್ವೀಪಾನಾಂ ತು ವಿಧಿಃ ಶುಭಃ ॥೧೦೩॥

ಪರಿಮಂಡಲಸ್ತು ದ್ವೀಪಸ್ಯ ಚಕ್ರವತ್ಪರಿವೇಷ್ಟಿತಃ ।
ಸುರೋದೇನ ಸಮುದ್ರೇಣ ದ್ವಿಗುಣೇನ ಸಮನ್ವಿತಃ ॥೧೦೪॥

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಭುವನಕೋಶೇ ದ್ವೀಪವರ್ಣನಂ ನಾಮ ದ್ವಾವಿಂಶತ್ಯಧಿಕ ಶತತಮೋಽಧ್ಯಾಯಃ**

---

೧೦೦. ಇಲ್ಲಿ ನೀರು ನೆಲದಿಂದ ಉಕ್ಕಿಬರುತ್ತದೆ. ಗಿರಿಝರಿಗಳೂ ಕೂಡ ಹಾಗೆಯೇ ಹುಟ್ಟಿ ಹರಿಯುತ್ತವೆ. ಜನರಿಗೆ ಷಡ್ರಸೋಪೇತವಾದ ದಿವ್ಯ ಭೋಜನವು ಪ್ರಯತ್ನವಿಲ್ಲದೆ ತಾನಾಗಿಯೇ ಸಿದ್ಧವಾಗುತ್ತದೆ.

೧೦೧. ಪ್ರಜೆಗಳಲ್ಲಿ ಕೀಳು ಮೇಲೆಂಬ ವ್ಯತ್ಯಾಸವಿಲ್ಲ. ದುರಾಸೆಪಡುವುದು, ಕಂಡವರ ಪದಾರ್ಥವನ್ನು ಅಪಹರಿಸುವುದು ಇಂತಹ ಅಕಾರ್ಯಗಳಿಗೆ ಆಸ್ಪದವಿಲ್ಲ. ಅವರು ಶೋಕರಹಿತರೂ, ಬಲವಂತರೂ ಆಗಿ ಬಹಳ ಸುಖದಿಂದ ಬಾಳುವರು.

೧೦೨. ಮನಸ್ಸಿನ ಇಷ್ಟಾರ್ಥಗಳನ್ನೆಲ್ಲ ಈಡೇರಿಸಿಕೊಂಡು ಸುಖ, ಆಯುಸ್ಸು ರೂಪ, ಧರ್ಮ, ಐಶ್ವರ್ಯ ಇವುಗಳಿಂದ ಪೂರ್ಣರಾಗಿ ಅವರು ಮೂವತ್ತುಸಾವಿರ ವರ್ಷಗಳ ಕಾಲ ಜೀವಿಸುವರು.

೧೦೩. ಕುಶ, ಕ್ರೌಂಚ ಮತ್ತು ಶಾಲ್ಮಲಗಳೆಂಬ ಮೂರು ದ್ವೀಪಗಳಲ್ಲಿ ಎಲ್ಲೆಡೆಗಳಲ್ಲಿಯೂ ಇದೇ ಲಕ್ಷಣವು ಕಂಡುಬರುವುದು. ಹೀಗೆ ಜಂಬೂದ್ವೀಪದಿಂದ ಶಾಲ್ಮಲದ್ವೀಪದ ವರೆಗೆ ಎಲ್ಲವನ್ನೂ ವಿವರಿಸಿದಂತಾಯಿತು.

೧೦೪. ಮದ್ಯದ ಸಮುದ್ರವು ಶಾಲ್ಮಲದ್ವೀಪವನ್ನು ಚಕ್ರದಂತೆ ಸುತ್ತುವರಿದಿರುವುದು. ಇದು ವಿಸ್ತಾರದಲ್ಲಿ ತುಪ್ಪದ ಸಮುದ್ರದ ಎರಡರಷ್ಟಿರುವುದು.

## ಅಧ್ಯಾಯ ೧೨೨

### ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಶಾಕ, ಕುಶ, ಕ್ರೌಂಚ ಮತ್ತು ಶಾಲ್ಮಲಿಗಳೆಂಬ ದ್ವೀಪಗಳನ್ನು ವರ್ಣಿಸಿವೆ. ಈ ದ್ವೀಪಗಳು ಚಕ್ರಾಕಾರವಾಗಿವೆ. ಜಂಬೂದ್ವೀಪದಿಂದ ಪ್ರಾರಂಭಿಸಿ ಒಂದೊಂದು ದ್ವೀಪವೂ ವಿಸ್ತಾರದಲ್ಲಿ ಇಮ್ಮಡಿಯಾಗುತ್ತ ಹೋಗುತ್ತದೆ. ಜಂಬೂದ್ವೀಪವು ಒಂದು ಲಕ್ಷಯೋಜನ ವಿಸ್ತೃತವಾಗಿದೆ. ಈ ದ್ವೀಪಗಳನ್ನು ಕ್ರಮವಾಗಿ ಉಪ್ಪುನೀರು, ಹಾಲು, ತುಪ್ಪ, ಮೊಸರು, ಮದ್ಯ ಇವುಗಳ ಸಮುದ್ರಗಳು ಕ್ರಮವಾಗಿ ಬಳಸಿಕೊಂಡಿವೆ.

ಒಂದೊಂದು ದ್ವೀಪದಲ್ಲಿಯೂ ವರ್ಷಪರ್ವತಗಳೂ, ಅವುಗಳಿಂದ ಏರ್ಪಟ್ಟ ಭೂಖಂಡಗಳೂ, ನದಿಗಳೂ ಗೊತ್ತಾದ ಸಂಖ್ಯೆಯಲ್ಲಿರುವುವು. ಕಾಲದ ಸ್ಥಿತಿ, ಜನರ ಆಚಾರ, ವ್ಯವಹಾರ ಇವು ಆಯಾ ದ್ವೀಪಗಳಿಗೆ ಅನುಸಾರವಾಗಿ ವ್ಯತ್ಯಾಸವಾಗುತ್ತವೆ.

ಶ್ರೀಮತ್ಸ್ಯಮಹಾಪುರಾಣದಲ್ಲಿ ಭುವನಕೋಶದೊಳಗೆ ದ್ವೀಪವರ್ಣನವೆಂಬ
ನೂರಿಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.



## ಅಥ ತ್ರಯೋವಿಂಶತ್ಯಧಿಕಶತತಮೋಽಧ್ಯಾಯಃ

॥ ಸೂತ ಉವಾಚ ॥

ಗೋಮೇದಕಂ ಪ್ರವಕ್ಷ್ಯಾಮಿ ಷಷ್ಠಂ ದ್ವೀಪಂ ತಪೋಧನಾಃ ।
ಸುರೋದಕಸಮುದ್ರಶ್ಚ ಗೋಮೇದೇನ ಸಮಾವೃತಃ ॥ ೧ ॥

ಶಾಲ್ಮಲಸ್ಯ ತು ವಿಸ್ತಾರಾದ್ದ್ವಿಗುಣಸ್ತಸ್ಯ ವಿಸ್ತರಃ ।
ತಸ್ಮಿನ್ ದ್ವೀಪೇ ತು ವಿಜ್ಞೇಯೌ ಪರ್ವತೌ ದ್ವೌ ಸಮಾಹಿತೌ ॥ ೨ ॥

ಪ್ರಥಮಃ ಸುಮನಾ ನಾಮ ಜಾತ್ಯಂಜನಮಯೋ ಗಿರಿಃ ।
ದ್ವಿತೀಯಃ ಕುಮುದೋ ನಾಮ ಸರ್ವೌಷಧಿಸಮನ್ವಿತಃ ॥ ೩ ॥

ಶಾತಕೌಂಭಮಯಃ ಶ್ರೀಮಾನ್ ವಿಜ್ಞೇಯಃ ಸುಮಹಾಚಿತಃ ।
ಸಮುದ್ರೇಕ್ಷುರಸೋದೇನ ವೃತೋ ಗೋಮೇದಕಶ್ಚ ಸಃ ॥ ೪ ॥

---

೧. ಸೂತಪೌರಾಣಿಕನು ಹೇಳಿದನು.—ಎಲೈ ತಪಸ್ವಿಗಳೇ, ಆರನೆಯದಾದ ಗೋಮೇದಕದ್ವೀಪವನ್ನು ವರ್ಣಿಸುವೆನು ಕೇಳಿ. ಈ ದ್ವೀಪವು ಹಿಂದೆ ಹೇಳಿದ ಮದ್ಯದ ಸಮುದ್ರದ ಸುತ್ತಲೂ ವ್ಯಾಪಿಸಿಕೊಂಡಿರುವುದು.

೨. ಅದು ಶಾಲ್ಮಲದ್ವೀಪದ ಎರಡರಷ್ಟು ವಿಸ್ತಾರವಾಗಿದೆ. ಅದರಲ್ಲಿ ಎರಡು ದೊಡ್ಡ ವರ್ಷಪರ್ವತಗಳಿವೆಯೆಂದು ತಿಳಿಯಬೇಕು.

೩. ಮೊದಲನೆಯದು ಸುಮನಸ್ಸೆಂಬ ಪರ್ವತ. ಅದು ಉತ್ತಮವಾದ ಅಂಜನಮಣಿಯಿಂದ ತುಂಬಿದೆ. ಎರಡನೆಯದಕ್ಕೆ ಕುಮುದವೆಂದು ಹೆಸರು. ಅದರಲ್ಲಿ ಎಲ್ಲ ಬಗೆಯ ಮೂಲಿಕೆಗಳೂ ಬೆಳೆದಿರುವುವು.

೪. ಈ ಪರ್ವತವು ಅತ್ಯುನ್ನತವೆನಿಸಿ ಸಂಪದ್ಯುಕ್ತವಾಗಿಯೂ ಸುವರ್ಣಮಯವಾಗಿಯೂ ಇದೆ. ಗೋಮೇದಕ ದ್ವೀಪವನ್ನು ಕಬ್ಬಿನಹಾಲಿನ ಸಮುದ್ರವು ಸುತ್ತುಗಟ್ಟಿರುವುದು. ಇದು ವಿಸ್ತಾರದಲ್ಲಿ ಸುರಾಸಮುದ್ರದ ಇಮ್ಮಡಿಯಾಗಿರುವುದು. ಇದೇ ಆರನೆಯ ಸಮುದ್ರ.

ಷಷ್ಠೇನ ತು ಸಮುದ್ರೇಣ ಸುರೋದಾದ್ವಿಗುಣೇನ ತು ।
ಧಾತಕೀ ಕುಮುದಶ್ಚೈವ ಹವ್ಯಪುತ್ರೌ ಸುವಿಸ್ತೃತೌ ॥ ೫ ॥

ಸೌಮನಂ ಪ್ರಥಮಂ ವರ್ಷಂ ಧಾತಕೀಖಂಡಮುಚ್ಯತೇ ।
ಧಾತಕಿನಃ ಸ್ಮೃತಂ ತದ್ವೈ ಪ್ರಥಮಂ ಪ್ರಥಮಸ್ಯ ತು ॥ ೬ ॥

ಗೋಮೇದಂ ಯತ್ಸ್ಮೃತಂ ವರ್ಷಂ ನಾಮ್ನಾ ಸರ್ವಸುಖಂ ತು ತತ್ ।
ಕುಮುದಸ್ಯ ದ್ವಿತೀಯಸ್ಯ ದ್ವಿತೀಯಂ ಕುಮುದಂ ತತಃ ॥ ೭ ॥

ಏತೌ ದ್ವೌ ಪರ್ವತೌ ಜ್ಞೇಯೌ ವೃತ್ತೌ ಸರ್ವಸಮುಚ್ಛ್ರಿತೌ ।
ಪೂರ್ವೇಣ ತಸ್ಯ ದ್ವೀಪಸ್ಯ ಸುಮನಾಃ ಪರ್ವತಃ ಸ್ಥಿತಃ ॥ ೮ ॥

ಪ್ರಾಕ್ಪಶ್ಚಿಮಾಯತೈಃ ಪಾದೈರಾಸಮುದ್ರಾದಿತಿ ಸ್ಥಿತಃ ।
ಪಶ್ಚಾರ್ಧೇ ಕುಮುದಸ್ತಸ್ಯ ಏವಮೇವ ಸ್ಥಿತಸ್ತು ವೈ ॥ ೯ ॥

---

೫-೬. ಧಾತಕಿ, ಕುಮುದ ಎಂಬವರಿಬ್ಬರೂ ಸುಪ್ರಸಿದ್ಧರಾದ ಕೀರ್ತಿವಂತರು. ಅವರು ಹವ್ಯನ ಪುತ್ರರು. ಧಾತಕಿಯ ಆಳ್ವಿಕೆಗೆ ಸೇರಿದ ಭೂಭಾಗವನ್ನು ಸೌಮನವರ್ಷವೆನ್ನುತ್ತಾರೆ. ಇದೇ ಮೊದಲನೆಯದು. ಹಿರಿಯವನಾದ ಧಾತಕಿಗೆ ಸೇರಿದುದರಿಂದ ಇದಕ್ಕೆ ಧಾತಕೀಖಂಡವೆಂದೂ ಹೆಸರು ಬಂದಿದೆ.

೭. ಗೋಮೇದವೆಂಬುದು ಮತ್ತೊಂದು ಖಂಡ. ಅದಕ್ಕೆ ಸರ್ವಸುಖವೆಂತಲೂ ಹೆಸರುಂಟು. ಅದು ಎರಡನೆಯವನಾದ ಕುಮುದನಿಗೆ ಸೇರಿದೆ. ಆದಕಾರಣ ಅದನ್ನು ಕುಮುದವರ್ಷವೆನ್ನುತ್ತಾರೆ.

೮. ಈ ಎರಡು ಪರ್ವತಗಳೂ ವೃತ್ತಾಕಾರವಾಗಿವೆ. ಉಳಿದ ಬೆಟ್ಟಗಳಿಗಿಂತ ಬಹಳ ಉನ್ನತವಾಗಿವೆ. ಇವುಗಳಲ್ಲಿ ಸುಮನಸವು ಆ ದ್ವೀಪದ ಪೂರ್ವಭಾಗದಲ್ಲಿದೆ.

೯. ಅದರ ತಪ್ಪಲು ಪ್ರದೇಶವು ಪೂರ್ವಕ್ಕೂ ಪಶ್ಚಿಮಕ್ಕೂ ಬಹುದೂರ ವ್ಯಾಪಿಸಿರುವುದು. ಹೀಗೆಯೇ ಆ ದ್ವೀಪದ ಪಶ್ಚಿಮಾರ್ಧದಲ್ಲಿ ಕುಮುದಪರ್ವತವಿರುವುದು.

**ಏತೈಃ ಪರ್ವತಪಾದೈಸ್ತು ಸ ದೇಶೋ ವೈ ದ್ವಿಧಾ ಕೃತಃ ।**
**ದಕ್ಷಿಣಾರ್ಧೇ ತು ದ್ವೀಪಸ್ಯ ಧಾತಕೀಖಂಡಮುಚ್ಯತೇ ॥೧೦॥**

**ಕುಮುದಂ ತೂತ್ತರೇ ತಸ್ಯ ದ್ವಿತೀಯಂ ವರ್ಷಮುತ್ತಮಂ ।**
**ಏತೌ ಜನಪದೌ ದ್ವೌ ತು ಗೋಮೇದಸ್ಯ ತು ವಿಸ್ತೃತೌ ॥೧೧॥**

**ಅತಃ ಪರಂ ಪ್ರವಕ್ಷ್ಯಾಮಿ ಸಪ್ತಮಂ ದ್ವೀಪಮುತ್ತಮಂ ।**
**ಸಮುದ್ರೇಕ್ಷುರಸಂ ಚೈವ ಗೋಮೇದಾದ್ದ್ವಿಗುಣಂ ಹಿ ಸಃ ॥೧೨॥**

**ಆವೃತ್ಯ ತಿಷ್ಠತಿ ದ್ವೀಪಃ ಪುಷ್ಕರಃ ಪುಷ್ಕರೈರ್ವೃತಃ ।**
**ಪುಷ್ಕರೇಣ ವೃತಃ ಶ್ರೀಮಾಂಶ್ಚಿತ್ರಸಾನುರ್ಮಹಾಗಿರಿಃ ॥೧೩॥**

**ಕೂಟೈಶ್ಚಿತ್ರೈರ್ಮಣಿಮಯೈಃ ಶಿಲಾಜಾಲಸಮುದ್ಭವೈಃ ।**
**ದ್ವೀಪಸ್ಯೈವ ತು ಪೂರ್ವಾರ್ಧೇ ಚಿತ್ರಸಾನುಃ ಸ್ಥಿತೋ ಮಹಾನ್ ॥೧೪॥**

---

೧೦. ಈ ಬೆಟ್ಟಗಳ ತಪ್ಪಲುಗಳಿಂದ ಆ ದೇಶವು ಎರಡು ಭಾಗವಾಗಿದೆ. ದ್ವೀಪದ ದಕ್ಷಿಣಾರ್ಧದಲ್ಲಿ ಧಾತಕೀಖಂಡವಿರುವುದು.

೧೧. ಎರಡನೆಯದಾದ ಕುಮುದವರ್ಷವು ಉತ್ತರಾರ್ಧದಲ್ಲಿದೆ. ಅದು ಬಹಳ ಪ್ರಸಿದ್ಧವಾದುದು. ಇವೆರಡೂ ಗೋಮೇದದ್ವೀಪದ ವಿಸ್ತಾರವಾದ ದೇಶಗಳು.

೧೨-೧೩. ಇನ್ನು ಮುಂದೆ ಬಹು ರಮಣೀಯವಾದ ಪುಷ್ಕರದ್ವೀಪವನ್ನು ಬಣ್ಣಿಸುವೆನು. ಇದು ಏಳನೆಯದು. ಕಬ್ಬಿನರಸದ ಸಮುದ್ರವನ್ನು ಇದು ಸುತ್ತಲೂ ಆವರಿಸಿಕೊಂಡಿರುವುದು. ವಿಸ್ತಾರದಲ್ಲಿ ಗೋಮೇದದ್ವೀಪದ ಎರಡರಷ್ಟಿರುವುದು. ಈ ದ್ವೀಪದಲ್ಲಿ ಕಮಲಗಳು ವಿಶೇಷವಾಗಿರುವುವು. ಚಿತ್ರಸಾನುವೆಂಬ ಮಹಾಪರ್ವತವು ವಿಸ್ತಾರವಾದ ಪದ್ಮದಿಂದ ಕೂಡಿ ಇಲ್ಲಿ ಕಂಗೊಳಿಸುತ್ತಿದೆ.

೧೪. ಮಹೋನ್ನತವಾದ ಈ ಪರ್ವತವು ದ್ವೀಪದ ಪೂರ್ವಾರ್ಧದಲ್ಲಿದೆ. ಬಂಡೆಗಳಲ್ಲಿರುವ ಅದ್ಭುತವಾದ ರತ್ನಗಳಿಂದ ಅದರ ಶಿಖರಗಳು ಪ್ರಕಾಶಿಸುತ್ತಿವೆ.

**ಪರಿಮಂಡಲಸಹಸ್ರಾಣಿ ವಿಸ್ತೀರ್ಣಃ ಸಪ್ತವಿಂಶತಿಃ ।**
**ಊರ್ಧ್ವಂ ಸ ವೈ ಚತುರ್ವಿಂಶದ್ಯೋಜನಾನಾಂ ಮಹಾಬಲಃ ॥೧೫॥**

**ದ್ವೀಪಾರ್ಧಸ್ಯ ಪರಿಕ್ಷಿಪ್ತಃ ಪಶ್ಚಿಮೇ ಮಾನಸೋ ಗಿರಿಃ ।**
**ಸ್ಥಿತೋ ವೇಲಾಸಮೀಪೇ ತು ಪೂರ್ವಚಂದ್ರ ಇವೋದಿತಃ ॥೧೬॥**

**ಯೋಜನಾನಾಂ ಸಹಸ್ರಾಣಿ ಸಾರ್ಧಂ ಪಂಚಾಶದುಚ್ಛ್ರಿತಃ ।**
**ತಸ್ಯ ಪುತ್ರೋ ಮಹಾವೀತಃ ಪಶ್ಚಿಮಾರ್ಧಸ್ಯ ರಕ್ಷಿತಾ ॥೧೭॥**

**ಪೂರ್ವಾರ್ಧೇ ಪರ್ವತಸ್ಯಾಪಿ ದ್ವಿಧಾ ದೇಶಸ್ತು ಸ ಸ್ಮೃತಃ**
**ಸ್ವಾದೂದಕೇನೋದಧಿನಾ ಪುಷ್ಕರಃ ಪರಿವಾರಿತಃ ॥೧೮॥**

**ವಿಸ್ತಾರಾನ್ಮಂಡಲಾಚ್ಚೈವ ಗೋಮೇದಾದ್ದ್ವಿಗುಣೇನ ತು ।**
**ತ್ರಿಂಶದ್ವರ್ಷಸಹಸ್ರಾಣಿ ತೇಷು ಜೀವಂತಿ ಮಾನವಾಃ ॥೧೯॥**

---

೧೫. ಈ ಮಹಾಗಿರಿಯ ಸುತ್ತಳತೆ ಇಪ್ಪತ್ತೇಳು ಸಾವಿರ ಯೋಜನ. ಎತ್ತರವಾದರೋ ಇಪ್ಪತ್ತನಾಲ್ಕು ಸಾವಿರ ಯೋಜನಗಳು.

೧೬. ದ್ವೀಪದ ಪಶ್ಚಿಮಾರ್ಧದಲ್ಲಿ ಸಮುದ್ರತೀರದ ಹತ್ತಿರ ಮಾನಸಗಿರಿಯು ವರ್ತುಲಾಕಾರವಾಗಿ ಪ್ರಸರಿಸಿ ಬಾಲಚಂದ್ರನಂತೆ ಕಂಗೊಳಿಸುವುದು.

೧೭. ಅದು ಐವತ್ತುಸಾವಿರದ ಐದುನೂರು ಯೋಜನಗಳಷ್ಟು ಎತ್ತರ ವಾಗಿದೆ. ಆ ಪರ್ವತದ ಪುತ್ರನಿಗೆ ಮಹಾವೀತನೆಂದು ಹೆಸರು. ಅವನು ದ್ವೀಪದ ಪಶ್ಚಿಮಾರ್ಧವನ್ನು ರಕ್ಷಿಸುತ್ತಿರುವನು.

೧೮. ಪೂರ್ವಾರ್ಧದಲ್ಲಿಯೂ ಸಹ ಪರ್ವತವು ದೇಶವನ್ನು ಎರಡು ಭಾಗ ವಾಗಿ ವಿಂಗಡಿಸುತ್ತದೆ. ಪುಷ್ಕರದ್ವೀಪವು ಶುದ್ಧೋದಕ ಸಮುದ್ರದಿಂದ ಎಲ್ಲ ಕಡೆಯಲ್ಲೂ ಆವೃತವಾಗಿದೆ. ಈ ಸಮುದ್ರವು ಅಡ್ಡಳತೆಯಲ್ಲಿಯೂ ಸುತ್ತಳತೆ ಯಲ್ಲಿಯೂ ಗೋಮೇದದ್ವೀಪದ ಎರಡರಷ್ಟಿದೆ.

೧೯-೨೦. ಆ ದೇಶಗಳಲ್ಲಿ ಮನುಷ್ಯರು ಮೂವತ್ತುಸಾವಿರ ವರ್ಷಗಳ ಕಾಲ ಜೀವಿಸುತ್ತಾರೆ. ಅವರಲ್ಲಿ ಧರ್ಮಲೋಪವೆಂಬುದಿಲ್ಲ. ಅವರ ನಡೆವಳಿಕೆಯು ಹಿಂದೆ

ವಿಪರ್ಯಯೋ ನ ತೇಷ್ವಸ್ತಿ ಏತತ್ಸ್ವಾಭಾವಿಕಂ ಸ್ಮೃತಂ ।
ಆರೋಗ್ಯಂ ಸುಖಬಾಹುಲ್ಯಂ ಮಾನಸೀಂ ಸಿದ್ಧಿಮಾಸ್ಥಿತಾಃ ॥೨೦॥

ಸುಖಮಾಯುಶ್ಚ ರೂಪಂ ಚ ತ್ರಿಷು ದ್ವೀಪೇಷು ಸರ್ವಶಃ ।
ಅಧಮೋತ್ತಮೌ ನ ತೇಷ್ವಾಸ್ತಾಂ ತುಲ್ಯಾಸ್ತೇ ವೀರ್ಯರೂಪತಃ ॥೨೧॥

ನ ತತ್ರ ವಧ್ಯವಧಕೌ ನೇರ್ಷ್ಯಾಸೂಯಾ ಭಯಂ ತಥಾ ।
ನ ಲೋಭೋ ನ ಚ ದಂಭೋ ವಾ ನ ಚ ದ್ವೇಷಃ ಪರಿಗ್ರಹಃ ॥೨೨॥

ಸತ್ಯಾನೃತೇ ನ ತೇಷ್ವಾಸ್ತಾಂ ಧರ್ಮಾಧರ್ಮೌ ತಥೈವ ಚ ।
ವರ್ಣಾಶ್ರಮಾಣಾಂ ವಾರ್ತಾ ಚ ಪಾಶುಪಾಲ್ಯಂ ವಣಿಕ್ಕೃಷಿಃ ॥೨೩॥

ತ್ರಯೀ ವಿದ್ಯಾ ದಂಡನೀತಿಃ ಶುಶ್ರೂಷಾ ದಂಡ ಏವ ಚ ।
ನ ತತ್ರ ವರ್ಷಂ ನದ್ಯೋ ವಾ ಶೀತೋಷ್ಣಂ ಚ ನ ವಿದ್ಯತೇ ॥೨೪॥

---

ವಿವರಿಸಿರುವ ಸ್ವಾಭಾವಿಕ ಲಕ್ಷಣವನ್ನು ಅನುಸರಿಸಿವೆ. ಆರೋಗ್ಯ, ಅತಿಶಯವಾದ ಸುಖ, ಇಷ್ಟಾರ್ಥಲಾಭ ಇವುಗಳನ್ನು ಅವರು ಸಂಪೂರ್ಣವಾಗಿ ಪಡೆದಿರುವರು.

೨೧. ಶಾಲ್ಮಲ, ಗೋಮೇದ ಮತ್ತು ಪುಷ್ಕರವೆಂಬ ಮೂರು ದ್ವೀಪಗಳಲ್ಲಿ ಸುಖ, ಆಯುಸ್ಸು, ರೂಪ ಇವು ಸಮಾನವಾಗಿರುವುವು. ಜನರಲ್ಲಿ ಕೀಳುಮೇಲೆಂಬುದಿಲ್ಲ. ರೂಪ, ಶಕ್ತಿ ಇವುಗಳಲ್ಲಿ ಎಲ್ಲರೂ ಸಮಾನರಾಗಿರುವರು.

೨೨. ಅಲ್ಲಿ ಕೊಲ್ಲುವವನೂ ಇಲ್ಲ; ಕೊಲ್ಲಿಸಿಕೊಳ್ಳುವವನೂ ಇಲ್ಲ. ಈರ್ಷ್ಯೆ, ಅಸೂಯೆ, ಭಯ, ಲೋಭ, ದಂಭ, ದ್ವೇಷ, ಪರಿಗ್ರಹ ಇವಾವುವೂ ಇಲ್ಲ.

೨೩-೨೪. ಅಲ್ಲಿ ಸತ್ಯಾನೃತಗಳೂ ಧರ್ಮಾಧರ್ಮಗಳೂ ಬಂಧಕಗಳಲ್ಲ. ವರ್ಣಾಶ್ರಮಗಳ ಸುದ್ದಿಯನ್ನೇ ಎತ್ತುವಂತಿಲ್ಲ. ಪಶುಪಾಲನೆ, ವ್ಯಾಪಾರ, ಕೃಷಿ, ವೇದವಿದ್ಯೆ, ದಂಡನೀತಿ, ಶುಶ್ರೂಷೆ, ಶಿಕ್ಷೆ ಇವಾವುವೂ ಇಲ್ಲ. ಮಳೆ ಸುರಿಯುವುದೂ ಇಲ್ಲ; ನದಿಗಳು ಹರಿಯುವುದೂ ಇಲ್ಲ. ಶೀತೋಷ್ಣಗಳ ಕಾಟವೇ ಇಲ್ಲ.

**ಉದ್ಭಿದಾನ್ಯುದಕಾನಿ ಸ್ಯುರ್ಗಿರಿಪ್ರಸ್ರವಣಾನಿ ಚ ।**
**ತುಲ್ಯೋತ್ತರಕುರೂಣಾಂ ತು ಕಾಲಸ್ತತ್ರ ತು ಸರ್ವದಾ ॥೨೫॥**

**ಸರ್ವತಃ ಸುಖಕಾಲೋಽಸೌ ಜರಾಕ್ಲೇಶವಿವರ್ಜಿತಃ ।**
**ಸರ್ಗಸ್ತು ಧಾತಕೀಖಂಡೇ ಮಹಾವೀತೇ ತಥೈವ ಚ ॥೨೬॥**

**ಏವಂ ದ್ವೀಪಾಃ ಸಮುದ್ರೈಸ್ತು ಸಪ್ತ ಸಪ್ತಭಿರಾವೃತಾಃ ।**
**ದ್ವೀಪಸ್ಯಾನಂತರೋ ಯಸ್ತು ಸಮುದ್ರಸ್ತತ್ಸಮಸ್ತು ವೈ ॥೨೭॥**

**ಏವಂ ದ್ವೀಪಸಮುದ್ರಾಣಾಂ ಬುದ್ಧಿರ್ಜ್ಞೇಯಾ ಪರಸ್ಪರಂ ।**
**ಅಪಾಂ ಚೈವ ಸಮುದ್ರೌಕಾತ್ಸಮುದ್ರ ಇತಿ ಸಂಜ್ಞಿತಃ ॥೨೮॥**

---

೨೫. ನೀರು ನೆಲದಿಂದಲೇ ಉಕ್ಕಿಬರುವುದು. ಗಿರಿಝರಿಗಳು ತಾವಾಗಿಯೇ ಪ್ರವಹಿಸುವುವು. ಅಲ್ಲಿನ ಕಾಲಸ್ಥಿತಿಯು ಉತ್ತರ ಕುರುವರ್ಷಗಳ ಕಾಲಸ್ಥಿತಿಯನ್ನು ಸದಾ ಅನುಸರಿಸಿ ಇರುವುದು.

೨೬. ಧಾತಕೀಖಂಡದಲ್ಲಿಯೂ ಮಹಾವೀತ ವರ್ಷದಲ್ಲಿಯೂ ಕಾಲವು ಯಾವಾಗಲೂ ಸುಖಕರವಾಗಿರುವುದು. ಜೀವಜಂತುಗಳು ಮುಪ್ಪಿಗೂ ದುಗುಡ ಗಳಿಗೂ ಈಡಾಗದೆ ನೆಮ್ಮದಿಯಿಂದಿರುವುವು.

೨೭. ಈ ರೀತಿಯಾಗಿ ಏಳು ದ್ವೀಪಗಳನ್ನೂ ಏಳು ಸಮುದ್ರಗಳು ಸುತ್ತುವರಿದಿವೆ. ಒಂದು ದ್ವೀಪದ ಮುಂದಿನ ಸಮುದ್ರವು ವಿಸ್ತಾರದಲ್ಲಿ ಆ ದ್ವೀಪದಷ್ಟೇ ಇರುವುದು.

೨೮. ದ್ವೀಪಗಳ ಮತ್ತು ಸಮುದ್ರಗಳ ಸನ್ನಿವೇಶವನ್ನೂ ಅವುಗಳಿಗಿರುವ ಪರಸ್ಪರ ತಾರತಮ್ಯವನ್ನೂ ಈ ರೀತಿಯಾಗಿ ತಿಳಿದುಕೊಳ್ಳಬೇಕು. ಮುದ್ರೆಯೊತ್ತಿ ದಂತೆ ಎಲ್ಲೆಕಟ್ಟಿನಿಂದ ಕೂಡಿದ ಸ್ಥಳದಲ್ಲಿ ನೀರು ನಿಂತಿರುವ ಕಾರಣ ಜಲರಾಶಿಗೆ ಸಮುದ್ರವೆಂಬ ಹೆಸರು ಬಂದಿದೆ.

ಋಷದ್ವಸಂಜ್ಞೋ ವರ್ಷೇಷು ಪ್ರಜಾ ಯತ್ರ ಚತುರ್ವಿಧಾಃ ।
ಋಷಿರಿತ್ಯೇವ ರಮಣೇ ವರ್ಷಂ ತ್ವೇತೇನ ತೇಷು ವೈ ॥೨೯॥

ಉದಯತೀಂದೌ ಪೂರ್ವೇ ತು ಸಮುದ್ರಃ ಪೂರ್ಯತೇ ಸದಾ ।
ಪಕ್ಷೀಯಮಾಣೇ ಬಹುಲೇ ಕ್ಷೀಯತೇಽಸ್ತಮಿತೇ ಚ ವೈ ॥೩೦॥

ಆಪೂರ್ಯಮಾಣೇ ಹ್ಯುದಧಿರಾತ್ಮನೈವಾಭಿಪೂರ್ಯತೇ ।
ತತೋ ವೈ ಕ್ಷೀಯಮಾಣೇ ತು ಸ್ವಾತ್ಮನ್ಯೇವ ಹ್ಯಪಾಂ ಕ್ಷಯಃ ॥೩೧॥

ಉದಯಾತ್ಪಕ್ಷಸಂಯೋಗಾತ್ಪುಷ್ಣಾತ್ಯಾಪೋ ಯಥಾ ಸ್ವಯಂ ।
ತಥಾ ಸ ತು ಸಮುದ್ರೋಽಪಿ ವರ್ಧತೇ ಹ್ಯುದಯೇ ವಿಧೋಃ ॥೩೨॥

---

೨೯. ನಾಲ್ಕುವರ್ಣಗಳಿಗೂ ಸೇರಿದ ಪ್ರಜೆಗಳು ಆನಂದದಿಂದ ವಾಸಿಸುವ ಎಡೆಯಾದ ಕಾರಣ ಭೂಖಂಡಕ್ಕೆ ವರ್ಷವೆಂಬ ಹೆಸರು ಸಲ್ಲುತ್ತದೆ. ಆನಂದಾರ್ಥದಲ್ಲಿ 'ಋಷಿ' ಎಂಬ ಧಾತುವು ಪ್ರಯುಕ್ತವಾಗಿದೆ. ಅದರಿಂದ ನಿಷ್ಪನ್ನವಾದ ವರ್ಷವೆಂಬ ಶಬ್ದವು ಆನಂದವನ್ನು ಕೊಡುವ ಪ್ರದೇಶವೆಂಬ ಅರ್ಥವನ್ನು ತಿಳಿಸುತ್ತದೆ.

೩೦. ಶುಕ್ಲಪಕ್ಷದಲ್ಲಿ ಚಂದ್ರನು ಪೂರ್ಣನಾಗಿ ಪೂರ್ವದಿಕ್ಕಿನಲ್ಲಿ ಉದಿಸಿದರೆ ಸಮುದ್ರವು ಉಕ್ಕುವುದು. ಕೃಷ್ಣಪಕ್ಷದಲ್ಲಿ ಅವನು ಕೃಶನಾದಾಗಲೂ, ಮುಳುಗಿದಾಗಲೂ ಅದು ತಗ್ಗುವುದು.

೩೧. ಚಂದ್ರನು ವೃದ್ಧಿಹೊಂದಿದಂತೆಲ್ಲ ಸಮುದ್ರವು ತಾನಾಗಿಯೇ ಹೆಚ್ಚು ಹೆಚ್ಚಾಗಿ ಉಬ್ಬುವುದು. ಅವನು ಕ್ಷಯಿಸತೊಡಗಿದರೆ ಅದರಲ್ಲಿಯೂ ಸಹ ಪ್ರವಾಹವು ತಗ್ಗುವುದು.

೩೨. ಶುಕ್ಲಪಕ್ಷದ ಸಂಯೋಗದಿಂದ ಚಂದ್ರನು ಹೇಗೆ ಅಮೃತರಸದಿಂದ ಪುಷ್ಟನಾಗುತ್ತಾನೆಯೋ ಹಾಗೆ ಸಮುದ್ರವೂ ಸಹ ಅವನ ಬೆಳವಣಿಗೆಯನ್ನು ಅನುಸರಿಸಿ ಉಬ್ಬುತ್ತದೆ.

**ಅನ್ಯೂನಾನತಿರಿಕ್ತಾಸ್ತಾ ವರ್ಧಂತ್ಯಾಪೋ ಹ್ರಸಂತಿ ಚ ।**
**ಉದಯೇಽಸ್ತಮಯೇ ಚೇಂದೋಃ ಪಕ್ಷಯೋಃ ಶುಕ್ಲಕೃಷ್ಣಯೋಃ ॥೩೩॥**

**ಕ್ಷಯವೃದ್ಧೀ ಸಮುದ್ರಸ್ಯ ಶಶಿವೃದ್ಧಿಕ್ಷಯೇ ತಥಾ ।**
**ದಶೋತ್ತರಾಣಿ ಪಂಚಾಹುರಂಗುಲಾನಾಂ ಶತಾನಿ ಚ ॥೩೪॥**

**ಅಪಾಂ ವೃದ್ಧಿಃ ಕ್ಷಯೋ ದೃಷ್ಟಃ ಸಮುದ್ರಾಣಾಂ ತು ಪರ್ವಸು ।**
**ದ್ವಿರಾಪತ್ವಾತ್ಸ್ಮೃತೋ ದ್ವೀಪೋ ದಧನಾಚ್ಚೋದಧಿಃ ಸ್ಮೃತಃ ॥೩೫॥**

**ನಿಗೀರ್ಣತ್ವಾಚ್ಚ ಗಿರಯೋ ಪರ್ವಬಂಧಾಚ್ಚ ಪರ್ವತಾಃ ।**
**ಶಾಕದ್ವೀಪೇ ತು ವೈ ಶಾಕಃ ಪರ್ವತಸ್ತೇನ ಚೋಚ್ಯತೇ ॥೩೬॥**

**ಕುಶದ್ವೀಪೇ ಕುಶಸ್ತಂಬೋ ಮಧ್ಯೇ ಜನಪದಸ್ಯ ತು ।**
**ಕ್ರೌಂಚದ್ವೀಪೇ ಗಿರಿಃ ಕ್ರೌಂಚಸ್ತಸ್ಯ ನಾಮ್ನಾ ನಿಗದ್ಯತೇ ॥೩೭॥**

---

೩೩. ಶುಕ್ಲಪಕ್ಷ ಕೃಷ್ಣಪಕ್ಷಗಳೆರಡರಲ್ಲೂ ಚಂದ್ರನ ಉದಯಾಸ್ತಮಯಗಳಿಗೆ ತಕ್ಕಂತೆ ಸಮುದ್ರದಲ್ಲಿ ನೀರು ಏರುಪೇರುಗಳಿಲ್ಲದೆ ಕ್ಲ್ಪಪ್ತವಾಗಿ ಹೆಚ್ಚುವುದು ಮತ್ತು ತಗ್ಗುವುದು.

೩೪. ಸಮುದ್ರದ ಉಬ್ಬುತಗ್ಗುಗಳು ಚಂದ್ರನ ವೃದ್ಧಿಕ್ಷಯಗಳನ್ನು ಅನುಸರಿಸಿ ಇರುವುವಷ್ಟೆ! ಹುಣ್ಣಿಮೆ ಮತ್ತು ಅಮಾವಾಸ್ಯೆಗಳಲ್ಲಿ ಸಮುದ್ರದ ಜಲವು ಏರುವ ಮತ್ತು ಇಳಿಯುವ ಪ್ರಮಾಣವೆಂದರೆ ಒಂದುಸಾವಿರದ ಐದುನೂರಂಗುಲ.

೩೫. ಎರಡು ಕಡೆಯೂ ನೀರಿರುವುದಿರಿಂದ ದ್ವೀಪವೆಂದೂ, ಜಲವನ್ನು ಧಾರಣಮಾಡುವ ಕಾರಣ ಉದಧಿಯೆಂದೂ, ಭೂಮಿಯಿಂದ ನುಂಗಲ್ಪಟ್ಟಿರುವ ನಿಮಿತ್ತದಿಂದ ಗಿರಿಯೆಂದೂ, ಗಿಣ್ಣಿನಂತೆ ಭೂಮಿಗೆ ಸೇರಿಸಿ ಬಂಧಿಸಿರುವ ಕಾರಣದಿಂದ ಪರ್ವತವೆಂದೂ ಹೆಸರು ಬಂದಿದೆ.

೩೬-೩೭. ಶಾಕದ್ವೀಪದಲ್ಲಿ ಶಾಕವೆಂಬ ಪರ್ವತವಿದೆ. ಕುಶದ್ವೀಪದ ನಟ್ಟನಡುವೆ ಕುಶಸ್ತಂಬ ಎಂದರೆ ದರ್ಭೆಯ ಹುಲ್ಲಿನ ಬೊಡ್ಡೆಯಿದೆ. ಕ್ರೌಂಚದ್ವೀಪದಲ್ಲಿ ಕ್ರೌಂಚವೆಂಬ ಪರ್ವತವಿದೆ. ಆದುದರಿಂದ ದ್ವೀಪಗಳಿಗೆ ಆಯಾ ಹೆಸರು ಸಲ್ಲುತ್ತದೆ.

**ಶಾಲ್ಮಲಿಃ ಶಾಲ್ಮಲದ್ವೀಪೇ ಪೂಜ್ಯತೇ ಸ ಮಹಾದ್ರುಮಃ ।**
**ಗೋಮೇದಕೇ ತು ಗೋಮೇದಃ ಪರ್ವತಸ್ತೇನ ಚೋಚ್ಯತೇ ॥೩೮॥**

**ನ್ಯಗ್ರೋಧಃ ಪುಷ್ಕರದ್ವೀಪೇ ಪದ್ಮವತ್ತೇನ ಸ ಸ್ಮೃತಃ ।**
**ಪೂಜ್ಯತೇ ಸ ಮಹಾದೇವೈರ್ಬ್ರಹ್ಮಾಂಶೋಽವ್ಯಕ್ತಸಂಭವಃ ॥೩೯॥**

**ತಸ್ಮಿನ್ ಸ ವಸತಿ ಬ್ರಹ್ಮಾ ಸಾಧ್ಯೈಃ ಸಾರ್ಧಂ ಪ್ರಜಾಪತಿಃ ।**
**ತತ್ರ ದೇವಾ ಉಪಾಸಂತೇ ತ್ರಯಸ್ತ್ರಿಂಶನ್ಮಹರ್ಷಿಭಿಃ ॥೪೦॥**

**ಸ ತತ್ರ ಪೂಜ್ಯತೇ ದೇವೋ ದೇವೈರ್ಮಹರ್ಷಿಸತ್ತಮೈಃ ।**
**ಜಂಬೂದ್ವೀಪಾತ್ಪ್ರವರ್ತಂತೇ ರತ್ನಾನಿ ವಿವಿಧಾನಿ ಚ ॥೪೧॥**

**ದ್ವೀಪೇಷು ತೇಷು ಸರ್ವೇಷು ಪ್ರಜಾನಾಂ ಕ್ರಮಶಸ್ತು ವೈ ।**
**ಆರ್ಜವಾದ್ಬ್ರಹ್ಮಚರ್ಯೇಣ ಸತ್ಯೇನ ಚ ದಮೇನ ಚ ॥೪೨॥**

---

೩೮. ಶಾಲ್ಮಲದ್ವೀಪದಲ್ಲಿ ಶಾಲ್ಮಲಿಯೆಂಬ ಮಹಾವೃಕ್ಷವು ಜನರಿಂದ ಪೂಜೆಯನ್ನು ಕೈಗೊಳ್ಳುತ್ತದೆ. ಗೋಮೇದವೆಂಬ ಪರ್ವತವು ಕಂಗೊಳಿಸುತ್ತಿರುವುದರಿಂದ ಆ ದ್ವೀಪವು ಗೋಮೇದಕವೆಂದೇ ಪ್ರಖ್ಯಾತವಾಗಿದೆ.

೩೯–೪೦. ಪುಷ್ಕರದ್ವೀಪದಲ್ಲಿ ಪದ್ಮಾಕಾರವಾದ ಆಲದ ಮರವಿದೆ. ಆದುದರಿಂದ ಆ ಹೆಸರು ಬಂದಿದೆ. ಅದು ಬ್ರಹ್ಮನ ಅಂಶ. ಅದರ ಉತ್ಪತ್ತಿಯ ರಹಸ್ಯವು ಯಾರಿಗೂ ತಿಳಿಯದು. ಸೃಷ್ಟಿಕರ್ತನಾದ ಬ್ರಹ್ಮನು ಸಾಧ್ಯರ ಸಹಿತವಾಗಿ ಅಲ್ಲಿ ವಾಸವಾಡುತ್ತಾನೆ. ಮೂವತ್ತುಮೂರು ಕೋಟಿ ದೇವತೆಗಳೂ, ಮಹರ್ಷಿಗಳೂ ಅಲ್ಲಿ ನೆಲಸಿ ಭಗವಂತನನ್ನು ಉಪಾಸನಮಾಡುತ್ತಾರೆ.

೪೧. ದೇವತೆಗಳೂ, ಮಹರ್ಷಿಗಳೂ ಅಲ್ಲಿ ದೇವದೇವನಾದ ಭಗವಂತನನ್ನು ಪೂಜಿಸುತ್ತಾರೆ. ಜಂಬೂದ್ವೀಪದಿಂದ ಬಗೆಬಗೆಯ ರತ್ನಗಳು ಮಿಕ್ಕ ಕಡೆಗೆ ಹೋಗುವುವು.

೪೨. ಮೇಲೆ ಹೇಳಿದ ಶಾಕ ಮೊದಲಾದ ದ್ವೀಪಗಳಲ್ಲಿಯೂ, ವರ್ಷಗಳಲ್ಲಿಯೂ ಪ್ರಜೆಗಳಿಗೆ ಋಜುಸ್ವಭಾವ, ಬ್ರಹ್ಮಚರ್ಯ, ಸತ್ಯ, ಇಂದ್ರಿಯನಿಗ್ರಹ, ಆರೋಗ್ಯ, ಆಯುಃಪ್ರಮಾಣ ಇವು ಕ್ರಮಕ್ರಮವಾಗಿ ಒಂದಕ್ಕಿಂತ ಮತ್ತೊಂದರಲ್ಲಿ ಇಮ್ಮಡಿಯಾಗುವುವು.

ಆರೋಗ್ಯಾಯುಃಪ್ರಮಾಣಾಭ್ಯಾಂ ದ್ವಿಗುಣಂ ದ್ವಿಗುಣಂ ತತಃ ।
ದ್ವೀಪೇಷು ತೇಷು ಸರ್ವೇಷು ಯಥೋಕ್ತಂ ವರ್ಷಕೇಷು ಚ ॥೪೩॥

ಗೋಪಾಯಂತೇ ಪ್ರಜಾಸ್ತತ್ರ ಸರ್ವೈಃ ಸಹಜಪಂಡಿತೈಃ ।
ಭೋಜನಂ ಚಾಪ್ರಯತ್ನೇನ ಸದಾ ಸ್ವಯಮುಪಸ್ಥಿತಂ ॥೪೪॥

ಷಡ್ರಸಂ ತನ್ಮಹಾವೀರ್ಯಂ ತತ್ರ ತೇ ಭುಂಜತೇ ಜನಾಃ ।
ಪರೇಣ ಪುಷ್ಕರಸ್ಯಾಥ ಆವೃತ್ಯಾವಸ್ಥಿತೋ ಮಹಾನ್ ॥೪೫॥

ಸ್ವಾದೂದಕಸಮುದ್ರಸ್ತು ಸಮಂತಾತ್ಪರಿವೇಷ್ಟಿತಃ ।
ಸ್ವಾದೂದಕಸ್ಯ ಪರಿತಃ ಶೈಲಸ್ತು ಪರಿಮಂಡಲಃ ॥೪೬॥

ಪ್ರಕಾಶಶ್ಚಾಪ್ರಕಾಶಶ್ಚ ಲೋಕಾಲೋಕಃ ಸ ಉಚ್ಯತೇ ।
ಆಲೋಕಸ್ತತ್ರ ಚಾರ್ವಾಕ್ಚ ನಿರಾಲೋಕಸ್ತತಃ ಪರಂ ॥೪೭॥

ಲೋಕವಿಸ್ತಾರಮಾತ್ರಂ ತು ಪೃಥಿವ್ಯರ್ಧಂ ತು ಬಾಹ್ಯತಃ ।
ಪ್ರತಿಚ್ಛನ್ನಂ ಸಮಂತಾತ್ತು ಉದಕೇನಾವೃತಂ ಮಹತ್ ॥೪೮॥

---

೪೩-೪೪. ಆ ಎಲ್ಲ ದ್ವೀಪಗಳಲ್ಲಿಯೂ ವರ್ಷಗಳಲ್ಲಿಯೂ ಜನರು ಸ್ವಭಾವವಾಗಿ ಶಾಸ್ತ್ರಜ್ಞರು. ಪರಸ್ಪರ ಹಿತೈಷಿಗಳು. ತಮ್ಮ ಆಹಾರಕ್ಕಾಗಿ ಅವರು ಪ್ರಯತ್ನವೇನನ್ನೂ ಮಾಡಬೇಕಾಗಿಲ್ಲ. ಷಡ್ರಸೋಪೇತವೂ ಶಕ್ತಿಪ್ರದವೂ ಆದ ದಿವ್ಯಭೋಜನವು ತಾನಾಗಿಯೇ ಸದಾ ಸಿದ್ಧವಾಗಿರುವುದು. ಅವರು ಅದನ್ನು ಸವಿದು ಜೀವಿಸುವರು.

೪೫-೪೬. ಪುಷ್ಕರದ್ವೀಪದಿಂದತ್ತ ಸಿಹಿನೀರಿನ ದೊಡ್ಡ ಸಮುದ್ರವು ಅದನ್ನು ಎಲ್ಲ ಕಡೆಯೂ ಬಳಸಿಕೊಂಡಿರುವುದು. ಅದನ್ನು ಚಕ್ರವಾಳ ಪರ್ವತವು ಸುತ್ತಲೂ ಆವರಿಸಿರುವುದು.

೪೭. ಪ್ರಕಾಶ ಮತ್ತು ಅಪ್ರಕಾಶ ಇವೆರಡೂ ಅಲ್ಲಿ ಗೋಚರಿಸುವ ಕಾರಣ ಅದನ್ನು ಲೋಕಾಲೋಕಪರ್ವತವೆನ್ನುತ್ತಾರೆ. ಅದರ ಒಳಭಾಗದಲ್ಲಿ ಮಾತ್ರ ಬೆಳಕಿರುವುದು. ಹೊರಭಾಗದಿಂದತ್ತ ಬರಿಯ ಕತ್ತಲು.

೪೮. ಮೇರುವಿನ ಮಧ್ಯದಿಂದ ಲೋಕಾಲೋಕಪರ್ವತದ ವರೆಗೆ ಇರುವಷ್ಟೇ ಭೂಭಾಗವು ಆ ಪರ್ವತದ ಹೊರಗಡೆಯೂ ಇರುವುದು. ಇದರ ಸುತ್ತಲೂ ಅಪಾರವಾದ ಜಲರಾಶಿಯು ಆವರಿಸಿಕೊಂಡಿದೆ.

**ಭೂಮೇರ್ದಶಗುಣಾಶ್ಚಾಪಃ ಸಮಂತಾತ್ಪಾಲಯಂತಿ ಗಾಂ |**
**ಅದ್ಭ್ಯಃ ದಶಗುಣಶ್ಚಾಗ್ನಿಃ ಸರ್ವತೋ ಧಾರಯತ್ಯಪಃ ||೪೯||**

**ಅಗ್ನೇರ್ದಶಗುಣೋ ವಾಯುರ್ಧಾರಯಞ್ಜ್ಯೋತಿರಾಸ್ಥಿತಃ |**
**ತಿರ್ಯಕ್ಚ ಮಂಡಲೋ ವಾಯುರ್ಭೂತಾನ್ಯಾವೇಷ್ಟ್ಯ ಧಾರಯನ್ ||೫೦||**

**ದಶಾಧಿಕಂ ತಥಾಕಾಶಂ ವಾಯೋರ್ಭೂತಾನ್ಯಧಾರಯತ್ |**
**ಭೂತಾದಿರ್ಧಾರಯನ್ ವ್ಯೋಮ ತಸ್ಮಾದ್ದಶಗುಣಸ್ತು ವೈ ||೫೧||**

**ಭೂತಾದಿತೋ ದಶಗುಣಂ ಮಹದ್ಭೂತಾನ್ಯಧಾರಯತ್ |**
**ಮಹತ್ತತ್ತ್ವಂ ಹ್ಯನಂತೇನ ಅವ್ಯಕ್ತೇನ ತು ಧಾರ್ಯತೇ ||೫೨||**

---

೪೯. ಜಲಭಾಗವು ಭೂಭಾಗದ ಹತ್ತರಷ್ಟಿದೆ. ಇದು ನೆಲವನ್ನು ರಕ್ಷಿಸುತ್ತದೆ. ಜಲಕ್ಕಿಂತ ಅಗ್ನಿ ಹತ್ತುಮಡಿ ಹೆಚ್ಚಾಗಿದೆ. ಇದು ಜಲವನ್ನು ಧಾರಣ ಮಾಡುತ್ತದೆ.

೫೦. ವಾಯುವು ಅಗ್ನಿಗಿಂತ ಹತ್ತುಪಾಲು ಅಧಿಕವಾಗಿದೆ. ಅದು ತೇಜಸ್ಸನ್ನು ರಕ್ಷಿಸುತ್ತದೆ. ಈ ವಾಯು ಮಂಡಲಾಕಾರದಿಂದ ಅಡ್ಡಡ್ಡಲಾಗಿ ಸಂಚರಿಸುತ್ತ ಪ್ರಾಣಿವರ್ಗವನ್ನು ಕಾಪಾಡುತ್ತಿದೆ.

೫೧. ಆಕಾಶವು ವಾಯುವಿನ ಹತ್ತರಷ್ಟು ಹೆಚ್ಚಾಗಿದೆ. ಅದು ಪ್ರಾಣಿಗಳಿಗೆಲ್ಲ ಆಧಾರವಾಗಿದೆ. ಅಹಂಕಾರ ತತ್ವವು ಆಕಾಶವನ್ನು ಧರಿಸಿದೆ. ಅದು ಇದರ (ಆಕಾಶದ) ಹತ್ತುಪಾಲು ಅಧಿಕವಾಗಿದೆ.

೫೨. ಅಹಂಕಾರಕ್ಕಿಂತ ಹತ್ತುಪಾಲು ಅಧಿಕವಾಗಿರುವ ಮಹತ್ತತ್ವವು ಮಹಾಭೂತಗಳಿಗೆ ಆಧಾರವೆನಿಸಿದೆ. ಅನಂತವೂ ಅವ್ಯಕ್ತವೂ ಎನಿಸಿದ ಮೂಲ ಪ್ರಕೃತಿಯು ಮಹತ್ತತ್ವವನ್ನು ಧಾರಣಮಾಡುತ್ತಿದೆ.

ಆಧಾರಾಧೇಯಭಾವೇನ ವಿಕಾರಾಸ್ತೇ ವಿಕಾರಿಣಾಂ।
ಪೃಥ್ವ್ಯಾದಯೋ ವಿಕಾರಾಸ್ತೇ ಪರಿಚ್ಛಿನ್ನಾಃ ಪರಸ್ಪರಂ ॥೫೩॥

ಪರಸ್ಪರಾಧಿಕಾಶ್ಚೈವ ಪ್ರವಿಷ್ಟಾಶ್ಚ ಪರಸ್ಪರಂ।
ಏವಂ ಪರಸ್ಪರೋತ್ಪನ್ನಾ ಧಾರ್ಯಂತೇ ಚ ಪರಸ್ಪರಂ ॥೫೪॥

ಯಸ್ಮಾತ್ಪ್ರವಿಷ್ಟಾಸ್ತೇಽನ್ಯೋನ್ಯಂ ತಸ್ಮಾತ್ತೇ ಸ್ಥಿರತಾಂ ಗತಾಃ
ಆಸಂಸ್ತೇ ಹ್ಯವಿಶೇಷಾಶ್ಚ ವಿಶೇಷಾ ಅನ್ಯವೇಶನಾತ್ ॥೫೫॥

ಪೃಥ್ವ್ಯಾದಯಸ್ತು ವಾಯ್ವಂತಾಃ ಪರಿಚ್ಛಿನ್ನಾಸ್ತು ತತ್ರ ತೇ।
ಭೂತೇಭ್ಯಃ ಪರತಸ್ತೇಭ್ಯೋ ಹ್ಯಲೋಕಃ ಸರ್ವತಃ ಸ್ಮೃತಃ ॥೫೬॥

---

೫೩. ಮೇಲೆ ಹೇಳಿದ ಆಕಾಶಾದಿತತ್ವಗಳು ತಾವು ಮತ್ತೊಂದರ ರೂಪಾಂತರವೆನಿಸಿಕೊಂಡು ಹುಟ್ಟಿರುವುದು ಮಾತ್ರವಲ್ಲದೆ ಮತ್ತೆ ಬೇರೆ ತತ್ವಗಳು ತಮ್ಮಿಂದ ರೂಪಾಂತರಪಡೆದು ಉತ್ಪತ್ತಿಯಾಗುವುದಕ್ಕೂ ಕಾರಣವಾಗಿವೆ. ಹೀಗೆ ಈ ತತ್ವಗಳು ಆಧಾರವೂ ಆಧೇಯವೂ ಆಗಿವೆ. ಪೃಥಿವಿ ಮೊದಲಾದುವು ವಿಕಾರ (ರೂಪಾಂತರ) ವೆಂದು ಹೇಳುವುದು ಪರಿಮಿತವಾದ ಅರ್ಥದಲ್ಲಿ ಮಾತ್ರ. ಏಕೆಂದರೆ ಮಹದಾದಿ ತತ್ವಗಳೆಲ್ಲವೂ ಮೂಲಪ್ರಕೃತಿಯ ವಿಕಾರಗಳೇ ಆಗಿವೆ. ಆದರೂ ಇವು ತಮ್ಮ ವಿಶೇಷಲಕ್ಷಣವನ್ನು ಉಳಿಸಿಕೊಂಡೇ ಇರುವುವು.

೫೪. ಹೀಗೆ ಬ್ರಹ್ಮಾಂಡದಲ್ಲಿ ಈ ತತ್ವಗಳು ಒಂದಕ್ಕಿಂತ ಮತ್ತೊಂದು ಅಧಿಕವಾಗಿವೆ. ಒಂದರೊಡನೊಂದು ಬೆರೆತಿವೆ. ಒಂದರಿಂದ ಒಂದು ಹುಟ್ಟಿವೆ. ಒಂದನ್ನೊಂದು ಧಾರಣಮಾಡುತ್ತಿವೆ.

೫೫. ಒಂದರಲ್ಲೊಂದು ಪ್ರವೇಶಿಸುವ ಕಾರಣ ಇವು ಸ್ಥೈರ್ಯವನ್ನು ಪಡೆಯುವುವು. ಸ್ವತಂತ್ರಾವಸ್ಥೆಯಲ್ಲಿ ಈ ತತ್ವಗಳನ್ನು ಅವಿಶೇಷಗಳೆಂದೂ ಮಿಶ್ರಿತಾವಸ್ಥೆಯಲ್ಲಿ ವಿಶೇಷಗಳೆಂದೂ ತಿಳಿಯಬೇಕು.

೫೬. ಪೃಥಿವಿ ಮೊದಲುಗೊಂಡು ವಾಯುವಿನ ವರೆಗೆ ಇರುವ ಭೂತಗಳೆಲ್ಲವೂ ಲೋಕಾಲೋಕಪರ್ವತದ ವರೆಗೆ ಮಾತ್ರವೇ ವ್ಯಾಪಿಸಿರುವುವು. ಅಲ್ಲಿಂದ ಆಚೆಗೆ ಎತ್ತೆತ್ತಲೂ ಅಲೋಕಾಕಾಶವಿರುವುದು.

ತಥಾ ಹ್ಯಲೋಕ ಆಕಾಶೇ ಪರಿಚ್ಛಿನ್ನಾನಿ ಸರ್ವಶಃ ।
ಪಾತ್ರೇ ಮಹತಿ ಪಾತ್ರಾಣಿ ಯಥಾ ಹ್ಯಂತರ್ಗತಾನಿ ಚ ॥ ೭॥

ಭವಂತ್ಯನ್ಯೋನ್ಯಹೀನಾನಿ ಪರಸ್ಪರಸಮಾಶ್ರಯಾತ್ ।
ತಥಾ ಹ್ಯಲೋಕ ಆಕಾಶೇ ಭೇದಾಸ್ತ್ವಂತರ್ಗತಾ ಗತಾಃ ॥೫೮॥

ಕೃತಾನ್ಯೇತಾನಿ ತತ್ವಾನಿ ಅನ್ಯೋನ್ಯಸ್ಯಾಧಿಕಾನಿ ಚ
ಯಾವದೇತಾನಿ ತತ್ವಾನಿ ತಾವದುತ್ಪತ್ತಿರುಚ್ಯತೇ ॥೫೯॥

ಜಂತೂನಾಮಿಹ ಸಂಸ್ಕಾರೋ ಭೂತೇಷ್ವಂತರ್ಗತೇಷು ವೈ ।
ಪ್ರತ್ಯಾಖ್ಯಾಯೇಹ ಭೂತಾನಿ ಕಾರ್ಯೋತ್ಪತ್ತಿರ್ನ ವಿದ್ಯತೇ ॥೬೦॥

ತಸ್ಮಾತ್ಪರಿಮಿತಾ ಭೇದಾಃ ಸ್ಮೃತಾಃ ಕಾರ್ಯಾತ್ಮಕಾಸ್ತು ವೈ ।
ತೇ ಕಾರಣಾತ್ಮಕಾಶ್ಚೈವ ಸ್ಯುರ್ಭೇದಾ ಮಹದಾದಯಃ ॥೬೧॥

---

೫೭. ದೊಡ್ಡ ಪಾತ್ರೆಯಲ್ಲಿ ಸಣ್ಣ ಪಾತ್ರೆಗಳು ಅಡಕವಾಗುವಂತೆ ಅಲೋಕಾಕಾಶದಲ್ಲಿ ಉಳಿದ ಭೂತಗಳು ಅಡಗಿರುವುವು.

೫೮. ಇವು ಪರಸ್ಪರ ಆಧಾರವಾಗಿರುವ ಕಾರಣ ಒಂದು ಮತ್ತೊಂದಕ್ಕಿಂತ ಕಿರಿದಾದಂತಾಯಿತು. ಆದರೆ ಇವುಗಳೆಲ್ಲಕ್ಕೂ ಅಲೋಕಾಕಾಶವು ಆಶ್ರಯವಾಗಿರುವುದರಿಂದ ಆ ದೃಷ್ಟಿಯಲ್ಲಿ ನೋಡಿದರೆ ಇವುಗಳಲ್ಲಿನ ಹಿರಿದು ಕಿರಿದೆಂಬ ಭೇದವೆಲ್ಲ ಮಾಯವಾಗುವುದು.

೫೯. ಈ ತತ್ವಗಳು ಒಂದಕ್ಕಿಂತ ಒಂದು ದೊಡ್ಡದಾಗಿರುವಂತೆ ಸೃಷ್ಟಿಕರ್ತನೇ ಅವುಗಳನ್ನು ನಿರ್ಮಿಸಿದ್ದಾನೆ. ಎಲ್ಲಿಯವರೆಗೆ ಇವು ಹೀಗೆ ಇರುವುವೋ ಅಲ್ಲಿಯವರೆಗೆ ಮಾತ್ರವೇ ಸೃಷ್ಟಿಕಾರ್ಯವು ನಡೆಯುವುದು.

೬೦. ಈ ತತ್ವಗಳು ಒಂದರೊಡನೊಂದು ಬೆರೆತು ವಿಕಾರವನ್ನು ಪಡೆಯುತ್ತಿರುವವರೆಗೂ ಪ್ರಾಣಿಗಳ ದೈಹಿಕ ಮಾನಸಿಕ ವ್ಯಾಪಾರಗಳು ಜರುಗುವುವು. ಇವು ಲಯವಾದರೆ ಅಲ್ಲಿಗೆ ಸೃಷ್ಟಿ ಮುಗಿದಂತೆಯೇ ಸರಿ.

೬೧. ಆದುದರಿಂದ ಮಹದಾದಿ ತತ್ವಗಳನ್ನು ಕಾರ್ಯರೂಪವಾದುವೆಂದು ಹೇಳುವುದು ಪರಿಮಿತವಾದ ಅರ್ಥದಲ್ಲಿ ಮಾತ್ರ. ಏಕೆಂದರೆ ಅವು ರೂಪಾಂತರವನ್ನು ಹೊಂದಿ ತಮ್ಮ ಮುಂದಿನ ತತ್ವಗಳ ಉತ್ಪತ್ತಿಗೆ ಆಧಾರವಾಗಿರುವುದರಿಂದ ಕಾರಣ ರೂಪವೂ ಆಗಿರುವುವು.

ಇತ್ಯೇವಂ ಸನ್ನಿವೇಶೋಽಯಂ ಪೃಥ್ವ್ಯಾಕ್ರಾಂತಸ್ತು ಭಾಗಶಃ ।
ಸಪ್ತದ್ವೀಪಸಮುದ್ರಾಣಾಂ ಯಾಥಾತಥ್ಯೇನ ವೈ ಮಯಾ ॥೬೨॥

ವಿಸ್ತಾರಾನ್ಮಂಡಲಾಚ್ಚೈವ ಪ್ರಸಂಖ್ಯಾತೇನ ಚೈವ ಹಿ ।
ವಿಶ್ವರೂಪಂ ಪ್ರಧಾನಸ್ಯ ಪರಿಮಾಣೈಕದೇಶಿನಃ ॥೬೩॥

ಏತಾವತ್ಸನ್ನಿವೇಶಸ್ತು ಮಯಾ ಸಮ್ಯಕ್ಪ್ರಕಾಶಿತಃ ।
ಏತಾವದೇವ ಶ್ರೋತವ್ಯಂ ಸನ್ನಿವೇಶಸ್ಯ ಪಾರ್ಥಿವ ।
ಅತ ಊರ್ಧ್ವಂ ಪ್ರವಕ್ಷ್ಯಾಮಿ ಸೂರ್ಯಾಚಂದ್ರಮಸೋರ್ಗತಿಂ ॥೬೪॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಭುವನಕೋಶೇ ಸಪ್ತದ್ವೀಪನಿವೇಶನಂ ನಾಮ ತ್ರಯೋವಿಂಶತ್ಯಧಿಕ ಶತತಮೋಽಧ್ಯಾಯಃ

೬೨-೬೩. ಭೂಮಂಡಲವು ಆಕ್ರಮಿಸಿರುವ ಸನ್ನಿವೇಶವನ್ನು ವಿವರವಾಗಿ ತಿಳಿಸಿದ್ದೇನೆ. ಸಪ್ತದ್ವೀಪಗಳ ಮತ್ತು ಸಪ್ತಸಮುದ್ರಗಳ ಅಡ್ಡಳತೆ, ಸುತ್ತಳತೆ ಇವುಗಳನ್ನು ಪರಿಮಾಣಸಹಿತವಾಗಿ ವಿವರಿಸಿದ್ದೇನೆ. ಮೂಲಪ್ರಕೃತಿಯು ಅಪರಿಮಿತವಾದ ಪರಿಮಾಣವುಳ್ಳುದು. ಅದು ಏಕದೇಶದಲ್ಲಿ ವಿಕಾರವನ್ನು ಹೊಂದಿ ಈ ಜಗದ್ರೂಪವಾಗಿ ಪರಿಣತವಾಗಿದೆ.

೬೪. ಭೂಗೋಳದ ಇಷ್ಟೊಂದು ಸನ್ನಿವೇಶವನ್ನು ನಾನು ಚೆನ್ನಾಗಿ ತಿಳಿಯಪಡಿಸಿರುವೆನು. ಓ ರಾಜಾ, ಭೂಮಂಡಲದ ವಿಚಾರವಾಗಿ ಕೇಳಬೇಕಾದುದೂ ಇಷ್ಟೇ. ಇನ್ನುಮುಂದೆ ಸೂರ್ಯಚಂದ್ರರ ಸಂಚಾರಕ್ರಮವನ್ನು ಬಣ್ಣಿಸುವೆನು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಗೋಮೇದದ್ವೀಪವನ್ನೂ, ಪುಷ್ಕರದ್ವೀಪವನ್ನೂ ವರ್ಣಿಸಿ ಪೃಥಿವ್ಯಾದಿ ಮಹಾಭೂತಗಳನ್ನು ವಿವರಿಸಿದೆ.

ಸುರಾಸಮುದ್ರವನ್ನು ಬಳಸಿ ಗೋಮೇದದ್ವೀಪವೂ, ಅದನ್ನು ಸುತ್ತುಗಟ್ಟಿ ಇಕ್ಷುಸಮುದ್ರವೂ ಇವೆ. ಈ ದ್ವೀಪವು ಶಾಲ್ಮಲಿದ್ವೀಪದ ಎರಡರಷ್ಟು ವಿಸ್ತಾರವಾಗಿದೆ. ಪುಷ್ಕರದ್ವೀಪವು ಇದರ ಆಚೆಯಿದೆ. ಅದೇ ಏಳನೆಯ ದ್ವೀಪ. ಶುದ್ಧೋದಕ ಸಮುದ್ರವು ಅದನ್ನು ಆವರಿಸಿಕೊಂಡಿದೆ. ಇವೆರಡು ದ್ವೀಪಗಳಲ್ಲಿಯೂ ಜನರು ಸಾವಿರಾರು ವರ್ಷಗಳ ಕಾಲ ಜೀವಿಸಿ ಸಕಲಸುಖಗಳನ್ನೂ ಅನುಭವಿಸುತ್ತಾರೆ. ಶಾಕ, ಕ್ರೌಂಚ, ಶಾಲ್ಮಲಿ ಮುಂತಾದ ಹೆಸರಿನ ವೃಕ್ಷವೋ ಪರ್ವತವೋ ಇರುವುದ ರಿಂದ ಆಯಾ ದ್ವೀಪಗಳಿಗೆ ಅದೇ ಹೆಸರು ಬಂದಿದೆ.

ಪೃಥಿವ್ಯಾದಿ ಮಹಾಭೂತಗಳು ಪ್ರಕೃತಿಯ ವಿಕಾರಗಳು. ಇವು ಒಂದು ತತ್ವ ದಿಂದ ಹುಟ್ಟಿ ಮತ್ತೊಂದು ತತ್ತ್ವವು ಹುಟ್ಟುವುದಕ್ಕೆ ಕಾರಣವಾಗುತ್ತವೆ. ಆದುದ ರಿಂದ ಇವು ಕಾರ್ಯಾತ್ಮಕವೂ ಕಾರಣಾತ್ಮಕವೂ ಆಗಿವೆ. ಇವು ಇರುವವರೆಗೂ ಜಗತ್ತು ನಡೆಯುತ್ತದೆ; ಲಯವಾದರೆ ಅಳಿಯುತ್ತದೆ.

ಶ್ರೀಮತ್ಸ್ಯಮಹಾಪುರಾಣದಲ್ಲಿ ಭುವನಕೋಶದೊಳಗೆ ಸಪ್ತದ್ವೀಪನಿವೇಶನವೆಂಬ ನೂರಿಪ್ಪತ್ತಮೂರನೆಯ ಅಧ್ಯಾಯವು ಮುಗಿದುದು.



## ಅಥ ಚತುರ್ವಿಂಶತ್ಯಧಿಕಶತತಮೋಽಧ್ಯಾಯಃ

॥ ಸೂತ ಉವಾಚ ॥

ಅತ ಊರ್ಧ್ವಂ ಪ್ರವಕ್ಷ್ಯಾಮಿ ಸೂರ್ಯಾಚಂದ್ರಮಸೋರ್ಗತಿಂ ।
ಸೂರ್ಯಾಚಂದ್ರಮಸಾವೇತೌ ಭ್ರಾಜಂತೌ ಯಾವದೇವ ತು ॥ ೧ ॥

ಸಪ್ತಾನಾಂ ತು ಸಮುದ್ರಾಣಾಂ ದ್ವೀಪಾನಾಂ ಭಾತಿ ವಿಸ್ತರಃ ।
ವಿಸ್ತಾರಾರ್ಧಂ ಪೃಥಿವ್ಯಾಸ್ತು ಭವೇದನ್ಯತ್ರ ಬಾಹ್ಯತಃ ॥ ೨ ॥

ಪರ್ಯಾಸಪರಿಮಾಣಂ ಚ ಚಂದ್ರಾದಿತ್ಯೌ ಪ್ರಕಾಶತಃ ।
ಪರ್ಯಾಸಪರಿಮಾಣಾಭ್ಯಾಂ ಬುಧೈಸ್ತುಲ್ಯಂ ದಿವಃ ಸ್ಮೃತಂ ॥ ೩ ॥

ತ್ರೀನ್ ಲೋಕಾನ್ ಪ್ರತಿ ಸಾಮಾನ್ಯಾತ್ಸೂರ್ಯೋ ಯಾತ್ಯವಿಲಂಬತಃ ।
ಅಚಿರಾತ್ತು ಪ್ರಕಾಶೇನ ಅವನಾತ್ತು ರವಿಃ ಸ್ಮೃತಃ ॥ ೪ ॥

---

ಸೂತಪೌರಾಣಿಕನು ಹೇಳಿದನು.—ಇನ್ನು ಮುಂದೆ ಸೂರ್ಯಚಂದ್ರರ ಗಮನವನ್ನು ತಿಳಿಸುವೆನು. ಇವರಿಬ್ಬರೂ ಸಪ್ತದ್ವೀಪಗಳಿಂದಲೂ ಸಪ್ತಸಮುದ್ರಗಳಿಂದಲೂ ಸಹಿತವಾದ ಭೂಭಾಗವನ್ನು ತಮ್ಮ ಕಾಂತಿಯಿಂದ ಬೆಳಗುವರು. ಭೂಮಂಡಲದ ವಿಸ್ತಾರದಲ್ಲಿ ಅರ್ಧಭಾಗದಷ್ಟು ಪ್ರದೇಶವು ಲೋಕಾಲೋಕ ಪರ್ವತದ ಹೊರಗಡೆಯೂ ಇರುವುದು.

೩. ಚಂದ್ರಸೂರ್ಯರು ಭೂಮಿಯ ಅಂತರ್ಮಂಡಲದ ಅಡ್ಡಳತೆ ಮತ್ತು ಸುತ್ತಳತೆ ಎಷ್ಟಿರುವುದೋ ಅಷ್ಟು ಪ್ರದೇಶವನ್ನೂ ಪ್ರಕಾಶಪಡಿಸುವರು. ದ್ಯುಲೋಕದ ವ್ಯಾಸಪರಿಮಾಣಗಳು ಭೂಲೋಕದ ವ್ಯಾಸಪರಿಮಾಣಗಳಷ್ಟೇ ಇರುವುವೆಂದು ಪ್ರಾಜ್ಞರು ಹೇಳುತ್ತಾರೆ.

೪. ಸೂರ್ಯನು ತಡಮಾಡದೆ ಮೂರುಲೋಕಗಳಲ್ಲಿಯೂ ಏಕಪ್ರಕಾರವಾಗಿ ಸಂಚರಿಸುತ್ತಾನೆ. ಶೀಘ್ರವಾಗಿ ಪ್ರಕಾಶವಿತ್ತು ರಕ್ಷಿಸುವ ಕಾರಣ ಅವನಿಗೆ ರವಿಯೆಂಬ ಹೆಸರು ಬಂದಿದೆ.

ಭೂಯೋ ಭೂಯಃ ಪ್ರವಕ್ಷ್ಯಾಮಿ ಪ್ರಮಾಣಂ ಚಂದ್ರಸೂರ್ಯಯೋಃ ।
ಮಹಿತತ್ವಾನ್ಮಹೀಶಬ್ದೋ ಹ್ಯಸ್ಮಿನ್ನರ್ಥೇ ನಿಗದ್ಯತೇ ॥ ೫ ॥

ಅಸ್ಯ ಭಾರತವರ್ಷಸ್ಯ ವಿಷ್ಕಂಭಾತ್ತುಲ್ಯವಿಸ್ತೃತಂ ।
ಮಂಡಲಂ ಭಾಸ್ಕರಸ್ಯಾಥ ಯೋಜನೈಸ್ತನ್ನಿಬೋಧತ ॥ ೬ ॥

ನವಯೋಜನಸಾಹಸ್ರೋ ವಿಸ್ತಾರೋ ಮಂಡಲಸ್ಯ ತು ।
ವಿಸ್ತಾರಾತ್ತ್ರಿಗುಣಶ್ಚಾಪಿ ಪರಿಣಾಹೋಽತ್ರ ಮಂಡಲೇ ॥ ೭ ॥

ವಿಷ್ಕಂಭಾನ್ಮಂಡಲಾಚ್ಚೈವ ಭಾಸ್ಕರಾದ್ದ್ವಿಗುಣಃ ಶಶೀ ।
ಅತಃ ಪೃಥಿವ್ಯಾ ವಕ್ಷ್ಯಾಮಿ ಪ್ರಮಾಣಂ ಯೋಜನೈಃ ಪುನಃ ॥ ೮ ॥

ಸಪ್ತದ್ವೀಪಸಮುದ್ರಾಯಾ ವಿಸ್ತಾರೋ ಮಂಡಲಸ್ಯ ತು ।
ಇತ್ಯೇತದಿಹ ಸಂಖ್ಯಾತಂ ಪುರಾಣೇ ಪರಿಮಾಣತಃ ॥ ೯ ॥

---

೫. ಇನ್ನು ಚಂದ್ರಸೂರ್ಯರ ಪ್ರಮಾಣವನ್ನು ಹೇಳುವೆನು. ಪೂಜಾರ್ಹವೂ ಬಹುವಿಸ್ತಾರವೂ ಅದಕಾರಣ ನಾವು ವಾಸಮಾಡುವ ಭೂಮಿಗೆ ಮಹೀ ಎಂಬ ಸಂಜ್ಞೆ ಬಂದಿದೆ.

೬. ಈ ಭಾರತವರ್ಷದ ವ್ಯಾಸಪ್ರಮಾಣ (ಅಡ್ಡಳತೆ) ಎಷ್ಟಿರುವುದೋ ಸೂರ್ಯಮಂಡಲದ ವ್ಯಾಸಪ್ರಮಾಣವೂ ಅಷ್ಟೇ ಇರುವುದು. ಇದನ್ನು ಯೋಜನದ ಲೆಕ್ಕದಲ್ಲಿ ಹೇಳುವೆನು ಕೇಳಿರಿ.

೭. ಸೂರ್ಯಮಂಡಲದ ವ್ಯಾಸದ ಅಳತೆ ಒಂಬತ್ತು ಸಾವಿರಯೋಜನ. ಸುತ್ತಳತೆ ಇದರ ಮೂರರಷ್ಟು ಎಂದರೆ ಇಪ್ಪತ್ತೇಳುಸಾವಿರ ಯೋಜನವಾಗುವುದು.

೮. ವ್ಯಾಸದಲ್ಲೂ ಸುತ್ತಳತೆಯಲ್ಲೂ ಚಂದ್ರನು ಸೂರ್ಯನಿಗಿಂದ ಎರಡರಷ್ಟು ಅಧಿಕನಾಗಿರುವನು. ಇನ್ನು ಮುಂದೆ ಪೃಥಿವಿಯ ಪ್ರಮಾಣವನ್ನು ಯೋಜನಗಳ ಅಳತೆಯಲ್ಲಿ ಮತ್ತೆ ಹೇಳುವೆನು.

೯. ಸಪ್ತದ್ವೀಪಗಳಿಂದಲೂ, ಸಪ್ತಸಮುದ್ರಗಳಿಂದಲೂ ಪರಿಮಿತವಾದ ಭೂಮಿಯ ವಿಸ್ತಾರವಿಷ್ಟೇ ಸರಿಯೆಂದು ಗೊತ್ತುಮಾಡಿ ಮಹರ್ಷಿಗಳು ಪುರಾಣಗಳಲ್ಲಿ ಹೇಳಿರುವರು.

ತದ್ವಕ್ಷ್ಯಾಮಿ ಪ್ರಸಂಖ್ಯಾಯ ಸಾಂಪ್ರತಂ ಚಾಭಿಮಾನಿಭಿಃ ।
ಅಭಿಮಾನಿನೋ ಹ್ಯತೀತಾ ಯೇ ತುಲ್ಯಾಸ್ತೇ ಸಾಂಪ್ರತೈಸ್ತ್ವಿಹ ॥೧೦॥

ದೇವಾ ದೇವ್ಯೈರತೀತಾಸ್ತು ರೂಪೈರ್ನಾಮಭಿರೇವ ಚ ।
ತಸ್ಮಾದ್ವೈ ಸಾಂಪ್ರತೈರ್ದೇವ್ಯೈರ್ವಕ್ಷ್ಯಾಮಿ ವಸುಧಾತಲಂ ॥೧೧॥

ದಿವ್ಯಸ್ಯ ಸನ್ನಿವೇಶೋ ವೈ ಸಾಂಪ್ರತೈರೇವ ಕೃತ್ಸ್ನಶಃ ।
ಶತಾರ್ಧಕೋಟಿವಿಸ್ತಾರಾ ಪೃಥಿವೀ ಕೃತ್ಸ್ನಶಃ ಸ್ಮೃತಾ ॥೧೨॥

ತಸ್ಯಾಶ್ಚಾರ್ಧಪ್ರಮಾಣಂ ಚ ಮೇರೋಶ್ಚೈವೋತ್ತರೋತ್ತರಂ ।
ಮೇರೋರ್ಮಧ್ಯಾತ್ಪ್ರತಿದಿಶಂ ಕೋಟಿರೇಕಾತು ಸಾ ಸ್ಮೃತಾ ॥೧೩॥

---

೧೦. ಈ ಕಲ್ಪದಲ್ಲಿ ಭೂಮಿಯ ಅಳತೆಯನ್ನೂ ಅದರ ಅಭಿಮಾನಿದೇವತೆಗಳನ್ನೂ ಲೆಕ್ಕಾಚಾರವಾಗಿ ಹೇಳುವೆನು. ಹಿಂದೆ ಕಳೆದುಹೋದ ಅಭಿಮಾನಿದೇವತೆಗಳು ಈಗಿನವರಿಗೆ ಸಮಾನರೇ ಆಗಿದ್ದರು.

೧೧. ಹಿಂದಿನ ಅಭಿಮಾನಿದೇವತೆಗಳೂ ಅವರ ಪರಿವಾರದೇವತೆಗಳೂ ಕಳೆದುಹೋಗಿದ್ದಾರೆ. ಅವರ ರೂಪಗಳೂ ಹೆಸರುಗಳೂ ಅಳಿದುಹೋಗಿವೆ. ಆದುದರಿಂದ ಈಗಿರುವ ದೇವತೆಗಳ ಸಹಿತವಾಗಿ ಭೂಮಂಡಲದ ವೃತ್ತಾಂತವನ್ನು ಹೇಳುವೆನು.

೧೨. ದೇವಲೋಕದ ಸನ್ನಿವೇಶವೂ ಹೀಗೆಯೇ. ಈಗಿನ ಸನ್ನಿವೇಶಗಳಂತೆಯೇ. ಹೆಚ್ಚುಕಡಿಮೆಯಿಲ್ಲದೆ ಹಿಂದೆಯೂ ಇದ್ದಿತು. ಸಂಪೂರ್ಣವಾದ ಭೂಮಂಡಲದ ವಿಸ್ತಾರವು ಎಂದರೆ ಬ್ರಹ್ಮಾಂಡದ ಒಂದು ಕಡೆಯ ಭಿತ್ತಿಯಿಂದ ಮತ್ತೊಂದು ಕಡೆಯ ಭಿತ್ತಿಯವರೆಗೆ ಐವತ್ತುಕೋಟಿ ಯೋಜನಗಳಷ್ಟಿರುವುದೆಂದು ತಿಳಿಯಬೇಕು.

೧೩-೧೪. ಭೂಮಿಯ ನಟ್ಟನಡುವೆ ಇರುವ ಮೇರುಪರ್ವತದಿಂದ ಅಳತೆ ಮಾಡಿದರೆ ಮೇಲೆ ಹೇಳಿದ ಪರಿಮಾಣವು ಅರ್ಧದಷ್ಟಾಗುತ್ತದೆ. ಮೇರುವಿನ ಮಧ್ಯದಿಂದ ಒಂದೊಂದು ದಿಕ್ಕಿಗೂ ಸ್ವಾದೂದಕ ಸಮುದ್ರದ ವರೆಗೆ ಒಂದುಕೋಟಿ

**ತಥಾ ಶತಸಹಸ್ರಾಣಾಮೇಕೋನನವತಿಃ ಪುನಃ ।**
**ಪಂಚಾಶಚ್ಚ ಸಹಸ್ರಾಣಿ ಪೃಥಿವ್ಯರ್ಧಸ್ಯ ವಿಸ್ತರಃ ॥೧೪॥**

**ಪೃಥಿವ್ಯಾ ವಿಸ್ತರಂ ಕೃತ್ಸ್ನಂ ಯೋಜನೈಸ್ತನ್ನಿಬೋಧತ ।**
**ತಿಸ್ರಃ ಕೋಟ್ಯಸ್ತು ವಿಸ್ತಾರಾತ್ಸಂಖ್ಯಾತಾಸ್ತು ಚತುರ್ದಿಶಂ ॥೧೫॥**

**ತಥಾ ಶತಸಹಸ್ರಾಣಾಮೇಕೋನಾಶೀತಿರುಚ್ಯತೇ ।**
**ಸಪ್ತದ್ವೀಪಸಮುದ್ರಾಯಾಃ ಪೃಥಿವ್ಯಾಃ ಸ ತು ವಿಸ್ತರಃ ॥೧೬॥**

**ವಿಸ್ತಾರಂ ತ್ರಿಗುಣಂ ಚೈವ ಪೃಥಿವ್ಯಂತರಮಂಡಲಂ ।**
**ಗಣಿತಂ ಯೋಜನಾನಾಂ ತು ಕೋಟ್ಯಸ್ತ್ವೇಕಾದಶ ಸ್ಮೃತಾಃ ॥೧೭॥**

**ತಥಾ ಶತಸಹಸ್ರಾಣಾಂ ಸಪ್ತತ್ರಿಂಶಾಧಿಕಾಸ್ತು ತಾಃ ।**
**ಇತ್ಯೇತದ್ವೈ ಪ್ರಸಂಖ್ಯಾತಂ ಪೃಥಿವ್ಯಂತರಮಂಡಲಂ ॥೧೮॥**

**ತಾರಕಾಸನ್ನಿವೇಶಸ್ಯ ದಿವಿ ಯಾವತ್ತು ಮಂಡಲಂ ।**
**ಪರ್ಯಾಪ್ತಸನ್ನಿವೇಶಸ್ಯ ಭೂಮೇಸ್ತಾವತ್ತು ಮಂಡಲಂ ॥೧೯॥**

---

ಎಂಬತ್ತೊಂಬತ್ತು ಲಕ್ಷದ ಐವತ್ತುಸಾವಿರ ಯೋಜನಗಳಿರುವುವು. ಇದು ಭೂಮಿಯ ಅರ್ಧದ ವಿಸ್ತಾರವೆಂದರಿಯಬೇಕು.

೧೫-೧೬. ಮೇಲೆ ಹೇಳಿದಂತೆ ಮೇರುಪರ್ವತದಿಂದ ಆಳೆಯದೆ ಸ್ವಾದೂದಕ ಸಮುದ್ರದ ಒಂದು ತುದಿಯಿಂದ ಮತ್ತೊಂದು ತುದಿಗೆ ಲೆಕ್ಕಮಾಡಿದರೆ ಇದರ ಎರಡರಷ್ಟು ಎಂದರೆ ಮೂರುಕೋಟಿ ಎಪ್ಪತ್ತೊಂಬತ್ತು ಲಕ್ಷ ಯೋಜನಗಳಾಗುತ್ತವೆ. ಇದು ಏಳು ದ್ವೀಪಗಳಿಂದಲೂ ಏಳು ಸಮುದ್ರಗಳಿಂದಲೂ ಕೂಡಿದ ಭೂಮಿಯ ಅಂತರ್ವಲಯದ ವ್ಯಾಸ ಅಥವಾ ಅಡ್ಡಳತೆ.

೧೭-೧೮. ಈ ಅಂತರ್ವಲಯದ ಸುತ್ತಳತೆ ಹಿಂದೆ ಹೇಳಿದ ವ್ಯಾಸ ಪ್ರಮಾಣದ ಮೂರರಷ್ಟಿದೆ. ಎಂದರೆ ಹನ್ನೊಂದು ಕೋಟಿ ಮೂವತ್ತೇಳು ಲಕ್ಷ ಯೋಜನಗಳೆಂದಾಯಿತು. ಇದು ಭೂಮಿಯ ಒಳಸುತ್ತಿನ ಸುತ್ತಳತೆ.

೧೯. ಅಂತರಿಕ್ಷದಲ್ಲಿ ನಕ್ಷತ್ರಮಂಡಲದ ಸನ್ನಿವೇಶವು ಎಷ್ಟಿರುವುದೋ ಸಂಪೂರ್ಣವಾದ ಭೂಮಂಡಲದ ಸನ್ನಿವೇಶವೂ ಅಷ್ಟೇ ಇರುವುದು. ಅಂತರಿಕ್ಷ ಮಂಡಲದ ವ್ಯಾಸವೂ ಪರಿಧಿಯೂ ಭೂಮಿಯ ವ್ಯಾಸಪರಿಧಿಗಳಷ್ಟೇ ಇವೆ.

**ಪರ್ಯಾಸಪರಿಮಾಣಂ ಚ ಭೂಮೇಸ್ತುಲ್ಯಂ ದಿವಃ ಸ್ಮೃತಂ ।**
**ಮೇರೋಃ ಪ್ರಾಚ್ಯಾಂ ದಿಶಾಯಾಂ ತು ಮಾನಸೋತ್ತರಮೂರ್ಧನಿ ॥೨೦॥**

**ವಸ್ತ್ವೋಕಸಾರಾ ಮಾಹೇಂದ್ರೀ ಪುಣ್ಯಾ ಹೇಮಪರಿಷ್ಕೃತಾ ।**
**ದಕ್ಷಿಣೇನ ಪುನರ್ಮೇರೋರ್ಮಾನಸಸ್ಯ ತು ಪೃಷ್ಠತಃ ॥೨೧॥**

**ವೈವಸ್ವತೋ ನಿವಸತಿ ಯಮಃ ಸಂಯಮನೇ ಪುರೇ ।**
**ಪ್ರತೀಚ್ಯಾಂ ತು ಪುನರ್ಮೇರೋರ್ಮಾನಸಸ್ಯ ತು ಮೂರ್ಧನಿ ॥೨೨॥**

**ಸುಷಾ ನಾಮ ಪುರೀ ರಮ್ಯಾ ವರುಣಸ್ಯಾಪಿ ಧೀಮತಃ ।**
**ದಿಶ್ಯುತ್ತರಸ್ಯಾಂ ಮೇರೋಸ್ತು ಮಾನಸಸ್ಯೈವ ಮೂರ್ಧನಿ ॥೨೩॥**

**ತುಲ್ಯಾ ಮಹೇಂದ್ರಪುರ್ಯಾಪಿ ಸೋಮಸ್ಯಾಪಿ ವಿಭಾವರೀ ।**
**ಮಾನಸೋತ್ತರಪೃಷ್ಠೇ ತು ಲೋಕಪಾಲಾಶ್ಚತುರ್ದಿಶಂ ॥೨೪॥**

---

೨೦. ಮೇರುಪರ್ವತಕ್ಕೆ ಪೂರ್ವದಿಕ್ಕಿನಲ್ಲಿ ಮಾನಸೋತ್ತರಪರ್ವತದ ಮೇಲೆ ವಸ್ತ್ವೋಕಸಾರವೆಂಬ ದೇವೇಂದ್ರನ ಪಟ್ಟಣವಿದೆ. ಅದು ಪವಿತ್ರವಾದುದು ; ಮತ್ತು ಸುವರ್ಣಾಲಂಕೃತವಾದುದು.

೨೧. ಮೇರುಪರ್ವತಕ್ಕೆ ದಕ್ಷಿಣದಲ್ಲಿ ಮಾನಸಪರ್ವತದ ಮೇಲೆ ಸಂಯಮನಪಟ್ಟಣವಿದೆ. ಅಲ್ಲಿ ಸೂರ್ಯಪುತ್ರನಾದ ಯಮನು ವಾಸಿಸುತ್ತಾನೆ.

೨೨. ಮೇರುವಿನ ಪಶ್ಚಿಮದಲ್ಲಿ ಅದೇ ಮಾನಸಪರ್ವತದ ಮೇಲ್ಗಡೆ ಸುಷೆಯೆಂಬ ರಮ್ಯವಾದ ನಗರವಿದೆ. ಅದು ಸರ್ವಜ್ಞನಾದ ವರುಣನ ರಾಜಧಾನಿ.

೨೩. ಮೇರುಪರ್ವತಕ್ಕೆ ಉತ್ತರದಲ್ಲಿ ಮಾನಸೋತ್ತರಪರ್ವತದ ಮೇಲೆಯೇ ವಿಭಾವರಿಯೆಂಬ ಮನೋಹರವಾದ ಮತ್ತೊಂದು ಪಟ್ಟಣವಿದೆ. ಅದು ಚಂದ್ರನ ವಾಸಸ್ಥಳ.

೨೪. ಮಾನಸೋತ್ತರಪರ್ವತದ ಮೇಲೆ ನಾಲ್ಕು ದಿಕ್ಕಿನಲ್ಲಿಯೂ ಲೋಕಪಾಲಕರು ಧರ್ಮವ್ಯವಸ್ಥೆಗಾಗಿಯೂ ಲೋಕರಕ್ಷಣೆಗಾಗಿಯೂ ನೆಲೆಸಿರುವರು.

**ಸ್ಥಿತಾ ಧರ್ಮವ್ಯವಸ್ಥಾರ್ಥಂ ಲೋಕಸಂರಕ್ಷಣಾಯ ಚ ।**
**ಲೋಕಪಾಲೋಪರಿಷ್ಟಾತ್ತು ಸರ್ವತೋ ದಕ್ಷಿಣಾಯನೇ ॥೨೫॥**

**ಕಾಷ್ಠಾಗತಸ್ಯ ಸೂರ್ಯಸ್ಯ ಗತಿಸ್ತತ್ರ ನಿಬೋಧತ ।**
**ದಕ್ಷಿಣೋಪಕ್ರಮೇ ಸೂರ್ಯಃ ಕ್ಷಿಪ್ತೇಷುರಿವ ಸರ್ಪತಿ ॥೨೬॥**

**ಜ್ಯೋತಿಷಾಂ ಚಕ್ರಮಾದಾಯ ಸತತಂ ಪರಿಗಚ್ಛತಿ ।**
**ಮಧ್ಯಮಶ್ಚಾಮರಾವತ್ಯಾಂ ಯದಾ ಭವತಿ ಭಾಸ್ಕರಃ ॥೨೭॥**

**ವೈವಸ್ವತೇ ಸಂಯಮನೇ ಉದ್ಯನ್ ಸೂರ್ಯಃ ಪ್ರದೃಶ್ಯತೇ ।**
**ಸುಷಾಯಾಮರ್ಧರಾತ್ರಸ್ತು ವಿಭಾವರ್ಯಾಸ್ತಮೇತಿ ಚ ॥೨೮॥**

**ವೈವಸ್ವತೇ ಸಂಯಮನೇ ಮಧ್ಯಾಹ್ನೇ ತು ರವಿರ್ಯದಾ ।**
**ಸುಷಾಯಾಮಥ ವಾರುಣ್ಯಾಮುತ್ತಿಷ್ಠನ್ ಸ ತು ದೃಶ್ಯತೇ ॥೨೯॥**

---

೨೫. ದಕ್ಷಿಣಾಯನದಲ್ಲಿ ಸೂರ್ಯನು ಲೋಕಪಾಲಕರ ವಸತಿಗಳ ಮೇಲ್ಗಡೆ ಎಲ್ಲಕಡೆಯೂ ಸಂಚರಿಸುವನು. ಅವನ ಗತಿಯ ರೀತಿಯನ್ನು ಹೇಳುವೆನು ಕೇಳಿರಿ.

೨೬. ದಕ್ಷಿಣಾಯನದ ಪ್ರಾರಂಭದಲ್ಲಿ ಸೂರ್ಯನು ಬಿಲ್ಲಿನಿಂದ ಬಿಟ್ಟ ಬಾಣ ದಂತೆ ತನ್ನ ಗುರಿಗೆ ನೇರವಾಗಿ ಹೊರಡುತ್ತಾನೆ. ಅವನು ತನ್ನ ಸಂಗಡ ಜ್ಯೋತಿಶ್ಚಕ್ರವನ್ನು ಒಯ್ಯುತ್ತ ಎಡೆಬಿಡದೆ ತಿರುಗುವನು.

೨೭-೨೮. ಇಂದ್ರನ ಅಮರಾವತಿಯಲ್ಲಿ ಸೂರ್ಯನು ನಡುನೆತ್ತಿಗೆ ಬಂದಾಗ, ಸಂಯಮನ ಪಟ್ಟಣದಲ್ಲಿ ಸೂರ್ಯೋದಯವಾಗುವಂತೆ ಕಾಣುವುದು. ಆಗ ವಿಭಾವರಿಯಲ್ಲಿ ಸೂರ್ಯಾಸ್ತಮಯವೂ, ಸುಷೆಯಲ್ಲಿ ಅರ್ಧರಾತ್ರಿಯೂ ಆಗಿರುವುವು.

೨೯. ಯಮನ ಸಂಯಮನನಗರಿಯಲ್ಲಿ ಸೂರ್ಯನು ನೆತ್ತಿಯ ಮೇಲಕ್ಕೆ ಬಂದಾಗ, ವರುಣನ ಪಟ್ಟಣವಾದ ಸುಷೆಯಲ್ಲಿ ಅವನು ಉದಿಸುತ್ತಿರುವಂತೆ ಕಾಣುವನು. ವಿಭಾವರಿಯಲ್ಲಿ ಆಗ ನಡುರಾತ್ರಿಯೂ, ಅಮರಾವತಿಯ.ಲ್ಲಿ ಅಸ್ತಮಯವೂ ಆಗಿರುವುವು.

ವಿಭಾವರ್ಯಾಮರ್ಧರಾತ್ರಂ ಮಾಹೇಂದ್ರ್ಯಾಮಸ್ತಮೇತಿ ಚ ।
ಮಹೇಂದ್ರಸ್ಯಾಮರಾವತ್ಯಾಂ ಮಧ್ಯಾಹ್ನೇ ತು ರವಿರ್ಯದಾ ॥೩೦॥

ವಿಭಾವರ್ಯಾಂ ಸೋಮಪುರ್ಯಾಮುತ್ತಿಷ್ಠತಿ ವಿಭಾವಸುಃ ।
ಮಹೇಂದ್ರಸ್ಯಾಮರಾವತ್ಯಾಮುದ್ಗಚ್ಛತಿ ದಿವಾಕರಃ ॥೩೧॥

ಅರ್ಧರಾತ್ರಂ ಸಂಯಮನೇ ವಾರುಣ್ಯಾಮಸ್ತಮೇತಿ ಚ ।
ಸ ಶೀಘ್ರಮೇವ ಪರ್ಯೇತಿ ಭಾನುರಾಲಾತಚಕ್ರವತ್ ॥೩೨॥

ಭ್ರಮನ್ವೈ ಭ್ರಮಮಾಣಾನಿ ಋಕ್ಷಾಣಿ ಚರತೇ ರವಿಃ ।
ಏವಂ ಚತುರ್ಷು ಪಾರ್ಶ್ವೇಷು ದಕ್ಷಿಣಾಂತೇಷು ಸರ್ಪತಿ ॥೩೩॥

ಉದಯಾಸ್ತಮಯೇ ವಾಽಸಾವುತ್ತಿಷ್ಠತಿ ಪುನಃ ಪುನಃ ।
ಪೂರ್ವಾಹ್ಣೇ ಚಾಪರಾಹ್ಣೇ ಚ ದ್ವೌ ತು ದೇವಾಲಯೌ ತು ಸಃ ॥೩೪॥

ತಪತ್ಯೇಕಂ ತು ಮಧ್ಯಾಹ್ನೇ ಭಾಭಿರೇವ ಚ ರಶ್ಮಿಭಿಃ ।
ಉದಿತೋ ವರ್ಧಮಾನಾಭಿರ್ಮಧ್ಯಾಹ್ನೇ ತಪತೇ ರವಿಃ ॥೩೫॥

---

೩೦. ಮಹೇಂದ್ರನ ಅಮರಾವತಿಯಲ್ಲಿ ಸೂರ್ಯನು ನಡುಹಗಲಿನಲ್ಲಿದ್ದಾಗ ಚಂದ್ರನ ಪಟ್ಟಣವಾದ ವಿಭಾವರಿಯಲ್ಲಿ ಆತನು ಉದಿಸುತ್ತಿರುವಂತೆ ತೋರುವನು.

೩೧. ಇಂದ್ರನ ಅಮರಾವತಿಯಲ್ಲಿ ಸೂರ್ಯೋದಯವಾದಾಗ ಸಂಯಮನ ನಗರದಲ್ಲಿ ನಡುರಾತ್ರಿಯೂ, ಸುಷೆಯಲ್ಲಿ ಸೂರ್ಯಾಸ್ತಮಯವೂ ಆಗುವುವು.

೩೨-೩೩. ಸೂರ್ಯನು ಉರಿಗೊಳ್ಳಿಯ ಚಕ್ರದಂತೆ ಬೇಗಬೇಗನೆ ತಿರುಗುತ್ತಿರುವನು. ಅವನು ತಾನೂ ತಿರುಗುತ್ತ ತಿರುಗುತ್ತಿರುವ ನಕ್ಷತ್ರಗಳನ್ನೂ ಸುತ್ತುವನು. ಹೀಗೆ ಪೂರ್ವದಿಂದ ಪ್ರಾರಂಭಿಸಿ ಪ್ರದಕ್ಷಿಣವಾಗಿ ನಾಲ್ಕು ಪಾರ್ಶ್ವಗಳಲ್ಲಿಯೂ ಅವನು ಸಂಚರಿಸುವನು.

೩೪-೩೫. ಸೂರ್ಯನು ಉದಿಸಿದ ಬಳಿಕ ಮುಳುಗುವನು. ಮತ್ತೆ ಮತ್ತೆ ಹುಟ್ಟುವನು. ಅವನು ಪೂರ್ವಾಹ್ಣದಲ್ಲಿಯೂ ಅಪರಾಹ್ಣದಲ್ಲಿಯೂ ಲೋಕಪಾಲಕರ ಪಟ್ಟಣಗಳಲ್ಲಿ ಎರಡನ್ನೂ, ಮಧ್ಯಾಹ್ನದಲ್ಲಿ ಒಂದನ್ನೂ ತನ್ನ ಕಾಂತಿಯಿಂದಲೂ ಕಿರಣಗಳಿಂದಲೂ ಬೆಳಗುವನು. ಉದಯಾನಂತರ ಅವನ ಕಿರಣಗಳು ದೀರ್ಘವಾಗುತ್ತವೆ. ಮಧ್ಯಾಹ್ನದಲ್ಲಿ ಆತನು ವಿಶೇಷವಾಗಿ ತಾಪವನ್ನು ಹುಟ್ಟಿಸುತ್ತಾನೆ.

ಅತಃ ಪರಂ ಹ್ರಸಂತೀಭಿರ್ಗೋಭಿರಸ್ತಂ ಸ ಗಚ್ಛತಿ ।
ಉದಯಾಸ್ತಮಯಾಭ್ಯಾಂ ಚ ಸ್ಮೃತೇ ಪೂರ್ವಾಪರೇ ತು ವೈ ॥೩೬॥

ಯದ್ವತ್ಪುರಸ್ತಾತ್ತಪತಿ ತದ್ವತ್ಪೃಷ್ಠೇ ತು ಪಾರ್ಶ್ವಯೋಃ ।
ಯತ್ರೋದಯಸ್ತು ದೃಶ್ಯೇತ ತೇಷಾಂ ಸ ಉದಯಃ ಸ್ಮೃತಃ ॥೩೭॥

ಪ್ರಣಾಶಂ ಗಚ್ಛತೇ ಯತ್ರ ತೇಷಾಮಸ್ತಃ ಸ ಉಚ್ಯತೇ ।
ಸರ್ವೇಷಾಮುತ್ತರೇ ಮೇರುರ್ಲೋಕಾಲೋಕಸ್ತು ದಕ್ಷಿಣೇ ॥೩೮॥

ವಿದೂರಭಾವಾದರ್ಕಸ್ಯ ಭೂಮೇರ್ಲೋಕಾಗತಸ್ಯ ಚ ।
ಹ್ರಿಯಂತೇ ರಶ್ಮಯೋ ಯಸ್ಮಾತ್ತೇನ ರಾತ್ರೌ ನ ದೃಶ್ಯತೇ ॥೩೯॥

ಊರ್ಧ್ವಂ ಶತಸಹಸ್ರಾಂಶುಃ ಸ್ಥಿತಸ್ತತ್ರ ಪ್ರದೃಶ್ಯತೇ ।
ಏವಂ ಪುಷ್ಕರಮಧ್ಯೇ ತು ಯದಾ ಭವತಿ ಭಾಸ್ಕರಃ ॥೪೦॥

---

೩೬. ತರುವಾಯ ಕಿರಣಗಳು ಹ್ರಸ್ವವಾಗುತ್ತ ಬಂದು ಅವನು ಮುಳುಗುವನು. ಅವನ ಉದಯ ಮತ್ತು ಅಸ್ತಮಯಗಳಿಂದ ಕ್ರಮವಾಗಿ ಪೂರ್ವಪಶ್ಚಿಮ ದಿಕ್ಕುಗಳು ಏರ್ಪಟ್ಟಿರುವುವು.

೩೭. ಮುಂಭಾಗದಲ್ಲಿ ಹೇಗೋ ಹಾಗೆಯೇ ಹಿಂಭಾಗದಲ್ಲಿಯೂ ಎಡಬಲ ಭಾಗಗಳಲ್ಲಿಯೂ ಅವನು ಬೆಳಗುವನು. ಸೂರ್ಯೋದಯವು ಯಾರಿಗೆ ಯಾವ ಕಡೆ ಕಾಣಬರುತ್ತದೆಯೋ ಆ ಜನರಿಗೆ ಅದೇ ಪೂರ್ವದಿಕ್ಕೆಂದು ತಿಳಿಯಬೇಕು.

೩೮. ಎಲ್ಲಿ ಅವನು ಮರೆಯಾಗುವನೋ ಅದೇ ಅವರಿಗೆ ಪಶ್ಚಿಮವೆನಿಸುವುದು. ಎಲ್ಲಕ್ಕೂ ಉತ್ತರದಲ್ಲಿ ಮೇರುಪರ್ವತವೂ, ದಕ್ಷಿಣದಲ್ಲಿ ಲೋಕಾಲೋಕ ಪರ್ವತವೂ ಇರುವುವು.

೩೯. ಸೂರ್ಯನು ಲೋಕಾಲೋಕಪರ್ವತದ ಬಳಿಗೆ ಬರುವ ವೇಳೆಗೆ ಭೂಮಿಗೆ ಬಹಳ ದೂರವಾಗುವನು. ಅವನ ಕಿರಣಗಳು ಭೂಮಿಗೆ ಬೀಳದಂತಾಗುವುವು. ಆದಕಾರಣ ಅವನು ರಾತ್ರಿಯಲ್ಲಿ ಕಾಣಿಸುವುದಿಲ್ಲ.

೪೦. ಹೀಗೆಯೇ ಪುಷ್ಕರದ್ವೀಪದ ಮಧ್ಯಭಾಗಕ್ಕೆ ಸೂರ್ಯನು ಬಂದಾಗ ಅವನು ಲಕ್ಷೋಪಲಕ್ಷ ಕಿರಣಗಳಿಂದ ಕೂಡಿ ಮೇಲ್ಗಡೆಯಲ್ಲಿರುವಂತೆ ಕಾಣಿಸುವನು.

ತ್ರಿಂಶದ್ಭಾಗಂ ಚ ಮೇದಿನ್ಯಾ ಮುಹೂರ್ತೇನ ಸ ಗಚ್ಛತಿ ।
ಯೋಜನಾನಾಂ ಸಹಸ್ರಸ್ಯ ಇಮಾಂ ಸಂಖ್ಯಾಂ ನಿಬೋಧತ ॥೪೧॥

ಪೂರ್ಣಂ ಶತಸಹಸ್ರಾಣಾಮೇಕತ್ರಿಂಶಚ್ಚ ಸಾ ಸ್ಮೃತಾ ।
ಪಂಚಾಶಚ್ಚ ಸಹಸ್ರಾಣಿ ತಥಾನ್ಯಾನ್ಯಧಿಕಾನಿ ಚ ॥೪೨॥

ಮೌಹೂರ್ತಿಕೀ ಗತಿರ್ಹ್ಯೇಷಾ ಸೂರ್ಯಸ್ಯ ತು ವಿಧೀಯತೇ ।
ಏತೇನ ಕ್ರಮಯೋಗೇನ ಯದಾ ಕಾಷ್ಠಾಂ ತು ದಕ್ಷಿಣಾಂ ॥೪೩॥

ಪರಿಗಚ್ಛತಿ ಸೂರ್ಯೋಽಸೌ ಮಾಸಂ ಕಾಷ್ಠಾಮುದಗ್ದಿನಾತ್ ।
ಮಧ್ಯೇನ ಪುಷ್ಕರಸ್ಯಾಥ ಭ್ರಮತೇ ದಕ್ಷಿಣಾಯನೇ ॥೪೪॥

ಮಾನಸೋತ್ತರಮೇರೋಸ್ತು ಅಂತರಂ ತ್ರಿಗುಣಂ ಸ್ಮೃತಂ ।
ಸರ್ವತೋ ದಕ್ಷಿಣಸ್ಯಾಂ ತು ಕಾಷ್ಠಾಯಾಂ ತನ್ನಿಬೋಧತ ॥೪೫॥

---

೪೧. ಒಂದು ಮುಹೂರ್ತಕ್ಕೆ ಎಂದರೆ ಎರಡು ಗಳಿಗೆಗೆ ಅವನು ಭೂಮಿಯ ಪರಿಮಾಣದ ಮೂವತ್ತರಲ್ಲೊಂದು ಭಾಗದಷ್ಟು ದೂರ ಸಂಚರಿಸುವನು. ಇದು ಸಾವಿರಗಟ್ಟಲೆ ಯೋಜನಗಳಾದಂತಾಯಿತು. ಇದರ ಲೆಕ್ಕವನ್ನು ಕೇಳಿ.

೪೨. ಸೂರ್ಯನು ಒಂದು ಮುಹೂರ್ತಕಾಲದಲ್ಲಿ ಮೂವತ್ತೊಂದುಲಕ್ಷದ ಐವತ್ತುಸಾವಿರ ಯೋಜನಗಳ ದೂರ ಸಂಚರಿಸುತ್ತಾನೆ. ಇದನ್ನು ಮುಹೂರ್ತಗತಿಯೆನ್ನುವರು.

೪೩-೪೪. ಈ ಕ್ರಮದಲ್ಲಿ ಸಂಚರಿಸುತ್ತ ಸೂರ್ಯನು ದಕ್ಷಿಣದಿಕ್ಕಿಗೆ ಹೋಗುವನು. ಇದೇ ದಕ್ಷಿಣಾಯನ. ಉತ್ತರದಿಕ್ಕನ್ನು ಬಿಟ್ಟ ದಿವಸದಿಂದ ಒಂದು ತಿಂಗಳಲ್ಲಿ ಅವನು ಪುಷ್ಕರದ್ವೀಪದ ಮಧ್ಯದಲ್ಲಿರುವ ಮಾನಸೋತ್ತರ ಪರ್ವತದ ಮೇಲ್ಗಡೆಗೆ ಬರುವನು.

೪೫. ಮಾನಸೋತ್ತರಪರ್ವತಕ್ಕೂ ಮೇರುಪರ್ವತಕ್ಕೂ ನಡುವೆ ಸೂರ್ಯನು ಸಂಚರಿಸುವ ವಲಯಗಳು ಮೂರಿವೆ. ಅಂತರ್ವಲಯ, ಬಹಿರ್ವಲಯ ಮತ್ತು ಮಧ್ಯವಲಯಗಳೆಂದು ಅವುಗಳ ಹೆಸರು. ಎಲ್ಲಕ್ಕಿಂತಲೂ ದಕ್ಷಿಣದಲ್ಲಿರುವ ಮಂಡಲದ ಪರಿಮಾಣವನ್ನು ಕೇಳಿರಿ.

**ನವ ಕೋಟ್ಯಃ ಪ್ರಸಂಖ್ಯಾತಾ ಯೋಜನೈಃ ಪರಿಮಂಡಲಂ ।**
**ತಥಾ ಶತಸಹಸ್ರಾಣಿ ಚತ್ವಾರಿಂಶಚ್ಚ ಪಂಚ ಚ ॥೪೬॥**

**ಅಹೋರಾತ್ರಾತ್ಪತಂಗಸ್ಯ ಗತಿರೇಷಾ ವಿಧೀಯತೇ ।**
**ದಕ್ಷಿಣಾದಿಙ್ನಿವೃತ್ತೋಽಸೌ ವಿಷುವಸ್ಥೋ ಯದಾ ರವಿಃ ॥೪೭॥**

**ಕ್ಷೀರೋದಸ್ಯ ಸಮುದ್ರಸ್ಯೋತ್ತರತೋಽಪಿ ದಿಶಂ ಚರನ್ ।**
**ಮಂಡಲಂ ವಿಷುವಚ್ಚಾಪಿ ಯೋಜನೈಸ್ತನ್ನಿಬೋಧತ ॥೪೮॥**

**ತಿಸ್ರಃ ಕೋಟ್ಯಸ್ತು ಸಂಪೂರ್ಣಾ ವಿಷುವಸ್ಯಾಪಿ ಮಂಡಲಂ ।**
**ತಥಾ ಶತಸಹಸ್ರಾಣಿ ವಿಂಶತ್ಯೇಕಾಧಿಕಾನಿ ತು ॥೪೯॥**

**ಶ್ರಾವಣೇ ಚೋತ್ತರಾಂ ಕಾಷ್ಠಾಂ ಚಿತ್ರಭಾನುರ್ಯದಾ ಭವೇತ್ ।**
**ಗೋಮೇದಸ್ಯ ಪರದ್ವೀಪೇ ಉತ್ತರಾಂ ಚ ದಿಶಂ ಚರನ್ ॥೫೦॥**

---

೪೬. ಈ ಬಹಿರ್ವಲಯದ ಅಥವಾ ದಕ್ಷಿಣಮಂಡಲದ ಸುತ್ತಳತೆ ಒಂಬತ್ತು ಕೋಟಿ ನಲವತ್ತೈದುಲಕ್ಷ ಯೋಜನಗಳಾಗುವುವು. ಒಂದು ಹಗಲು ಮತ್ತು ರಾತ್ರಿಯಲ್ಲಿ ಸೂರ್ಯನು ಇಷ್ಟು ದೂರ ತಿರುಗುವನು.

೪೭-೪೮. ದಕ್ಷಿಣದಿಕ್ಕಿನಿಂದ ಹಿಂದಿರುಗಿ, ಉತ್ತರದ ಕಡೆಗೆ ಸಂಚರಿಸುತ್ತ ಕ್ಷೀರಸಮುದ್ರದ ಮೇಲ್ಗಡೆಗೆ ಬಂದಾಗ, ಸೂರ್ಯನು ಮಧ್ಯವಲಯವನ್ನು ಎಂದರೆ ವಿಷುವನ್ಮಂಡಲವನ್ನು ಸೇರುವನು. ಇದರ ಪ್ರಮಾಣವನ್ನು ಯೋಜನದ ಲೆಕ್ಕದಲ್ಲಿ ಹೇಳುವೆನು ಕೇಳಿ.

೪೯. ವಿಷುವಮಂಡಲದ ಪರಿಮಾಣವು ಮೂರುಕೋಟಿ ಇಪ್ಪತ್ತೊಂದು ಲಕ್ಷ ಯೋಜನವಿರುವುದೆಂದು ತಿಳಿಯಬೇಕು.

೫೦. ವಿಷುವಮಂಡಲವನ್ನು ಬಿಟ್ಟು ಉತ್ತರದಿಕ್ಕಿಗೆ ಸಂಚರಿಸುತ್ತ ಸೂರ್ಯನು ಶ್ರವಣನಕ್ಷತ್ರವನ್ನು ಸೇರುವ ವೇಳೆಗೆ ಅವನು ಗೋಮೇದದ್ವೀಪದ ಉತ್ತರಾರ್ಧದಲ್ಲಿರುವನು. ಉತ್ತರದಿಕ್ಕಿನ ಈ ವಲಯದ ಪ್ರಮಾಣವನ್ನು ಅರಿಯಿರಿ. (ಇದು ಒಂದು ಕೋಟಿ ಎಂಬತ್ತುಲಕ್ಷದ ಐವತ್ತೆಂಟು ಸಾವಿರ ಯೋಜನವೆಂದು ಪುರಾಣಾಂತರಗಳಲ್ಲಿ ಹೇಳಿದೆ.)

ಉತ್ತರಾಯಾಃ ಪ್ರಮಾಣಂ ತು ಕಾಷ್ಠಾಯಾ ಮಂಡಲಸ್ಯ ತು ।
ದಕ್ಷಿಣೋತ್ತರಮಧ್ಯಾನಿ ತಾನಿ ವಿಂದ್ಯಾದ್ಯಥಾಕ್ರಮಂ ॥೫೧॥

ಸ್ಥಾನಂ ಜರದ್ಗವಂ ಮಧ್ಯೇ ತಥೈರಾವತಮುತ್ತಮಂ ।
ವೈಶ್ವಾನರಂ ದಕ್ಷಿಣತೋ ನಿರ್ದಿಷ್ಟಮಿಹ ತತ್ತ್ವತಃ ॥೫೨॥

ನಾಗವೀಥ್ಯುತ್ತರಾ ವೀಥೀ ಹ್ಯಜವೀಥಿಸ್ತು ದಕ್ಷಿಣಾ ।
ಉಭೇ ಆಷಾಢಮೂಲಂ ತು ಅಜವೀಥ್ಯಾದಯಸ್ತ್ರಯಃ ॥೫೩॥

ಅಭಿಜಿತ್ಪೂರ್ವತಃ ಸ್ವಾತಿಂ ನಾಗವೀಥ್ಯುತ್ತರಾಸ್ತ್ರಯಃ ।
ಅಶ್ವಿನೀ ಕೃತ್ತಿಕಾ ಯಾಮ್ಯಾ ನಾಗವೀಥ್ಯಸ್ತ್ರಯಃ ಸ್ಮೃತಾಃ ॥೫೪॥

ರೋಹಿಣ್ಯಾದ್ರಾರ್ಮೃಗಶಿರೋ ನಾಗವೀಥಿರಿತಿ ಸ್ಮೃತಾ ।
ಪುಷ್ಯಾಶ್ಲೇಷಾಪುನರ್ವಸ್ವೋರ್ವೀಥೀ ಚೈರಾವತೀ ಸ್ಮೃತಾ ॥೫೫॥

---

೫೧-೫೨. ಮೇಲೆ ಹೇಳಿದ ಮೂರು ಮಾರ್ಗಗಳನ್ನೇ ಕ್ರಮವಾಗಿ ದಕ್ಷಿಣ ಮಾರ್ಗ, ಉತ್ತರಮಾರ್ಗ ಮತ್ತು ಮಧ್ಯಮಾರ್ಗಗಳೆನ್ನುವರು. ಇವುಗಳಲ್ಲಿ ಮಧ್ಯ ಸ್ಥಾನಕ್ಕೆ ಜರದ್ಗವವೆಂದೂ, ಉತ್ತರಸ್ಥಾನಕ್ಕೆ ಐರಾವತವೆಂದೂ, ದಕ್ಷಿಣಸ್ಥಾನಕ್ಕೆ ವೈಶ್ವಾನರವೆಂದೂ ನಾಮಾಂತರವುಂಟು.

೫೩. ಸೂರ್ಯನು ನಾಗವೀಧಿ, ಅಜವೀಧಿ ಮೊದಲಾದ ಬೀದಿಗಳಲ್ಲಿ ಸಂಚರಿಸುವನು. ಮೂಲ, ಪೂರ್ವಾಷಾಢ, ಉತ್ತರಾಷಾಡ ಹೀಗೆ ಮೂರು ಮೂರು ನಕ್ಷತ್ರಗಳು ಸೇರಿ ಅಜವೀಧಿ ಮೊದಲಾದ ವೀಧಿಗಳಾಗಿರುವುವು. ಉತ್ತರದ ಬೀದಿಗೆ ನಾಗವೀಥಿಯೆಂದೂ, ದಕ್ಷಿಣದ ಬೀದಿಗೆ ಅಜವೀಥಿಯೆಂದೂ ಹೆಸರು. ಅಭಿಜಿತ್, ಪೂರ್ವಾಭಾದ್ರೆ, ಸ್ವಾತಿ ಈ ಮೂರು ನಕ್ಷತ್ರಗಳೂ ಉತ್ತರದ ನಾಗವೀಧಿಗೆ ಸೇರಿದುದು.

೫೪-೫೫. ಅಶ್ವಿನಿ, ಭರಣಿ ಮತ್ತು ಕೃತ್ತಿಕೆಗಳೆಂಬ ಮೂರು ನಕ್ಷತ್ರಗಳೂ, ನಾಗವೀಧಿಯ ನಕ್ಷತ್ರಗಳೆನಿಸುವುವು. ಹೀಗೆಯೇ ರೋಹಿಣಿ, ಆರ್ದ್ರೆ ಮತ್ತು ಮೃಗಶಿರೆಗಳೂ, ಪುನರ್ವಸು, ಪುಷ್ಯ ಮತ್ತು ಆಶ್ಲೇಷೆಗಳೂ ಐರಾವತಿಯ ಅಥವಾ ನಾಗವೀಧಿಯ ಉದಯ ನಕ್ಷತ್ರಗಳು. ಮೂರು ನಕ್ಷತ್ರಗಳಿಗೆ ಒಂದರಂತೆ ಮೇಲೆ ಹೇಳಿದ ಒಂಬತ್ತು ನಕ್ಷತ್ರಗಳಿಂದ ಏರ್ಪಟ್ಟ ಈ ಮೂರು ವೀಥಿಗಳೂ ಉತ್ತರ ಮಾರ್ಗಕ್ಕೆ ಸಂಬಧಪಟ್ಟುವು.

ತಿಸ್ರಸ್ತು ವೀಥಯೋ ಹ್ಯೇತಾ ಉತ್ತರೋ ಮಾರ್ಗ ಉಚ್ಯತೇ ।
ಪೂರ್ವೋತ್ತರಾ ಚ ಫಲ್ಗುನ್ಯೌ ಮಘಾ ಚೈವಾರ್ಷಭೀ ಭವೇತ್ ॥೫೬॥

ಪೂರ್ವೋತ್ತರಪ್ರೋಷ್ಠಪದೌ ಗೋವೀಥೀ ರೇವತೀ ಸ್ಮೃತಾ ।
ಶ್ರವಣಂ ಚ ಧನಿಷ್ಠಾ ಚ ವಾರುಣಂ ಚ ಜರದ್ಗವಂ ॥೫೭॥

ಏತಾಸ್ತು ವೀಥಯಸ್ತಿಸ್ರೋ ಮಧ್ಯಮೋ ಮಾರ್ಗ ಉಚ್ಯತೇ ।
ಹಸ್ತಶ್ಚಿತ್ರಾ ತಥಾ ಸ್ವಾತೀ ಹ್ಯಜವೀಥಿರಿತಿ ಸ್ಮೃತಾ ॥೫೮॥

ಜ್ಯೇಷ್ಠಾ ವಿಶಾಖಾ ಮೈತ್ರಂ ಚ ಮೃಗವೀಥೀ ತಥೋಚ್ಯತೇ ।
ಮೂಲಂ ಪೂರ್ವೋತ್ತರಾಷಾಢೇ ವೀಥೀ ವೈಶ್ವಾನರೀ ಭವೇತ್ ॥೫೯॥

ಸ್ಮೃತಾಸ್ತಿಸ್ರಸ್ತು ವೀಥ್ಯಸ್ತಾ ಮಾರ್ಗೇ ವೈ ದಕ್ಷಿಣೇ ಪುನಃ ।
ಕಾಷ್ಠಯೋರಂತರಂ ಚೈತದ್ವಕ್ಷ್ಯತೇ ಯೋಜನೈಃ ಪುನಃ ॥೬೦॥

ಏತಚ್ಛತಸಹಸ್ರಾಣಾಮೇಕತ್ರಿಂಶತ್ತು ವೈ ಸ್ಮೃತಂ ।
ಶತಾನಿ ತ್ರೀಣಿ ಚಾನ್ಯಾನಿ ತ್ರಯಸ್ತ್ರಿಂಶತ್ತಥೈವ ಚ ॥೬೧॥

---

೫೬-೫೭. ಮಖೆ, ಪುಬ್ಬೆ, ಉತ್ತರೆ ಈ ಮೂರು ನಕ್ಷತ್ರಗಳು ಋಷಭ ವೀಥಿಗೆ ಸಂಬಂಧಿಸಿದುವು. ಪೂರ್ವಾಭಾದ್ರೆ, ಉತ್ತರಾಭಾದ್ರೆ ಮತ್ತು ರೇವತಿಗಳು ಗೋವೀಥಿಗೆ ಸೇರಿದುವು. ಶ್ರವಣ, ಧನಿಷ್ಠೆ ಮತ್ತು ಶತಭಿಷೆಗಳು ಜರದ್ಗವ ವೀಥಿಯುವು. ಈ ಮೂರು ಬೀದಿಗಳೂ ಮಧ್ಯಮಮಾರ್ಗದಲ್ಲಿರುವುವು.

೫೮-೫೯. ಹಸ್ತ, ಚಿತ್ತೆ, ಸ್ವಾತಿ ಇವು ಕೂಡಿ ಅಜವೀಥಿಯೆನಿಸುವುವು. ವಿಶಾಖೆ, ಅನೂರಾಧೆ, ಜ್ಯೇಷ್ಠೆ ಈ ಮೂರೂ ಮೃಗವೀಥಿಗೆ ಸೇರಿರುವುವು. ಮೂಲ, ಪೂರ್ವಾಷಾಢ, ಉತ್ತರಾಷಾಢ ಈ ನಕ್ಷತ್ರಗಳು ಒಟ್ಟುಗೂಡಿ ವೈಶ್ವಾನರವೀಥಿ ಯೆಂಬ ಹೆಸರನ್ನು ಪಡೆಯುವುವು. ಈ ಮೂರು ಬೀದಿಗಳೂ ದಕ್ಷಿಣಮಾರ್ಗದಲ್ಲಿ ಇರುವುವು.

೬೦-೬೧. ಇನ್ನು ಮುಂದೆ ಎರಡು ದಿಕ್ಕುಗಳ ಅಂತರವನ್ನು ಯೋಜನದ ಪ್ರಮಾಣದಲ್ಲಿ ಹೇಳುವೆನು ಕೇಳಿ. ಉತ್ತರಮಾರ್ಗಕ್ಕೂ ದಕ್ಷಿಣಮಾರ್ಗಕ್ಕೂ ಇರುವ ದೂರವು ಮೂವತ್ತೊಂದು ಲಕ್ಷದ ಮುನ್ನೂರ ಮೂವತ್ತಮೂರು ಯೋಜನಗಳೆಂದು ಪುರಾಣಗಳಲ್ಲಿ ಹೇಳಿವೆ.

ಕಾಷ್ಠಯೋರಂತರಂ ಹ್ಯೇತದ್ಯೋಜನಾನಾಂ ಪ್ರಕೀರ್ತಿತಂ ।
ಕಾಷ್ಠಯೋರ್ಲೇಖಯೋಶ್ಚೈವ ಅಯನೇ ದಕ್ಷಿಣೋತ್ತರೇ ॥೬೨॥

ತೇ ವಕ್ಷ್ಯಾಮಿ ಪ್ರಸಂಖ್ಯಾಯ ಯೋಜನೈಸ್ತು ನಿಬೋಧತ ।
ಏಕೈಕಮಂತರಂ ತದ್ವದ್ಯುಕ್ತಾನ್ಯೇತಾನಿ ಸಪ್ತಭಿಃ ॥೬೩॥

ಸಹಸ್ರೇಣಾತಿರಿಕ್ತಾ ಚ ತತೋಽನ್ಯಾ ಪಂಚವಿಂಶತಿಃ ।
ಲೇಖಯೋಃ ಕಾಷ್ಠಯೋಶ್ಚೈವ ಬಾಹ್ಯಾಭ್ಯಂತರಯೋಶ್ಚರನ್ ॥೬೪॥

ಅಭ್ಯಂತರಂ ಸ ಪರ್ಯೇತಿ ಮಂಡಲಾನ್ಯುತ್ತರಾಯಣೇ ।
ಬಾಹ್ಯತೋ ದಕ್ಷಿಣೇನೈವ ಸತತಂ ಸೂರ್ಯಮಂಡಲಂ ॥೬೫॥

ಚರನ್ನಸಾವುದೀಚ್ಯಾಂ ಚ ಹ್ಯಶೀತ್ಯಾ ಮಂಡಲಾಶ್ಶತಂ ।
ಅಭ್ಯಂತರಂ ಸ ಪರ್ಯೇತಿ ಭ್ರಮತೇ ಮಂಡಲಾನಿ ತು ॥೬೬॥

---

೬೨-೬೩. ದಕ್ಷಿಣಮಾರ್ಗ, ಮತ್ತು ಉತ್ತರಮಾರ್ಗಗಳಲ್ಲಿ ಕಾಷ್ಠಗಳಿಗೂ ರೇಖೆಗಳಿಗೂ ಇರುವ ಅಂತರವನ್ನು ಅಳತೆಮಾಡಿ ಯೋಜನಗಳ ಸಂಖ್ಯೆಯಲ್ಲಿ ಹೇಳುವೆನು ಕೇಳಿ. ಒಂದೊಂದು ರೇಖೆಗೂ ಅಂತರವು ಮೂವತ್ತೆರಡು ಸಾವಿರ ಯೋಜನವಿರುವುದು. (ಶಿಂಶುಮಾರವೆಂಬ ಕಾಲಚಕ್ರದಲ್ಲಿ ಹಲವು ರೇಖಾವಲಯ ಗಳಿರುವುವೆಂದೂ, ಸೂರ್ಯನು ಕ್ರಮವಾಗಿ ಅವುಗಳಲ್ಲಿ ಸಂಚರಿಸುವನೆಂದೂ ಹೇಳಿದೆ)

೬೪-೬೫. ಲೇಖೆಗಳ ಮತ್ತು ದಕ್ಷಿಣೋತ್ತರ ಮಾರ್ಗಗಳ ಒಳಗೂ ಹೊರಗೂ ಸೂರ್ಯನು ಸಂಚರಿಸುವನು. ಅವನು ಉತ್ತರಾಯಣದಲ್ಲಿ ಇವುಗಳ ಒಳಭಾಗದಲ್ಲಿ ಮಂಡಲಾಕಾರವಾಗಿ ಸುತ್ತುವನು. ದಕ್ಷಿಣಾಯನದಲ್ಲಿ ಇವುಗಳ ಹೊರಭಾಗದಲ್ಲಿ ಎಡೆಬಿಡದೆ ತಿರುಗುವನು.

೬೬. ಅವನು ಉತ್ತರದಿಕ್ಕಿನಲ್ಲಿ ಸಂಚರಿಸುವಾಗ ಒಂದುನೂರೆಂಬತ್ತು ರೇಖಾವಲಯಗಳ ಒಳಭಾಗದಲ್ಲಿ ಮಂಡಲಾಕಾರವಾಗಿ ತಿರುಗುವನು.

ಪ್ರಮಾಣಂ ಮಂಡಲಸ್ಯಾಪಿ ಯೋಜನಾನಾಂ ನಿಬೋಧತ ।
ಯೋಜನಾನಾಂ ಸಹಸ್ರಾಣಿ ದಶ ಚಾಷ್ಟೌ ತಥಾ ಸ್ಮೃತಂ ॥೬೭॥

ಅಧಿಕಾನ್ಯಷ್ಟಪಂಚಾಶದ್ಯೋಜನಾನಿ ತು ವೈ ಪುನಃ ।
ವಿಷ್ಕಂಭೋ ಮಂಡಲಸ್ಯೈವ ತಿರ್ಯಕ್ಸ ತು ವಿಧೀಯತೇ ॥೬೮॥

ಅಹ್ನಸ್ತು ಚರತೇ ನಾಭೇಃ ಸೂರ್ಯೋ ವೈ ಮಂಡಲಂ ಕ್ರಮಾತ್ ।
ಕುಲಚಕ್ರಪರ್ಯಂತೋ ಯಥಾ ಚಂದ್ರೋ ರವಿಸ್ತಥಾ ॥೬೯॥

ದಕ್ಷಿಣೇ ಚಕ್ರವತ್ಸೂರ್ಯಸ್ತಥಾ ಶೀಘ್ರಂ ನಿವರ್ತತೇ ।
ತಸ್ಮಾತ್ಪ್ರಕೃಷ್ಟಾಂ ಭೂಮಿಂ ತು ಕಾಲೇನಾಲ್ಪೇನ ಗಚ್ಛತಿ ॥೭೦॥

ಸೂರ್ಯೋ ದ್ವಾದಶಭಿಃ ಶೀಘ್ರಂ ಮುಹೂರ್ತೈರ್ದಕ್ಷಿಣಾಯನೇ ।
ತ್ರಯೋದಶಾರ್ಧಮೃಕ್ಷಾಣಾಂ ಮಧ್ಯೇ ಚರತಿ ಮಂಡಲಂ ॥೭೦॥

೬೭-೬೮. ಈ ಲೋಕಾಮಂಡಲದ ಪ್ರಮಾಣವನ್ನು ಯೋಜನಗಳ ಲೆಕ್ಕದಲ್ಲಿ ಹೇಳುವೆನು ಕೇಳಿ. ಇದು ಹದಿನೆಂಟುಸಾವಿರದ ಐವತ್ತೆಂಟು ಯೋಜನವೆಂದು ತಿಳಿಯಬೇಕು.

೬೮-೬೯. ಲೋಕಾಮಂಡಲವನ್ನು ಅಡ್ಡಡ್ಡಲಾಗಿ ಅಳೆದರೆ ಬರುವ ಅಂತರವೇ ಅದರ ವಿಷ್ಕಂಭ ಎಂದರೆ ವ್ಯಾಸವೆನಿಸುವುದು. ಒಂದೊಂದು ದಿನಕ್ಕೆ ಒಂದೊಂದು ವಲಯದಂತೆ ಸೂರ್ಯನು ಕ್ರಮವಾಗಿ ಇವುಗಳನ್ನು ದಾಟುತ್ತ ಬರುವನು. ಅವನು ಕುಂಬಾರನ ಚಕ್ರದಂತೆ ತಿರುಗುವನು. ಚಂದ್ರಸೂರ್ಯರಿಬ್ಬರ ಗಮನವೂ ಇದೇ ರೀತಿಯಾಗಿರುವುದು

೭೦. ದಕ್ಷಿಣದಿಕ್ಕಿನಲ್ಲಿ ಸಂಚರಿಸುವಾಗ ಸೂರ್ಯನು ಚಕ್ರದಂತೆ ಬಲು ವೇಗವಾಗಿ ತಿರುತಿರುಗಿ ಬಳಸುವನು. ಆದುದರಿಂದ ಹೆಚ್ಚು ಭೂಭಾಗವನ್ನು ಅವನು ಅಲ್ಪಕಾಲದಲ್ಲಿ ಸುತ್ತುವನು.

೭೧. ದಕ್ಷಿಣಾಯನದಲ್ಲಿ ಸಂಚರಿಸುವಾಗ ಸೂರ್ಯನು ಒಂದು ಹಗಲಿನಲ್ಲಿ ಹನ್ನೆರಡು ಮುಹೂರ್ತಗಳೊಳಗೆ ಹದಿಮೂರುವರೆ ನಕ್ಷತ್ರಗಳ ಪಥವನ್ನು ದಾಟಿ ಬಿಡುವನು.

ಮುಹೂರ್ತೈಸ್ತಾನಿ ಋಕ್ಷಾಣಿ ನಕ್ತಮಷ್ಟಾದಶೈಶ್ಚರೇತ್ ।
ಕುಲಾಲಚಕ್ರಮಧ್ಯಸ್ಥೋ ಯಥಾ ಮಂದಂ ಪ್ರಸರ್ಪತಿ ॥೭೨॥

ಉದಗ್ಯಾನೇ ತಥಾ ಸೂರ್ಯಃ ಸರ್ಪತೇ ಮಂದವಿಕ್ರಮಃ ।
ತಸ್ಮಾದ್ದೀರ್ಘೇಣ ಕಾಲೇನ ಭೂಮಿಂ ಸೋಽಲ್ಪಾಂ ಪ್ರಸರ್ಪತಿ ॥೭೩॥

ಸೂರ್ಯೋಽಷ್ಟಾದಶಭಿರಹ್ನೋ ಮುಹೂರ್ತೈರುದಗಾಯನೇ ।
ತ್ರಯೋದಶಾನಾಂ ಮಧ್ಯೇ ತು ಋಕ್ಷಾಣಾಂ ಚರತೇ ರವಿಃ ।
ಮುಹೂರ್ತೈಸ್ತಾನಿ ಋಕ್ಷಾಣಿ ರಾತ್ರೌ ದ್ವಾದಶಭಿಶ್ಚರೇತ್ ॥೭೪॥

ತತೋ ಮಂದತರಂ ನಾಭ್ಯಾಂ ಚಕ್ರಂ ತು ಭ್ರಮತೇ ಪುನಃ ।
ಮೃತ್ಪಿಂಡ ಇವ ಮಧ್ಯಸ್ಥೋ ಭ್ರಮತೇಽಸೌ ಧ್ರುವಸ್ತಥಾ ॥೭೫॥

೭೨. ಇನ್ನು ಉಳಿದ ನಕ್ಷತ್ರಗಳ ಪಥವನ್ನು ರಾತ್ರಿಯಲ್ಲಿ ದಾಟಿ ಬರಬೇಕಾದರೆ ಅವನಿಗೆ ಹದಿನೆಂಟು ಮುಹೂರ್ತಗಳ ಕಾಲ ಹಿಡಿಯುವುದು. ಕುಂಬಾರನ ಚಕ್ರದ ಮಧ್ಯದಲ್ಲಿರುವ ಗಡಿಗೆಯಂತೆ ಅವನು ನಿಧಾನವಾಗಿ ತಿರುಗುವನು

೭೩. ಹೀಗೆಯೇ ಉತ್ತರಾಯಣದಲ್ಲಿ ಅವನು ಮಂದಗತಿಯಿಂದ ಗಮಿಸುವನು. ಆದುದರಿಂದ ಅವನು ದೀರ್ಘಕಾಲ ಸಂಚರಿಸಿದರೂ ಸ್ವಲ್ಪ ಭೂಭಾಗವನ್ನು ಮಾತ್ರವೇ ಆಕ್ರಮಿಸುವನು.

೭೪. ಉತ್ತರಾಯಣದಲ್ಲಿ ಸೂರ್ಯನು ಹದಿನೆಂಟು ಮುಹೂರ್ತಗಳ ಕಾಲ ಹಗಲಿನಲ್ಲಿ ಸಂಚರಿಸಿ ಹದಿಮೂರು ನಕ್ಷತ್ರಗಳ ಸ್ಥಾನವನ್ನು ದಾಟುವನು. ಇನ್ನು ಉಳಿದ ನಕ್ಷತ್ರಗಳನ್ನು ಅವನು ರಾತ್ರಿಯಲ್ಲಿ ಹನ್ನೆರಡು ಮುಹೂರ್ತಗಳ ಕಾಲದಲ್ಲಿ ಅತಿಕ್ರಮಿಸುವನು.

೭೫. ಕುಂಬಾರನ ಚಕ್ರದ ನಾಭಿಸ್ಥಾನದಲ್ಲಿ ಇರುವ ಮಣ್ಣಿನ ಮುದ್ದೆಯಂತೆ ಜ್ಯೋತಿಶ್ಚಕ್ರದ ಮಧ್ಯದಲ್ಲಿ ಇರುವ ಧ್ರುವನು ಅತ್ಯಂತ ಮಂದಗತಿಯಿಂದ ತಿರುಗುವನು.

ಮುಹೂರ್ತೈಸ್ತ್ರಿಂಶತಾ ತಾವದಹೋರಾತ್ರಂ ಧ್ರುವೋ ಭ್ರಮನ್ ।
ಉಭಯೋಃ ಕಾಷ್ಠಯೋರ್ಮಧ್ಯೇ ಭ್ರಮತೇ ಮಂಡಲಾನಿ ತು ॥೨೬॥

ಉತ್ತರಕ್ರಮಣೇಽರ್ಕಸ್ಯ ದಿವಾ ಮಂದಗತಿಃ ಸ್ಮೃತಾ ।
ತಸ್ಯೈವ ತು ಪುನರ್ನಕ್ತಂ ಶೀಘ್ರಾ ಸೂರ್ಯಸ್ಯ ವೈ ಗತಿಃ ॥೨೭॥

ದಕ್ಷಿಣಪ್ರಕ್ರಮೇ ವಾಽಪಿ ದಿವಾ ಶೀಘ್ರಂ ವಿಧೀಯತೇ ।
ಗತಿಃ ಸೂರ್ಯಸ್ಯ ವೈ ನಕ್ತಂ ಮಂದಾ ಚಾಽಪಿ ವಿಧೀಯತೇ ॥೨೮॥

ಏವಂ ಗತಿವಿಶೇಷೇಣ ವಿಭಜನ್ ರಾತ್ರ್ಯಹಾನಿ ತು
ಅಜವೀಥ್ಯಾ ದಕ್ಷಿಣಾಯಾಂ ಲೋಕಾಲೋಕಸ್ಯ ಚೋತ್ತರಂ ॥೨೯॥

ಲೋಕಸಂತಾನತೋ ಹ್ಯೇಷ ವೈಶ್ವಾನರಪಥಾದ್ಬಹಿಃ ।
ವ್ಯುಷ್ಟಿರ್ಯಾವತ್ಪ್ರಭಾ ಸೌರೀ ಪುಷ್ಕರಾತ್ಸಂಪ್ರವರ್ತತೇ ॥೩೦॥

---

೨೬. ಈತನು ಹಗಲೂ ರಾತ್ರಿ ಮೂವತ್ತು ಮುಹೂರ್ತಗಳಲ್ಲಿ ತನ್ನ ಅಕ್ಷವನ್ನೇರಿ ತಾನೂ ತಿರುಗುತ್ತ, ದಕ್ಷಿಣೋತ್ತರ ದಿಕ್ಕುಗಳ ನಡುವೆ ಉಳಿದ ಜ್ಯೋತಿರ್ಮಂಡಲಗಳನ್ನೂ ತಿರುಗಿಸುತ್ತಾನೆ.

೨೭. ಉತ್ತರಾಯಣದಲ್ಲಿ ಸೂರ್ಯನು ಹಗಲುಹೊತ್ತು ನಿಧಾನವಾಗಿ ಸಂಚರಿಸುವನು. ರಾತ್ರಿಯಲ್ಲಾದರೋ ಅವನ ಗತಿ ತ್ವರಿತವಾಗುವುದು.

೨೮. ಹಾಗೆಯೇ ದಕ್ಷಿಣಾಯನದ ಪ್ರಾರಂಭದಿಂದ ಅವನ ಗಮನವು ಹಗಲಿನಲ್ಲಿ ಶೀಘ್ರವಾಗಿಯೂ, ರಾತ್ರಿಯಲ್ಲಿ ನಿಧಾನವಾಗಿಯೂ ಸಾಗುವುದು.

೨೯-೩೦. ದಕ್ಷಿಣಾಯನದಲ್ಲಿ ಈ ರೀತಿಯಾಗಿ ಸೂರ್ಯನು ರಾತ್ರಿಯಲ್ಲಿಯೂ ಹಗಲಿನಲ್ಲಿಯೂ ಮಂದತ್ವ ಶೀಘ್ರತ್ವಗಳೆಂಬ ಗತಿಭೇದದಿಂದ ಕೂಡಿ, ಅಜವೀಥಿಗೆ ದಕ್ಷಿಣದಲ್ಲಿಯೂ ಲೋಕಾಲೋಕಪರ್ವತಕ್ಕೆ ಉತ್ತರದಲ್ಲಿಯೂ ಸಂಚರಿಸುವನು. ಈ ಪರ್ವತವು ಸಪ್ತದ್ವೀಪಸಹಿತವಾದ ಭೂಮಿಯ ಅಂತರ್ವಲಯದ ಹೊರಗೆ, ವೈಶ್ವಾನರಪಥಕ್ಕೂ ಅತ್ತಕಡೆ ಇರುವುದು. ಪುಷ್ಕರದ್ವೀಪದಿಂದ ಹಿಡಿದು ಈ ಪರ್ವತದ ವರೆಗೆ ಸೂರ್ಯನ ಪ್ರಕಾಶವು ಹಗಲಿನಲ್ಲೆಲ್ಲ ಪೂರ್ಣವಾಗಿ ಬೀಳುವುದು.

ಪಾರ್ಶ್ವೇಭ್ಯೋ ಬಾಹ್ಯತಸ್ತ್ವಾಲೋಕಾಲೋಕಶ್ಚ ಪರ್ವತಃ ।
ಯೋಜನಾನಾಂ ಸಹಸ್ರಾಣಿ ದಶೋರ್ಧ್ವಂ ಚೋಚ್ಛ್ರಿತೋ ಗಿರಿಃ ॥೬೦॥

ಪ್ರಕಾಶಶ್ಚಾಪ್ರಕಾಶಶ್ಚ ಪರ್ವತಃ ಪರಿಮಂಡಲಃ ।
ನಕ್ಷತ್ರಚಂದ್ರಸೂರ್ಯಾಶ್ಚ ಗ್ರಹಾಸ್ತಾರಾಗಣೈಃ ಸಹ ॥೬೧॥

ಅಭ್ಯಂತರೇ ಪ್ರಕಾಶಂತೇ ಲೋಕಾಲೋಕಸ್ಯ ವೈ ಗಿರಿಃ ।
ಏತಾವಾನೇವ ಲೋಕಸ್ತು ನಿರಾಲೋಕಸ್ತತಃ ಪರಂ ॥೬೨॥

ಲೋಕ ಆಲೋಕನೇ ಧಾತುರ್ನಿರಾಲೋಕಸ್ತ್ವಲೋಕತಾ ।
ಲೋಕಾಲೋಕೌ ತು ಸಂಧತ್ತೇ ಯಸ್ಮಾತ್ಸೂರ್ಯಃ ಪರಿಭ್ರಮನ್ ॥೬೩॥

ತಸ್ಮಾತ್ಸಂಧ್ಯೇತಿ ತಾಮಾಹುರುಷಾವ್ಯುಷ್ಟ್ಯೋರ್ಯದಂತರಂ ।
ಉಷಾ ರಾತ್ರಿಃ ಸ್ಮೃತಾ ವಿಪ್ರೈರ್ವ್ಯುಷ್ಟಿಶ್ಚಾಪಿ ಅಹಃ ಸ್ಮೃತಂ ॥೬೪॥

೬೦. ಪೃಥ್ವಿಯನ್ನು ಆವರಿಸಿರುವ ಶುದ್ಧೋದಕ ಸಮುದ್ರದಾಚೆ ಹೊರಗಡೆಯಲ್ಲಿ ಲೋಕಾಲೋಕಪರ್ವತವಿದೆಯಷ್ಟೆ! ಅದು ಹತ್ತು ಸಾವಿರ ಯೋಜನ ಎತ್ತರವಾಗಿರುವುದು.

೬೧-೬೨. ಮಂಡಲಾಕಾರವಾಗಿ ಸುತ್ತುವರಿದಿರುವ ಈ ಪರ್ವತವು ಒಂದು ಕಡೆ ಬೆಳಕಿನಿಂದಲೂ, ಇನ್ನೊಂದುಕಡೆ ಕತ್ತಲೆಯಿಂದಲೂ ಕೂಡಿದೆ. ನಕ್ಷತ್ರ, ಚಂದ್ರ, ಸೂರ್ಯ, ಗ್ರಹ ಮತ್ತು ತಾರಾಮಂಡಲಗಳೆಲ್ಲವೂ ಈ ಲೋಕಾಲೋಕ ಪರ್ವತದ ಒಳಭಾಗದಲ್ಲಿಯೇ ಪ್ರಕಾಶಿಸುವುವು. ಇಲ್ಲಿಯ ವರೆಗೆ ಮಾತ್ರವೇ ಲೋಕ ವೆನಿಸುವುದು. ಅದರ ಆಚೆ ನಿರಾಲೋಕ; ಎಂದರೆ ಬೆಳಕಿಲ್ಲದ ಪ್ರದೇಶ.

೬೩-೬೪. ದರ್ಶನಾರ್ಥದಲ್ಲಿ ಅಥವಾ ಪ್ರಕಾಶಾರ್ಥದಲ್ಲಿ "ಲೋಕೃ ದರ್ಶನೇ" ಎಂಬ ಧಾತುವನ್ನು ಪ್ರಯೋಗಿಸುವರು. ನಿರಾಲೋಕವೆಂದರೆ ಪ್ರಕಾಶರಹಿತ ವೆಂದರ್ಥ. ಸೂರ್ಯನು ಮಂಡಲಾಕಾರವಾದ ತನ್ನ ಸಂಚಾರದಿಂದ ಉಷಾ, ವ್ಯುಷ್ಟಿ ಇವೆರಡರ ಅಂತರಭಾಗಗಳೂ ಸಂಧಿಸುವಂತೆ ಮಾಡುತ್ತಾನೆ. ಆದುದರಿಂದಲೇ ಆ ಸಂಧಿಕಾಲಕ್ಕೆ ಸಂಧ್ಯಾ ಎಂದು ಹೆಸರು. ಉಷಾ ಎಂದರೆ ರಾತ್ರಿಗೂ ವ್ಯುಷ್ಟಿ ಯೆಂದರೆ ಹಗಲಿಗೂ ಸಂಜ್ಞೆ.

**ತ್ರಿಂಶತ್ಕಲೋ ಮುಹೂರ್ತಸ್ತು ಅಹಸ್ತೇ ದಶ ಪಂಚ ಚ ।**
**ಹ್ರಾಸೋ ವೃದ್ಧಿರಹರ್ಭಾಗೈರ್ದಿವಸಾನಾಂ ಯಥಾ ತು ವೈ ॥೮೬॥**

**ಸಂಧ್ಯಾಮುಹೂರ್ತಮಾತ್ರಾಯಾಂ ಹ್ರಾಸವೃದ್ಧೀ ತು ತೇ ಸ್ಮೃತೇ ।**
**ಲೇಖಾಪ್ರಭೃತ್ಯಥಾಽಽದಿತ್ಯೇ ತ್ರಿಮುಹೂರ್ತಾಗತೇ ತು ವೈ ॥೮೭॥**

**ಪ್ರಾತಃ ಸ್ಮೃತಸ್ತತಃ ಕಾಲೋ ಭಾಗಾಂಶ್ಚಾಽಽಹುಶ್ಚ ಪಂಚ ಚ ।**
**ತಸ್ಮಾತ್ಪ್ರಾತರ್ಗತಾತ್ಕಾಲಾನ್ಮುಹೂರ್ತಾಃ ಸಂಗವಸ್ತ್ರಯಃ ॥೮೮॥**

**ಮಧ್ಯಾಹ್ನಸ್ತ್ರಿಮುಹೂರ್ತಸ್ತು ತಸ್ಮಾತ್ಕಾಲಾದನಂತರಂ ।**
**ತಸ್ಮಾನ್ಮಧ್ಯಂದಿನಾತ್ಕಾಲಾದಪರಾಹ್ಣ ಇತಿ ಸ್ಮೃತಃ ॥೮೯॥**

**ತ್ರಯ ಏವ ಮುಹೂರ್ತಾಸ್ತು ಕಾಲ ಏಷ ಸ್ಮೃತೋ ಬುಧೈಃ ।**
**ಅಪರಾಹ್ಣವ್ಯತೀತಾಚ್ಚ ಕಾಲಃ ಸಾಯಂ ಸ ಉಚ್ಯತೇ ॥೯೦॥**

---

೮೬. ಮೂವತ್ತು ಕಲೆಗಳಿಗೆ ಒಂದು ಮುಹೂರ್ತವೆಂದೂ, ಆ ಹದಿನೈದು ಮುಹೂರ್ತಗಳಿಗೆ ಒಂದು ಹಗಲೆಂದೂ ಹೇಳುತ್ತಾರೆ. ಕಾಲಭೇದವನ್ನು ಅನುಸರಿಸಿ ಹಗಲಿನ ಪ್ರಮಾಣವು ಹೆಚ್ಚುಕಡಿಮೆಯಾಗುತ್ತದೆ.

೮೭-೮೮. ಸಂಧ್ಯಾಕಾಲವು ಒಂದು ಮುಹೂರ್ತ ಪ್ರಮಾಣವುಳ್ಳದು. ದಿನದ ಹ್ರಾಸವೃದ್ಧಿಗಳಿಗೆ ಇದು ನಿಮಿತ್ತವಾಗಿದೆ. ಸೂರ್ಯನು ಉದಿಸಿ ಕಾಲಚಕ್ರದ ಲೇಖಾ ವಲಯಗಳಲ್ಲಿ ಮೂರು ಮುಹೂರ್ತಗಳ ಕಾಲ ಸಂಚಾರಮಾಡಿದರೆ ಆ ಕಾಲಭಾಗ ವನ್ನು ಪ್ರಾತಃಕಾಲವೆನ್ನುವರು. ಇಂತಹ ಭಾಗಗಗಳು ಹಗಲಿನಲ್ಲಿ ಐದು ಇರುವುವು. ಪ್ರಾತಃಕಾಲವಾದ ತರುವಾಯ ಮೂರು ಮುಹೂರ್ತಗಳನ್ನು ಸಂಗವವೆಂದು ಕರೆಯುತ್ತಾರೆ.

೮೯. ಈ ಕಾಲದ ತರುವಾಯ ಮೂರು ಮುಹೂರ್ತಗಳಿಗೆ ಮಧ್ಯಾಹ್ನವೆಂದು ಹೆಸರು. ಅದರ ಮುಂದಿನ ಕಾಲಭಾಗಕ್ಕೆ ಅಪರಾಹ್ಣವೆಂದು ಸಂಜ್ಞೆ.

೯೦. ಈ ಅಪರಾಹ್ಣದ ಪ್ರಮಾಣವೂ ಸಹ ಮೂರೇ ಮುಹೂರ್ತಗಳೆಂದು ವಿದ್ವಾಂಸರು ಪರಿಗಣಿಸಿದ್ದಾರೆ. ಇದು ಕಳೆದ ಮೇಲೆ ಸಾಯಂಕಾಲ ಬರುತ್ತದೆ.

**ದಶ ಪಂಚ ಮುಹೂರ್ತಾಹ್ನೋ ಮುಹೂರ್ತಾಸ್ತ್ರಯ ಏವ ಚ ।**
**ದಶಪಂಚಮುಹೂರ್ತಂ ವೈ ಅಹ್ನಸ್ತು ವಿಷುವೇ ಸ್ಮೃತಂ ॥೯೧॥**

**ವರ್ಧತ್ಯತೋ ಹ್ರಸತ್ಯೇವ ಅಯನೇ ದಕ್ಷಿಣೋತ್ತರೇ ।**
**ಅಹಸ್ತು ಗ್ರಸತೇ ರಾತ್ರಿಂ ರಾತ್ರಿಸ್ತು ಗ್ರಸತೇ ಅಹಃ ॥೯೨॥**

**ಶರದ್ವಸಂತಯೋರ್ಮಧ್ಯಂ ವಿಷುವಂ ತು ವಿಧೀಯತೇ ।**
**ಆಲೋಕಾಂತಃ ಸ್ಮೃತೋ ಲೋಕೋ ಲೋಕಾಚ್ಚಾಲೋಕ ಉಚ್ಯತೇ ॥**

**ಲೋಕಪಾಲಾಃ ಸ್ಥಿತಾಸ್ತತ್ರ ಲೋಕಾಲೋಕಸ್ಯ ಮಧ್ಯತಃ ।**
**ಚತ್ವಾರಸ್ತೇ ಮಹಾತ್ಮಾನಸ್ತಿಷ್ಠಂತ್ಯಾಭೂತಸಂಪ್ಲವಂ ॥೯೪॥**

---

೯೧. ಒಂದು ಹಗಲಿಗೆ ಹದಿನೈದು ಮುಹೂರ್ತಗಳು. ಹಗಲಿನ ಅವಾಂತರ ಭಾಗಗಳೊಂದೊಂದಕ್ಕೂ ಮೂರು ಮೂರು ಮುಹೂರ್ತಗಳೆಂದು ತಿಳಿಯಬೇಕು. ವಿಷುವತ್ಕಾಲದಲ್ಲಿ ಅಹಃಪರಿಮಾಣವು ಹೆಚ್ಚುಕಡಿಮೆಯಿಲ್ಲದೆ ಸರಿಯಾಗಿ ಹದಿನೈದು ಮುಹೂರ್ತವಿರುವುದು.

೯೨. ಆ ತರುವಾಯ ಉತ್ತರಾಯಣ ಮತ್ತು ದಕ್ಷಿಣಾಯನಗಳಲ್ಲಿ ಕ್ರಮವಾಗಿ ಹಗಲು ಹೆಚ್ಚುವುದು ಮತ್ತು ತಗ್ಗುವುದು. ಹಗಲು ರಾತ್ರಿಯ ಭಾಗವನ್ನೂ ರಾತ್ರಿಯು ಹಗಲಿನ ಭಾಗವನ್ನೂ ಆಕ್ರಮಿಸುವುವು.

೯೩. ಶರದೃತುವಿನ ಮತ್ತು ವಸಂತರ್ತುವಿನ ಮಧ್ಯಕಾಲಗಳನ್ನು ಎಂದರೆ ಕ್ರಮವಾಗಿ ತುಲಾಸಂಕ್ರಮಣ ಮತ್ತು ಮೇಷಸಂಕ್ರಮಣಗಳ ದಿನಗಳನ್ನು ವಿಷುವವೆನ್ನುತ್ತಾರೆ. ಆ ದಿನ ಹಗಲು ರಾತ್ರಿಗಳು ಸಮಪ್ರಮಾಣದಲ್ಲಿ ಇರುತ್ತವೆ. ಚಂದ್ರಸೂರ್ಯರ ಬೆಳಕು ಎಲ್ಲಿಯವರೆಗೆ ಬೀಳುತ್ತದೆಯೋ ಅದುವರಗಿನ ಪ್ರದೇಶವು ಲೋಕವೆನಿಸಿಕೊಳ್ಳುತ್ತದೆ. ಅದರ ಮುಂದಿನದು ಅಲೋಕ ಎಂದರೆ ಬೆಳಕಿಲ್ಲದ ಪ್ರದೇಶ.

೯೪. ಲೋಕಾಲೋಕಪರ್ವತದ ಮೇಲ್ಗಡೆ ನಾಲ್ಕು ದಿಕ್ಕುಗಳಲ್ಲಿಯೂ ನಟ್ಟನಡುವೆ ನಾಲ್ವರು ಲೋಕಪಾಲಕರು ವಾಸಿಸುತ್ತಿರುವರು. ಆ ಮಹಾತ್ಮರು ಪ್ರಳಯಕಾಲದವರೆಗೂ ಅಲ್ಲಿ ನೆಲೆಸಿರುವರು.

**ಸುಧಾಮಾ ಚೈವ ವೈರಾಜಃ ಕರ್ದಮಶ್ಚ ಪ್ರಜಾಪತಿಃ ।**
**ಹಿರಣ್ಯರೋಮಾ ಪರ್ಜನ್ಯಃ ಕೇತುಮಾನ್ರಾಜಸಶ್ಚ ಸಃ ॥೯೫॥**

**ನಿರ್ದ್ವಂದ್ವಾ ನಿರಭಿಮಾನಾ ನಿಸ್ತಂದ್ರಾ ನಿಷ್ಪರಿಗ್ರಹಾಃ ।**
**ಲೋಕಪಾಲಾಃ ಸ್ಥಿತಾಸ್ತ್ವೇತೇ ಲೋಕಾಲೋಕೇ ಚತುರ್ದಿಶಂ ॥೯೬॥**

**ಉತ್ತರಂ ಯದಗಸ್ತ್ಯಸ್ಯ ಶೃಂಗಂ ದೇವರ್ಷಿಸೇವಿತಂ ।**
**ಪಿತೃಯಾಣಃ ಸ್ಮೃತಃ ಪಂಥಾ ವೈಶ್ವಾನರಪಥಾದ್ಬಹಿಃ ॥೯೭॥**

**ತತ್ರಾಸತೇ ಪ್ರಜಾಕಾಮಾ ಋಷಯೋ ಯೇಽಗ್ನಿಹೋತ್ರಿಣಃ ।**
**ಲೋಕಸ್ಯ ಸಂತಾನಕರಾಃ ಪಿತೃಯಾಣೇ ಪಥಿ ಸ್ಥಿತಾಃ ॥೯೮॥**

**ಭೂತಾರಂಭಕೃತಂ ಕರ್ಮ ಆಶಿಷಶ್ಚ ವಿಶಾಂ ಪತೇ ।**
**ಪ್ರಾರಭಂತೇ ಲೋಕಕಾಮಾಸ್ತೇಷಾಂ ಪಂಥಾಃ ಸ ದಕ್ಷಿಣಃ ॥೯೯॥**

---

೯೫. ಸುಧಾಮ ಅಥವಾ ವೈರಾಜ, ಪ್ರಜಾಪತಿಯೆನಿಸಿದ ಕರ್ದಮ, ಹಿರಣ್ಯರೋಮನೆಂಬ ನಾಮಾಂತರವುಳ್ಳ ಪರ್ಜನ್ಯ, ಕೇತುಮಂತನೆಂದು ಪ್ರಖ್ಯಾತನಾದ ರಾಜಸ ಇವರೇ ಆ ನಾಲ್ವರು.

೯೬. ಲೋಕಾಲೋಕಪರ್ವತದ ನಾಲ್ಕು ದಿಕ್ಕುಗಳಲ್ಲಿಯೂ ಇರುವ ಈ ಲೋಕಪಾಲಕರು ಶೀತೋಷ್ಣಾದಿ ದ್ವಂದ್ವಗಳನ್ನು ಲೆಕ್ಕಿಸದವರು; ಮಮತೆಯನ್ನು ಬಿಟ್ಟವರು; ಆಲಸ್ಯರಹಿತರು; ಬ್ರಹ್ಮಚರ್ಯವ್ರತದಲ್ಲಿ ಇರತಕ್ಕವರು.

೯೭. ದೇವತೆಗಳಿಂದಲೂ ಋಷಿಗಳಿಂದಲೂ ಸೇವೆಯನ್ನು ಕೈಗೊಳ್ಳುತ್ತಿರುವ ಅಗಸ್ತ್ಯಶಿಖರಕ್ಕೆ ಉತ್ತರದಲ್ಲಿ, ವೈಶ್ವಾನರಪಥದ ಹೊರಗಡೆ ಪಿತೃಯಾಣವೆಂಬ ಮಾರ್ಗವಿದೆ.

೯೮. ಆ ಹಾದಿಯಲ್ಲಿ ಪ್ರಜಾಭಿಲಾಷಿಗಳೂ, ಅಗ್ನಿಹೋತ್ರಾನುಷ್ಠಾನಪರರೂ ಆದ ಮುನಿಗಳು ವಾಸಿಸುವರು. ಲೋಕದ ಜನರಿಗೆ ಸಂತಾನವನ್ನು ಕರುಣಿಸುವವರು ಅವರೇ.

೯೯. ಉತ್ತಮಲೋಕಗಳನ್ನು ಪಡೆಯಬೇಕೆಂಬ ಅಭಿಲಾಷೆಯಿಂದ ಪ್ರಜೆಗಳು ಚರು, ಪುರೋಡಾಶ ಮುಂತಾದ ಭೌತಿಕವಾದ ಹವಿಸ್ಸುಗಳನ್ನು ಅರ್ಪಿಸಿ ಯಜ್ಞಯಾಗಾದಿ ಕರ್ಮಗಳನ್ನು ಮಾಡಲಿ, ಕಾಮ್ಯಕರ್ಮಗಳನ್ನು ನೆರವೇರಿಸಲಿ ಅವರಿಗೆ ಈ ಪಿತೃಯಾಣ ಅಥವಾ ದಕ್ಷಿಣಮಾರ್ಗವು ಪ್ರಾಪ್ತವಾಗುವುದು.

ಚಲಿತಂ ತೇ ಪುನರ್ಧರ್ಮಂ ಸ್ಥಾಪಯಂತಿ ಯುಗೇ ಯುಗೇ ।
ಸಂತಪ್ತತಪಸಾ ಚೈವ ಮರ್ಯಾದಾಭಿಃ ಶ್ರುತೇನ ಚ ॥೧೦೦॥

ಜಾಯಮಾನಾಸ್ತು ಪೂರ್ವೇ ವೈ ಪಶ್ಚಿಮಾನಾಂ ಗೃಹೇಷು ತೇ ।
ಪಶ್ಚಿಮಾಶ್ಚೈವ ಪೂರ್ವೇಷಾಂ ಜಾಯಂತೇ ನಿಧನೇಷ್ವಿಹ ॥೧೦೧॥

ಏವಮಾವರ್ತಮಾನಾಸ್ತೇ ವರ್ತಂತ್ಯಾಭೂತಸಂಪ್ಲವಂ ।
ಅಷ್ಟಾಶೀತಿಸಹಸ್ರಾಣಿ ಋಷೀಣಾಂ ಗೃಹಮೇಧಿನಾಂ ॥೧೦೨॥

ಸವಿತುರ್ದಕ್ಷಿಣಂ ಮಾರ್ಗಮಾಶ್ರಿತ್ಯಾಽಽಭೂತಸಂಪ್ಲವಂ ।
ಕ್ರಿಯಾವತಾಂ ಪ್ರಸಂಖ್ಯೈಷಾ ಯೇ ಶ್ಮಶಾನಾನಿ ಭೇಜಿರೇ ॥೧೦೩॥

ಲೋಕಸಂವ್ಯವಹಾರಾರ್ಥಂ ಭೂತಾರಂಭಕೃತೇನ ಚ ।
ಇಚ್ಛಾದ್ವೇಷರತಾಚ್ಚೈವ ಮೈಥುನೋಪಗಮಾಚ್ಚ ವೈ ॥೧೦೪॥

---

೧೦೦. ಧರ್ಮವು ಖಿಲವಾದಾಗ ಒಂದೊಂದು ಯುಗದಲ್ಲಿಯೂ ಅವರು ಮತ್ತೆ ಅದನ್ನು ಸ್ಥಾಪಿಸುವರು. ವರ್ಣಾಶ್ರಮಾದಿ ಧರ್ಮಗಳ ಎಲ್ಲೆಯನ್ನು ಮೀರದೆ ವೇದಶಾಸ್ತ್ರಪಾರಂಗತರಾಗಿ, ಉಗ್ರವಾದ ತಪಸ್ಸಿನಿಂದ ಅವರು ತಮ್ಮ ದೇಹವನ್ನು ಶೋಷಿಸುತ್ತಿರುವರು.

೧೦೧. ಪಿತೃಯಾನವನ್ನು ಸೇರಿದ ಆ ಪುಣ್ಯಶಾಲಿಗಳಲ್ಲಿ ಮೃತರಾದ ಪೂರ್ವಿಕರು ಮುಂದಿನವರ ಮನೆಗಳಲ್ಲಿಯೂ, ಮುಂದಿನವರು ಪೂರ್ವಿಕರ ಸ್ಥಾನ ಗಳಲ್ಲಿಯೂ ಜನಿಸುತ್ತ ಪುನಃಪುನಃ ಜನ್ಮಮರಣಗಳನ್ನು ಅನುಭವಿಸುತ್ತಿರುವರು.

೧೦೨. ಎಂಬತ್ತೆಂಟುಸಾವಿರ ಮಂದಿ ಗೃಹಸ್ಥಮುನಿಗಳು ಅನುಷ್ಠಾನತತ್ಪರ ರಾಗಿ, ಜನ್ಮಮರಣಗಳ ಪರಂಪರೆಯಲ್ಲಿ ಸಿಲುಕಿ ಪ್ರಳಯಕಾಲದವರೆಗೂ ಅಲ್ಲಿ ವಾಸಮಾಡುತ್ತಿರುವರು.

೧೦೩. ಹೀಗೆ ನಿಷೇಕಾದಿಶ್ಮಶಾನಾಂತವಾದ ಕರ್ಮಗಳಿಂದ ಸಂಸ್ಕೃತರಾದ ಕರ್ಮಯೋಗಿಗಳು ಅನಂತ ಸಂಖ್ಯೆಯಲ್ಲಿ ಈ ಪುಣ್ಯಕರವಾದ ಪಿತೃಲೋಕವನ್ನು ಸೇರಿ, ಪ್ರಳಯಕಾಲದವರೆಗೂ ಅಲ್ಲಿ ಸುಖವನ್ನು ಅನುಭವಿಸುತ್ತಿರುವರು.

೧೦೪-೧೦೫. ಲೋಕವ್ಯವಹಾರವನ್ನು ಅನುಸರಿಸುವುದಕ್ಕಾಗಿ ಈ ಕರ್ಮ ಯೋಗಿಗಳು ಭೌತಿಕವ್ಯಾಪಾರಗಳಲ್ಲಿ ತೊಡಗುವರು. ಇಚ್ಛಾದ್ವೇಷಗಳಿಗೆ ತಮ್ಮ

**ತಥಾ ಕಾಮಕೃತೇನೇಹ ಸೇವನಾದ್ವಿಷಯಸ್ಯ ಚ ।**
**ಇತ್ಯೇತೈಃ ಕಾರಣೈಃ ಸಿದ್ಧಾಃ ಶ್ಮಶಾನಾನೀಹ ಭೇಜಿರೇ ॥೧೧೫॥**
**ಪ್ರಜೈಷಿಣಃ ಸಪ್ತರ್ಷಯೋ ದ್ವಾಪರೇಷ್ವಿಹ ಜಜ್ಞಿರೇ ।**
**ಸಂತತಿಂ ತೇ ಜುಗುಪ್ಸಂತೇ ತಸ್ಮಾನ್ಮೃತ್ಯುರ್ಜಿತಸ್ತು ತೈಃ ॥೧೧೬॥**
**ಅಷ್ಟಾಶೀತಿಸಹಸ್ರಾಣಿ ತೇಷಾಮಪ್ಯೂರ್ಧ್ವರೇತಸಾಂ ।**
**ಉದಕ್ಪಂಥಾನಮತ್ಯರ್ಥಮಾಶ್ರಿತ್ಯಾಭೂತಸಂಪ್ಲವಂ ॥೧೧೭॥**
**ತೇಸಂಪ್ರಯೋಗಾಲ್ಲೋಕಸ್ಯ ಮಿಥುನಸ್ಯ ಚ ವರ್ಜನಾತ್ ।**
**ಈರ್ಷ್ಯಾದ್ವೇಷನಿವೃತ್ತ್ಯಾ ಚ ಭೂತಾರಂಭವಿವರ್ಜನಾತ್ ॥೧೧೮॥**
**ತತೋಽನ್ಯಕಾಮಸಂಯೋಗಶಬ್ದಾದೇರ್ದೋಷದರ್ಶನಾತ್ ।**
**ಇತ್ಯೇತೈಃ ಕಾರಣೈಃ ಶುದ್ಧೈಸ್ತೇಽಮೃತತ್ವಂ ಹಿ ಭೇಜಿರೇ ॥೧೧೯॥**

---

ಮನಸ್ಸಿನಲ್ಲಿ ಎಡೆಗೊಡುವರು. ಕಾಮವಶರಾಗಿ ಸ್ತ್ರೀಸಂಭೋಗಾದಿ ವಿಷಯಸುಖಗಳಲ್ಲಿ ನಿರತರಾಗುವರು. ಈ ಕಾರಣಗಳಿಂದ ಅವರು ಜನನಮರಣದ ಪ್ರವಾಹಕ್ಕೆ ಸಿಕ್ಕಿ, ಜೀವಿತಾವಸಾನದಲ್ಲಿ ಮೃತರಾಗಿ ಶ್ಮಶಾನಕರ್ಮದಿಂದ ಸಂಸ್ಕಾರವನ್ನು ಪಡೆಯುವರು.

೧೧೬-೧೧೭. ದ್ವಾಪರಯುಗದಲ್ಲಿ ಸಪ್ತರ್ಷಿಗಳು ಜನ್ಮವೆತ್ತಿದರು. ಅವರು ಪ್ರಜಾಸೃಷ್ಟಿಯಲ್ಲಿ ಮನಸ್ಸನ್ನು ಕೊಟ್ಟರೂ ಮೈಥುನವೆಂದರೆ ಜುಗುಪ್ಸೆ ಪಡುತ್ತಿದ್ದರು. ಅವರ ಸೃಷ್ಟಿಯೆಲ್ಲ ಸಂಕಲ್ಪದಿಂದ ಆದುದು. ಆದುದರಿಂದ ಅವರು ಮೃತ್ಯುವನ್ನು ಗೆದ್ದರು. ಇಂತಹ ಎಂಬತ್ತೆಂಟುಸಾವಿರ ಮಂದಿ ಜಿತೇಂದ್ರಿಯರಾದ ಮಹರ್ಷಿಗಳು ಉತ್ತರಮಾರ್ಗವನ್ನು ಆಶ್ರಯಿಸಿ ಪ್ರಳಯಕಾಲದವರೆಗೂ ಶಾಂತಿಯಿಂದ ಕಾಲವನ್ನು ಕಳೆಯುವರು.

೧೧೮-೧೧೯. ಅವರು ಲೋಕದ ಸಾಮಾನ್ಯಜನರ ನಡೆವಳಿಕೆಯನ್ನು ತೊರೆದಿರುವರು. ಗ್ರಾಮ್ಯಸುಖಗಳಿಗೆ ಮನಸ್ಸನ್ನು ಕೊಡರು. ಈರ್ಷ್ಯಾದ್ವೇಷಗಳನ್ನು ದೂರಮಾಡಿರುವರು. ಪ್ರಾಕೃತಿಕ ಕರ್ಮಗಳನ್ನು ಆಚರಿಸರು. ಇಂದ್ರಿಯಗಳಿಗೆ ಅಪ್ಯಾಯನವನ್ನು ಕೊಡುವ ಶಬ್ದಸ್ಪರ್ಶಾದಿ ವಿಷಯಸುಖಗಳನ್ನು ಕಂಡರೆ ಅವರಿಗೆ ಆಗದು. ಇಂತಹ ನಿಷ್ಕಲ್ಮಷವಾದ ಕಾರಣಗಳಿಂದ ಅವರು ಅಮೃತತ್ವವನ್ನು ಪಡೆದಿರುವರು.

ಆಭೂತಸಂಪ್ಲವಸ್ಥಾನಾಮಮೃತತ್ವಂ ವಿಭಾವ್ಯತೇ ।
ತ್ರೈಲೋಕ್ಯಸ್ಥಿತಿಕಾಲೋ ಹಿ ಅಪುನರ್ಭವತಾಂ ಗತಾಃ ॥೧೧೦॥

ಭ್ರೂಣಹತ್ಯಾಶ್ವಮೇಧಾದಿಪಾಪಪುಣ್ಯನಿಭೈಃ ಪರೇ ।
ಆಭೂತಸಂಪ್ಲವಾಂತೇ ತು ಕ್ಷೀಯಂತೇ ಚೋರ್ಧ್ವರೇತಸಃ ॥೧೧೧॥

ಊರ್ಧ್ವೋತ್ತರಮೃಷಿಭ್ಯಸ್ತು ಧ್ರುವೋ ಯತ್ರ ಸ ವೈ ಸ್ಮೃತಃ ।
ಏತದ್ವಿಷ್ಣುಪದಂ ದಿವ್ಯಂ ತೃತೀಯಂ ವ್ಯೋಮ್ನಿ ಭಾಸ್ವರಂ ॥೧೧೨॥

ಯತ್ರ ಗತ್ವಾ ನ ಶೋಚಂತಿ ತದ್ವಿಷ್ಣೋಃ ಪರಮಂ ಪದಂ ।
ಧರ್ಮೇ ಧ್ರುವಾದ್ಯಾಸ್ತಿಷ್ಠಂತಿ ಯೇ ತು ಲೋಕಸ್ಯ ಸಾಕ್ಷಿಣಃ ॥೧೧೩॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಭುವನಕೋಶೇ ಚಂದ್ರಸೂರ್ಯ ಭುವನವಿಸ್ತಾರೋ ನಾಮ ಚತುರ್ವಿಂಶತ್ಯಧಿಕಶತತಮೋಽಧ್ಯಾಯಃ

---

೧೧೦. ಪ್ರಲಯಪರ್ಯಂತವಾದ ಶಾಶ್ವತಸ್ಥಾನವನ್ನು ಅಮೃತತ್ವವೆಂದು ಕರೆಯುವರು. ಪುನರ್ಜನ್ಮವಿಲ್ಲದವರೆಂದರೆ ಭೂರ್ಭುವಸ್ಸುವಗಳೆಂಬ ಮೂರು ಲೋಕಗಳು ಅಳಿಯುವವರೆಗೂ ಜೀವಿಸಿರುವವರೆಂದರ್ಥ.

೧೧೧. ಉತ್ತರಪಥದ ಅಥವಾ ದೇವಯಾನದ ಈ ಋಷಿಗಳಲ್ಲದೆ ಉಳಿದ ಮತ್ತೊಂದು ಗುಂಪಿನವರು ಭ್ರೂಣಹತ್ಯಾದಿ ಪಾಪಕರ್ಮಗಳಿಗೂ, ಅಶ್ವಮೇಧಾದಿ ಪುಣ್ಯಕರ್ಮಗಳಿಗೂ ವಶ್ಯರಾಗಿರುವರು. ಹೀಗೆ ಅವರು ಶಾಸ್ತ್ರಬದ್ಧರಾಗಿ, ಇಂದ್ರಿಯ ಗಳನ್ನು ಸ್ವಾಧೀನದಲ್ಲಿರಿಸಿಕೊಂಡು ಜೀವಿಸುತ್ತ ಪ್ರಳಯಾಂತದಲ್ಲಿ ಕ್ಷಯಿಸುವರು.

೧೧೨. ಋಷಿಮಂಡಲದ ಮೇಲುಭಾಗದಲ್ಲಿ ಧ್ರುವಮಂಡಲವಿರುವುದು. ಇದು ಅಂತರಿಕ್ಷದಲ್ಲಿ ವಿರಾಜಿಸುತ್ತಿರುವ ಮೂರನೆಯ ದಿವ್ಯಲೋಕ. ಇದಕ್ಕೆ ವಿಷ್ಣು ಪದವೆಂದೂ ಹೆಸರು.

೧೧೩. ಅತಿಶ್ರೇಷ್ಠವಾದ ವಿಷ್ಣುವಿನ ಆ ಪರಮಪದವನ್ನು ಸೇರಿದವರಿಗೆ ಶೋಕವೆಂಬುದೇ ಇಲ್ಲ. ಧ್ರುವನೇ ಮೊದಲಾದವರು ಲೋಕದ ಪುಣ್ಯಪಾಪ ಕರ್ಮಗಳಿಗೆ ಸಾಕ್ಷಿಗಳಾಗಿರುವರು. ಅಲ್ಲದೆ ಸ್ವತಃ ಧರ್ಮಮಾರ್ಗವನ್ನು ತಪ್ಪದೆ ಅನುಸರಿಸುತ್ತಿರುವರು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಚಂದ್ರಸೂರ್ಯರ ಗತಿ, ಭೂಮಂಡಲದ ವಿಸ್ತಾರ ಮುಂತಾದ ವಿಷಯಗಳನ್ನು ವರ್ಣಿಸಿದೆ.

ಅಖಂಡವಾದ ಭೂಮಂಡಲದ ವಿಸ್ತಾರವು ಐವತ್ತುಕೋಟಿ ಯೋಜನ. ಅಂತರಿಕ್ಷಮಂಡಲವೂ ಸಹ ಇಷ್ಟೇ ಪರಿಮಾಣವುಳ್ಳುದಾಗಿದೆ. ಭೂಮಿಯ ಅಂತರ್ವಲಯದ ಎಂದರೆ ಸ್ವಾದೂದಕ ಸಮುದ್ರದ ವರಗಣ ಪ್ರದೇಶದ ಅಡ್ಡಳತೆ ಮೂರು ಕೋಟಿ ಎಪ್ಪತ್ತೊಂಬತ್ತು ಲಕ್ಷಯೋಜನ.

ಸೂರ್ಯನು ದಕ್ಷಿಣಮಾರ್ಗ, ಮಧ್ಯಮಾರ್ಗ ಮತ್ತು ಉತ್ತರಮಾರ್ಗಗಳೆಂಬ ಮಂಡಲಾಕಾರವಾದ ಮೂರು ಮಾರ್ಗಗಳಲ್ಲಿ ಸಂಚರಿಸುವನು. ಇದರಿಂದ ಅವನಿಗೆ ಗತಿಭೇದಗಳು ಏರ್ಪಡುವುವು ; ಮತ್ತು ಆರೋಹಣ, ಅವರೋಹಣ, ಸಮಸ್ಥಾನಗಳೆಂಬ ಮೂರು ಅವಸ್ಥೆಗಳೂ ಉಂಟಾಗುವುವು. ಅವನು ಬಹಿರ್ವಲಯದಿಂದ ಎಂದರೆ ದಕ್ಷಿಣಮಾರ್ಗದಿಂದ ಅಂತರ್ವಲಯಕ್ಕೆ ಎಂದರೆ ಉತ್ತರಮಾರ್ಗಕ್ಕೆ ಏರಿ ಹೋಗುವುದೇ ಆರೋಹಣ. ಇದನ್ನೇ ಉತ್ತರಾಯಣವೆನ್ನುವರು. ಆ ಒಳಸುತ್ತಿನಿಂದ ಹೊರಸುತ್ತಿಗೆ ಬರುವಾಗ ಅವರೋಹಣವೆನಿಸುವುದು. ಇದೇ ದಕ್ಷಿಣಾಯನ. ಇವೆರಡು ಮಾರ್ಗಗಳ ನಡುವೆ ಮಧ್ಯವಲಯದಲ್ಲಿದ್ದಾಗ ಸಮಸ್ಥಿತಿಯೆನ್ನುವರು. ಇದರಲ್ಲಿ ರಾತ್ರಿಹಗಲುಗಳು ಏರುಪೇರುಗಳಿಲ್ಲದೆ ಸಮಪ್ರಮಾಣದಲ್ಲಿರುವುವು. ಇದಕ್ಕೆ ವೈಷುವತವೆಂದೂ ಹೆಸರುಂಟು. ಉತ್ತರಾಯಣದಲ್ಲಿ ಹಗಲು ಹೆಚ್ಚುವುದು; ರಾತ್ರಿ ತಗ್ಗುವುದು. ದಕ್ಷಿಣಾಯನದಲ್ಲಿ ಹಗಲು ತಗ್ಗುವುದು ; ರಾತ್ರಿ ಹೆಚ್ಚುವುದು. ವಿಷುವತ್ಕಾಲದಲ್ಲಿ ಅಹೋರಾತ್ರಗಳೆರಡೂ ಸಮವಾಗಿರುವುವು. ಲೋಕಾಲೋಕ ಪರ್ವತದ ವರೆಗೆ ಮಾತ್ರ ಚಂದ್ರಸೂರ್ಯಾದಿಗ್ರಹಗಳ ಪ್ರಕಾಶವು ಬೀಳುತ್ತದೆ. ಅದರ ಹೊರಗಡೆ ಕತ್ತಲೆ ಕವಿದುಕೊಂಡಿರುವುದು. ಮಂಡಲಾಕಾರವಾದ ಈ ಪರ್ವತದ ಮೇಲೆ ನಾಲ್ಕುದಿಕ್ಕುಗಳಲ್ಲಿಯೂ ವೈರಾಜ ಮುಂತಾದ ಲೋಕಪಾಲಕರು ವಾಸಿಸುತ್ತಿರುವರು.

ದೇವಯಾನ ಮತ್ತು ಪಿತೃಯಾನಗಳೆಂಬ ಎರಡು ಮಾರ್ಗಗಳಿವೆ. ಇವುಗಳಲ್ಲಿ ಬೇರೆ ಬೇರೆ ಮಹರ್ಷಿಗಳು ತಪೋಽನುಷ್ಠಾನಪರರಾಗಿ ವಾಸಿಸುತ್ತಿರುವರು. ಧ್ರುವಮಂಡಲವು ಸಪ್ತರ್ಷಿಮಂಡಲದ ಮೇಲ್ಗಡೆಯಿರುವುದು. ಇದಕ್ಕೆ ವಿಷ್ಣುಪದವೆಂದೂ ಹೆಸರುಂಟು. ಈ ಲೋಕವನ್ನು ಸೇರಿದ ಸುಕೃತಶಾಲಿಗಳಿಗೆ ದುಃಖದ ಸಂಬಂಧವೇ ಇಲ್ಲ.

ಶ್ರೀಮತ್ಸ್ಯಮಹಾಪುರಾಣದಲ್ಲಿ ಭುವನಕೋಶದೊಳಗೆ ಚಂದ್ರಸೂರ್ಯಭುವನ ವಿಸ್ತಾರವೆಂಬ ನೂರಿಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು.

## ಅಥ ಪಂಚವಿಂಶತ್ಯಧಿಕಶತತಮೋಽಧ್ಯಾಯಃ

|| ಸೂತ ಉವಾಚ ||

ಏವಂ ಶ್ರುತ್ವಾ ಕಥಾಂ ದಿವ್ಯಾಮಬ್ರುರ್ವ ಲೋಮಹರ್ಷಣಿಂ |
ಸೂರ್ಯಾಚಂದ್ರಮಸೋಶ್ಚಾರಂ ಗ್ರಹಾಣಾಂ ಚೈವ ಸರ್ವಶಃ || ೧ ||

|| ಋಷಯ ಊಚುಃ ||

ಭ್ರಮಂತಿ ಕಥಮೇತಾನಿ ಜ್ಯೋತೀಂಷಿ ದಿವಿ ಮಂಡಲೇ |
ಅವ್ಯೂಹೇನೈವ ಸರ್ವಾಣಿ ತಥಾ ಚಾಸಂಕರೇಣ ವಾ || ೨ ||

ಕಶ್ಚ ಭ್ರಾಮಯತೇ ತಾನಿ ಭ್ರಮಂತಿ ಯದಿ ವಾ ಸ್ವಯಂ |
ಏತದ್ವೇದಿತುಮಿಚ್ಛಾಮಸ್ತತೋ ನಿಗದ ಸತ್ತಮ || ೩ ||

|| ಸೂತ ಉವಾಚ ||

ಭೂತಸಂಮೋಹನಂ ಹ್ಯೇತದ್ಬ್ರುವತೋ ಮೇ ನಿಬೋಧತ |
ಪ್ರತ್ಯಕ್ಷಮಪಿ ದೃಶ್ಯಂ ತತ್ಸಂಮೋಹಯತಿ ವೈ ಪ್ರಜಾಃ || ೪ ||

---

೧. ಸೂತಪೌರಾಣಿಕನು ಹೇಳಿದನು.—ರೋಮಾಂಚವನ್ನು ಹುಟ್ಟಿಸಿ, ಆಶ್ಚರ್ಯವನ್ನುಂಟುಮಾಡುವ ಚಂದ್ರ ಸೂರ್ಯಾದಿ ಗ್ರಹಗಳ ಸಂಚಾರ ವಿಧಾನವನ್ನು ಕೇಳಿ ಋಷಿಗಳು ಇಂತೆಂದರು.

೨-೩. ಋಷಿಗಳು ಹೇಳಿದರು.—ಅಂತರಿಕ್ಷದಲ್ಲಿ ಈ ತೇಜೋಮಂಡಲಗಳೆಲ್ಲ ಸಂಚರಿಸುತ್ತಿರುವುದು ಹೇಗೆ? ಅವು ಒಟ್ಟೊಟ್ಟಾಗಿ ಗುಂಪುಸೇರದಂತೆ ತಮ್ಮ ತಮ್ಮ ಪಥದಲ್ಲಿಯೇ ತಿರುಗುವುದೆಂತು? ಅವು ತಾವಾಗಿಯೇ ಚಲಿಸುತ್ತವೆಯೋ? ಇಲ್ಲವೇ ಇನ್ನಾರಾದರೂ ಅವುಗಳ ಸಂಚಾರಕ್ಕೆ ನಿಮಿತ್ತವಾಗಿದ್ದಾರೆಯೊ? ಇದೆಲ್ಲವನ್ನೂ ತಿಳಿದುಕೊಳ್ಳಬೇಕೆಂದು ಅಪೇಕ್ಷಿಸುತ್ತೇವೆ. ಓ ಮಹಾತ್ಮಾ, ದಯವಿಟ್ಟು ತಿಳಿಯಹೇಳು.

೪. ಸೂತಪೌರಾಣಿಕನು ಹೇಳಿದನು.—ಓ ಋಷಿಗಳಿರಾ, ಪ್ರಾಣಿಗಳನ್ನು ಬೆರಗುಮಾಡುವ ಈ ವೃತ್ತಾಂತವನ್ನು ಹೇಳುವೆನು ಕೇಳಿ. ಕಣ್ಣಾರೆ ನೋಡುತ್ತಿದ್ದರೂ ಕೂಡ, ನಂಬುವುದಕ್ಕೆ ಆಗದಷ್ಟು ಆಶ್ಚರ್ಯವನ್ನು ಜನರಿಗೆ ಇದು ಉಂಟುಮಾಡುವುದು.

**ಯೋಽಸೌ ಚತುರ್ದಶರ್ಕ್ಷೇಷು ಶಿಂಶುಮಾರೋ ವ್ಯವಸ್ಥಿತಃ ।**
**ಉತ್ತಾನಪಾದಪುತ್ರೋಽಸೌ ಮೇಥೀಭೂತೋ ಧ್ರುವೋ ದಿವಿ ॥ ೫ ॥**

**ಸೈಷ ಭ್ರಮನ್ ಭ್ರಾಮಯತೇ ಚಂದ್ರಾದಿತ್ಯೌ ಗ್ರಹೈಃ ಸಹ ।**
**ಭ್ರಮಂತಮನುಸರ್ಪಂತಿ ನಕ್ಷತ್ರಾಣಿ ಚ ಚಕ್ರವತ್ ॥ ೬ ॥**

**ಧ್ರುವಸ್ಯ ಮನಸಾ ಯೋ ವೈ ಭ್ರಮತೇ ಜ್ಯೋತಿಷಾಂ ಗಣಃ ।**
**ವಾತಾನೀಕಮಯೈರ್ಬಂಧೈರ್ಧ್ರುವೇ ಬದ್ಧಃ ಪ್ರಸರ್ಪತಿ ॥ ೭ ॥**

**ತೇಷಾಂ ಭೇದಶ್ಚ ಯೋಗಶ್ಚ ತಥಾ ಕಾಲಸ್ಯ ನಿಶ್ಚಯಃ ।**
**ಅಸ್ತೋದಯಾಸ್ತಥೋತ್ಪಾತಾ ಅಯನೇ ದಕ್ಷಿಣೋತ್ತರೇ ॥ ೮ ॥**

---

೫. ಭಗವದಾತ್ಮಕವಾದ ಶಿಂಶುಮಾರವೆಂಬ ಕಾಲಚಕ್ರವುಂಟಷ್ಟೆ. ಅದರ ಬಲಗಡೆ ಅಭಿಜಿನ್ನಕ್ಷತ್ರವೂ ಸೇರಿ ಶ್ರವಣ ಮೊದಲಾಗಿ ಪುನರ್ವಸುವರೆಗಿನ ಹದಿನಾಲ್ಕು ಉತ್ತರಾಯಣ ನಕ್ಷತ್ರಗಳಿವೆ. ಎಡಗಡೆ ಪುಷ್ಯ ಮೊದಲಾಗಿ ಉತ್ತರಾಷಾಢದ ವರೆಗಿನ ಹದಿನಾಲ್ಕು ದಕ್ಷಿಣಾಯನ ನಕ್ಷತ್ರಗಳಿವೆ. ಉತ್ತಾನಪಾದರಾಯನ ಪುತ್ರನಾದ ಧ್ರುವನು ಮೇಟೀಕಂಭದಂತೆ ಸಮಸ್ತ ಗ್ರಹತಾರೆಗಳಿಗೂ ಆಶ್ರಯನಾಗಿ ಅಂತರಿಕ್ಷದಲ್ಲಿ ಇವುಗಳ ಮೇಲ್ಗಡೆ ವಿರಾಜಿಸುತ್ತಿರುವನು.

೬. ಇವನು ತಾನೂ ತಿರುಗುತ್ತ ಚಂದ್ರಸೂರ್ಯಾದಿ ಗ್ರಹಗಳನ್ನೂ ತಿರುಗಿಸುವನು. ನಕ್ಷತ್ರಗಳೂ ಕೂಡ ಇವನನ್ನು ಅನುಸರಿಸಿಕೊಂಡು ಚಕ್ರಾಕಾರವಾಗಿ ಸಂಚರಿಸುವುವು.

೭. ಗ್ರಹಗಳು, ನಕ್ಷತ್ರಗಳು ಮೊದಲಾಗಿ ತೇಜೋಮಂಡಲಗಳು ವಾಯುಸ್ಕಂಧಗಳೆಂಬ ಪಾಶಗಳಿಂದ ಧ್ರುವನೊಡನೆ ಕಟ್ಟುವಡೆದು, ಅವನ ಇಷ್ಟಾನುಸಾರವಾಗಿ ತಿರುಗುವುವು.

೮. ಆ ಗ್ರಹಗಳ ಸಂಯೋಗವಿಯೋಗಗಳು, ಸಂಚಾರಕಾಲಗಳು ಉದಯಾಸ್ತಗಳು, ಉತ್ಪಾತಗಳು, ದಕ್ಷಿಣೋತ್ತರಾಯನಗಳು, ವಿಷುವತ್ಸಂಕ್ರಮಣಗಳು, ಗ್ರಹಣಗಳು, ವರ್ಣಭೇದಗಳು ಇವೆಲ್ಲವೂ ಧ್ರುವನ ಅಧೀನವಾಗಿವೆ.

ವಿಷುವದ್ಗ್ರಹವರ್ಣಶ್ಚ ಸರ್ವಮೇತದ್ಧ್ರುವೇರಿತಂ |
ಜೀಮೂತಾ ನಾಮ ತೇ ಮೇಘಾ ಯದೇಭ್ಯೋ ಜೀವಸಂಭವಃ || ೯ ||

ದ್ವಿತೀಯ ಆವರ್ಹ ವಾಯುರ್ಮೇಘಾಸ್ತೇ ತ್ವಭಿಸಂಶ್ರಿತಾಃ |
ಇತೋ ಯೋಜನಮಾತ್ರಾಚ್ಚ ಅಧ್ಯರ್ಧವಿಕೃತಾ ಅಪಿ ||೧೦||

ವೃಷ್ಟಿಸರ್ಗಸ್ತಥಾ ತೇಷಾಂ ಧಾರಾಸಾರಃ ಪ್ರಕೀರ್ತಿತಃ |
ಪುಷ್ಕರಾವರ್ತಕಾ ನಾಮ ಯೇ ಮೇಘಾಃ ಪಕ್ಷಸಂಭವಾಃ ||೧೧||

ಶಕ್ರೇಣ ಪಕ್ಷಾಶ್ಛಿನ್ನಾ ವೈ ಪರ್ವತಾನಾಂ ಮಹೌಜಸಾ |
ಕಾಮಗಾನಾಂ ಸವೃದ್ಧಾನಾಂ ಭೂತಾನಾಂ ನಾಶಮಿಚ್ಛತಾಂ ||೧೨||

ಪುಷ್ಕರಾ ನಾಮ ತೇ ಪಕ್ಷಾ ಬೃಹಂತಸ್ತೋಯಧಾರಿಣಃ |
ಪುಷ್ಕರಾವರ್ತಕಾ ನಾಮ ಕಾರಣೇನೇಹ ಶಬ್ದಿತಾಃ ||೧೩||

---

೯. ಜೀಮೂತಗಳೆಂದು ಪ್ರಸಿದ್ಧವಾದ ಮೇಘಗಳುಂಟು. ಅವುಗಳಿಂದಲೇ ಪ್ರಾಣಿಗಳಿಗೆ ಜೀವನಾಧಾರವಾದ ಜಲವು ಉತ್ಪನ್ನವಾಗುವುದು. ಅವು ಎರಡನೆಯ ವಾಯುಸ್ಕಂಧವನ್ನು ಆಶ್ರಯಿಸಿಕೊಂಡಿರುವುವು.

೧೦. ವಾಯುಗುಣದ ವ್ಯತ್ಯಾಸದಿಂದ ಈ ಮೋಡಗಳು ವಿಕಾರವನ್ನು ಪಡೆದು, ಭೂಮಿಗೆ ಒಂದು ಅಥವಾ ಒಂದುವರೆ ಹರಿದಾರಿಯ ದೂರದಿಂದ ಮಳೆಯನ್ನು ಧಾರಾಕಾರವಾಗಿ ಕರೆಯುವುವು.

೧೧-೧೩. ಪುಷ್ಕರಾವರ್ತಕಗಳೆಂಬ ಇನ್ನು ಕೆಲವು ಮೇಘಗಳುಂಟು. ಇವು ಪರ್ವತಗಳ ರೆಕ್ಕೆಗಳಿಂದ ಹುಟ್ಟಿದುವು. ಪೂರ್ವದಲ್ಲಿ ಬೆಟ್ಟಗಳು ಬಲದಿಂದ ಕೊಬ್ಬಿ ಮನಸ್ಸುಬಂದಂತೆ ಸಂಚರಿಸುತ್ತ ಪ್ರಾಣಿವರ್ಗವನ್ನು ನಾಶಮಾಡುತ್ತಿದ್ದುವು. ಮಹಾ ಶೂರನಾದ ದೇವೇಂದ್ರನು ಅವುಗಳ ರೆಕ್ಕೆಗಳನ್ನು ಕತ್ತರಿಸಿಹಾಕಿದನು. ಆ ರೆಕ್ಕೆಗಳಿಗೆ ಪುಷ್ಕರಗಳೆಂದು ಹೆಸರು. ಅವುಗಳಿಂದ ಹುಟ್ಟಿದ ಕಾರಣ ಈ ದೊಡ್ಡದೊಡ್ಡ ಮೋಡಗಳಿಗೆ ಪುಷ್ಕರಾವರ್ತಕಗಳೆಂಬ ಪ್ರಖ್ಯಾತಿ ಬಂದಿದೆ.

**ನಾನಾರೂಪಧರಾಶ್ಚೈವ ಮಹಾಘೋರಸ್ವರಾಶ್ಚ ತೇ ।**
**ಕಲ್ಪಾಂತವೃಷ್ಟಿಕರ್ತಾರಃ ಕಲ್ಪಾಂತಾಗ್ನೇರ್ನಿಯಾಮಕಾಃ ॥೧೪॥**

**ವಾಯ್ವಾಧಾರಾ ವಹಂತೇ ವೈ ಸಾಮ್ವೃತಾಃ ಕಲ್ಪಸಾಧಕಾಃ ।**
**ಯಾನ್ಯಸ್ಯಾಂಡಸ್ಯ ಭಿನ್ನಸ್ಯ ಪ್ರಾಕೃತಾನ್ಯಭವಂಸ್ತದಾ ॥೧೫॥**

**ಯಸ್ಮಿನ್ ಬ್ರಹ್ಮಾ ಸಮುತ್ಪನ್ನಶ್ಚತುರ್ವಕ್ತ್ರಃ ಸ್ವಯಂ ಪ್ರಭುಃ ।**
**ತಾನ್ಯೇವಾಂಡಕಪಾಲಾನಿ ಸರ್ವೇ ಮೇಘಾಃ ಪ್ರಕೀರ್ತಿತಾಃ ॥೧೬॥**

**ತೇಷಾಮಾಪ್ಯಾಯನಂ ಧೂಮಃ ಸರ್ವೇಷಾಮವಿಶೇಷತಃ ।**
**ತೇಷಾಂ ಶ್ರೇಷ್ಠಶ್ಚ ಪರ್ಜನ್ಯಶ್ಚತ್ವಾರಶ್ಚೈವ ದಿಗ್ಗಜಾಃ ॥೧೭॥**

**ಗಜಾನಾಂ ಪರ್ವತಾನಾಂ ಚ ಮೇಘಾನಾಂ ಭೋಗಿಭಿಃ ಸಹ ।**
**ಕುಲಮೇಕಂ ದ್ವಿಧಾ ಭೂತಂ ಯೋನಿರೇಕಾ ಜಲಂ ಸ್ಮೃತಂ ॥೧೮॥**

---

೧೪. ಈ ಮೇಘಗಳು ಬಗೆಬಗೆಯ ಆಕಾರವನ್ನು ತಾಳುವುವು; ಬಹು ಭಯಂಕರವಾಗಿ ಧ್ವನಿಮಾಡುವುವು; ಪ್ರಳಯಕಾಲದ ಮಳೆಯನ್ನು ಕರೆದು ಪ್ರಳಯಾಗ್ನಿಗೆ ನಿಯಾಮಕಗಳಾಗಿರುವುವು.

೧೫-೧೬. ವಾಯುವಿನ ಆಧಾರದಿಂದ ಈ ಮೋಡಗಳು ಜಲವನ್ನು ಹೊತ್ತುಕೊಂಡು ಸಂಚರಿಸುವುವು. ಇವು ಪ್ರಳಯವನ್ನುಂಟುಮಾಡಲು ಸಹಕಾರಿಗಳಾಗಿವೆ. ಬ್ರಹ್ಮಾಂಡದ ಚಿಪ್ಪನ್ನು ಭೇದಿಸಿಕೊಂಡು ಚತುರ್ಮುಖಬ್ರಹ್ಮನು ಆದಿಯಲ್ಲಿ ಉತ್ಪನ್ನನಾದನಷ್ಟೆ. ಆ ಚಿಪ್ಪಿನ ಚೂರುಗಳೇ ಬಗೆಬಗೆಯ ಮೇಘಗಳ ರೂಪವನ್ನು ತಾಳಿದುವು.

೧೭-೧೮. ಎಲ್ಲ ವಿಧವಾದ ಮೇಘಗಳೂ ಹಬೆಯಿಂದ ಪುಷ್ಟಿಯನ್ನು ಪಡೆಯುವುವು. ಗಜಗಳು, ಪರ್ವತಗಳು, ಮೇಘಗಳು ಮತ್ತು ಸರ್ಪಗಳು ಇವುಗಳ ಮೂಲಕುಲವು ಒಂದೇ. ಬಳಿಕ ಅದು ಇಬ್ಭಾಗವಾಯಿತು. ಇವು ಉತ್ಪನ್ನವಾದುದು ಜಲದಿಂದ. ಮೋಡಗಳಲ್ಲಿ ಪರ್ಜನ್ಯವೆಂಬುವೂ, ಗಜಗಳಲ್ಲಿ ನಾಲ್ಕು ದಿಗ್ಗಜಗಳೂ ಶ್ರೇಷ್ಠವಾದುವು.

ಪರ್ಜನ್ಯೋ ದಿಗ್ಗಜಾಶ್ಚೈವ ಹೇಮಂತೇ ಶೀತಸಂಭವಂ ।
ತುಷಾರವರ್ಷಂ ವರ್ಷಂತಿ ವೃದ್ಧ್ಯಾ ಹ್ಯನ್ನವಿವೃದ್ಧಯೇ ॥೧೯॥

ಷಷ್ಠಃ ಪರಿವಹೋ ನಾಮ ವಾಯುಸ್ತೇಷಾಂ ಪರಾಯಣಃ ।
ಯೋಽಸೌ ಬಿಭರ್ತಿ ಭಗವಾನ್ ಗಂಗಾಮಾಕಾಶಗೋಚರಾಂ ॥೨೦॥

ದಿವ್ಯಾಮೃತಜಲಾಂ ಪುಣ್ಯಾಂ ತ್ರಿಪಥಾಮಿತಿ ವಿಶ್ರುತಾಂ ।
ತಸ್ಯಾ ವಿಸ್ಪಂದಿತಂ ತೋಯಂ ದಿಗ್ಗಜಾಃ ಪೃಥುಭಿಃ ಕರೈಃ ॥೨೧॥

ಶೀಕರಾನ್ ಸಂಪ್ರಮುಂಚಂತಿ ನೀಹಾರ ಇತಿ ಸ ಸ್ಮೃತಃ ।
ದಕ್ಷಿಣೇನ ಗಿರಿರ್ಯೋಽಸೌ ಹೇಮಕೂಟ ಇತಿ ಸ್ಮೃತಂ ॥೨೨॥

ಉದಗ್ಘಿಮವತಃ ಶೈಲಸ್ಯೋತ್ತರೇ ಚೈವ ದಕ್ಷಿಣೇ ।
ಪುಂಡ್ರಂ ನಾಮ ಸಮಾಖ್ಯಾತಂ ಸಮ್ಯಗ್ವೃಷ್ಟಿವಿವೃದ್ಧಯೇ ॥೨೩॥

ತಸ್ಮಿನ್ ಪ್ರವರ್ತತೇ ವರ್ಷಂ ತತ್ತುಷಾರಸಮುದ್ಭವಂ ।
ತತೋ ಹಿಮವತೋ ವಾಯುರ್ಹಿಮಂ ತತ್ರ ಸಮುದ್ಭವಂ ॥೨೪॥

---

೧೯. ಮೋಡಗಳೂ, ದಿಗ್ಗಜಗಳೂ ಹೇಮಂತರ್ತುವಿನಲ್ಲಿ ಶೈತ್ಯದಿಂದ ಉತ್ಪನ್ನವಾದ ಮಂಜಿನ ಮಳೆಯನ್ನು ಸುರಿಸುತ್ತವೆ. ಅದರಿಂದ ಪ್ರಾಣಿಗಳ ಆಹಾರವಸ್ತುಗಳು ವಿಶೇಷವಾಗಿ ವೃದ್ಧಿಯಾಗುವುವು.

೨೦-೨೧. ವಾಯುಸ್ಕಂಧಗಲ್ಲಿ ಆರನೆಯದಕ್ಕೆ ಪರಿವಹವೆಂದು ಹೆಸರು. ಅದು ಅವುಗಳಲ್ಲೆಲ್ಲ ಬಹು ಮುಖ್ಯವಾದುದು. ಅಮೃತಸಮಾನವಾದ ದಿವ್ಯಜಲದಿಂದ ಪೂರ್ಣವಾಗಿ, ತ್ರಿಪಥಗಾಮಿನಿಯೆಂಬ ಪ್ರಸಿದ್ಧಿಯನ್ನು ಪಡೆದು, ಬಹು ಪುಣ್ಯಕರವೆಂದೆನಿಸಿದ ಆಕಾಶಗಂಗಾನದಿಯನ್ನು ಧರಿಸಿರತಕ್ಕುದು ಈ ವಾಯುವೇ. ಅಲೆಗಳ ಬಡಿತದಿಂದ ಈ ನದಿಯ ನೀರು ಮುಂದೆ ನುಗ್ಗಿ ಬರಲು, ದಿಗ್ಗಜಗಳು ತಮ್ಮ ಉದ್ದವಾದ ಸೊಂಡಿಲುಗಳಿಂದ ಅದನ್ನು ಭೂಮಿಗೆ ಎರಚುತ್ತವೆ. ಅದೇ ಮಂಜು.

೨೨-೨೪. ಮೇರುಪರ್ವತಕ್ಕೆ ದಕ್ಷಿಣದಲ್ಲಿ ಹೇಮಕೂಟವೆಂಬ ಪರ್ವತವುಂಟಷ್ಟೆ! ಇದರ ದಕ್ಷಿಣಕ್ಕೂ, ಹಿಮವತ್ಪರ್ವತದ ಉತ್ತರಕ್ಕೂ ಸೇರಿದಂತೆ ಪುಂಡ್ರವೆಂಬ ಸುಪ್ರಸಿದ್ಧವಾದ ಪ್ರದೇಶವಿದೆ. ಮೇಲೆ ಹೇಳಿದಂತೆ ಮಳೆಯು ಈ ಪ್ರಾಂತದಲ್ಲಿ ವಿಶೇಷವಾಗಿ ಬಿದ್ದು ಅದನ್ನು ಸುಸಮೃದ್ಧವಾಗಿ ಮಾಡುತ್ತದೆ.

ಆನಯತ್ಯಾತ್ಮವೇಗೇನ ಸಿಂಚಯಾನೋ ಮಹಾಗಿರಿಂ ।
ಹಿಮವಂತಮತಿಕ್ರಮ್ಯ ವೃಷ್ಟಿಶೇಷಂ ತತಃ ಪರಂ ||೨೫||

ಇಹಾಭ್ಯೇತಿ ತತಃ ಪಶ್ಚಾದಿದಂ ಭೂತವಿವೃದ್ಧಯೇ ।
ವರ್ಷದ್ವಯಂ ಸಮಾಖ್ಯಾತಂ ಸಮ್ಯಗ್ವೃಷ್ಟಿವಿವರ್ಧಯೇ ||೨೬||

ಮೇಘಾಶ್ಚಾಪ್ಯಾಯನಂ ಚೈವ ಸರ್ವಮೇತತ್ಪ್ರಕೀರ್ತಿತಂ ।
ಸೂರ್ಯ ಏವ ತು ವೃಷ್ಟೀನಾಂ ಸ್ರಷ್ಟಾ ಸಮುಪದಿಶ್ಯತೇ ||೨೭||

ವರ್ಷಂ ಘರ್ಮಂ ಹಿಮಂ ರಾತ್ರಿಂ ಸಂಧ್ಯೇ ಚೈವ ದಿನಂ ತಥಾ ।
ಶುಭಾಶುಭಫಲಾನೀಹ ಧ್ರುವಾತ್ಸರ್ವಂ ಪ್ರವರ್ತತೇ ||೨೮||

ಧ್ರುವೇಣಾಧಿಷ್ಠಿತಾಶ್ಚಾಪಃ ಸೂರ್ಯೋ ವೈ ಗೃಹ್ಯ ತಿಷ್ಠತಿ ।
ಸರ್ವಭೂತಶರೀರೇಷು ತ್ವಾಪೋ ಹ್ಯಾನುಶ್ರಿತಾಶ್ಚ ಯಾಃ ||೨೯||

---

೨೫-೨೬. ಮಂಜುತುಂಬಿದ ಆ ಪ್ರದೇಶದಿಂದ ವಾಯುವು ಹಿಮವನ್ನು ಹೊತ್ತುಕೊಂಡು, ಮಹಾವೇಗದಿಂದ ಹಿಮವತ್ಪರ್ವತದ ಮೇಲೆ ಬೇಕಾದಷ್ಟು ಮಳೆಗರೆಯುತ್ತದೆ. ಬಳಿಕ ಉಳಿದ ಜಲಾಂಶವನ್ನು ಎತ್ತಿಕೊಂಡು ಆ ಮಹಾ ಗಿರಿಯನ್ನು ದಾಟಿ ಭಾರತವರ್ಷಕ್ಕೆ ಬರುತ್ತದೆ. ಪ್ರಾಣಿಗಳ ಏಳಿಗೆಗೆ ಈ ಎರಡು ವಿಧವಾದ ಮಳೆಗಳೂ ಸಮೃದ್ಧಿಯಾಗಿ ಆಗುವುದು ಆವಶ್ಯಕ.

೨೭. ಮೇಘಗಳ ಪ್ರಭೇದವನ್ನೂ, ಅವುಗಳಿಂದ ಆಗುವ ಲೋಕತೃಪ್ತಿಯನ್ನೂ ಸಂಪೂರ್ಣವಾಗಿ ಹೇಳಿದಂತಾಯಿತು. ಮಳೆಯ ಉತ್ಪತ್ತಿಗೆ ಸೂರ್ಯನೇ ಮುಖ್ಯಕಾರಣವೆಂದು ಅರಿಯಬೇಕು.

೨೮. ಮಳೆ, ಸೆಕೆ, ಮಂಜು, ರಾತ್ರಿ, ಸಂಜೆ, ದಿನ, ಶುಭಾಶುಭಫಲಗಳು ಇವೆಲ್ಲವೂ ಧ್ರುವನಿಂದಲೇ ಉಂಟಾಗುವುವು.

೨೯-೩೦. ಧ್ರುವನ ಆಧಾರದಿಂದ ಆಯಾಯಾ ಸ್ಥಳದಲ್ಲಿ ನಿಂತಿರುವ ನೀರನ್ನು ಸೂರ್ಯನು ಗ್ರಹಿಸುತ್ತಾನೆ. ಚರಾಚರಾತ್ಮಕವಾದ ಸಕಲ ಜೀವರಾಶಿಗಳ ಶರೀರದಲ್ಲಿಯೂ ಜಲಾಂಶವಿದೆ. ಸೂರ್ಯನ ತೇಜಸ್ಸಿನಿಂದ ಅವು ತಪ್ತವಾದಾಗ

ದಹ್ಯಮಾನೇಷು ತೇಷ್ವೇವ ಜಂಗಮಸ್ಥಾವರೇಷು ಚ ।
ಧೂಮಭೂತಾಸ್ತು ತಾ ಹ್ಯಾಪೋ ನಿಷ್ಕ್ರಾಮಂತೀಹ ಸರ್ವಶಃ ॥೩೦॥

ತೇನ ಚಾಭ್ರಾಣಿ ಜಾಯಂತೇ ಸ್ಥಾನಮಭ್ರಮಯಂ ಸ್ಮೃತಂ ।
ತೇಜೋಭಿಃ ಸರ್ವಲೋಕಸ್ಯ ಆದತ್ತೇ ರಶ್ಮಿಭಿರ್ಜಲಂ ॥೩೧॥

ಸಮುದ್ರಾದ್ವಾಯುಸಂಯೋಗಾದ್ವಹಂತ್ಯಾಪೋ ಗಭಸ್ತಯಃ ।
ತತಸ್ತ್ವೃತುವಶಾತ್ಕಾಲೇ ಪರಿವರ್ತ್ಯ ದಿವಾಕರಃ ॥೩೨॥

ನಿಯಚ್ಛತ್ಯಾಪೋ ಮೇಘೇಭ್ಯಃ ಶುಕ್ಲಾಃ ಶುಕ್ಲೈಸ್ತು ರಶ್ಮಿಭಿಃ ।
ಅಭ್ರಸ್ಥಾಃ ಪ್ರಪತಂತ್ಯಾಪೋ ವಾಯುನಾ ಸಮುದೀರಿತಾಃ ॥೩೩॥

ತತೋ ವರ್ಷತಿ ಷಣ್ಮಾಸಾನ್ ಸರ್ವಭೂತವಿವೃದ್ಧಯೇ ।
ವಾಯುಭಿಃ ಸ್ತನಿತಂ ಚೈವ ವಿದ್ಯುತಸ್ತ್ವಗ್ನಿಜಾಃ ಸ್ಮೃತಾಃ ॥೩೪॥

---

ಆ ಜಲಭಾಗವು ಹಬೆಯ ರೂಪವನ್ನು ತಾಳಿ ಎಲ್ಲ ದಿಕ್ಕುಗಳಲ್ಲಿಯೂ ವ್ಯಾಪಿಸುವುದು. ಅದರಿಂದ ಮೋಡಗಳು ಹುಟ್ಟಿ ಅಂತರಿಕ್ಷದಲ್ಲಿ ತೇಲಾಡುವುವು. ಸೂರ್ಯನು ಸಕಲ ಲೋಕಗಳಲ್ಲಿರುವ ಜಲವನ್ನೂ ತನ್ನ ಕಿರಣಗಳ ತೇಜಸ್ಸಿನಿಂದ ಆಕರ್ಷಿಸುವನು.

೩೨. ಸೂರ್ಯನ ಕಿರಣಗಳು ವಾಯುವಿನ ಸಂಯೋಗದಿಂದ ಸಮುದ್ರದ ನೀರನ್ನು ಹಬೆಯ ರೂಪವಾಗಿ ಒಯ್ಯುವುವು. ಬಳಿಕ ಅಂತರಿಕ್ಷದಲ್ಲಿ ಸಂಚರಿಸುತ್ತಿರುವ ಸೂರ್ಯನು ಋತುಧರ್ಮವನ್ನು ಅನುಸರಿಸಿ, ಶುಭ್ರವಾದ ತನ್ನ ರಶ್ಮಿಗಳಿಂದ ಮೇಘಗಳಲ್ಲಿರುವ ನಿರ್ಮಲವಾದ ನೀರನ್ನು ಕೆಳಕ್ಕೆ ಬೀಳದಂತೆ ತಡೆಯುವನು.

೩೩-೩೪. ಗಾಳಿಯು ಬೀಸಿದಾಗ ಮೋಡಗಳಲ್ಲಿದ್ದ ನೀರು ನೆಲಕ್ಕೆ ಬೀಳುತ್ತದೆ. ಸಕಲ ಜೀವಜಂತುಗಳ ಹಿತಕ್ಕೋಸ್ಕರವಾಗಿ ಆರು ತಿಂಗಳು ಮಳೆ ಬೀಳುವುದು. ಗುಡುಗು ವಾಯುವಿನಿಂದಲೂ, ಮಿಂಚು ಅಗ್ನಿಯಿಂದಲೂ ಉತ್ಪನ್ನವಾಗುವುವು.

ಮೇಹನಾಚ್ಚ ಮಿಹೇರ್ಧಾತೋರ್ಮೇಘತ್ವಂ ವ್ಯಂಜಯಂತಿ ಚ ।
ನ ಭ್ರಶ್ಯಂತೇ ತತೋ ಹ್ಯಾಪಸ್ತಸ್ಮಾದಭ್ರಸ್ಯ ವೈ ಸ್ಥಿತಿಃ ।
ಸ್ರಷ್ಟಾಽಸೌ ವೃಷ್ಟಿಸರ್ಗಸ್ಯ ಧ್ರುವೇಣಾಧಿಷ್ಠಿತೋ ರವಿಃ ॥೩೫॥
ಧ್ರುವೇಣಾಧಿಷ್ಠಿತೋ ವಾಯುರ್ವೃಷ್ಟಿಂ ಸಂಹರತೇ ಪುನಃ ।
ಗ್ರಹಾನ್ನಿವೃತ್ಯ ಸೂರ್ಯಾತ್ತು ಚರತೇ ಋಕ್ಷಮಂಡಲಂ ॥೩೬॥
ಚಾರಸ್ಯಾಂತೇ ವಿಶತ್ಯರ್ಕಂ ಧ್ರುವೇಣ ಸಮಧಿಷ್ಠಿತಂ ।
ಅತಃ ಸೂರ್ಯರಥಸ್ಯಾಪಿ ಸನ್ನಿವೇಶಂ ಪ್ರಚಕ್ಷತೇ ॥೩೭॥
ಸ್ಥಿತೇನ ತ್ವೇಕಚಕ್ರೇಣ ಪಂಚಾರೇಣ ತ್ರಿಣಾಭಿನಾ ।
ಹಿರಣ್ಮಯೇನಾಣುನಾ ವೈ ಅಷ್ಟಚಕ್ರೈಕನೇಮಿನಾ ।
ಚಕ್ರೇಣ ಭಾಸ್ವತಾ ಸೂರ್ಯಃ ಸ್ಯಂದನೇನ ಪ್ರಸರ್ಪಿಣಾ ॥೩೮॥

---

೩೫. ಸೇಚನಾರ್ಥಕವಾದ ಮಿಹಿಧಾತುವಿನಿಂದ ಮೇಘವೆಂಬ ಶಬ್ದವು ಹುಟ್ಟಿದೆ. ಸೇಚನವೆಂದರೆ ನೀರೆರೆಯುವುದು ಎಂದು ಅರ್ಥ. ಮೋಡವು ತನ್ನಲ್ಲಿರುವ ನೀರನ್ನು ಸುರಿಸುವುದರಿಂದ ಅದಕ್ಕೆ ಮೇಘವೆಂಬ ಹೆಸರು ಸಲ್ಲುತ್ತದೆ. ಮೋಡದಿಂದ ನೀರು ಅಕಾಲದಲ್ಲಿ ಭ್ರಂಶವಾಗದೆ ಎಂದರೆ ಸುರಿಯದೆ ಇರುವುದರಿಂದ ಅದಕ್ಕೆ ಅಭ್ರವೆಂದೂ ಹೆಸರುಂಟು. ಭ್ರಂಶ್ ಧಾತುವು ನ ಎಂಬ ನಿಪಾತದೊಡನೆ ಸೇರಿ ಈ ರೂಪವು ಹುಟ್ಟಿದೆ. ಧ್ರುವನ ಆಧಾರದಿಂದ ಸಂಚರಿಸುವ ಸೂರ್ಯನು ಮಳೆಯ ಉತ್ಪತ್ತಿಗೆ ಮುಖ್ಯಕಾರಣವಾಗಿದ್ದಾನೆ.

೩೬. ಧ್ರುವನಿಂದ ನಿಯಮಿತವಾದ ವಾಯುವು ಮಳೆಯು ನಿಲ್ಲುವಂತೆ ಮಾಡುತ್ತದೆ. ವೃಷ್ಟಿಪ್ರತಿಬಂಧ ರೂಪವಾದ ಈ ಕಾರ್ಯವು ಮುಗಿದ ಬಳಿಕ ಅದು ಸೂರ್ಯನಿಂದ ನಕ್ಷತ್ರಮಂಡಲದ ಕಡೆಗೆ ಸಂಚರಿಸುವುದು.

೩೭. ನಕ್ಷತ್ರಮಂಡಲದ ಸಂಚಾರಕ್ಕೆ ಸಹಕಾರಿಯಾದ ಆ ವಾಯುಪಾಶವು ಅಲ್ಲಿಂದ ಪುನಃ ಧ್ರುವನ ಅಧಿಕಾರಕ್ಕೊಳಗಾಗಿರುವ ಸೂರ್ಯನನ್ನೇ ಸೇರುವುದು. ಇನ್ನು ಮುಂದೆ ಸೂರ್ಯನ ರಥದ ಸನ್ನಿವೇಶವನ್ನು ಹೇಳುವೆನು.

೩೮. ಸೂರ್ಯನ ತೇರಿಗೆ ಒಂದೇ ಚಕ್ರವಿರುವುದು. ಅದಕ್ಕೆ ಅರೆಗಾಲುಗಳು ಐದು ; ನಾಭಿಗಳು ಮೂರು. ಅದು ಸುವರ್ಣಮಯವಾಗಿ, ತೆಳುವಾದ ಎಂಟು ಸುತ್ತುಪಟ್ಟಿಗಳಿಂದಲೂ ಒಂದು ಪಟ್ಟಿಯಿಂದಲೂ ಕೂಡಿ ಚಲಿಸುತ್ತಿರುವುದು.

ಶತಯೋಜನಸಾಹಸ್ರೋ ವಿಸ್ತಾರಾಯಾಮ ಉಚ್ಯತೇ ।
ದ್ವಿಗುಣಾ ಚ ರಥೋಪಸ್ಥಾದೀಷಾದಂಡಃ ಪ್ರಮಾಣತಃ ॥೩೯॥

ಸ ತಸ್ಯ ಬ್ರಹ್ಮಣಾ ಸೃಷ್ಟೋ ರಥೋ ಹ್ಯರ್ಥವಶೇನ ತು ।
ಅಸಂಗಃ ಕಾಂಚನೋ ದಿವ್ಯೋ ಯುಕ್ತಃ ಪವನಗೈರ್ಹಯೈಃ ॥೪೦॥

ಛಂದೋಭಿರ್ವಾಜಿ ರೂಪೈಸ್ತೈರ್ಯಥಾಚಕ್ರಂ ಸಮಾಸ್ಥಿತೈಃ ।
ವಾರುಣಸ್ಯ ರಥಸ್ಯೇಹ ಲಕ್ಷಣೈಃ ಸದೃಶಶ್ಚ ಸಃ ॥೪೧॥

ತೇನಾಽಸೌ ಚರತಿ ವ್ಯೋಮ್ನಿ ಭಾಸ್ವಾನನುದಿನಂ ದಿವಿ ।
ಅಥಾಂಗಾನಿ ತು ಸೂರ್ಯಸ್ಯ ಪ್ರತ್ಯಂಗಾನಿ ರಥಸ್ಯ ಚ ।
ಸಂವತ್ಸರಸ್ಯಾವಯವೈಃ ಕಲ್ಪಿತಾನಿ ಯಥಾಕ್ರಮಂ ॥೪೨॥

ಅಹರ್ನಾಭಿಸ್ತು ಸೂರ್ಯಸ್ಯ ಏಕಚಕ್ರಸ್ಯ ವೈ ಸ್ಮೃತಃ ।
ಅರಾಃ ಸಂವತ್ಸರಾಸ್ತಸ್ಯ ನೇಮ್ಯಃ ಷಡೃತವಃ ಸ್ಮೃತಾಃ ॥೪೩॥

---

೩೯. ರಥದ ಒಳಭಾಗವು ಒಂದು ಲಕ್ಷಯೋಜನ ಉದ್ದವಾಗಿಯೂ ಅಷ್ಟೇ ಅಗಲವಾಗಿಯೂ ಇದೆ. ಮೂಕಿಯ ಮರದ ಅಳತೆ ಇದರ ಎರಡರಷ್ಟಾಗುವುದು.

೪೦. ಸುವರ್ಣಮಯವಾದ ಆ ದಿವ್ಯರಥವನ್ನು ಬ್ರಹ್ಮದೇವನು ದೇವತೆಗಳ ಮತ್ತು ಸಕಲಲೋಕಗಳ ಪ್ರಯೋಜನಕ್ಕೋಸ್ಕರ ನಿರ್ಮಿಸಿದನು. ಅದಕ್ಕೆ ಹೂಡಿರುವ ಕುದುರೆಗಳು ವಾಯುವಿನಂತೆ ಹೋಗಬಲ್ಲುವು. ಆ ತೇರಿನ ಸಂಚಾರಕ್ಕೆ ವಿಘ್ನಗಳ ಸಂಬಂಧವೇ ಇರದು.

೪೧. ಗಾಯತ್ರಿ ಮೊದಲಾದ ಛಂದಸ್ಸುಗಳು ಕುದುರೆಗಳ ರೂಪವನ್ನು ಧರಿಸಿ ಆಯಾ ಸ್ಥಾನಗಳಲ್ಲಿ ಸನ್ನದ್ಧವಾಗಿವೆ. ಆ ರಥವು ವರುಣನ ರಥವನ್ನು ಲಕ್ಷಣಗಳಲ್ಲಿ ಹೋಲುವುದು.

೪೨. ಸೂರ್ಯನು ಆ ತೇರಿನಲ್ಲಿ ಕುಳಿತು ಪ್ರತಿದಿನವೂ ಅಂತರಿಕ್ಷದಲ್ಲಿ ಸಂಚರಿಸುತ್ತಾನೆ. ಅವನ ಅಂಗಗಳೂ ತೇರಿನ ಬೇರೆ ಬೇರೆ ಭಾಗಗಳೂ ಸಂವತ್ಸರದ ಅವಯವಗಳಿಂದ ಯಥಾಕ್ರಮವಾಗಿ ನಿರ್ಮಿತವಾಗಿವೆ.

೪೩-೪೫. ಒಂದೇ ಚಕ್ರವುಳ್ಳ ಆ ಸೂರ್ಯನ ತೇರಿಗೆ ಅಹಸ್ಸೇ ನಾಭಿಯೆಂದು ಪ್ರಸಿದ್ಧವಾಗಿದೆ. ಸಂವತ್ಸರಗಳು ಅದರ ಆರೆಗಾಲುಗಳು. ರಾತ್ರಿಯು ಅದರ

ರಾತ್ರಿರ್ವರೂಥೋ ಧರ್ಮಶ್ಚ ಧ್ವಜ ಊರ್ಧ್ವಂ ವ್ಯವಸ್ಥಿತಃ ।
ಅಕ್ಷಕೋಟ್ಯೋ ಯುಗಾನ್ಯಸ್ಯ ಆರ್ತವಾಹಾಃ ಕಲಾಃ ಸ್ಮೃತಾಃ ॥೪೪॥

ತಸ್ಯ ಕಾಷ್ಠಾ ಸ್ಮೃತಾ ಘೋಣಾ ದಂತಪಙ್ಕ್ತಿಃ ಕ್ಷಣಾಸ್ತು ವೈ ।
ನಿಮೇಷಶ್ಚಾನುಕರ್ಷೋಽಸ್ಯ ಈಷಾ ಚಾಸ್ಯ ಕಲಾ ಸ್ಮೃತಾ ॥೪೫॥

ಯುಗಾಕ್ಷಕೋಟೀ ತೇ ತಸ್ಯ ಅರ್ಥಕಾಮಾವುಭೌ ಸ್ಮೃತೌ ।
ಸಪ್ತಾಶ್ವರೂಪಾಶ್ಛಂದಾಂಸಿ ವಹಂತೇ ವಾಯುರಂಹಸಾ ॥೪೬॥

ಗಾಯತ್ರೀ ಚೈವ ತ್ರಿಷ್ಟುಪ್ಚ ಜಗತ್ಯನುಷ್ಟುಪ್ತಥೈವ ಚ ।
ಪಙ್ಕ್ತಿಶ್ಚ ಬೃಹತೀ ಚೈವ ಉಷ್ಣಿಗೇವ ತು ಸಪ್ತಮಂ ॥೪೭॥

ಚಕ್ರಮಕ್ಷೇ ನಿಬದ್ಧಂ ತು ಧ್ರುವೇ ಚಾಕ್ಷಃ ಸಮರ್ಪಿತಃ ।
ಸಹಚಕ್ರೋ ಭ್ರಮತ್ಯಕ್ಷಃ ಸಹಾಕ್ಷೋ ಭ್ರಮತಿ ಧ್ರುವಃ ॥೪೮॥

---

ಮುಸುಕು. ಧರ್ಮವು ಮೇಲೆ ಹಾರಾಡುವ ಬಾವುಟ. ಯುಗಗಳು ಅಚ್ಚಿನ ತುದಿಗಳು. ಕಲೆಗಳು ಕುದುರೆಗಳ ಕೆನೆತದ ಸದ್ದು. ದಿಕ್ಕುಗಳು ಘೋಣಾ ಎಂಬ ದೀರ್ಘದಂಡ. ಕ್ಷಣಗಳು ದಂತಪಙ್ಕ್ತಿಗಳು. ನಿಮೇಷಗಳು ತೇರಿನ ಮೂಕಿಯ ಅಡ್ಡಪಟ್ಟಿ. ಕಲೆಯು ಮೂಕಿಮರ. ಅರ್ಥಕಾಮಗಳೆಂಬ ಪುರುಷಾರ್ಥಗಳು ನೊಗದ ಮತ್ತು ಅಚ್ಚಿನಮರದ ತುದಿಗಳು.

೪೬-೪೭. ಗಾಯತ್ರಿ, ತ್ರಿಷ್ಟುಪ್, ಜಗತಿ, ಅನುಷ್ಟುಪ್, ಪಙ್ಕ್ತಿ, ಬೃಹತಿ, ಉಷ್ಣಿಕ್ ಎಂಬ ಏಳು ಛಂದಸ್ಸುಗಳು ಕುದುರೆಗಳ ರೂಪವನ್ನು ತಾಳಿ ವಾಯುವೇಗದಿಂದ ಆ ರಥವನ್ನು ಎಳೆಯುವುವು.

೪೮. ಚಕ್ರವು ಅಚ್ಚಿನೊಡನೆಯೂ, ಅಚ್ಚು ಧ್ರುವನೊಡನೆಯೂ ಕೂಡಿಕೊಂಡಿವೆ. ಚಕ್ರದ ಸಹಿತವಾಗಿ ಅಚ್ಚು ಚಲಿಸುವುದು. ಅಚ್ಚಿನ ಸಮೇತವಾಗಿ ಧ್ರುವನು ತಿರುಗುವನು.

**ಅಕ್ಷಃ ಸಹೈವ ಚಕ್ರೇಣ ಭ್ರಮತೇಽಸೌ ಧ್ರುವೇರಿತಃ ।**
**ಏವಮರ್ಥವಶಾತ್ತಸ್ಯ ಸಂನಿವೇಶೋ ರಥಸ್ಯ ತು ॥೪೯॥**

**ತಥಾ ಸಂಯೋಗಭಾಗೇನ ಸಿದ್ಧೋ ವೈ ಭಾಸ್ಕರೋ ರಥಃ ।**
**ತೇನಾಸೌ ತರಣಿರ್ದೇವೋ ನಭಸಃ ಸರ್ಪತೇ ದಿವಂ ॥೫೦॥**

**ಯುಗಾಕ್ಷಕೋಟೇ ತೇ ತಸ್ಯ ದಕ್ಷಿಣೇ ಸ್ಯಂದನಸ್ಯ ತು ।**
**ಭ್ರಮತೋ ಭ್ರಮತೋ ರಶ್ಮೀ ತೌ ಚಕ್ರಯುಗಯೋಸ್ತು ವೈ ॥೫೧॥**

**ಮಂಡಲಾನಿ ಭ್ರಮಂತೇಽಸ್ಯ ಖೇಚರಸ್ಯ ರಥಸ್ಯ ತು ।**
**ಕುಲಾಲಚಕ್ರಭ್ರಮವನ್ಮಂಡಲಂ ಸರ್ವತೋ ದಿಶಂ ॥೫೨॥**

**ಯುಗಾಕ್ಷಕೋಟೇ ತೇ ತಸ್ಯ ವಾತೋರ್ಮೀ ಸ್ಯಂದನಸ್ಯ ತು ।**
**ಸಂಕ್ರಮೇತೇ ಧ್ರುವಮಹೋ ಮಂಡಲೇ ಸರ್ವತೋದಿಶಂ ॥೫೩॥**

---

೪೯. ಅಚ್ಚು ಚಕ್ರದೊಡನೆ ತಿರುಗುವುದೂ ಸಹ ಧ್ರುವನ ಪ್ರೇರಣೆಯಿಂದಲೇ. ಸೂರ್ಯನ ರಥದ ಸನ್ನಿವೇಶವು ಹೀಗೆ ಗೊತ್ತಾದ ಪ್ರಯೋಜನವನ್ನು ಲಕ್ಷ್ಯದಲ್ಲಿಟ್ಟುಕೊಂಡು ನಿರ್ಮಿತವಾಗಿದೆ.

೫೦. ಈ ರಥಕ್ಕೂ ಸೂರ್ಯನಿಗೂ ಸಂಬಂಧವು ಎಡೆಬಿಡದೆ ಸ್ಥಿರವಾಗಿರುವುದು. ಸೂರ್ಯಭಗವಂತನು ಇದರಲ್ಲಿ ಕುಳಿತು ಗಗನಮಂಡಲದಲ್ಲೆಲ್ಲ ಸಂಚರಿಸುತ್ತಾನೆ.

೫೧. ತೇರಿನ ಬಲಗಡೆಯಲ್ಲಿ ನೊಗದ ಮತ್ತು ಅಚ್ಚಿನ ತುದಿಗಳಿಗೆ ಎರಡು ಹಗ್ಗಗಳು (ವಾಯುರೂಪವಾದ ಪಾಶಗಳು) ಕಟ್ಟಲ್ಪಟ್ಟಿವೆ. ಅವು ಮಂಡಲಾಕಾರವಾಗಿ ಸುತ್ತುವ ತೇರಿನ ಚಕ್ರವನ್ನೂ ನೊಗವನ್ನೂ ಬಳಸಿಕೊಂಡಿರುವುವು.

೫೨. ಅಂತರಿಕ್ಷದಲ್ಲಿ ಚಲಿಸುವ ಈ ತೇರಿನ ಸಂಚಾರಮಾರ್ಗಗಳು ಮಂಡಲಾಕಾರವಾಗಿರುವುವು. ಕುಂಬಾರನ ಚಕ್ರದಂತೆ ಅದು ಎಲ್ಲ ದಿಕ್ಕುಗಳಲ್ಲಿಯೂ ಸುತ್ತುತ್ತಿರುವುದು.

೫೩. ಆ ತೇರಿನ ಅಚ್ಚು ಮತ್ತು ನೊಗಗಳ ತುದಿಗೆ ಕಟ್ಟಿರುವ ವಾಯುಪಾಶಗಳು, ಮಂಡಲಾಕಾರವಾದ ಆ ಮಾರ್ಗದ ಯಾವ ದಿಕ್ಕಿನಲ್ಲಿ ತೇರು ಸಂಚರಿಸುತ್ತಿರಲಿ, ಧ್ರುವನೊಂದಿಗೆ ಸೇರಿಕೊಂಡೇ ಇರುವುವು.

ಹ್ರಸತಸ್ತಸ್ಯ ರಶ್ಮೀ ತೇ ಮಂಡಲೇ ತೂತ್ತರಾಯಣೇ ।
ವರ್ಧೇತೇ ದಕ್ಷಿಣೇಷ್ವತ್ರ ಭ್ರಮತೋ ಮಂಡಲಾನಿ ತು ॥೫೪॥

ಯುಗಾಕ್ಷಕೋಟೀಸಂಬದ್ಧೌ ದ್ವೌ ರಶ್ಮೀ ಸ್ಯಂದನಸ್ಯ ತು ।
ಧ್ರುವೇಣ ಪ್ರಗೃಹೀತೌ ತೌ ರಥೇ ವೈ ನಯತೋ ರವಿಂ ॥೫೫॥

ಆಕೃಷ್ಯೇತೇ ಯದಾ ತೇ ತು ಧ್ರುವೇಣ ಸಮಧಿಷ್ಠಿತೇ ।
ತದಾ ಸೋಽಭ್ಯಂತರೇ ಸೂರ್ಯೋ ಭ್ರಮತೇ ಮಂಡಲಾನಿ ತು ॥೫೬॥

ಅಶೀತಿಮಂಡಲಶತಂ ಕಾಷ್ಠಯೋರುಭಯೋಶ್ಚರೇ ।
ಧ್ರುವೇಣ ಮುಚ್ಯಮಾನೇನ ಪುನಾ ರಶ್ಮಿಯುಗೇನ ಚ ॥೫೭॥

ತಥೈವ ಬಾಹ್ಯತಃ ಸೂರ್ಯೋ ಭ್ರಮತೇ ಮಂಡಲಾನಿ ತು ।
ಉದ್ವೇಷ್ಟಯನ್ಸ್ವೈ ವೇಗೇನ ಮಂಡಲಾನಿ ತು ಗಚ್ಛತಿ ॥೫೮॥

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಭುವನಕೋಶೇ ಸೂರ್ಯಾಚಂದ್ರ ಮಸಶ್ಚಾರೋ ನಾಮ ಪಂಚವಿಂಶತ್ಯಧಿಕ ಶತತಮೋಽಧ್ಯಾಯಃ**

---

೫೪-೫೫. ಮಂಡಲಾಕಾರವಾದ ಉತ್ತರಮಾರ್ಗದಲ್ಲಿ ಸೂರ್ಯನು ಸಂಚರಿಸುತ್ತಿರುವಾಗ ಈ ವಾಯುಪಾಶಗಳು ಹ್ರಸ್ವವಾಗುವುವು. ದಕ್ಷಿಣಮಾರ್ಗದಲ್ಲಿ ಅವನು ತಿರುಗುವಾಗ ಇವು ದೀರ್ಘವಾಗುವುವು. ಹೀಗೆ ನೊಗದ ತುದಿಗೂ ಅಚ್ಚಿನ ತುದಿಗೂ ಕಟ್ಟಿರುವ ಎರಡು ಹಗ್ಗಗಳನ್ನೂ ಧ್ರುವನು ಹಿಡಿದುಕೊಂಡಿದ್ದಾನೆ. ಅವು ರಥದಲ್ಲಿ ಕುಳಿತುಕೊಂಡಿರುವ ಸೂರ್ಯನನ್ನು ಒಂದೆಡೆಯಿಂದ ಮತ್ತೊಂದೆಡೆಗೆ ಒಯ್ಯುವುವು.

೫೬. ಆ ಹಗ್ಗಗಳೆರಡನ್ನೂ ಧ್ರುವನು ತನ್ನ ವಶದಲ್ಲಿರಿಸಿಕೊಂಡು ಸೆಳೆದು ಹಿಡಿದಾಗ, ಸೂರ್ಯನು ಅಂತರ್ವಲಯದಲ್ಲಿ ಮಂಡಲಾಕಾರವಾಗಿ ಸಂಚರಿಸುವನು.

೫೭-೫೮. ದಕ್ಷಿಣೋತ್ತರ ಮಾರ್ಗಗಳೆರಡರಲ್ಲೂ ಸೂರ್ಯನು ಒಂದು ನೂರೆಂಬತ್ತು ರೇಖಾವಲಯಗಳಲ್ಲಿ ಸಂಚರಿಸುವನು. ಎಳೆದು ಹಿಡಿದಿದ್ದ ಹಗ್ಗಗಳೆರಡನ್ನೂ ಧ್ರುವನು ಬಿಟ್ಟರೆ, ಅವನು ಬಹಿರ್ವಲಯದಲ್ಲಿ ಎಂದರೆ ದಕ್ಷಿಣದಿಕ್ಕಿನ ಮಂಡಲಾಕಾರವಾದ ಮಾರ್ಗಗಳಲ್ಲಿ ತಿರುಗುವನು. ಹೀಗೆ ಎಲ್ಲ ಮಂಡಲಗಳನ್ನೂ ಬಳಸುತ್ತಾ ಆತನು ಬಹಳ ವೇಗದಿಂದ ಸುತ್ತುತ್ತಿರುವನು.

ಅಧ್ಯಾಯ ೧೨೫

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಚಂದ್ರಸೂರ್ಯರ ಸಂಚಾರಕ್ರಮವನ್ನು ವರ್ಣಿಸಿದೆ.

ಶಿಂಶುಮಾರವೆಂಬ ಕಾಲಚಕ್ರವು ಸಮಸ್ತ ಗ್ರಹನಕ್ಷತ್ರಗಳಿಗೂ ಆಧಾರವಾಗಿದೆ. ಧ್ರುವನು ಮೇಟೀಕಂಬದಂತೆ ಮಧ್ಯದಲ್ಲಿ ಸ್ಥಿರವಾಗಿ ನಿಂತು ಇವುಗಳನ್ನು ಗೊತ್ತಾದ ಮಾರ್ಗಗಳಲ್ಲಿ ತಿರುಗಿಸುತ್ತಾನೆ. ಮೋಡಗಳಲ್ಲಿ ಜೀಮೂತ, ಪುಷ್ಕರಾವರ್ತ ಮೊದಲಾದ ಹಲವು ಭೇದಗಳಿವೆ. ಸೂರ್ಯನ ಕಿರಣಗಳ ಔಷ್ಣ್ಯದಿಂದ ನೀರು ಆವಿಯಾಗಿ ಮೇಲಕ್ಕೆ ಹೋಗುವುದರಿಂದ ಮೇಘಗಳು ಉತ್ಪನ್ನವಾಗುತ್ತವೆ. ಸೂರ್ಯನ ರಥವು ಸಂವತ್ಸರದ ಅವಯವಗಳ ಸ್ವರೂಪವಾಗಿದೆ. ಅದರ ನೊಗದ ತುದಿಗೂ ಅಚ್ಚಿನ ತುದಿಗೂ ವಾಯುರೂಪವಾದ ಎರಡು ಪಾಶಗಳನ್ನು ಬಿಗಿದಿದೆ. ಧ್ರುವನು ಅವೆರಡನ್ನೂ ಹಿಡಿದುಕೊಂಡು ಕ್ಲೃಪ್ತಕಾಲದಲ್ಲಿ ಎಳೆದುಕೊಳ್ಳುತ್ತಲೂ, ಸಡಿಲ ಬಿಡುತ್ತಲೂ ಇರುವುದರಿಂದ ಸೂರ್ಯನು ಉತ್ತರಮಾರ್ಗದಲ್ಲಿಯೂ ದಕ್ಷಿಣಮಾರ್ಗದಲ್ಲಿಯೂ ಸಂಚರಿಸುವನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಭುವನಕೋಶದೊಳಗೆ ಸೂರ್ಯಚಂದ್ರರ ಸಂಚಾರಕ್ರಮವೆಂಬ ನೂರಿಪ್ಪತ್ತೈದನೆಯ ಅಧ್ಯಾಯವು ಮುಗಿದುದು.



## ಅಥ ಷಡ್ವಿಂಶತ್ಯಧಿಕಶತತಮೋऽಧ್ಯಾಯಃ

॥ ಸೂತ ಉವಾಚ ॥

ಸ ರಥೋऽಧಿಷ್ಠಿತೋ ದೇವೈರ್ಮಾಸಿ ಮಾಸಿ ಯಥಾಕ್ರಮಮ್ ।
ತತೋ ವಹತ್ಯಥಾದಿತ್ಯಂ ಬಹುಭಿರ್ಋಷಿಭಿಃ ಸಹ ॥ ೧ ॥

ಗಂಧರ್ವೈರಪ್ಸರೋಭಿಶ್ಚ ಸರ್ವಗ್ರಾಮಣಿರಾಕ್ಷಸೈಃ ।
ಏತೇ ವಸಂತಿ ವೈ ಸೂರ್ಯೇ ಮಾಸೌ ದ್ವೌ ದ್ವೌ ಕ್ರಮೇಣ ಚ ॥ ೨ ॥

ಧಾತಾರ್ಯಮಾ ಪುಲಸ್ತ್ಯಶ್ಚ ಪುಲಹಶ್ಚ ಪ್ರಜಾಪತೀ ।
ಉರಗೌ ವಾಸುಕಿಶ್ಚೈವ ಸಂಕೀರ್ಣಶ್ಚೈವ ತಾವುಭೌ ॥ ೩ ॥

ತುಂಬುರುರ್ನಾರದಶ್ಚೈವ ಗಂಧರ್ವೌ ಗಾಯತಾಂ ವರೌ ।
ಕೃತಸ್ಥಲಾಪ್ಸರಾ ಚೈವ ಯಾ ಚ ಸಾ ಪುಂಜಕಸ್ಥಲೀ ॥ ೪ ॥

ಗ್ರಾಮಣ್ಯೌ ರಥಕೃತ್ತಸ್ಯ ರಥೌಜಾಶ್ಚೈವ ತಾವುಭೌ ।
ರಕ್ಷೋ ಹೇತಿಃ ಪ್ರಹೇತಿಶ್ಚ ಯಾತುಧಾನಾವುಭೌ ಸ್ಮೃತೌ ॥ ೫ ॥

---

೧-೨. ಸೂತಪೌರಾಣಿಕನು ಹೇಳಿದನು.—ಸೂರ್ಯನು ಏರುವ ಆ ತೇರಿನಲ್ಲಿ ಪ್ರತಿಯೊಂದು ತಿಂಗಳೂ ಕ್ರಮವಾಗಿ ಬೇರೆಬೇರೆ ದೇವತೆಗಳು, ಋಷಿಗಳು, ಗಂಧರ್ವರು, ಅಪ್ಸರಸ್ತ್ರೀಯರು, ಸರ್ಪರು, ಗ್ರಾಮಣಿಗಳು, ರಾಕ್ಷಸರು ಇವರೆಲ್ಲರೂ ಕುಳಿತುಕೊಳ್ಳುವರು. ಅವರು ಅನುಕ್ರಮವಾಗಿ ಎರಡೆರಡು ತಿಂಗಳ ಕಾಲ ಸೂರ್ಯಮಂಡಲದಲ್ಲಿ ವಾಸಿಸುವರು.

೩-೫. ಧಾತ, ಅರ್ಯಮ ಎಂಬ ಆದಿತ್ಯರಿಬ್ಬರು, ಪುಲಸ್ತ್ಯ ಮತ್ತು ಪುಲಹ ಪ್ರಜಾಪತಿಗಳು, ವಾಸುಕಿಸಂಕೀರ್ಣರೆಂಬ ಉರಗರು, ಗಾಯಕಶ್ರೇಷ್ಠರಾದ ತುಂಬುರ, ನಾರದರೆಂಬ ಗಂಧರ್ವರು, ಕೃತಸ್ಥಲೆ ಮತ್ತು ಪುಂಜಕಸ್ಥಲಿಯೆಂಬ ಅಪ್ಸರಸ್ತ್ರೀಯರು, ರಥಕೃತ್, ರಥೌಜ ಎಂಬ ಯಕ್ಷರಿಬ್ಬರು, ರಕ್ಷೋಹೇತಿ ಮತ್ತು ಪ್ರಹೇತಿಗಳೆಂಬ ರಾಕ್ಷಸರು ಇವರೆಲ್ಲರೂ ಚೈತ್ರ ವೈಶಾಖಮಾಸಗಳಲ್ಲಿ ಸೂರ್ಯನಲ್ಲಿ ವಾಸಿಸುವರು.

ಮಧುಮಾಧವಯೋರ್ಹ್ಯೇಷ ಗಣೋ ವಸತಿ ಭಾಸ್ಕರೇ ।
ವಸೇದ್ಗ್ರೀಷ್ಮೇ ತು ದ್ವೌ ಮಾಸೌ ಮಿತ್ರಶ್ಚ ವರುಣಶ್ಚ ವೈ ॥ ೬ ॥

ಋಷೀ ಅತ್ರಿರ್ವಸಿಷ್ಠಶ್ಚ ನಾಗೌ ತಕ್ಷಕರಂಭಕೌ ।
ಮೇನಕಾ ಸಹಧನ್ಯಾ ಚ ಹಾಹಾ ಹೂಹೂಶ್ಚ ಗಾಯಕೌ ॥ ೭ ॥

ರಥಂತರಶ್ಚ ಗ್ರಾಮಣ್ಯೌ ರಥಕೃಚ್ಚೈವ ತಾವುಭೌ ।
ಪುರುಷಾದೋ ವಧಶ್ಚೈವ ಯಾತುಧಾನೌ ತು ತೌ ಸ್ಮೃತೌ ॥ ೮ ॥

ಏತೇ ವಸಂತಿ ವೈ ಸೂರ್ಯೇ ಮಾಸಯೋಃ ಶುಚಿಶುಕ್ರಯೋಃ ।
ತತಃ ಸೂರ್ಯೇ ಪುನಶ್ಚಾನ್ಯಾ ನಿವಸಂತಿ ಸ್ಮ ದೇವತಾಃ ॥ ೯ ॥

ಇಂದ್ರಶ್ಚೈವ ವಿವಸ್ವಾಂಶ್ಚ ಅಂಗಿರಾ ಭೃಗುರೇವ ಚ ।
ಏಲಾಪತ್ರಸ್ತಥಾ ಸರ್ಪಃ ಶಂಖಪಾಲಶ್ಚ ಪನ್ನಗಃ ॥೧೦॥

ವಿಶ್ವಾವಸುಸುಷೇಣೌ ಚ ಪ್ರಾತಶ್ಚೈವ ರಥಶ್ಚ ಹಿ ।
ಪ್ರಮ್ಲೋಚೇತ್ಯಪ್ಸರಾಶ್ಚೈವ ನಿಮ್ಲೋಚಂತೀ ಚ ತೇ ಉಭೇ ॥೧೧॥

---

೬-೮. ಗ್ರೀಷ್ಮರ್ತುವಿನ ಎರಡು ತಿಂಗಳಲ್ಲಿ ಬೇರೆ ಗಣಗಳು ವಾಸಿಸುವುವು. ಆದಿತ್ಯರಲ್ಲಿ ಮಿತ್ರವರುಣರು, ಋಷಿಗಳಲ್ಲಿ ಅತ್ರಿವಸಿಷ್ಠರು, ನಾಗರಲ್ಲಿ ತಕ್ಷಕರಂಭಕರು, ಅಪ್ಸರಸ್ತ್ರೀಯರಲ್ಲಿ ಮೇನಕೆಸಹಧನ್ಯೆಯರು, ಗಂಧರ್ವರಲ್ಲಿ ಹಾಹಾ ಹೂಹೂಗಳು, ಯಕ್ಷರಲ್ಲಿ ರಥಂತರ ರಥಕೃತ್ತುಗಳು, ರಾಕ್ಷಸರಲ್ಲಿ ಪುರುಷಾದ ಮತ್ತು ವಧರು ಇವರೆಲ್ಲರೂ ಜ್ಯೇಷ್ಠ ಮತ್ತು ಆಷಾಢ ಮಾಸಗಳಲ್ಲಿ ಸೂರ್ಯನೊಡನೆ ಸಂಚರಿಸುವರು.

೯-೧೨. ಬಳಿಕ ಮತ್ತೆ ಬೇರೆ ದೇವತೆಗಳು ಸೂರ್ಯನಲ್ಲಿ ವಾಸಮಾಡುವರು. ಇಂದ್ರ ಮತ್ತು ವಿವಸ್ವಂತರೆಂಬವರು ಆದಿತ್ಯರು, ಅಂಗಿರಸ ಮತ್ತು ಭೃಗುಗಳು ಋಷಿಗಳು. ಏಲಾಪತ್ರ ಮತ್ತು ಶಂಖಪಾಲರು ಪನ್ನಗರು. ವಿಶ್ವಾವಸು ಮತ್ತು ಸುಷೇಣರು ಗಂಧರ್ವರು. ಪ್ರಾತ ಮತ್ತು ರಥರೆಂಬವರು ಯಕ್ಷರು. ಪ್ರಮ್ಲೋಚೆ ಮತ್ತು ನಿಮ್ಲೋಚಂತಿಯರು ಅಪ್ಸರಸ್ತ್ರೀಯರು. ಹೇತಿ ಮತ್ತು ವ್ಯಾಘ್ರರೆಂಬವರು

**ಯಾತುಧಾನಸ್ತಥಾ ಹೇತಿರ್ವ್ಯಾಘ್ರಶ್ಚೈವ ತು ತಾವುಭೌ ।**
**ನಭೋನಭಸ್ಯಯೋರೇತೇ ವಸಂತಿ ತು ದಿವಾಕರೇ ॥೧೨॥**

**ಮಾಸೌ ದ್ವೌ ದೇವತಾಃ ಸೂರ್ಯೇ ವಸಂತಿ ಚ ಶರದೃತೌ ।**
**ಪರ್ಜನ್ಯಶ್ಚೈವ ಪೂಷಾ ಚ ಭರದ್ವಾಜಃ ಸಗೌತಮಃ ॥೧೩॥**

**ಚಿತ್ರಸೇನಶ್ಚ ಗಂಧರ್ವಸ್ತಥಾ ವಾ ಸುರುಚಿಶ್ಚ ಯಃ ।**
**ವಿಶ್ವಾಚೀ ಚ ಘೃತಾಚೀ ಚ ಉಭೇ ತೇ ಪುಣ್ಯಲಕ್ಷಣೇ ॥೧೪॥**

**ನಾಗಶ್ಚೈರಾವತಶ್ಚೈವ ವಿಶ್ರುತಶ್ಚ ಧನಂಜಯಃ ।**
**ಸೇನಜಿಚ್ಚ ಸುಷೇಣಶ್ಚ ಸೇನಾನೀ ಗ್ರಾಮಣೀಸ್ತಥಾ ॥೧೫॥**

**ಚಾರೋ ವಾತಶ್ಚ ದ್ವಾವೇತೌ ಯಾತುಧಾನಾವುಭೌ ಸ್ಮೃತೌ ।**
**ವಸಂತ್ಯೇತೇ ಚ ವೈ ಸೂರ್ಯೇ ಮಾಸಯೋಶ್ಚ ತ್ವಿಷೋರ್ಜಯೋಃ ॥೧೬॥**

**ಹೈಮಂತಿಕೌ ಚ ದ್ವೌ ಮಾಸೌ ನಿವಸಂತಿ ದಿವಾಕರೇ ।**
**ಅಂಶೋ ಭಗಶ್ಚ ದ್ವಾವೇತೌ ಕಶ್ಯಪಶ್ಚ ಕ್ರತುಶ್ಚ ತೌ ॥೧೭॥**

---

ರಾಕ್ಷಸರು. ಇವರು ಶ್ರಾವಣ ಮತ್ತು ಭಾದ್ರಪದ ಮಾಸಗಳಲ್ಲಿ ಸೂರ್ಯಮಂಡಲದಲ್ಲಿ ನೆಲಸಿರುವರು.

೧೩-೧೬. ಶರದೃತುವಿನ ಎರಡು ತಿಂಗಳಲ್ಲಿ ಮುಂದೆ ಹೇಳುವ ಗಣಗಳು ಭಾಸ್ಕರನಲ್ಲಿ ವಾಸಮಾಡುತ್ತಾರೆ. ಪರ್ಜನ್ಯ, ಪೂಷ ಎಂಬ ಆದಿತ್ಯರು ; ಭರದ್ವಾಜ, ಗೌತಮ ಎಂಬ ಮುನಿಗಳು ; ಚಿತ್ರಸೇನ, ಸುರುಚಿ ಎಂಬ ಗಂಧರ್ವರು, ವಿಶ್ವಾಚಿ, ಘೃತಾಚಿ ಎಂಬ ಅಪ್ಸರಸ್ತ್ರೀಯರು, ಐರಾವತ, ಧನಂಜಯ ಎಂಬ ಸರ್ಪರು, ಸೇನಜಿತ್, ಸುಷೇಣ ಎಂಬ ಯಕ್ಷರ ಸೇನಾನಿ ಮತ್ತು ಗ್ರಾಮಣಿಗಳು, ಚಾರ, ವಾತ ಎಂಬ ರಾಕ್ಷಸರು ಇವರೆಲ್ಲರೂ ಆಶ್ವಯುಜಕಾರ್ತಿಕ ಮಾಸಗಳಲ್ಲಿ ಸೂರ್ಯನೊಡನೆ ಸಂಚರಿಸುತ್ತಿರುವರು.

೧೭-೨೦. ಹೇಮಂತರ್ತುವಿನ ಎರಡು ತಿಂಗಳು ಸೂರ್ಯನಲ್ಲಿ ವಾಸಮಾಡುವವರನ್ನು ಈ ಮುಂದೆ ಹೇಳಿದೆ. ಅಂಶ ಮತ್ತು ಭಗ ಎಂಬ ಆದಿತ್ಯರು, ಕಶ್ಯಪ

ಭುಜಂಗಶ್ಚ ಮಹಾಪದ್ಮಃ ಸರ್ಪಃ ಕರ್ಕೋಟಕಸ್ತಥಾ ।
ಚಿತ್ರಸೇನಶ್ಚ ಗಂಧರ್ವಃ ಪುಣ್ಯಾಯುಶ್ಚೈವ ಗಾಯಕೌ ॥೧೮॥

ಅಪ್ಸರಾಃ ಪೂರ್ವಚಿತ್ತಿಶ್ಚ ಗಂಧರ್ವಾ ಹ್ಯುರ್ವಶೀ ಚ ಯಾ ।
ತಾರ್ಕ್ಷ್ಯಶ್ಚಾರಿಷ್ಟನೇಮಿಶ್ಚ ಸೇನಾನೀಗ್ರಾಮಣೀಶ್ಚ ತೌ ॥೧೯॥

ವಿದ್ಯುತ್ಸೂರ್ಯಶ್ಚ ತಾವುಗ್ರೌ ಯಾತುಧಾನೌ ತು ತೌ ಸ್ಮೃತೌ ।
ಸಹೋ ಚೈವ ಸಹಸ್ಯೋ ಚ ವಸಂತ್ಯೇತೇ ದಿವಾಕರೇ ॥೨೦॥

ತತಸ್ತು ಶಿಶಿರೇ ಚಾಪಿ ಮಾಸಯೋರ್ನಿವಸಂತಿ ತೇ ।
ತ್ವಷ್ಟಾ ವಿಷ್ಣುರ್ಜಮದಗ್ನಿರ್ವಿಶ್ವಾಮಿತ್ರಸ್ತಥೈವ ಚ ॥೨೧॥

ಕಾದ್ರವೇಯೌ ತಥಾ ನಾಗೌ ಕಂಬಲಾಶ್ವತರಾವುಭೌ ।
ಗಂಧರ್ವೌ ಧೃತರಾಷ್ಟ್ರಶ್ಚ ಸೂರ್ಯವರ್ಚಾಶ್ಚ ತಾವುಭೌ ॥೨೨॥

ತಿಲೋತ್ತಮಾಪ್ಸರಾಶ್ಚೈವ ದೇವೀ ರಂಭಾ ಮನೋರಮಾ ।
ಗ್ರಾಮಣೀ ಋತಜಿಚ್ಚೈವ ಸತ್ಯಜಿಚ್ಚ ಮಹಾಬಲಃ ॥೨೩॥

---

ಮತ್ತು ಕ್ರತು ಎಂಬ ಋಷಿಗಳು, ಮಹಾಪದ್ಮ ಮತ್ತು ಕರ್ಕೋಟಕ ಎಂಬ ಸರ್ಪಗಳು, ಚಿತ್ರಸೇನ ಮತ್ತು ಪುಣ್ಯಾಯು ಎಂಬ ಗಂಧರ್ವರು, ಪೂರ್ವಚಿತ್ತಿ ಮತ್ತು ಉರ್ವಶಿ ಎಂಬ ಅಪ್ಸರಸ್ತ್ರೀಯರು, ತಾರ್ಕ್ಷ್ಯ ಮತ್ತು ಅರಿಷ್ಟನೇಮಿ ಎಂಬ ಯಕ್ಷಸೇನಾನಿ ಮತ್ತು ಗ್ರಾಮಣಿಗಳು, ವಿದ್ಯುತ್ತು ಮತ್ತು ಸೂರ್ಯ ಎಂಬ ಕ್ರೂರರಾದ ರಾಕ್ಷಸರು ಇವರೆಲ್ಲರೂ ಮಾರ್ಗಶಿರ ಪುಷ್ಯ ಮಾಸಗಳಲ್ಲಿ ಸೂರ್ಯಮಂಡಲದಲ್ಲಿರುವರು.

೨೧-೨೪. ಬಳಿಕ ಶಿಶಿರರ್ತುವಿನ ಎರಡು ತಿಂಗಳಲ್ಲಿಯೂ ಈ ಮುಂದೆ ತಿಳಿಸುವ ದೇವತೆಗಳು ವಾಸಿಸುತ್ತಾರೆ. ತ್ವಷ್ಟ ಮತ್ತು ವಿಷ್ಣುಗಳೆಂಬ ಆದಿತ್ಯರು, ಜಮದಗ್ನಿ ಮತ್ತು ವಿಶ್ವಾಮಿತ್ರರೆಂಬ ಋಷಿಗಳು, ಕದ್ರುವಿನ ಮಕ್ಕಳಾದ ಕಂಬಲ ಮತ್ತು ಅಶ್ವತರರೆಂಬ ನಾಗರು, ಧೃತರಾಷ್ಟ್ರ ಮತ್ತು ಸೂರ್ಯವರ್ಚಸ್ಸೆಂಬ ಗಂಧರ್ವರು, ತಿಲೋತ್ತಮೆ ಮತ್ತು ರಂಭೆಯೆಂಬ ಅಪ್ಸರಸ್ತ್ರೀಯರು, ಋತಜಿತ್ ಮತ್ತು ಸತ್ಯಜಿತ್ತುಗಳೆಂಬ ಯಕ್ಷರು, ಬ್ರಹ್ಮೋಪೇತ ಮತ್ತು ಯಜ್ಞೋಪೇತರೆಂಬ

ಬ್ರಹ್ಮೋಪೇತಶ್ಚ ವೈ ರಕ್ಷೋ ಯಜ್ಞೋಪೇತಸ್ತಥೈವ ಚ ।
ಇತ್ಯೇತೇ ನಿವಸಂತಿ ಸ್ಮ ದ್ವೌ ದ್ವೌ ಮಾಸೌ ದಿವಾಕರೇ ॥೨೪॥

ಸ್ಥಾನಾಭಿಮಾನಿನೋ ಹ್ಯೇತೇ ಗಣಾ ದ್ವಾದಶ ಸತ್ತಮಾಃ ।
ಸೂರ್ಯಮಾಪ್ಯಾಯಯಂತ್ಯೇತೇ ತೇಜಸಾ ತೇಜ ಉತ್ತಮಂ ॥೨೫॥

ಗ್ರಥಿತೈಸ್ತು ವಚೋಭಿಶ್ಚ ಸ್ತುವಂತಿ ಋಷಯೋ ರವಿಂ ।
ಗಂಧರ್ವಾಪ್ಸರಸಶ್ಚೈವ ಗೀತನೃತ್ಯೈರುಪಾಸತೇ ॥೨೬॥

ವಿದ್ಯಾಗ್ರಾಮಣಿನೋ ಯಕ್ಷಾಃ ಕುರ್ವಂತ್ಯಾಭೀಷುಸಂಗ್ರಹಂ ।
ಸರ್ಪಾಃ ಸರ್ಪಂತಿ ವೈ ಸೂರ್ಯೇ ಯಾತುಧಾನಾನುಯಾಂತಿ ಚ ॥೨೭॥

ವಾಲಖಿಲ್ಯಾ ನಯಂತ್ಯಸ್ತಂ ಪರಿವಾರ್ಯೋದಯಾದ್ರವಿಂ ।
ಏತೇಷಾಮೇವ ದೇವಾನಾಂ ಯಥಾವೀರ್ಯಂ ಯಥಾತಪಃ ॥೨೮॥

---

ರಾಕ್ಷಸರು ಇವರೆಲ್ಲರೂ ಮಾಘ ಫಾಲ್ಗುಣ ಮಾಸಗಳಲ್ಲಿ ಸೂರ್ಯಮಂಡಲದಲ್ಲಿ ವಾಸಮಾಡುತ್ತಾರೆ.

೨೫. ಶ್ರೇಷ್ಠರಾದ ಈ ದ್ವಾದಶಾದಿತ್ಯರು ಸ್ಥಾನಾಭಿಮಾನ ದೇವತೆಗಳು. ಇವರು ತಮ್ಮ ತೇಜಸ್ಸಿನಿಂದ ಸೂರ್ಯನಲ್ಲಿ ತೇಜಸ್ಸನ್ನು ಹೆಚ್ಚಿಸಿ ಅವನನ್ನು ತೃಪ್ತಿಗೊಳಿಸುವರು.

೨೬. ಋಷಿಗಳು ಸ್ತೋತ್ರಗಳನ್ನು ರಚಿಸಿ ಸೂರ್ಯನನ್ನು ಸ್ತುತಿಸುವರು. ಗಂಧರ್ವರೂ ಅಪ್ಸರಸ್ತ್ರೀಯರೂ ಗೀತ ನೃತ್ಯಗಳಿಂದ ಅವನನ್ನು ಓಲೈಸುವರು.

೨೭. ವಿದ್ಯಾಪಾರಂಗತರಾದ ಯಕ್ಷರು ಆಯುಧಧಾರಿಗಳಾಗಿ ಸುತ್ತಲೂ ಸೂರ್ಯನ ಅಂಗರಕ್ಷಕರಾಗಿರುವರು. ಸರ್ಪಗಳು ಹರಿದಾಡುವುವು. ರಾಕ್ಷಸರು ಅವನನ್ನು ಅನುಸರಿಸಿ ಹೋಗುವರು.

೨೮-೨೯. ವಾಲಖಿಲ್ಯರು ಉದಯದಿಂದ ಹಿಡಿದು ಸೂರ್ಯನನ್ನು ಸುತ್ತುವರಿದು ಅವನನ್ನು ಅಸ್ತಪರ್ವತಕ್ಕೆ ಒಯ್ಯುವರು. ಈ ದೇವತೆಗಳ ವೀರ್ಯ, ತಪಸ್ಸು,

**ಯಥಾಯೋಗಂ ಯಥಾಧರ್ಮಂ ಯಥಾತತ್ವಂ ಯಥಾಬಲಂ ।**
**ತಥಾ ತಪತ್ಯಸೌ ಸೂರ್ಯಸ್ತೇಷಾಮಿದ್ಧಸ್ತು ತೇಜಸಾ ॥೨೯॥**

**ಭೂತಾನಾಮಶುಭಂ ಸರ್ವಂ ವ್ಯಪೋಹಯತಿ ತೇಜಸಾ ।**
**ಮಾನವಾನಾಂ ಶುಭೈರ್ಹ್ಯೇತೈರ್ಹ್ರಿಯತೇ ದುರಿತಂ ತು ವೈ ॥೩೦॥**

**ದುರಿತಂ ಶುಭಚಾರಿಣಾಂ ವ್ಯಪೋಹಂತಿ ಕ್ವಚಿತ್ಕ್ವಚಿತ್ ।**
**ಏತೇ ಸಹೈವ ಸೂರ್ಯೇಣ ಭ್ರಮಂತಿ ಸಾನುಗಾ ದಿವಿ ॥೩೧॥**

**ತಪಂತಶ್ಚ ಜಪಂತಶ್ಚ ಹ್ಲಾದಯಂತಶ್ಚ ವೈ ಪ್ರಜಾಃ।**
**ಗೋಪಾಯಂತಿ ಸ್ಮ ಭೂತಾನಿ ಈಹಂತೇ ಹ್ಯನುಕಂಪಯಾ ॥೩೨॥**

**ಸ್ಥಾನಾಭಿಮಾನಿನಾಂ ಹ್ಯೇತತ್ಸ್ಥಾನಂ ಮನ್ವಂತರೇಷು ವೈ ।**
**ಅತೀತಾನಾಗತಾನಾಂ ಚ ವರ್ತಂತೇ ಸಾಂಪ್ರತಂ ಚ ಯೇ ॥೩೩॥**

---

ಯೋಗ, ಧರ್ಮ, ತತ್ವ, ಬಲ ಇವುಗಳಿಗೆ ತಕ್ಕಂತೆ ಸೂರ್ಯನು ತೇಜೋಯುಕ್ತನಾಗಿ ಪ್ರಕಾಶಿಸುವನು.

೩೦. ಅವನು ತನ್ನ ತೇಜಸ್ಸಿನಿಂದ ಪ್ರಾಣಿಗಳ ಅಶುಭವೆಲ್ಲವನ್ನೂ ಪರಿಹರಿಸುವನು. ಈ ದೇವತೆಗಳು ಮನುಷ್ಯರ ಶುಭಾಕಾಂಕ್ಷಿಗಳಾಗಿ ಅವರ ಪಾಪವನ್ನು ಕಳೆಯುವರು.

೩೧. ಇವರು ಸತ್ಕಾರ್ಯವನ್ನು ಮಾಡತಕ್ಕವರ ಪಾಪಗಳನ್ನು ಅಲ್ಲಲ್ಲಿ ಕಳೆಯುತ್ತ, ಸೂರ್ಯನ ಸಂಗಡಲೇ ತಮ್ಮ ಪರಿವಾರದೊಡನೆ ಅಂತರಿಕ್ಷದಲ್ಲಿ ತಿರುಗುವರು.

೩೨. ಇವರು ತಪಸ್ಸುಮಾಡುವರು. ಮಂತ್ರಗಳನ್ನು ಜಪಿಸುವರು. ಪ್ರಜೆಗಳನ್ನು ಸಂತೋಷಪಡಿಸುವರು. ಪ್ರಾಣಿಗಳನ್ನು ರಕ್ಷಿಸುವರು. ಮತ್ತೆ ದಯೆಯಿಂದ ಅವುಗಳಿಗೆ ಹಿತವಾಗುವ ಕೆಲಸಗಳಲ್ಲಿ ತೊಡಗುವರು.

೩೩. ಹಿಂದೆ ಇದ್ದವರು, ಮುಂದೆ ಬರತಕ್ಕವರು, ಈಗ ಇರುವವರು ಈ ಸ್ಥಾನಾಭಿಮಾನ ದೇವತೆಗಳಿಗೆಲ್ಲ ಸಕಲ ಮನ್ವಂತರಗಳಲ್ಲಿಯೂ ಇದೇ ಸ್ಥಾನ.

**ಏವಂ ವಸಂತಿ ವೈ ಸೂರ್ಯೇ ಸಪ್ತಕಾಸ್ತೇ ಚತುರ್ದಶ ।**
**ಚತುರ್ದಶೇಷು ವರ್ತಂತೇ ಗಣಾ ಮನ್ವಂತರೇಷು ವೈ ॥೩೪॥**

**ಗ್ರೀಷ್ಮೇ ಹಿಮೇ ಚ ವರ್ಷಾಸು ಮುಂಚಮಾನಾ ಯಥಾಕ್ರಮಂ ।**
**ಘರ್ಮಂ ಹಿಮಂ ಚ ವರ್ಷಂ ಚ ಯಥಾಕ್ರಮಮಹರ್ನಿಶಂ ॥೩೫॥**

**ಗಚ್ಛತ್ಯಸಾವನುದಿನಂ ಪರಿವೃತ್ಯ ರಶ್ಮೀ**
**ದೇವಾನ್ ಪಿತೄಂಶ್ಚ ಮನುಜಾಂಶ್ಚ ಸುತರ್ಪಯನ್ ವೈ ।**
**ಶುಕ್ಲೇ ಚ ಕೃಷ್ಣೇ ತದಹಃಕ್ರಮೇಣ**
**ಕಾಲಕ್ಷಯೇ ಚೈವ ಸುರಾಃ ಪಿಬಂತಿ ॥೩೬॥**

**ಮಾಸೇನ ತಚ್ಚಾಮೃತಮಸ್ಯ ಮೃಷ್ಟಂ**
**ಸುವೃಷ್ಟಯೇ ರಶ್ಮಿಷು ರಕ್ಷಿತಂ ತು ।**
**ಸರ್ವೇಽಮೃತಂ ತತ್ಪಿತರಃ ಪಿಬಂತಿ**
**ದೇವಾಶ್ಚ ಸೌಮ್ಯಾಶ್ಚ ತಥೈವ ಕಾವ್ಯಾಃ ॥೩೭॥**

---

೩೪. ಹೀಗೆ ಏಳು ಗಣಗಳಿಗೆ ಸೇರಿದ ಹದಿನಾಲ್ಕು ಮಂದಿಯೂ ಸೂರ್ಯನಲ್ಲಿ ವಾಸಮಾಡುತ್ತಾರೆ. ಅವರು ಹದಿನಾಲ್ಕು ಮನ್ವಂತರಗಳಲ್ಲಿಯೂ ಅಲ್ಲಿ ನೆಲಸಿರುವರು.

೩೫. ಇವರು ಗ್ರೀಷ್ಮರ್ತು, ಹೇಮಂತರ್ತು, ಮತ್ತು ವರ್ಷರ್ತುಗಳಲ್ಲಿ ಹಗಲೂ ರಾತ್ರಿಯೂ ಕ್ರಮವಾಗಿ ತಾಪ, ಮಂಜು ಮತ್ತು ಮಳೆಗಳನ್ನು ಸುರಿಸುವರು.

೩೬. ಈ ಸೂರ್ಯನು ತನ್ನ ಕಿರಣಗಳನ್ನು ಎಲ್ಲ ಕಡೆಯೂ ಪ್ರಸಾರಗೊಳಿಸುತ್ತ ದೇವತೆಗಳನ್ನೂ, ಪಿತೃಗಳನ್ನೂ, ಮನುಷ್ಯರನ್ನೂ ತೃಪ್ತಿಪಡಿಸುತ್ತ ಪ್ರತಿದಿನವೂ ಸಂಚರಿಸುವನು. ಶುಕ್ಲಪಕ್ಷದಲ್ಲಿಯೂ ಕೃಷ್ಣಪಕ್ಷದಲ್ಲಿಯೂ ಹಗಲೂ ರಾತ್ರಿ ದೇವತೆಗಳು ಇವನಲ್ಲಿರುವ ಅಮೃತವನ್ನು ಕುಡಿಯುತ್ತಾರೆ.

೩೭. ಲೋಕಕ್ಕೆ ಒಳ್ಳೆಯ ಮಳೆಯನ್ನು ಕರೆಯಬೇಕೆಂದು ಇವನು ತನ್ನ ಕಿರಣಗಳಲ್ಲಿ ಮಧುರವಾದ ಅಮೃತವನ್ನು ತಿಂಗಳಲ್ಲೆಲ್ಲ ಸಂಗ್ರಹಿಸಿ ಇಡುವನು. ಅದನ್ನು ದೇವತೆಗಳೂ ಸೌಮ್ಯರು, ಕಾವ್ಯರು ಮೊದಲಾದ ಪಿತೃಗಳೂ ಪಾನ ಮಾಡುತ್ತಾರೆ.

ಸೂರ್ಯೇಣ ಗೋಭಿರ್ಹಿ ವಿವರ್ಧಿತಾಭಿಃ
ಅದ್ಭಿಃ ಪುನಶ್ಚೈವ ಸಮುಚ್ಛ್ರಿತಾಭಿಃ ।
ವೃಷ್ಟ್ಯಾಭಿವೃಷ್ಟಾಭಿರಥೌಷಧೀಭಿಃ
ಮರ್ತ್ಯಾ ಅಥಾನ್ನೇನ ಕ್ಷುಧಂ ಜಯಂತಿ ॥೩೮॥

ತೃಪ್ತಿಶ್ಚ ತೇನಾರ್ಧಮಾಸಂ ಸುರಾಣಾಂ ।
ಮಾಸಂ ಸುಧಾಭಿಃ ಸ್ವಧಯಾ ಪಿತ್ರೂಣಾಂ ।
ಅನ್ನೇನ ಜೀವಂತ್ಯನಿಶಂ ಮನುಷ್ಯಾಃ
ಸೂರ್ಯಃ ಶ್ರಿತಂ ತದ್ಧಿ ಬಿಭರ್ತಿ ಗೋಭಿಃ ॥೩೯॥

ಇತ್ಯೇಷ ಏಕಚಕ್ರೇಣ ಸೂರ್ಯಸ್ತೂರ್ಣಂ ಪ್ರಸರ್ಪತಿ ।
ತತ್ರ ತೈರಕ್ರಮೈರಶ್ವೈಃ ಸರ್ಪತೇಽಸೌ ದಿನಕ್ಷಯೇ ॥೪೦॥

ಹರಿರ್ಹರಿದ್ಭಿರ್ಹ್ರಿಯತೇ ತುರಂಗಮೈಃ
ಪಿಬತ್ಯಥಾಪೋ ಹರಿಭಿಃ ಸಹಸ್ರಧಾ ।

---

೩೮. ಸೂರ್ಯನು ತನ್ನ ಕಿರಣಗಳಿಂದ ವೃಕ್ಷಲತಾದಿವನಸ್ಪತಿಗಳನ್ನು ಪೋಷಿಸಿ ಬೆಳಸುವನು. ಮಳೆಯನ್ನು ಸುರಿಸಿ ಆ ನೀರಿನಿಂದ ಅವುಗಳನ್ನು ಅಭಿವೃದ್ಧಿಪಡಿಸುವನು. ಅವುಗಳಲ್ಲಿ ಉತ್ಪನ್ನವಾದ ಆಹಾರ ವಸ್ತುಗಳಿಂದ ಮನುಷ್ಯರು ತಮ್ಮ ಹಸಿವನ್ನು ಪರಿಹರಿಸಿಕೊಳ್ಳುವರು.

೩೯. ಅಮೃತದಿಂದ ದೇವತೆಗಳು ಹದಿನೈದು ದಿನವೂ, ಪಿತೃಯೋಗ್ಯವಾದ ಆಹಾರದಿಂದ (ಇದನ್ನೇ ಸ್ವಧಾ ಎನ್ನುವರು) ಪಿತೃಗಳು ಒಂದು ತಿಂಗಳೂ ತೃಪ್ತರಾಗುವರು. ಮನುಷ್ಯರಾದರೋ ಪ್ರತಿದಿನವೂ ಅನ್ನವನ್ನು ತಿಂದು ಜೀವಿಸುವರು. ಈ ಎಲ್ಲ ಬಗೆಯ ಆಹಾರಪದಾರ್ಥಗಳನ್ನೂ ಸೂರ್ಯನು ತನ್ನ ಕಿರಣಗಳಿಂದ ರಕ್ಷಿಸುವನು.

೪೦. ಈ ರೀತಿಯಾಗಿ ಒಂದೇ ಗಾಲಿಯ ತೇರಿನಿಂದ ಸೂರ್ಯನು ಬೇಗ ಬೇಗನೆ ಚಲಿಸುವನು. ಸಾಯಂಕಾಲದಲ್ಲಿ ಕುದುರೆಗಳು ಅಕ್ರಮವಾಗಿ ಸಂಚರಿಸುವುವು. ಆದರಿಂದ ಅವನ ಗತಿ ಮಂದವಾಗುವುದು.

೪೧. ಹಸರು ಬಣ್ಣದ ಕುದುರೆಗಳು ಸೂರ್ಯನ ತೇರನ್ನು ಎಳೆಯುತ್ತವೆ. ಅವನು ತನ್ನ ಸಾವಿರಾರು ಕಿರಣಗಳಿಂದ ಭೂಮಿಯಲ್ಲಿರುವ ಜಲಾಂಶವನ್ನು ಪಾನ

**ಪುನಃ ಪ್ರಮುಂಚತ್ಯಥ ತಾಶ್ಚ ಯೋ ಹರಿಃ**
**ಸಮುಹ್ಯಮಾನೋ ಹರಿಭಿಸ್ತುರಂಗಮೈಃ ||೪೧||**

**ಛಂದೋರೂಪೈಶ್ಚ ತೈರಶ್ವೈರ್ಯತಶ್ಚಕ್ರಂ ತತಃ ಸ್ಥಿತಿಃ |**
**ಕಾಮರೂಪೈಃ ಸಕೃದ್ಯುಕ್ತೈಃ ಕಾಮಗೈಸ್ತೈರ್ಮನೋಜವೈಃ ||೪೨||**

**ಹರಿತೈರವ್ಯಥೈಃ ಪಿಂಗೈರೀಶ್ವರೈರ್ಬ್ರಹ್ಮವಾದಿಭಿಃ |**
**ಬಾಹ್ಯತೋಽನಂತರಂ ಚೈವ ಮಂಡಲಂ ದಿವಸಕ್ರಮಾತ್ ||೪೩||**

**ಕಲ್ಪಾದೌ ಸಂಪ್ರಯುಕ್ತಾಶ್ಚ ವಹಂತ್ಯಾಭೂತಸಂಪ್ಲವಂ |**
**ಆವೃತೋ ವಾಲಖಿಲ್ಯೈಶ್ಚ ಭ್ರಮತೇ ರಾತ್ರ್ಯಹಾನಿ ತು ||೪೪||**

---

ಮಾಡುತ್ತಾನೆ. ಪುನಃ ಆ ನೀರನ್ನು ಮಳೆಯ ರೂಪದಿಂದ ಬಿಡುತ್ತಾನೆ. ವೇಗಶಾಲಿಗಳಾದ ಅಶ್ವಗಳು ಅವನನ್ನು ಎಡಬಿಡದೆ ಒಯ್ಯುತ್ತವೆ.

೪೨-೪೩. ಸೂರ್ಯನ ಕುದುರೆಗಳು ಛಂದೋಮಯವಾದುವು. ಆದುದರಿಂದ ಒಂದೇ ಚಕ್ರವಿದ್ದರೂ ರಥವು ನೆಟ್ಟಗೆ ನಿಲ್ಲುವುದು. ಆ ಕುದುರೆಗಳು ಇಷ್ಟಬಂದ ರೂಪವನ್ನು ತಾಳಬಲ್ಲವು. ಅವುಗಳನ್ನು ಪದೇಪದೇ ಬಿಟ್ಟು ಮತ್ತೆ ಮತ್ತೆ ಹೂಡಬೇಕಾಗಿಲ್ಲ. ಅವು ಮನಸ್ಸುಬಂದ ಕಡೆಗೆ ಹೋಗಬಲ್ಲವು; ಮನೋವೇಗವುಳ್ಳವು. ಅವುಗಳ ಬಣ್ಣ ಹಸರು. ಅವುಗಳಿಗೆ ದಣಿವೇ ಇಲ್ಲ. ಅವು ನಿತ್ಯಯೌವನವುಳ್ಳವು; ಸ್ವತಂತ್ರವಾದುವು; ವೇದವನ್ನು ಪಾರಾಯಣಮಾಡುತ್ತಿರುವುವು; ಒಂದೊಂದು ದ್ವೀಪವನ್ನೂ ದಾಟಿದಾಟಿ ಸೂರ್ಯನನ್ನು ಪ್ರತಿದಿನವೂ ಹೊರುವುವು. ಅವುಗಳನ್ನು ರಥಕ್ಕೆ ಹೂಡಿದುದು ಕಲ್ಪದ ಆದಿಯಲ್ಲಿ. ಪ್ರಳಯದ ಕೊನೆಯವರೆಗೂ ಅವು ಬಿಡುವಿಲ್ಲದೆ ನಡೆಯುತ್ತಲೇ ಇರುವುವು.

೪೪-೪೫. ವಾಲಖಿಲ್ಯರೊಡಗೂಡಿ ಸೂರ್ಯನು ಹಗಲೂ ರಾತ್ರಿಯೂ ಸಂಚರಿಸುವನು. ಮಹರ್ಷಿಗಳು ಸ್ತೋತ್ರಗಳನ್ನು ರಚಿಸಿ ಅವನನ್ನು ಸ್ತುತಿಸುವರು. ಗಂಧರ್ವರೂ ಅಪ್ಸರಸ್ತ್ರೀಯರೂ ಗಾನನರ್ತನಗಳಿಂದ ಸೇವಿಸುವರು. ಹೀಗೆ

ಗ್ರಥಿತೈಃ ಸ್ವವಚೋಭಿಶ್ಚ ಸ್ತೂಯಮಾನೋ ಮಹರ್ಷಿಭಿಃ ।
ಸೇವ್ಯತೇ ಗೀತನೃತ್ಯೈಶ್ಚ ಗಂಧರ್ವಾಪ್ಸರಸಾಂ ಗಣೈಃ ॥೪೫॥

ಪತಂಗೈಃ ಪತಗೈರಶ್ವೈರ್ಭ್ರಾಮ್ಯಮಾಣೋ ದಿವಸ್ಪತಿಃ ।
ವೀಥ್ಯಾಶ್ರಯಾಣಿ ಚರತಿ ನಕ್ಷತ್ರಾಣಿ ತಥಾ ಶಶೀ ॥೪೬॥

ಹ್ರಾಸವೃದ್ಧೀ ತಥೈವಾಸ್ಯ ರಶ್ಮಯಃ ಸೂರ್ಯವತ್ಸ್ಮೃತಾಃ ।
ತ್ರಿಚಕ್ರೋಭಯತೋಽಶ್ವಶ್ಚ ವಿಜ್ಞೇಯಃ ಶಶಿನೋ ರಥಃ ॥೪೭॥

ಅಪಾಂ ಗರ್ಭಸಮುತ್ಪನ್ನೋ ರಥಃ ಸಾಶ್ವಃ ಸಸಾರಥಿಃ ।
ಸಹಾರೈಸ್ತ್ರಿಭಿಶ್ಚಕ್ರೈರ್ಯುಕ್ತಃ ಶುಕ್ಲೈರ್ಹಯೋತ್ತಮೈಃ ॥೪೮॥

ದಶಭಿಸ್ತುರಗೈರ್ದಿವ್ಯೈರಸಂಗೈಸ್ತೈರ್ಮನೋಜವೈಃ ।
ಸಕೃದ್ಯುಕ್ತೇ ರಥೇ ತಸ್ಮಿನ್ ವಹಂತಸ್ತ್ವಾಯುಗಕ್ಷಯಂ ॥೪೯॥

---

ಗಗನಮಣಿಯು ಪತಂಗಗಳಿಂದಲೂ, ಪಕ್ಷಿಗಳಿಂದಲೂ, ಅಶ್ವಗಳಿಂದಲೂ ಸೇವೆಯನ್ನು ಕೈಗೊಂಡು ತಿರುಗುತ್ತಿರುವನು.

೪೬-೪೭. ಹೀಗೆಯೇ ಚಂದ್ರನು ತನ್ನ ಮಾರ್ಗದಲ್ಲಿರುವ ನಕ್ಷತ್ರರಾಶಿಗಳಲ್ಲಿ ಸಂಚರಿಸುವನು. ಇವನಿಗೆ ವೃದ್ಧಿಕ್ಷಯಗಳುಂಟು. ಇವನ ಕಿರಣಗಳು ಸೂರ್ಯನ ಕಿರಣಗಳಂತೆಯೇ ಇವೆ. ಇವನ ತೇರಿಗೆ ಮೂರು ಚಕ್ರಗಳಿವೆ. ಕುದುರೆಗಳನ್ನು ಎರಡು ಪಕ್ಕಗಳಲ್ಲಿಯೂ ಹೂಡಿದೆ.

೪೮. ಆ ರಥವೂ, ಕದುರೆಗಳೂ, ಸಾರಥಿಯೂ ಸಮುದ್ರದ ಗರ್ಭದಲ್ಲಿ ಉತ್ಪನ್ನರಾದರು. ತೇರಿಗೆ ಮೂರು ಚಕ್ರಗಳು. ಅವು ಮುತ್ತಿನ ಹಾರಗಳಿಂದ ಅಲಂಕೃತವಾಗಿವೆ. ಕುದುರೆಗಳು ಬಿಳಿಯವು.

೪೯. ಚಂದ್ರನ ತೇರಿಗೆ ಕಟ್ಟಿರುವ ಕುದುರೆಗಳ ಸಂಖ್ಯೆ ಹತ್ತು. ಅವು ಅತಿ ಶ್ರೇಷ್ಠವಾದುವು ; ಸಂಗರಹಿತವಾದುವು ; ಮನೋವೇಗವುಳ್ಳವು. ಒಂದು ಸಾರಿ ಹೂಡಿದರೆ ಸಾಕು ; ಯುಗಾಂತದವರೆಗೂ ರಥವನ್ನು ಎಳೆಯುತ್ತಿರಬಲ್ಲವು.

ಸಂಗ್ರಹೀತಾ ರಥೇ ತಸ್ಮಿಂಶ್ಚಿತ್ರಶ್ಚಕ್ಷುಃಶ್ರವಾಶ್ಚ ವೈ ।
ಅಶ್ವಾಸ್ತ್ವಮೇಕವರ್ಣಾಸ್ತೇ ವಹಂತೇ ಶಂಖವರ್ಚಸಃ ॥೫೦॥

ಅಜಶ್ಚ ತ್ರಿಪಥಶ್ಚೈವ ವೃಷೋ ವಾಜೀ ನರೋ ಹಯಃ ।
ಅಂಶುಮಾನ್ ಸಪ್ತಧಾತುಶ್ಚ ಹಂಸೋ ವ್ಯೋಮಮೃಗಸ್ತಥಾ ॥೫೧॥

ಇತ್ಯೇತೇ ನಾಮಭಿಶ್ಚೈವ ದಶ ಚಂದ್ರಮಸೋ ಹಯಾಃ ।
ಏವಂ ಚಂದ್ರಮಸಂ ದೇವಂ ವಹಂತಿ ಸ್ಮಾಯುಗಕ್ಷಯಂ ॥೫೨॥

ದೇವೈಃ ಪರಿವೃತಃ ಸೋಮಃ ಪಿತೃಭಿಃ ಸಹ ಗಚ್ಛತಿ ।
ಸೋಮಸ್ಯ ಶುಕ್ಲಪಕ್ಷಾದೌ ಭಾಸ್ಕರೇ ಪರತಃ ಸ್ಥಿತೇ ॥೫೩॥

ಆಪೂರ್ಯತೇ ಪರೋ ಭಾಗಃ ಸೋಮಸ್ಯ ತು ಅಹಃಕ್ರಮಾತ್ ।
ತತಃ ಪೀತಕ್ಷಯಂ ಸೋಮಂ ಯುಗಪದ್ವ್ಯಾಪ್ಯಪರ್ಯಗ್ರವಿಃ ॥೫೪॥

ಪೀತಂ ಪಂಚದಶಾಹಂ ಚ ರಶ್ಮಿನೈಕೇನ ಭಾಸ್ಕರಃ ।
ಆಪೂರಯನ್ ದದೌ ತೇನ ಭಾಗಂ ಭಾಗಮಹಃಕ್ರಮಾತ್ ॥೫೫॥

---

೫೦. ಶುಭ್ರವರ್ಣದವನಾದ ಚಕ್ಷುಃಶ್ರವಸ್ಸೆಂಬವನು ಆ ರಥದ ಸಾರಥಿ. ಒಂದೇಸಮನಾಗಿ ಶಂಖದಂತೆ ಬೆಳ್ಳಗಿರುವ ಕುದುರೆಗಳು ಅದನ್ನೆಳೆಯುವುವು.

೫೧-೫೨. ಅಜ, ತ್ರಿಪಥ, ವೃಷ, ವಾಜಿ, ನರ, ಹಯ, ಅಂಶುಮಂತ, ಸಪ್ತಧಾತು, ಹಂಸ, ವ್ಯೋಮಮೃಗ ಎಂಬುವು ಹತ್ತು ಚಂದ್ರನ ಕುದುರೆಗಳು. ಅವು ಪ್ರಳಯಾಂತದ ವರೆಗೂ ಭಗವಂತನಾದ ಚಂದ್ರನನ್ನು ಹೊರುವುವು.

೫೩-೫೪. ಚಂದ್ರನು ದೇವತೆಗಳಿಂದಲೂ ಪಿತೃಗಳಿಂದಲೂ ಪರಿವೃತನಾಗಿ ಸಂಚರಿಸುವನು. ಶುಕ್ಲಪಕ್ಷದ ಆದಿಯಲ್ಲಿ ಸೂರ್ಯನು ಹಿಂಭಾಗದಲ್ಲಿರುವಾಗ ಚಂದ್ರನ ದೇಹವು ದಿನದಿನಕ್ಕೂ ಕ್ರಮವಾಗಿ ತುಂಬಿಕೊಳ್ಳುವುದು. ಅವನಲ್ಲಿ ತುಂಬಿದ್ದ ಅಮೃತವನ್ನು ದೇವತೆಗಳು ಪಾನಮಾಡುವುದರಿಂದ ಅವನು ಕ್ಷಯಿಸುವನು. ಆದಕಾರಣ ಸೂರ್ಯನು ಅವನಲ್ಲಿ ಪ್ರವೇಶಿಸುವನು.

೫೫. ಕೃಷ್ಣಪಕ್ಷದ ಹದಿನೈದು ದಿನವೂ ದೇವತೆಗಳು ಚಂದ್ರನ ಅಮೃತವನ್ನು ಪಾನಮಾಡುತ್ತಾರಷ್ಟೆ. ಸೂರ್ಯನು ತನ್ನದೊಂದು ಕಿರಣದಿಂದ ಶುಕ್ಲಪಕ್ಷದ ಆಯಾ ದಿನದಲ್ಲಿ ಅಷ್ಟಷ್ಟು ಭಾಗವನ್ನು ಕೊಟ್ಟು ಅವನನ್ನು ಬೆಳೆಸುವನು.

ಸುಷುಮ್ನಾಪ್ಯಾಯಮಾನಸ್ಯ ಶುಕ್ಲೇ ವರ್ಧಂತಿ ವೈ ಕಲಾಃ ।
ತಸ್ಮಾದ್ಧ್ರಸಂತಿ ವೈ ಕೃಷ್ಣೇ ಶುಕ್ಲೇ ಹ್ಯಾಪ್ಯಾಯಯಂತಿ ಚ ||೫೬||

ಇತ್ಯೇವಂ ಸೂರ್ಯವೀರ್ಯೇಣ ಚಂದ್ರಸ್ಯಾಪ್ಯಾಯತೇ ತನುಃ ।
ಪೌರ್ಣಮಾಸ್ಯಾಂ ಪ್ರದೃಶ್ಯೇತ ಶುಕ್ಲಃ ಸಂಪುರ್ಣಮಂಡಲಃ ||೫೭||

ಏವಮಾಪ್ಯಾಯತೇ ಸೋಮಃ ಶುಕ್ಲಪಕ್ಷೇಷ್ವಹಃಕ್ರಮಾತ್ ।
ತತೋ ದ್ವಿತೀಯಾಪ್ರಭೃತಿ ಬಹುಲಸ್ಯ ಚತುರ್ದಶೀಂ ||೫೮||

ಅಪಾಂ ಸಾರಮಯಸ್ಯೇಂದೋ ರಸಮಾತ್ರಾತ್ಮಕಸ್ಯ ಚ ।
ಪಿಬಂತ್ಯಂಬುಮಯಂ ದೇವಾ ಮಧು ಸೌಮ್ಯಂ ತಥಾಮೃತಂ ||೫೯||

ಸಂಭೃತಂ ತ್ವರ್ಧಮಾಸೇನ ಅಮೃತಂ ಸೂರ್ಯತೇಜಸಾ ।
ಭಕ್ಷಾರ್ಥಮಾಗತಂ ಸೋಮಂ ಪೌರ್ಣಮಾಸ್ಯಾಮುಪಾಸತೇ ||೬೦||

---

೫೬. ಸೂರ್ಯನು ಸುಷುಮ್ನಕಿರಣದಿಂದ ಪೋಷಿಸುವ ಕಾರಣ ಚಂದ್ರನ ಕಲೆಗಳು ಶುಕ್ಲಪಕ್ಷದಲ್ಲಿ ಬೆಳೆಯುವುವು. ಹೀಗೆ ಅವು ಕೃಷ್ಣಪಕ್ಷದಲ್ಲಿ ಕುಗ್ಗುತ್ತಲೂ ಶುಕ್ಲಪಕ್ಷದಲ್ಲಿ ಹೆಚ್ಚುತ್ತಲೂ ಇರುವುವು.

೫೭. ಈ ರೀತಿಯಲ್ಲಿ ಸೂರ್ಯನ ತೇಜಸ್ಸಿನಿಂದ ಚಂದ್ರನ ದೇಹವು ಪುಷ್ಟವಾಗುವುದು. ಅವನು ಹುಣ್ಣಿಮೆಯ ದಿನ ಶುಭ್ರವರ್ಣದವನಾಗಿ ಸಂಪೂರ್ಣಮಂಡಲದಿಂದ ಕಂಗೊಳಿಸುವನು.

೫೮-೫೯. ಹೀಗೆ ಶುಕ್ಲಪಕ್ಷದಲ್ಲಿ ದಿನಕ್ರಮವಾಗಿ ಚಂದ್ರನು ಬೆಳೆಯುತ್ತಾನೆ. ಬಳಿಕ ಕೃಷ್ಣಪಕ್ಷದ ಬಿದಿಗೆ ಮೊದಲುಗೊಂಡು ಚತುರ್ದಶಿಯ ವರೆಗೆ, ಜಲಮಯನೂ ರಸಾತ್ಮಕನೂ ಆದ ಅವನ ದೇಹದಲ್ಲಿರುವ ಜಲರೂಪವಾದ ಮಧುವನ್ನೂ, ಅಮೃತವನ್ನೂ ದೇವತೆಗಳು ಪಾನಮಾಡುತ್ತಾರೆ.

೬೦. ಸೂರ್ಯನ ತೇಜಸ್ಸಿನಿಂದ ಹದಿನೈದು ದಿನಗಳಲ್ಲಿ ಅಮೃತವು ತುಂಬಿದ ಮೇಲೆ ಹುಣ್ಣಿಮೆಯ ದಿನ ಚಂದ್ರನು ದೇವತೆಗಳಿಗೆ ಅದನ್ನು ಆಹಾರಕ್ಕಾಗಿ ಒಪ್ಪಿಸಲು ಬರುವನು. ಅವರು ಪಿತೃಗಳು ಮತ್ತು ಋಷಿಗಳೊಡಗೂಡಿ ಅವನನ್ನು ಆ ರಾತ್ರಿ ಸೇವಿಸುವರು.

ಏಕರಾತ್ರಂ ಸುರಾಃ ಸಾರ್ಧಂ ಪಿತೃಭಿರ್ಋಷಿಭಿಶ್ಚ ವೈ ।
ಸೋಮಸ್ಯ ಕೃಷ್ಣಪಕ್ಷಾದೌ ಭಾಸ್ಕರಾಭಿಮುಖಸ್ಯ ವೈ ॥೬೧॥

ಪ್ರಕ್ಷೀಯತೇ ಪರೋ ಹ್ಯಾತ್ಮಾ ಪೀಯಮಾನಕಲಾಕ್ರಮಾತ್ ।
ತ್ರಯಶ್ಚ ತ್ರಿಂಶತಾ ಸಾರ್ಧಂ ತ್ರಯಸ್ತ್ರಿಂಶಚ್ಛತಾನಿ ತು ॥೬೨॥

ತ್ರಯಸ್ತ್ರಿಂಶತ್ಸಹಸ್ರಾಣಿ ದೇವಾಃ ಸೋಮಂ ಪಿಬಂತಿ ವೈ ।
ಇತ್ಯೇವಂ ಪೀಯಮಾನಸ್ಯ ಕೃಷ್ಣೇ ವರ್ಧಂತಿ ತಾಃ ಕಲಾಃ ॥೬೩॥

ಕ್ಷೀಯಂತೇ ಚ ತತಃ ಕೃಷ್ಣೇ ಶುಕ್ಲೇ ಹ್ಯಾಪ್ಯಾಯಯಂತಿ ಚ ।
ಏವಂ ದಿನಕ್ರಮಾತ್ಪೀತೇ ದೇವೈರಪಿ ನಿಶಾಕರೇ ॥೬೪॥

ಪೀತ್ವಾರ್ಧಮಾಸಂ ಗಚ್ಛಂತಿ ಅಮಾವಾಸ್ಯಾಂ ಸುರಾಶ್ಚ ತೇ ।
ಪಿತರಶ್ಚೋಪತಿಷ್ಠಂತಿ ಅಮಾವಾಸ್ಯಾಂ ನಿಶಾಕರಂ ॥೬೫॥

ತತಃ ಪಂಚದಶೇ ಭಾಗೇ ಕಿಂಚಿಚ್ಛೇಷೇ ನಿಶಾಕರೇ ।
ತತೋಽಪರಾಹ್ಣೇ ಪಿತರೋ ಜಘನ್ಯದಿವಸೇ ಪುನಃ ॥೬೬॥

---

೬೧. ಕೃಷ್ಣಪಕ್ಷದ ಪ್ರಾರಂಭದಲ್ಲಿ ಸೂರ್ಯಾಭಿಮುಖನಾಗಿರುವ ಚಂದ್ರನ ಶರೀರವು ದೇವತೆಗಳು ಪಾನಮಾಡಿದ ಕಲೆಗಳಿಗೆ ಅನುಸಾರವಾಗಿ ಕ್ಷಯಿಸತೊಡಗುವುದು.

೬೨-೬೩. ಮೂವತ್ತಾರುಸಾವಿರದ ಮುನ್ನೂರ ಮೂವತ್ತಮೂರು ಜನ ದೇವತೆಗಳು ಚಂದ್ರನಲ್ಲಿರುವ ಅಮೃತವನ್ನು ಪಾನಮಾಡುವರು. ಕೃಷ್ಣಪಕ್ಷದಲ್ಲಿ ಅವರು ಅಮೃತರಸವನ್ನು ಕುಡಿದ ಬಳಿಕ ಆ ಕಲೆಗಳು ಮತ್ತೆ ಬೆಳೆಯುವುವು.

೬೪-೬೫. ದೇವತೆಗಳು ಪಾನಮಾಡುವ ಕಾರಣ ಚಂದ್ರನ ಕಲೆಗಳು ಕೃಷ್ಣಪಕ್ಷದಲ್ಲಿ ಕ್ಷಯಿಸುವುವು; ಶುಕ್ಲಪಕ್ಷದಲ್ಲಿ ಮತ್ತೆ ಬೆಳೆಯುವುವು. ಹದಿನೈದು ದಿನ ಅಮೃತವನ್ನು ಕುಡಿದು ಆ ದೇವತೆಗಳು ಅಮಾವಾಸ್ಯೆಯ ದಿನ ಹೊರಟುಹೋಗುತ್ತಾರೆ. ಪಿತೃಗಳಾದರೋ ಆ ದಿವಸ ಅಮೃತಪಾನಕ್ಕಾಗಿ ಚಂದ್ರನನ್ನು ಸೇವಿಸುತ್ತಾರೆ.

೬೬-೬೭. ಆ ವೇಳೆಗೆ ಚಂದ್ರನ ದೇಹದಲ್ಲಿ ಸ್ವಲ್ಪಭಾಗ ಮಾತ್ರ ಎಂದರೆ ಹದಿನೈದರಲ್ಲೊಂದುಪಾಲು ಉಳಿದಿರುವುದು. ಆ ಕೊನೆಯ ದಿನವೂ ಕೂಡ ಪಿತೃ

ಪಿಬಂತಿ ದ್ವಿಕಲಂ ಕಾಲಂ ಶಿಷ್ಟಾಸ್ತಾಸ್ತು ಕಲಾಸ್ತು ಯಾಃ ।
ವಿನಿಸ್ಸೃಷ್ಟಂ ತ್ವಮಾವಾಸ್ಯಾಂ ಗಭಸ್ತಿಭ್ಯಸ್ತದಾಮೃತಂ ॥೬೭॥

ಅರ್ಧಮಾಸಸಮಾಪ್ತೌ ತು ಪೀತ್ವಾ ಗಚ್ಛಂತಿ ತೇಽಮೃತಂ ।
ಸೌಮ್ಯಾಃ ಬರ್ಹಿಷದಶ್ಚೈವ ಅಗ್ನಿಷ್ವಾತ್ತಾಶ್ಚ ಯೇ ಸ್ಮೃತಾಃ ॥೬೮॥

ಕಾವ್ಯಾಶ್ಚೈವ ತು ಯೇ ಪ್ರೋಕ್ತಾಃ ಪಿತರಃ ಸರ್ವ ಏವ ತೇ ।
ಸಂವತ್ಸರಾಶ್ಚ ಯೇ ಕಾವ್ಯಾಃ ಪಂಚಾಬ್ದಾ ವೈ ದ್ವಿಜಾಃ ಸ್ಮೃತಾಃ ॥೬೯॥

ಸೌಮ್ಯಾಃ ಸುತಪಸೋ ಜ್ಞೇಯಾಃ ಸೌಮ್ಯಾ ಬರ್ಹಿಷದಃ ಸ್ಮೃತಾಃ ।
ಅಗ್ನಿಷ್ವಾತ್ತಾಸ್ತ್ರಯಶ್ಚೈವ ಪಿತೃಸರ್ಗಸ್ಥಿತಾ ದ್ವಿಜಾಃ ॥೭೦॥

---

ಗಳು ಮಿಕ್ಕಿರುವ ಆ ಕಲೆಗಳನ್ನು ಅಪರಾಹ್ಣದಲ್ಲಿ ಎರಡು *ಕಲೆಗಳ ಕಾಲ ಪಾನ ಮಾಡುವರು. ಅವನ ಕಿರಣಗಳಿಂದ ಹೊರಹೊರಡುವ ಅಮೃತವನ್ನು ಆ ಅಮಾವಾಸ್ಯೆಯ ದಿನ ಅವರು ಕುಡಿಯುವರು.

೬೮. ಕೃಷ್ಣಪಕ್ಷವು ಮುಗಿದ ಬಳಿಕ ಸೌಮ್ಯರು, ಬರ್ಹಿಷದರು, ಅಗ್ನಿಷ್ವಾತ್ತರು ಮತ್ತು ಕಾವ್ಯರೆಂದು ಪ್ರಖ್ಯಾತರಾದ ಆ ಪಿತೃಗಳೆಲ್ಲರೂ ಅಮೃತಪಾನವನ್ನು ಮಾಡಿ ಹೊರಟುಹೋಗುತ್ತಾರೆ.

೬೯-೭೦. ಎಲೈ ಬ್ರಾಹ್ಮಣೋತ್ತಮರೇ, ಕಾವ್ಯರಿಗೆ ಸಂವತ್ಸರರೆಂದೂ ಪಂಚಾಬ್ದರೆಂದೂ ನಾಮಾಂತರವುಂಟು. ಸೌಮ್ಯರನ್ನು ಸುತಪಸ್ಸುಗಳೆಂದೂ ಹೇಳುತ್ತಾರೆ. ಬರ್ಹಿಷತ್ಪಿತೃಗಳಿಗೂ ಸೌಮ್ಯರೆಂಬ ವ್ಯವಹಾರವಿದೆ. ಪಿತೃಗಳ ಸೃಷ್ಟಿಯಲ್ಲಿ ಅಗ್ನಿಷ್ವಾತ್ತರು ಮೂರು ಪಂಗಡಗಳಾಗಿರುವರು.

---

* ಐನೂರು ನಲವತ್ತಾರುಸಾರಿ ರೆಪ್ಪೆ ಹೊಡೆಯುವಷ್ಟು ಹೊತ್ತಿಗೆ ಒಂದು ಕಲೆಯೆಂದು ಹೆಸರು.

**ಪಿತೃಭಿಃ ಪೀಯಮಾನಾಯಾಂ ಪಂಚದಶ್ಯಾಂ ತು ವೈ ಕಲಾಂ ।**
**ಯಾವಚ್ಚ ಕ್ಷೀಯತೇ ತಸ್ಮಾದ್ಭಾಗಃ ಪಂಚದಶಸ್ತು ಸಃ ॥೭೧॥**

**ಅಮಾವಾಸ್ಯಾಂ ತಥಾ ತಸ್ಯ ಅಂತರಾ ಪೂರ್ಯತೇ ಪರಃ ।**
**ವೃದ್ಧಿಕ್ಷಯೌ ವೈ ಪಕ್ಷಾದೌ ಷೋಡಶ್ಯಾಂ ಶಶಿನಃ ಸ್ಮೃತೌ ।**
**ಏವಂ ಸೂರ್ಯನಿಮಿತ್ತೇ ತೇ ಕ್ಷಯವೃದ್ಧೀ ನಿಶಾಕರೇ ॥೭೨॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಭುವನಕೋಶೇ ಸೂರ್ಯಾದಿಗಮನಂ ನಾಮ ಷಡ್ವಿಂಶತ್ಯಧಿಕಶತತಮೋಽಧ್ಯಾಯಃ**

---

೭೧. ಅಮಾವಾಸ್ಯೆಯ ದಿನ ಪಿತೃಗಳು ಹದಿನೈದನೆಯ ಕಲೆಯನ್ನು ಪಾನ ಮಾಡುವರಷ್ಟೆ! ಚಂದ್ರನ ಆ ಹದಿನೈದನೆಯ ಭಾಗವು ಸವೆಯುವುದರೊಳಗೆ ಮತ್ತೊಂದು ಎಂದರೆ ಹದಿನಾರನೆಯ ಕಲೆಯು ಬೆಳೆಯತೊಡಗುವುದು.

೭೨. ಪಕ್ಷದ ಆದಿಯಲ್ಲಿ ವೃದ್ಧಿಕ್ಷಯಗಳು ಪ್ರಾರಂಭವಾಗುವುದು ಚಂದ್ರನ ಹದಿನಾರನೆಯ ಕಲೆಯಲ್ಲೆಂದು ಹೇಳುತ್ತಾರೆ. ಹೀಗೆ ಚಂದ್ರನ ಏರುತಗ್ಗುಗಳು ಸೂರ್ಯನಿಂದ ಉಂಟಾಗುತ್ತವೆ.

**ಅಧ್ಯಾಯದ ಸಾರಾಂಶ**

ಈ ಅಧ್ಯಾಯವು ವಸಂತಾದಿ ಋತುಗಳಲ್ಲಿ ಸೂರ್ಯನೊಡನೆ ಸಂಚರಿಸುವ ದೇವಾದಿಗಣಗಳ ಪ್ರಭೇದವನ್ನು ತಿಳಿಸುತ್ತದೆ.

ಸೂರ್ಯನೊಡನೆ ಒಂದೊಂದು ಋತುವಿನಲ್ಲಿಯೂ ಆದಿತ್ಯರು, ಋಷಿಗಳು, ಗಂಧರ್ವರು, ಅಪ್ಸರಸ್ತ್ರೀಯರು, ನಾಗರು, ಯಕ್ಷರು, ರಾಕ್ಷಸರು' ಈ ಏಳು ಗಣಗಳಿಗೆ ಸೇರಿದ ಇಬ್ಬಿಬ್ಬರು ಎಂದರೆ ಒಟ್ಟು ಹದಿನಾಲ್ಕು ಮಂದಿ ತಮ್ಮ ಪರಿವಾರ ದೊಡನೆ ಸಂಚರಿಸುವರು. ಇವರಲ್ಲದೆ ವಾಲಖಿಲ್ಯರು ಮುಂತಾದವರು ಇನ್ನೂ ಎಷ್ಟೋ ಜನ ಅನುಸರಿಸಿ ನಡೆಯುವರು. ಇವರು ಸೂರ್ಯನನ್ನು ವಿಧವಿಧವಾಗಿ ಓಲೈಸುವರು. ಅವನ ತೇರಿಗೆ ಒಂದೇ ಚಕ್ರ; ಹೂಡಿದ ಕುದುರೆಗಳ ಸಂಖ್ಯೆ ಏಳು. ಅವು ಛಂದೋಮಯವಾದುವು; ಹಸುರುಬಣ್ಣದವು; ಅಲೌಕಿಕ ಮಹಿಮೆಯುಳ್ಳವು.

## ಅಧ್ಯಾಯ ೧೨೬

ಚಂದ್ರನ ರಥಕ್ಕೆ ಮೂರು ಗಾಲಿಗಳೂ ಹತ್ತು ಕುದುರೆಗಳೂ ಇವೆ. ಅವೆಲ್ಲ ಬಿಳಿಯವು. ಚಂದ್ರನಿಗೆ ವೃದ್ಧಿಕ್ಷಯಗಳುಂಟು. ಶುಕ್ಲಪಕ್ಷದ ಪಾಡ್ಯದಿಂದ ಅವನು ಬೆಳೆಯುತ್ತ ಬೆಳೆಯುತ್ತ ಹುಣ್ಣಿಮೆಯ ದಿನ ಪರಿಪೂರ್ಣನಾಗುವನು. ತರುವಾಯ ಕೃಷ್ಣಪಕ್ಷದ ಆದಿಯಿಂದ ದೇವತೆಗಳು ಅವನ ಕಲೆಗಳನ್ನು ಪಾನಮಾಡುವರು. ಅಮಾವಾಸ್ಯೆಯ ದಿನ ಪಿತೃಗಳು ಅವನಲ್ಲಿ ಉಳಿದಿರುವ ಅಮೃತವನ್ನು ಕುಡಿದು ಹೊರಟುಹೋಗುವರು. ಆ ಮೇಲೆ ಸೂರ್ಯನು ತನ್ನ ಸುಷುಮ್ನಕಿರಣದಿಂದ ಚಂದ್ರನನ್ನು ಪುನಃ ಕ್ರಮಕ್ರಮವಾಗಿ ಬೆಳೆಸುವನು. ಚಂದ್ರನ ವೃದ್ಧಿಕ್ಷಯಗಳಿಗೆ ಸೂರ್ಯನೇ ಕಾರಣ.

ಶ್ರೀಮತ್ಸ್ಯಮಹಾಪುರಾಣದಲ್ಲಿ ಭುವನಕೋಶದೊಳಗೆ ಸೂರ್ಯಾದಿಗಮನವೆಂಬ ನೂರಿಪ್ಪತ್ತಾರನೆಯ ಅಧ್ಯಾಯ ಮುಗಿದುದು.



## ಅಥ ಸಪ್ತವಿಂಶತ್ಯಧಿಕಶತತಮೋಽಧ್ಯಾಯಃ

॥ ಸೂತ ಉವಾಚ ॥

ತಾರಾಗ್ರಹಾಣಾಂ ವಕ್ಷ್ಯಾಮಿ ಸ್ವರ್ಭಾನೋಸ್ತು ರಥಂ ಪುನಃ ।
ಅಥ ತೇಜೋಮಯಃ ಶುಭ್ರಃ ಸೋಮಪುತ್ರಸ್ಯ ವೈ ರಥಃ ॥ ೧ ॥

ಯುಕ್ತೋ ಹಯೈಃ ಪಿಶಂಗೈಸ್ತು ದಶಭಿರ್ವಾತರಂಹಸೈಃ ।
ಶ್ವೇತಃ ಪಿಶಂಗಃ ಸಾರಂಗೋ ನೀಲಃ ಶ್ಯಾಮೋ ವಿಲೋಹಿತಃ ॥ ೨ ॥

ಶ್ವೇತಶ್ಚ ಹರಿತಶ್ಚೈವ ಪೃಷತೋ ವೃಷ್ಣಿರೇವ ಚ ।
ದಶಭಿಸ್ತು ಮಹಾಭಾಗೈರುತ್ತಮೈರ್ವಾತಸಂಭವೈಃ ॥ ೩ ॥

ತತೋ ಭೌಮರಥಸ್ಯಾಪಿ ಅಷ್ಟಾಂಗಃ ಕಾಂಚನಃ ಸ್ಮೃತಃ ।
ಅಷ್ಟಭಿರ್ಲೋಹಿತೈರಶ್ವೈಃ ಸಧ್ವಜೈರಗ್ನಿಸಂಭವೈಃ ।
ಸರ್ಪತೇಽಸೌ ಕುಮಾರೋ ವೈ ಋಜುವಕ್ರಾನುವಕ್ರಗಃ ॥ ೪ ॥

---

೧. ಸೂತಪೌರಾಣಿಕನು ಹೇಳಿದನು.—ನಕ್ಷತ್ರಗಳ, ಗ್ರಹಗಳ ಮತ್ತು ರಾಹುವಿನ ರಥವನ್ನು ವರ್ಣಿಸುವೆನು ಕೇಳು. ಬುಧನ ತೇರು ತೇಜೋಮಯ ವಾಗಿಯೂ ಶುಭ್ರವರ್ಣವಾಗಿಯೂ ಇದೆ.

೨-೩. ಅದು ಶ್ವೇತ, ಪಿಶಂಗ, ಸಾರಂಗ, ನೀಲ, ಶ್ಯಾಮ, ವಿಲೋಹಿತ, ಶ್ವೇತ, ಹರಿತ, ಪೃಷತ, ವೃಷ್ಣಿ ಎಂಬ ಹತ್ತು ಕುದುರೆಗಳಿಂದ ಕೂಡಿದೆ. ಅವುಗಳೆಲ್ಲವೂ ಹೊಂಬಣ್ಣದವು. ವಾಯುವೇಗದವು ; ಮತ್ತು ವಾಯುವಿನಿಂದ ಹುಟ್ಟಿದುವು.

೪. ಅಂಗಾರಕನ ತೇರಿಗೆ ಎಂಟು ಚಿನ್ನದ ಗಾಲಿಗಳಿವೆ. ಹೂಡಿರುವ ಕುದುರೆಗಳು ಕೆಂಪಗಿವೆ. ಅವುಗಳ ಸಂಖ್ಯೆ ಎಂಟು. ಅವು ಅಗ್ನಿಯಲ್ಲಿ ಜನಿಸಿದುವು. ಧ್ವಜದಿಂದ ಅಲಂಕೃತವಾಗಿ ಕಂಗೊಳಿಸುತ್ತವೆ. ಅಂಗಾರಕನು ಯುವಕ. ಅವನು ಋಜುಗತಿ, ವಕ್ರಗತಿ ಮತ್ತು ಅನುವಕ್ರಗತಿಗಳಿಂದ ಸಂಚರಿಸುವನು.

**ಅತಶ್ಚಾಂಗಿರಸೋ ವಿದ್ವಾನ್ ದೇವಾಚಾರ್ಯೋ ಬೃಹಸ್ಪತಿಃ ।**
**ಗೌರಾಶ್ವೇನ ತು ರೌಕ್ಮೇಣ ಸ್ಯಂದನೇನ ವಿಸರ್ಪತಿ ॥ ೫ ॥**

**ಯುಕ್ತೇನಾಷ್ಟಾಭಿರಶ್ವೈಶ್ಚ ಧ್ವಜೈರಗ್ನಿಸಮುದ್ಭವೈಃ ।**
**ಅಬ್ದಂ ವಸತಿ ಯೋ ರಾಶೌ ಸ್ವದಿಶಂ ತೇನ ಗಚ್ಛತಿ ॥ ೬ ॥**

**ಯುಕ್ತೇನಾಷ್ಟಾಭಿರಶ್ವೈಶ್ಚ ಸಧ್ವಜೈರಗ್ನಿಸನ್ನಿಭೈಃ ।**
**ರಥೇನ ಕ್ಷಿಪ್ರವೇಗೇನ ಭಾರ್ಗವಸ್ತೇನ ಗಚ್ಛತಿ ॥ ೭ ॥**

**ತತಃ ಶನೈಶ್ಚರೋಽಪ್ಯಶ್ವೈಃ ಸಬಲೈರ್ವಾತರಂಹಸೈಃ ।**
**ಕಾಷ್ಣಾರ್ಯಸಂ ಸಮಾರುಹ್ಯ ಸ್ಯಂದನಂ ಯಾತ್ಯಸೌ ಶನಿಃ ॥ ೮ ॥**

**ಸ್ವರ್ಭಾನೋಸ್ತು ಯಥಾಷ್ಟಾಶ್ವಾಃ ಕೃಷ್ಣಾ ವೈ ವಾತರಂಹಸಃ ।**
**ರಥಂ ತಮೋಮಯಂ ತಸ್ಯ ವಹಂತಿ ಸ್ಮ ಸುದಂಶಿತಾಃ ॥ ೯ ॥**

---

೫. ಅಂಗಿರಸಮಹಾಮುನಿಯ ಪುತ್ರನೂ, ಸಕಲ ವಿದ್ಯಾಪಾರಂಗತನೂ, ದೇವತೆಗಳ ಆಚಾರ್ಯನೂ ಆದ ಬೃಹಸ್ಪತಿಯು ಸುವರ್ಣರಥದಲ್ಲಿ ಸಂಚಾರಮಾಡುವನು. ಅವನ ಕುದುರೆಗಳ ಬಣ್ಣ ಹಳದಿ.

೬. ಅಗ್ನಿಯಲ್ಲಿ ಜನಿಸಿದ ಎಂಟು ಕುದುರೆಗಳನ್ನು ಅವನ ತೇರಿಗೆ ಹೂಡಿದೆ. ಅವನು ಒಂದೊಂದು ರಾಶಿಯಲ್ಲಿಯೂ ಒಂದು ವರ್ಷಕಾಲವಿರುವನು. ಆ ಬಳಿಕ ತಾನು ಹೋಗಬೇಕಾದ ಕಡೆಗೆ ಪ್ರಯಾಣಮಾಡುವನು.

೭. ಶುಕ್ರನ ತೇರು ಬಲು ವೇಗವಾಗಿ ಸಂಚರಿಸುವುದು. ಅದನ್ನು ಎಂಟು ಕುದುರೆಗಳು ಎಳೆಯುವುವು. ಅವು ಧ್ವಜದಿಂದ ಅಲಂಕೃತವಾಗಿವೆ; ಅಗ್ನಿಯಂತೆ ಬೆಳಗುತ್ತಿವೆ.

೮. ಶನಿಯು ಬಹಳ ನಿಧಾನವಾಗಿ ಚಲಿಸುವನು. ಅವನ ತೇರು ಉಕ್ಕಿನದು. ಅದಕ್ಕೆ ಬಲಶಾಲಿಗಳೂ, ವಾಯುವಿನಂತೆ ವೇಗಶಾಲಿಗಳೂ ಆದ ಕುದುರೆಗಳನ್ನು ಕಟ್ಟಿದೆ.

೯. ರಾಹುವಿಗಾದರೋ ವಾಯುವಿನಷ್ಟು ವೇಗವಾಗಿ ಚಲಿಸುವ ಎಂಟು ಕರಿಯ ಕುದುರೆಗಳಿವೆ. ಅವು ಸುಸಜ್ಜಿತವಾಗಿ ಕತ್ತಲೆಯಿಂದ ತುಂಬಿದ ಅವನ ತೇರನ್ನು ಎಳೆಯುವುವು.

**ಆದಿತ್ಯನಿಲಯೋ ರಾಹುಃ ಸೋಮಂ ಗಚ್ಛತಿ ಪರ್ವಸು ।**
**ಆದಿತ್ಯಮೇತಿ ಸೋಮಾಚ್ಚ ತಮಸೋಽಂತೇಷು ಪರ್ವಸು ॥೧೦॥**

**ತತಃ ಕೇತುಮತಶ್ಚಾಶ್ವಾ ಅಷ್ಟೌ ತೇ ವಾತರಂಹಸಃ ।**
**ಪಲಾಲಧೂಮವರ್ಣಾಭಾಃ ಕ್ಷಾಮದೇಹಾಃ ಸುದಾರುಣಾಃ ॥೧೧॥**

**ಏತೇ ವಾಹಾ ಗ್ರಹಾಣಾಂ ವೈ ಮಯಾ ಪ್ರೋಕ್ತಾ ರಥೈಃ ಸಹ ।**
**ಸರ್ವೇ ಧ್ರುವೇ ನಿಬದ್ಧಾಸ್ತೇ ನಿಬದ್ಧಾ ವಾತರಶ್ಮಿಭಿಃ ॥೧೨॥**

**ಏತೇ ವೈ ಭ್ರಾಮ್ಯಮಾಣಾಸ್ತೇ ಯಥಾಯೋಗಂ ವಹಂತಿ ವೈ ।**
**ವಾಯವ್ಯಾಭಿರದೃಶ್ಯಾಭಿಃ ಪ್ರಬದ್ಧಾ ವಾತರಶ್ಮಿಭಿಃ ॥೧೩॥**

**ಪರಿಭ್ರಮಂತಿ ತದ್ಬದ್ಧಾಶ್ಚಂದ್ರಸೂರ್ಯಗ್ರಹಾ ದಿವಿ ।**
**ಯಾವತ್ತಮನುಪರ್ಯೇತಿ ಧ್ರುವಂ ವೈ ಜ್ಯೋತಿಷಾಂ ಗಣಃ ॥೧೪॥**

---

೧೦. ರಾಹುವಿಗೆ ಸ್ವತಂತ್ರವಾದ ವಾಸಸ್ಥಾನವಿಲ್ಲ. ಅವನು ಸೂರ್ಯನೊಡನೆ ವಾಸಮಾಡುತ್ತಾನೆ. ಪರ್ವಕಾಲಗಳಲ್ಲಿ ಚಂದ್ರನಲ್ಲಿಗೆ ಹೋಗಿ ಅಮಾವಾಸ್ಯೆಯ ದಿನ ಮತ್ತೆ ಸೂರ್ಯನ ಬಳಿಗೆ ಹಿಂದಿರುಗುತ್ತಾನೆ.

೧೧. ಕೇತುವಿಗೆ ಕುದುರೆಗಳು ಎಂಟು. ಅವು ವಾಯುವೇಗದವು. ಅವುಗಳ ಬಣ್ಣವು ಒಣಹುಲ್ಲಿನ ಹೊಗೆಯನ್ನು ಹೋಲುತ್ತದೆ. ಅವು ಬಡವಾಗಿವೆ; ಆದರೂ ಬಹಳ ಕ್ರೂರವಾಗಿವೆ.

೧೨. ಗ್ರಹಗಳ ಕುದುರೆಗಳನ್ನೂ ರಥಗಳನ್ನೂ ವಿವರಿಸಿದುದಾಯಿತು. ಇವೆಲ್ಲವೂ ವಾಯುರೂಪವಾದ ಹಗ್ಗಗಳಿಂದ ಧ್ರುವಮಂಡಲಕ್ಕೆ ಕಟ್ಟಲ್ಪಟ್ಟಿವೆ.

೧೩. ವಾಯುರೂಪವಾದ, ಆದುದರಿಂದಲೇ ಅದೃಶ್ಯವಾದ ಪಾಶಗಳಿಂದ ಈ ಕುದುರೆಗಳನ್ನು ಆಯಾ ತೇರಿಗೆ ಬಿಗಿದಿದೆ. ಇವು ತಮಗೆ ಸಹಜವಾದ ನಡಿಗೆಯಿಂದ ಅವುಗಳನ್ನು ಎಳೆದುಕೊಂಡು ಹೋಗುವುವು.

೧೪. ಈ ಕುದುರೆಗಳನ್ನು ಹೂಡಿದ ತೇರಿನಲ್ಲಿ ಕುಳಿತು ಚಂದ್ರ ಸೂರ್ಯಾದಿ ಗ್ರಹಗಳು ಅಂತರಿಕ್ಷದಲ್ಲಿ ತಿರುಗುತ್ತಿರುವುವು. ನಕ್ಷತ್ರಗಳೂ ಗ್ರಹಗಳೂ ಧ್ರುವನ ಸುತ್ತಲೂ ಬಳಸಿಬರುವುವು.

ಯಥಾ ನದ್ಯುದಕೇ ನೌಸ್ತು ಉದಕೇನ ಸಹೋಹ್ಯತೇ ।
ತಥಾ ದೇವಗೃಹಾಣಿ ಸ್ಯುರುಹ್ಯಂತೇ ವಾತರಂಹಸಾ ।
ತಸ್ಮಾದ್ಯಾನಿ ಪ್ರಗೃಹ್ಯಂತೇ ವ್ಯೋಮ್ನಿ ದೇವಗೃಹಾ ಇತಿ ||೧೫||

ಯಾವತ್ಯಶ್ಚೈವ ತಾರಾಃ ಸ್ಯುಸ್ತಾವಂತೋಽಸ್ಯ ಮರೀಚಯಃ ।
ಸರ್ವಾ ಧ್ರುವನಿಬದ್ಧಾಸ್ತಾ ಭ್ರಮಂತ್ಯೋ ಭ್ರಾಮಯಂತಿ ಚ ||೧೬||

ತೈಲಪೀಡಂ ಯಥಾಚಕ್ರಂ ಭ್ರಮತೇ ಭ್ರಾಮಯಂತಿ ವೈ ।
ತಥಾ ಭ್ರಮಂತಿ ಜ್ಯೋತೀಂಷಿ ವಾತಬದ್ಧಾನಿ ಸರ್ವಶಃ ||೧೭||

ಅಲಾತಚಕ್ರವದ್ಯಾಂತಿ ವಾತಚಕ್ರೇರಿತಾನಿ ತು ।
ಯಸ್ಮಾತ್ಪ್ರವಹತೇ ತಾನಿ ಪ್ರವಹಸ್ತೇನ ಸ್ಮೃತಃ ||೧೮||

---

೧೫. ನದಿಯ ನೀರು ತನ್ನೊಡನೆ ದೋಣಿಯನ್ನು ಹೊತ್ತುಕೊಂಡು ಹೋಗುವಂತೆ ವಾಯುವಿನ ವೇಗವು ದೇವತೆಗಳ ವಾಸಸ್ಥಾನಗಳನ್ನು ಒಯ್ಯುತ್ತದೆ. ಆದುದರಿಂದ ಅಂತರಿಕ್ಷದಲ್ಲಿ ಆ ವಾಯುವಿನ ವೇಗಕ್ಕೆ ಸಿಕ್ಕಿದ ದೇವತೆಗಳ ಗೃಹಗಳೆಲ್ಲವೂ ಹೀಗೆಯೇ ಚಲಿಸುತ್ತವೆ.

೧೬. ಅಶ್ವಿನ್ಯಾದಿ ನಕ್ಷತ್ರಗಳೂ, ಸೂರ್ಯಾದಿಗ್ರಹಗಳೂ ಸೇರಿ ಒಟ್ಟು ಎಷ್ಟಿವೆಯೋ, ಧ್ರುವನ ಕಿರಣಗಳೂ ಅಷ್ಟೇ ಇವೆ. ಅವೆಲ್ಲವೂ ಇವನಲ್ಲಿ ಬದ್ಧವಾಗಿವೆ. ಅವು ಕಾಲಚಕ್ರಕ್ಕೆ ಸೇರಿಕೊಂಡು ಅದರೊಡನೆ ತಾವು ತಿರುಗುವುದು ಮಾತ್ರವಲ್ಲದೆ ಸೂರ್ಯಾದಿಗ್ರಹಗಳನ್ನೂ ಸಂಚಾರಮಾಡಿಸುತ್ತವೆ.

೧೭. ಎಣ್ಣೆಯ ಗಾಣದ ಕೊಂತವು ಗುಂಡಾಗಿ ತಿರುಗುತ್ತದೆ. ಎತ್ತುಗಳು ಅದನ್ನು ಹಾಗೆ ತಿರುಗುವಂತೆ ಮಾಡುತ್ತವೆ. ಹಾಗೆಯೇ ವಾಯುಪಾಶದ ಕಟ್ಟಿಗೆ ಸಿಕ್ಕಿರುವ ಗ್ರಹ ನಕ್ಷತ್ರಗಳು ಎಲ್ಲೆಡೆಗಳಲ್ಲಿಯೂ ಸಂಚರಿಸುವುವು.

೧೮. ಇವು ವಾಯುಚಕ್ರದಿಂದ ಪ್ರೇರಿತಗಳಾಗಿ ಉರಿಗೊಳ್ಳಿಯ ಚಕ್ರದಂತೆ ತಿರುಗುವುವು. ಇವುಗಳನ್ನು ಚಲಿಸುವಂತೆ ಮಾಡುವ ಕಾರಣ ಆ ವಾಯುವಿಗೆ ಪ್ರವಹವೆಂದು ಹೆಸರಾಯಿತು.

ಏವಂ ಧ್ರುವೇ ನಿಯುಕ್ತೋಽಸೌ ಭ್ರಮತೇ ಜ್ಯೋತಿಷಾಂ ಗಣಃ ।
ಏಷ·ತಾರಾಮಯೋ ಜ್ಞೇಯಃ ಶಿಂಶುಮಾರೋ ಧ್ರುವೋ ದಿವಿ ॥೧೯॥

ಯದಹ್ನಾ ಕುರುತೇ ಪಾಪಂ ತಂ ದೃಷ್ಟ್ವಾ ನಿಶಿ ಮುಂಚತಿ ।
ಶಿಂಶುಮಾರಶರೀರಸ್ಥಾ ಯಾವಂತ್ಯಸ್ತಾರಕಾಸ್ತು ತಾಃ ॥೨೦॥

ವರ್ಷಾಣಿ ದೃಷ್ಟ್ವಾ ಜೀವೇತ ತಾವದೇವಾಧಿಕಾನಿ ತು ।
ಶಿಂಶುಮಾರಾಕೃತಿಂ ಜ್ಞಾತ್ವಾ ಪ್ರವಿಭಾಗೇನ ಸರ್ವಶಃ ॥೨೧॥

ಉತ್ತಾನಪಾದಸ್ತಸ್ಯಾಥ ವಿಜ್ಞೇಯಃ ಸೋಽತ್ತರೋ ಹನುಃ ।
ಯಜ್ಞೋಽಧರಸ್ತು ವಿಜ್ಞೇಯೋ ಧರ್ಮೋ ಮೂರ್ಧಾನಮಾಶ್ರಿತಃ ॥೨೨॥

ಹೃದಿ ನಾರಾಯಣಃ ಸಾಧ್ಯಾ ಅಶ್ವಿನೌ ಪೂರ್ವಪಾದಯೋಃ ।
ವರುಣಶ್ಚಾರ್ಯಮಾ ಚೈವ ಪಶ್ಚಿಮೇ ತಸ್ಯ ಸಕ್ಥಿನೀ ॥೨೩॥

---

೧೯. ಹೀಗೆ ಜ್ಯೋತಿರ್ಮಂಡಲವು ಧ್ರುವನಲ್ಲಿ ಆಶ್ರಯವನ್ನು ಪಡೆದು ತಿರುಗುವುದು. ಈ ಧ್ರುವನನ್ನು ಗ್ರಹನಕ್ಷತ್ರಮಯವಾದ ಶಿಂಶುಮಾರಚಕ್ರಸ್ವರೂಪವೆಂದೇ ಅರಿಯಬೇಕು.

೨೦-೨೧. ಶಿಂಶುಮಾರಚಕ್ರದ ದರ್ಶನಮಾಡಿದರೆ ಸಾಕು; ಹಗಲು ಮಾಡಿದ ಪಾಪವೆಲ್ಲ ರಾತ್ರಿಯಲ್ಲಿ ನಶಿಸುವುದು. ಅದರ ಆಕೃತಿಯನ್ನು ಪರಿಪೂರ್ಣವಾಗಿ ಮನಸ್ಸಿನಲ್ಲಿ ಅನುಸಂಧಾನಮಾಡಿದರೆ ಆ ಚಕ್ರವನ್ನು ಆಶ್ರಯಿಸಿರುವ ನಕ್ಷತ್ರಗಳ ಸಂಖ್ಯೆಗಿಂತಲೂ ಹೆಚ್ಚು ವರ್ಷಗಳ ಕಾಲ ಜೀವಿಸುವನು.

೨೨. ಭಗವತ್ಸ್ವರೂಪವಾದ ಶಿಂಶುಮಾರದ ಕೆನ್ನೆಯ ಮೇಲ್ಭಾಗದಲ್ಲಿ ಉತ್ತಾನಪಾದನೂ ಕೆಳಭಾಗದಲ್ಲಿ ಯಜ್ಞಪುರುಷನೂ ಇರುವರು. ಧರ್ಮದೇವನು ತಲೆಯನ್ನು ಆಶ್ರಯಿಸಿರುವನು.

೨೩. ನಾರಾಯಣನು ಎದೆಯಲ್ಲಿಯೂ, ಸಾಧ್ಯರು ಮತ್ತು ಅಶ್ವಿನೀ ದೇವತೆಗಳು ಪಾದಗಳ ಮುಂಭಾಗದಲ್ಲಿಯೂ ಇರುವರು. ವರುಣನೂ ಅರ್ಯಮನೂ ಹಿಂದೊಡೆಗಳಲ್ಲಿ ನೆಲೆಸಿರುವರು.

ಶಿಶ್ನೇ ಸಂವತ್ಸರೋ ಜ್ಞೇಯೋ ಮಿತ್ರಶ್ಚಾಪಾನಮಾಶ್ರಿತಃ ।
ಪುಚ್ಛೇಽಗ್ನಿಶ್ಚ ಮಹೇಂದ್ರಶ್ಚ ಮರೀಚಿಃ ಕಶ್ಯಪೋ ಧ್ರುವಃ ॥೨೪॥

ಏಷ ತಾರಾಮಯಃ ಸ್ತಂಭೋ ನಾಸ್ತಮೇತಿ ನ ವೋದಯಂ ।
ನಕ್ಷತ್ರಚಂದ್ರಸೂರ್ಯಾಶ್ಚ ಗ್ರಹಾಸ್ತಾರಾಗಣೈಃ ಸಹ ॥೨೫॥

ತನ್ಮುಖಾಭಿಮುಖಾಃ ಸರ್ವೇ ಚಕ್ರಭೂತಾ ದಿವಿ ಸ್ಥಿತಾಃ ।
ಧ್ರುವೇಣಾಧಿಷ್ಠಿತಾಶ್ಚೈವ ಧ್ರುವಮೇವ ಪ್ರದಕ್ಷಿಣಂ ॥೨೬॥

ಪರಿಯಾಂತಿ ಸುರಶ್ರೇಷ್ಠಂ ಮೇಢೀಭೂತಂ ಧ್ರುವಂ ದಿವಿ ।
ಅಗ್ನೀಧ್ರಕಾಶ್ಯಪಾನಾಂ ತು ತೇಷಾಂ ಸ ಪರಮೋ ಧ್ರುವಃ ॥೨೭॥

ಏಕ ಏವ ಭ್ರಮತ್ಯೇಷ ಮೇರೋರಂತರಮೂರ್ಧನಿ ।
ಜ್ಯೋತಿಷಾಂ ಚಕ್ರಮಾದಾಯ ಆಕರ್ಷಂಸ್ತಮಧೋಮುಖಃ ।
ಮೇರುಮಾಲೋಕಯನ್ನೇವ ಪ್ರತಿಯಾತಿ ಪ್ರದಕ್ಷಿಣಂ ॥೨೮॥

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಭುವನಕೋಶೇ ಧ್ರುವಪ್ರಶಂಸಾ ನಾಮ ಸಪ್ತವಿಂಶತ್ಯಧಿಕಶತತಮೋಽಧ್ಯಾಯಃ**

---

೨೪. ಶಿಶ್ನದಲ್ಲಿ ಸಂವತ್ಸರವೂ, ಅಪಾನದಲ್ಲಿ ಮಿತ್ರನೂ, ಬಾಲದಲ್ಲಿ ಅಗ್ನಿ, ಮಹೇಂದ್ರ, ಮರೀಚಿ, ಕಶ್ಯಪ ಮತ್ತು ಧ್ರುವರೂ ಇರುವರು.

೨೫. ಶಿಂಶುಮಾರವೆಂಬ ಈ ಜ್ಯೋತಿಃಸ್ತಂಭಕ್ಕೆ ಉದಯವೂ ಇಲ್ಲ; ಅಸ್ತಮಯವೂ ಇಲ್ಲ. ಗ್ರಹಗಳು, ನಕ್ಷತ್ರಗಳು, ಚಂದ್ರಸೂರ್ಯರು, ಇವರೆಲ್ಲರೂ ಅದಕ್ಕೆ ಅಭಿಮುಖವಾಗಿ ಅಂತರಿಕ್ಷದಲ್ಲಿ ಚಕ್ರಾಕಾರವಾಗಿ ಸಂಚರಿಸುತ್ತಿರುವರು.

೨೭. ಗ್ರಹನಕ್ಷತ್ರಗಳೆಲ್ಲವೂ ದೇವಶ್ರೇಷ್ಠನಾದ ಧ್ರುವನ ಆಸರೆಯಿಂದ ನಿಂತು ಮೇಟೀಕಂಬದಂತಿರುವ ಅವನನ್ನೇ ಪ್ರದಕ್ಷಿಣವಾಗಿ ಸುತ್ತುವುವು. ಅಗ್ನೀಧ್ರ, ಕಾಶ್ಯಪ ಮುಂತಾದವರೆಲ್ಲರಿಗಿಂತಲೂ ಧ್ರುವನು ಶ್ರೇಷ್ಠನೆನಿಸಿರುವನು.

೨೮. ಇವನು ಜ್ಯೋತಿಶ್ಚಕ್ರವನ್ನು ತನ್ನ ಸಾಮರ್ಥ್ಯದಿಂದಲೇ ಹಿಡಿದೆಳೆಯುತ್ತ, ಅಧೋಮುಖವಾಗಿ ಮೇರುಪರ್ವತವನ್ನು ನೋಡುತ್ತ ಅದರ ಮೇಲು ಭಾಗದಲ್ಲಿ ಪ್ರದಕ್ಷಿಣವಾಗಿ ಸುತ್ತುವನು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಚಂದ್ರಾದಿಗ್ರಹಗಳ ರಥದ ಸ್ವರೂಪವೂ, ಧ್ರುವನ ಮಹಿಮೆಯೂ ಉಕ್ತವಾಗಿವೆ.

ಚಂದ್ರ, ಅಂಗಾರಕ, ಬೃಹಸ್ಪತಿ ಮೊದಲಾದವರ ರಥಗಳು ಬೆಳ್ಳಿ, ಚಿನ್ನ, ಉಕ್ಕು ಮೊದಲಾದ ವಿಧವಿಧವಾದ ಲೋಹಗಳಿಂದ ಮಾಡಲ್ಪಟ್ಟಿವೆ. ಅವುಗಳಿಗೆ ಹೂಡುವ ಕುದುರೆಗಳ ಸಂಖ್ಯೆಯೂ, ಅವುಗಳ ಬಣ್ಣವೂ ಭಿನ್ನಭಿನ್ನವಾಗಿವೆ.

ಸೂರ್ಯಾದಿ ಗ್ರಹಗಳೂ, ಅಶ್ವಿನ್ಯಾದಿ ನಕ್ಷತ್ರಗಳೂ ವಾಯುಪಾಶಗಳಿಂದ ಜ್ಯೋತಿಶ್ಚಕ್ರಕ್ಕೆ ಕಟ್ಟಲ್ಪಟ್ಟಿವೆ. ಧ್ರುವನು ಮೇಟಿಕಂಬದಂತೆ ಸ್ಥಿರವಾಗಿ ಇವುಗಳಿಗೆಲ್ಲ ಆಧಾರವಾಗಿದ್ದಾನೆ. ಒಂದೊಂದು ಗ್ರಹವನ್ನೂ ಅದರದರ ಗೊತ್ತಾದ ಪಥದಲ್ಲಿ ಇವನು ಸಂಚಾರಮಾಡಿಸುತ್ತಾನೆ. ಶಿಂಶುಮಾರವೆಂಬ ಕಾಲಚಕ್ರವು ಭಗವತ್ಸ್ವರೂಪ ವಾದುದು. ಇದರ ಸ್ಮರಣ ಮಾತ್ರದಿಂದ ಪಾಪಗಳೆಲ್ಲ ಪರಿಹಾರವಾಗುವುವು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಭುವನಕೋಶದೊಳಗೆ ಧ್ರುವಪ್ರಶಂಸೆಯೆಂಬ ನೂರಿಪ್ಪತ್ತೇಳನೆಯ ಅಧ್ಯಾಯವು ಮುಗಿದುದು.

## ಅಥಾಷ್ಟಾವಿಂಶತ್ಯಧಿಕಶತತಮೋಽಧ್ಯಾಯಃ

|| ಋಷಯ ಊಚುಃ ||

ಯದೇತದ್ಭವತಾ ಪ್ರೋಕ್ತಂ ಶ್ರುತಂ ಸರ್ವಮಶೇಷತಃ ।
ಕಥಂ ದೇವಗೃಹಾಣಿ ಸ್ಯುಃ ಪುನರ್ಜ್ಯೋತೀಂಷಿ ವರ್ಣಯ || ೧ ||

|| ಸೂತ ಉವಾಚ ||

ಏತತ್ಸರ್ವಂ ಪ್ರವಕ್ಷ್ಯಾಮಿ ಸೂರ್ಯಾಚಂದ್ರಮಸೋರ್ಗತಿಂ ।
ಯಥಾ ದೇವಗೃಹಾಣಿ ಸ್ಯುಃ ಸೂರ್ಯಚಂದ್ರಗ್ರಹಾಸ್ತಥಾ || ೨ ||

ಅಗ್ರೇ ವ್ಯುಷ್ಟ್ಯಾಂ ರಜನ್ಯಾಂ ವೈ ಬ್ರಹ್ಮಣೋಽವ್ಯಕ್ತಯೋನಿನಃ ।
ಅವ್ಯಾಕೃತಮಿದಂ ಹ್ಯಾಸೀನ್ನೈಶೇನ ತಮಸಾ ವೃತಂ || ೩ ||

ಚತುರ್ಭೂತಾವಶಿಷ್ಟೇಽಸ್ಮಿನ್ ಬ್ರಹ್ಮಣಾ ಸಮಧಿಷ್ಠಿತೇ ।
ಸ್ವಯಂಭೂರ್ಭಗವಾಂಸ್ತತ್ರ ಲೋಕತತ್ವಾರ್ಥಸಾಧಕಃ || ೪ ||

---

೧. ಋಷಿಗಳು ಹೇಳಿದರು.—ಓ ಸೂತಾ, ನೀನು ಹೇಳಿದುದೆಲ್ಲವನ್ನೂ ಸಾಂಗವಾಗಿ ಕೇಳಿದೆವು. ಗ್ರಹಗಳೂ, ನಕ್ಷತ್ರಗಳೂ ದೇವತೆಗಳ ವಸತಿಯಾದುದು ಹೇಗೆ? ಈ ವಿಷಯವನ್ನು ಮತ್ತೆ ಬಣ್ಣಿಸಿ ಹೇಳು.

೨. ಸೂತಪೌರಾಣಿಕನು ಹೇಳಿದನು.—ಸೂರ್ಯಚಂದ್ರರ ಗಮನಪ್ರಕಾರವನ್ನೂ, ಸೂರ್ಯಚಂದ್ರಾದಿ ಗ್ರಹಗಳು ದೇವತೆಗಳ ವಾಸಸ್ಥಾನವೆಂತೆಂಬುದನ್ನೂ ಹೇಳುವೆನು ಕೇಳಿ.

೩. ಸೃಷ್ಟಿಗಿಂತ ಹಿಂದೆ ಸ್ವಯಂಸಂಭೂತನಾದ ಬ್ರಹ್ಮನ ರಾತ್ರಿಯು ಕಳೆದು ಮುಂಜಾನೆಯಾಗಿದ್ದಾಗ, ಲೋಕವೆಲ್ಲವೂ ಕಗ್ಗತ್ತಲೆಯಿಂದ ತುಂಬಿ ನಾಮರೂಪಭಾಗಶೂನ್ಯವಾಗಿತ್ತು.

೪-೫. ಬ್ರಹ್ಮನಲ್ಲಿ ವಿಶ್ರಾಂತವಾಗಿದ್ದ ಈ ಜಗತ್ತಿನಲ್ಲಿ ತೇಜಸ್ಸು ಹೊರತು ಮಿಕ್ಕ ನಾಲ್ಕು ಭೂತಗಳು ಮಾತ್ರವೇ ಉಳಿದಿದ್ದುವು. ಆಗ ಪೂಜ್ಯನಾದ ಬ್ರಹ್ಮ

ಖದ್ಯೋತರೂಪೀ ವಿಚರನ್ನಾವಿರ್ಭಾವಂ ವ್ಯಚಿಂತಯತ್ ।
ಜ್ಞಾತ್ವಾಗ್ನಿಂ ಕಲ್ಪಕಾಲಾದಾವಪಃ ಪೃಥ್ವೀಂ ಚ ಸಂಶ್ರಿತಾಃ ॥ ೫ ॥

ಸಂಹೃತ್ಯ ಸಂಪ್ರಕಾಶಾರ್ಥಂ ತ್ರಿಧಾ ತು ವ್ಯಭಜತ್ಪುನಃ ।
ಪಾಚಕೋ ಯಸ್ತು ಲೋಕೇಽಸ್ಮಿನ್ ಪಾರ್ಥಿವಃ ಸೋಽಗ್ನಿರುಚ್ಯತೇ ॥ ೬ ॥

ಯಶ್ಚಾಸೌ ತಪತೇ ಸೂರ್ಯೇ ಶುಚಿರಗ್ನಿಶ್ಚ ಸ ಸ್ಮೃತಃ ।
ವೈದ್ಯುತೋ ಜಾಠರಃ ಸೌಮ್ಯೋ ವೈದ್ಯುತಶ್ಚಾಪ್ಯಬಿಂಧನಃ ॥ ೭ ॥

ತೇಜೋಭಿಶ್ಚಾಪ್ಯತೇ ಕಶ್ಚಿತ್ ಕಶ್ಚಿದೇವಾಪ್ಯನಿಂಧನಃ ।
ಕಾಷ್ಠೇಂಧನಸ್ತು ನಿರ್ಮಥ್ಯಃ ಸೋಽದ್ಭಿಃ ಶಾಮ್ಯತಿ ಪಾವಕಃ ॥ ೮ ॥

---

ದೇವನು ಯಥಾರ್ಥಜ್ಞಾನವನ್ನು ಲೋಕಕ್ಕೆ ಉಂಟುಮಾಡಬೇಕೆಂದು ಸೂರ್ಯರೂಪ ದಿಂದ ಸಂಚರಿಸುತ್ತ ತೇಜಸ್ಸನ್ನು ಗೋಚರಪಡಿಸಬೇಕೆಂದು ಯೋಚಿಸಿದನು. ಪ್ರಳಯದ ಪ್ರಾರಂಭದಲ್ಲಿ ಅಗ್ನಿ, ಜಲ ಮತ್ತು ಪೃಥ್ವಿಗಳು ತನ್ನಲ್ಲಿ ಐಕ್ಯವಾದುದನ್ನು ಅವನು ಮನಸ್ಸಿಗೆ ತಂದುಕೊಂಡನು.

೬. ಒಟ್ಟುಗೂಡಿದ್ದ ಅಗ್ನಿಯನ್ನು ಅವನು ಲೋಕಕ್ಕೆ ಪ್ರಕಾಶವನ್ನು ಕೊಡುವುದಕ್ಕಾಗಿ ಮತ್ತೆ ಮೂರು ಭಾಗಮಾಡಿದನು. ಈ ಲೋಕದಲ್ಲಿ ಅಡಿಗೆಮಾಡುವುದಕ್ಕಾಗಿ ಉಪಯೋಗಿಸುವ ಅಗ್ನಿಯು ಪಾರ್ಥಿವವೆನಿಸಿಕೊಳ್ಳುತ್ತದೆ. ಇದಕ್ಕೆ ಪಾವಕವೆಂದೂ ಹೆಸರುಂಟು.

೭. ಸೂರ್ಯನಲ್ಲಿ ಜ್ವಲಿಸುತ್ತ ಔಷ್ಣ್ಯವನ್ನು ಬೀರುವ ಅಗ್ನಿಗೆ ಶುಚಿಯೆಂದು ಹೆಸರು. ಆಹಾರವನ್ನು ಜೀರ್ಣಮಾಡುವ ಜಠರಾಗ್ನಿಯನ್ನು ವೈದ್ಯುತವೆನ್ನುವರು. ಅದಕ್ಕೆ ನೀರೇ ಸೌದೆ. ಅದನ್ನು ಸೌಮ್ಯವೆಂದೂ ಕರೆಯುತ್ತಾರೆ.

೮. ಪಾವಕಾಗ್ನಿಯು ತೇಜಸ್ಸಿನ ಮೂಲಕ ಗೋಚರವಾಗುತ್ತದೆ. ಜಠರಾಗ್ನಿಗೆ ಇಂಧನವೇ (ಸೌದೆ) ಬೇಕಿಲ್ಲ. ಕಟ್ಟಿಗೆಯನ್ನು ಉರಿಸುವ ಬೆಂಕಿಗೆ ನಿರ್ಮಥ್ಯವೆಂದೂ ಹೆಸರುಂಟು. ಅದು ನೀರಿಗೆ ಆರಿಹೋಗುತ್ತದೆ.

**ಅರ್ಚಿಷ್ಮಾನ್ ಪಚನೋಽಗ್ನಿಸ್ತು ನಿಷ್ಪ್ರಭಃ ಸೌಮ್ಯಲಕ್ಷಣಃ ।**
**ಯಶ್ಚಾಸೌ ಮಂಡಲೇ ಶುಕ್ಲೇ ನಿರುಷ್ಣಃ ಸಂಪ್ರಕಾಶತೇ ॥ ೯ ॥**

**ಪ್ರಭಾ ಸೌರೀ ತು ಪಾದೇನ ಅಸ್ತಂ ಯಾತಿ ದಿವಾಕರೇ ।**
**ಅಗ್ನಿಮಾವಿಶತೇ ರಾತ್ರೌ ತಸ್ಮಾದಗ್ನಿಃ ಪ್ರಕಾಶತೇ ॥೧೦॥**

**ಉದಿತೇ ತು ಪುನಃ ಸೂರ್ಯೇ ಊಷ್ಮಾಗ್ನೇಸ್ತು ಸಮಾವಿಶತ್ ।**
**ಪಾದೇನ ತೇಜಸಶ್ಚಾಗ್ನೇಸ್ತಸ್ಮಾತ್ಸಂತಪತೇ ದಿವಾ ॥೧೧॥**

**ಪ್ರಾಕಾಶ್ಯಂ ಚ ತಥೌಷ್ಣ್ಯಂ ಚ ಸೌರ್ಯಾಗ್ನೇಯೇ ತು ತೇಜಸೀ ।**
**ಪರಸ್ಪರಾನುಪ್ರವೇಶಾದಾಪ್ಯಾಯೇತೇ ದಿವಾನಿಶಂ ॥೧೨॥**

**ಉತ್ತರೇ ಚೈವ ಭೂಮ್ಯರ್ಧೇ ತಥಾ ಹ್ಯಸ್ಮಿಂಸ್ತು ದಕ್ಷಿಣೇ ।**
**ಉತ್ತಿಷ್ಠತಿ ಪುನಃ ಸೂರ್ಯೇ ರಾತ್ರಿರಾವಿಶತೇ ಹ್ಯಪಃ ॥೧೩॥**

---

೯. ಪಾಚಕಾಗ್ನಿಯು ಪ್ರಕಾಶಯುಕ್ತವಾದುದು. ಜಠರಾಗ್ನಿಗೆ ಕಾಂತಿಯಿಲ್ಲ. ಚಂದ್ರಮಂಡಲದಲ್ಲಿ ಗೋಚರಿಸುವ ತೇಜಸ್ಸೂ ಅಗ್ನಿಯದೇ. ಆದರೆ ಅದರಲ್ಲಿ ಔಷ್ಣ್ಯವಿಲ್ಲ.

೧೦. ಸೂರ್ಯನು ಮುಳುಗಿದ ಮೇಲೆ ಅವನ ಪ್ರಕಾಶದಲ್ಲಿ ಕಾಲುಭಾಗವು ಅಗ್ನಿಯೊಡನೆ ಸೇರುವುದು. ರಾತ್ರಿಯಲ್ಲಿ ಅಗ್ನಿಯು ಪ್ರಕಾಶಿಸುವುದು ಅದರಿಂದಲೇ.

೧೧. ಮರಳಿ ಸೂರ್ಯನು ಹುಟ್ಟಿದಾಗ ಅಗ್ನಿಯ ಔಷ್ಣ್ಯದಲ್ಲಿ ಕಾಲುಪಾಲು ಅವನಲ್ಲಿ ಸೇರುತ್ತದೆ. ಇದರಿಂದ ಸೂರ್ಯನು ಹಗಲುಹೊತ್ತಿನಲ್ಲಿ ತಾಪಯುಕ್ತನಾಗಿರುವನು.

೧೨. ಸೂರ್ಯ ಮತ್ತು ಅಗ್ನಿಗಳ ತೇಜಸ್ಸಿನಲ್ಲಿರುವ ಬೆಳಕೂ ಕಾವೂ ಒಂದರೊಡನೊಂದು ಕೂಡಿ, ಹಗಲಿನಲ್ಲಿಯೂ ರಾತ್ರಿಯಲ್ಲಿಯೂ ಲೋಕಕ್ಕೆ ತೃಪ್ತಿಯನ್ನು ಕೊಡುತ್ತವೆ.

೧೩. ಭೂಮಂಡಲದ ಉತ್ತರಾರ್ಧದಲ್ಲಿಯೂ, ದಕ್ಷಿಣಾರ್ಧದಲ್ಲಿಯೂ ಸೂರ್ಯೋದಯವಾದಾಗ ರಾತ್ರಿಯು ನೀರಿನಲ್ಲಿ ಪ್ರವೇಶಿಸುತ್ತದೆ.

ತಸ್ಮಾತ್ತಾಮ್ರಾ ಭವಂತ್ಯಾಪೋ ದಿವಾ ರಾತ್ರಿಪ್ರವೇಶನಾತ್ ।
ಅಸ್ತಂ ಗತೇ ಪುನಃ ಸೂರ್ಯೇ ಅಹೋ ವೈ ಪ್ರವಿಶತ್ಯಪಃ ॥೧೪॥

ತಸ್ಮಾನ್ನಕ್ತಂ ಪುನಃ ಶುಕ್ಲಾ ಹ್ಯಾಪೋ ದೃಶ್ಯಂತಿ ಭಾಸುರಾಃ ।
ಏತೇನ ಕ್ರಮಯೋಗೇನ ಭೂಮ್ಯರ್ಧೇ ದಕ್ಷಿಣೋತ್ತರೇ ॥೧೫॥

ಉದಯಾಸ್ತಮಯೇ ಹ್ಯತ್ರ ಅಹೋರಾತ್ರಂ ವಿಶತ್ಯಪಃ ।
ಯಶ್ಚಾಸೌ ತಪತೇ ಸೂರ್ಯಃ ಸೋಽಪಃ ಪಿಬತಿ ರಶ್ಮಿಭಿಃ ॥೧೬॥

ಸಹಸ್ರಪಾದಸ್ತ್ವೇಷೋಽಗ್ನಿಃ ರಕ್ತಕುಂಭನಿಭಸ್ತು ಸಃ ।
ಆದತ್ತೇ ಸ ತು ನಾಡೀನಾಂ ಸಹಸ್ರೇಣ ಸಮಂತತಃ ॥೧೭॥

ಅಪೋ ನದೀಸಮುದ್ರೇಭ್ಯೋ ಹ್ರದಕೂಪೇಭ್ಯ ಏವ ಚ ।
ತಸ್ಯ ರಶ್ಮಿಸಹಸ್ರೇಣ ಶೀತವರ್ಷೋಷ್ಣನಿಸ್ರವಃ ॥೧೮॥

---

೧೪. ರಾತ್ರಿಯು ಪ್ರವೇಶಮಾಡಿದಕಾರಣ ಹಗಲುಹೊತ್ತಿನಲ್ಲಿ ನೀರು ಕೆಂಪಗೆ ಕಾಣುತ್ತದೆ. ಸೂರ್ಯನು ಮತ್ತೆ ಮುಳುಗಿದರೆ ಹಗಲು ನೀರಿನಲ್ಲಿ ಪ್ರವೇಶಿಸುತ್ತದೆ.

೧೫-೧೬. ಆದುದರಿಂದ ರಾತ್ರಿಯಲ್ಲಿ ನೀರು ಬೆಳ್ಳಗೆ ಪ್ರಕಾಶಿಸುತ್ತದೆ. ಈ ರೀತಿಯಾಗಿ ಭೂಮಿಯ ದಕ್ಷಿಣೋತ್ತರಾರ್ಧಗಳಲ್ಲಿ ಉದಯಾಸ್ತಮಯವಾದಾಗ ಹಗಲು ರಾತ್ರಿಗಳು ಜಲದಲ್ಲಿ ಅನುಪ್ರವೇಶಿಸುವುವು. ಅಂತರಿಕ್ಷದಲ್ಲಿ ಬೆಳಗುತ್ತಿರುವ ಸೂರ್ಯನು ತನ್ನ ಕಿರಣಗಳಿಂದ ಭೂಮಿಯಲ್ಲಿರುವ ಜಲಭಾಗವನ್ನು ಕುಡಿಯುತ್ತಾನೆ.

೧೭-೧೮. ಅಗ್ನಿರೂಪನಾದ ಈ ಸೂರ್ಯದೇವನಿಗೆ ಸಾವಿರ ಕಿರಣಗಳಿವೆ. ಅವನು ರಕ್ತಕುಂಭದಂತಿರುವನು. ತನ್ನ ಸಹಸ್ರನಾಡಿಗಳಿಂದ ಎಲ್ಲಕಡೆಯೂ ಇರುವ ನದಿ, ಸಮುದ್ರ, ಮಡು ಮತ್ತು ಬಾವಿಗಳ ನೀರನ್ನು ಆಕರ್ಷಿಸುತ್ತಾನೆ. ಅವನ ಸಾವಿರಾರು ಕಿರಣಗಳು ಮಂಜು, ಮಳೆ ಮತ್ತು ಉಷ್ಣಗಳನ್ನು ಲೋಕಕ್ಕೆ ಬೀರುವುವು.

**ತಾಸಾಂ ಚತುಶ್ಶತಂ ನಾಡ್ಯೋ ವರ್ಷಂತೇ ಚಿತ್ರಮೂರ್ತಯಃ।**
**ಚಂದನಾಶ್ಚೈವ ಮೇಧ್ಯಾಶ್ಚ ಕೇತನಾಶ್ಚೇತನಾಸ್ತಥಾ ॥೧೯॥**

**ಅಮೃತಾ ಜೀವನಾಃ ಸರ್ವಾ ರಶ್ಮಯೋ ವೃಷ್ಟಿಸರ್ಜನಾಃ।**
**ಹಿಮೋದ್ಭವಾಶ್ಚ ತಾನ್ಯೋಽನ್ಯಂ ರಶ್ಮಯಸ್ತ್ರಿಂಶತಃ ಸ್ಮೃತಾಃ।**
**ಚಂದ್ರತಾರಾಗ್ರಹೈಃ ಸರ್ವೈಃ ಪೀತಾ ಭಾನೋರ್ಗಭಸ್ತಯಃ ॥೨೦॥**

**ಏತಾ ಮೇಧ್ಯಾಸ್ತಥಾನ್ಯಾಶ್ಚ ಹ್ಲಾದಿನ್ಯೋ ಹಿಮಸರ್ಜನಾಃ।**
**ಶುಕ್ಲಾಶ್ಚ ಕಕುಭಶ್ಚೈವ ಗಾವೋ ವಿಶ್ವಭೃತಶ್ಚ ಯಾಃ ॥೨೧॥**

**ಶುಕ್ಲಾಸ್ತಾ ನಾಮತಃ ಸರ್ವಾಸ್ತ್ರಿಶತಂ ಘರ್ಮಸರ್ಜನಾಃ।**
**ಸಂಬಿಭೃತಿ ಹಿ ತಾಃ ಸರ್ವಾ ಮನುಷ್ಯಾನ್ ದೇವತಾಃ ಪಿತೄನ್ ॥೨೨॥**

**ಮನುಷ್ಯಾನೌಷಧೀಭಿಶ್ಚ ಸ್ವಧಯಾ ಚ ಪಿತೄನಪಿ।**
**ಅಮೃತೇನ ಸುರಾನ್ ಸರ್ವಾನ್ ಸತತಂ ಪರಿತರ್ಪಯನ್ ॥೨೩॥**

---

೧೯. ಅವುಗಳಲ್ಲಿ ವಿಚಿತ್ರವಾದ ಆಕಾರವುಳ್ಳ ನಾನೂರು ನಾಡಿಗಳು ಮಳೆಯನ್ನು ಕರೆಯುತ್ತವೆ. ಚಂದನ, ಮೇಧ್ಯ, ಕೇತನ, ಚೇತನ, ಅಮೃತ, ಜೀವನ ಮುಂತಾದ ಬಗೆಬಗೆಯ ಹೆಸರುಳ್ಳ ಕಿರಣಗಳು ಮಳೆಯನ್ನು ಸೃಷ್ಟಿಸುತ್ತವೆ.

೨೦. ಮುನ್ನೂರು ಕಿರಣಗಳು ಹಿಮವನ್ನು ನಿರ್ಮಾಣಮಾಡುತ್ತವೆ. ಸೂರ್ಯನ ಕಿರಣಗಳನ್ನು ಚಂದ್ರ, ಗ್ರಹ, ನಕ್ಷತ್ರ ಇವುಗಳೆಲ್ಲ ಪಾನಮಾಡಿ ಆಪ್ಯಾಯನವನ್ನು ಪಡೆಯುವುವು.

೨೧. ಮೇಧ್ಯ ಮೊದಲಾದ ಈ ಕಿರಣಗಳು ಹಿಮವನ್ನು ಉತ್ಪತ್ತಿಮಾಡುತ್ತವೆ. ಇವು ಆಹ್ಲಾದಕರವಾಗಿವೆ. ಶುಕ್ಲ, ಕಕುಭ ಮುಂತಾದ ರಶ್ಮಿಗಳು ಜಗತ್ತನ್ನು ರಕ್ಷಿಸುತ್ತವೆ.

೨೨. ಉಷ್ಣವನ್ನು ಉಂಟುಮಾಡುವ ಕಿರಣಗಳು ಮುನ್ನೂರಿವೆ. ಅವುಗಳಿಗೆ ಶುಕ್ಲಗಳೆಂದು ಹೆಸರು. ಅವು ಮನುಷ್ಯರನ್ನೂ, ದೇವತೆಗಳನ್ನೂ, ಪಿತೃಗಳನ್ನೂ ಸಲಹುತ್ತವೆ.

೨೩. ಸೂರ್ಯನು ಮನುಷ್ಯರನ್ನು ಗಿಡಮರಬಳ್ಳಿಗಳಿಂದಲೂ, ಪಿತೃಗಳನ್ನು ಸ್ವಧೆಯಿಂದಲೂ, ದೇವತೆಗಳನ್ನೆಲ್ಲ ಅಮೃತದಿಂದಲೂ ಎಡೆಬಿಡದೆ ತೃಪ್ತಿಪಡಿಸುತ್ತಿರುವನು.

**ವಸಂತೇ ಚೈವ ಗ್ರೀಷ್ಮೇ ಚ ಶತೈಃ ಸಂತಪತೇ ತ್ರಿಭಿಃ ।**
**ವರ್ಷಾಸು ಚ ಶರದ್ಯೇವಂ ಚತುರ್ಭಿಃ ಸಂಪ್ರವರ್ಷತಿ ॥೨೪॥**

**ಹೇಮಂತೇ ಶಿಶಿರೇ ಚೈವ ಹಿಮೋತ್ಸರ್ಗಸ್ತ್ರಿಭಿಃ ಪುನಃ ।**
**ಓಷಧೀಷು ಬಲಂ ಧತ್ತೇ ಸುಧಾಂ ಚ ಸ್ವಧಯಾ ಪುನಃ ॥೨೫॥**

**ಸೂರ್ಯೋಽಮರತ್ವಮಮೃತೇ ತ್ರಯಸ್ತ್ರಿಷು ನಿಯಚ್ಛತಿ ।**
**ಏವಂ ರಶ್ಮಿಸಹಸ್ರಂ ತು ಸೌರಂ ಲೋಕಾರ್ಥಸಾಧಕಂ ॥೨೬॥**

**ಭಿದ್ಯತೇ ಋತುಮಾಸಾದ್ಯ ಸಹಸ್ರಂ ಬಹುಧಾ ಪುನಃ ।**
**ಇತ್ಯೇವಂ ಮಂಡಲಂ ಶುಕ್ಲಂ ಭಾಸ್ವರಂ ಲೋಕಸಂಜ್ಞಿತಂ ॥೨೭॥**

---

೨೪. ವಸಂತ ಮತ್ತು ಗ್ರೀಷ್ಮರ್ತುಗಳಲ್ಲಿ ಶುಕ್ಲಗಳೆಂಬ ಮುನ್ನೂರು ಕಿರಣಗಳಿಂದ ಸೂರ್ಯನು ತಾಪವನ್ನು ಕೊಡುತ್ತಾನೆ. ವರ್ಷರ್ತುವಿನಲ್ಲಿಯೂ, ಶರದೃತುವಿನಲ್ಲಿಯೂ ಚಂದನ, ವೇಧ್ಯ ಮೊದಲಾದ ನಾಲ್ಕುನೂರು ಕಿರಣಗಳಿಂದ ಮಳೆಯನ್ನು ಅತಿಶಯವಾಗಿ ಕರೆಯುತ್ತಾನೆ.

೨೫. ಹೇಮಂತ ಮತ್ತು ಶಿಶಿರರ್ತುಗಳಲ್ಲಿ ಮುನ್ನೂರು ಕಿರಣಗಳಿಂದ ಹಿಮವನ್ನು ಸುರಿಸುವನು. ಅವನು ಮರಗಿಡ ಬಳ್ಳಿಗಳಲ್ಲಿ ಪ್ರಾಣಿಗಳನ್ನು ಕಾಪಾಡುವ ಶಕ್ತಿಯನ್ನು ಇಡುತ್ತಾನೆ. ಕಿರಣಗಳಿಂದ ಅಮೃತವನ್ನು ನೀಡುತ್ತಾನೆ. ಸ್ವಧೆಯಿಂದ ಪಿತೃಗಳನ್ನು ತೃಪ್ತಿಪಡಿಸುತ್ತಾನೆ.

೨೬. ದಿವ್ಯಲೋಕದಲ್ಲಿ ಸಂಚರಿಸುವ ಸೂರ್ಯನು ದೇವತೆಗಳು, ಮನುಷ್ಯರು ಮತ್ತು ಪಿತೃಗಳನ್ನು ಕ್ರಮವಾಗಿ ಅಮೃತ, ಓಷಧಿ ಮತ್ತು ಸ್ವಧೆಗಳಿಂದ ತೃಪ್ತಿಪಡಿಸಿ ಅವರಿಗೆ ಅಮರತ್ವವನ್ನು ನೀಡುತ್ತಾನೆ. ಹೀಗೆ ಅವನ ಸಾವಿರ ಕಿರಣಗಳೂ ಲೋಕದ ಹಿತಸಾಧನೆಗಾಗಿಯೇ ಇವೆ.

೨೭. ಋತುಭೇದದಿಂದ ಈ ಸಾವಿರ ಕಿರಣಗಳೂ ಮತ್ತೆ ಬಹು ಪ್ರಕಾರವಾಗಿ ಒಡೆಯುವುವು. ಹೀಗೆ ಸೂರ್ಯಮಂಡಲವು ಶುಭ್ರವರ್ಣದಿಂದ ಪ್ರಕಾಶಿಸುತ್ತ ಲೋಕಪ್ರಖ್ಯಾತವಾಗಿದೆ.

ನಕ್ಷತ್ರಗ್ರಹಸೋಮಾನಾಂ ಪ್ರತಿಷ್ಠಾ ಯೋನಿರೇವ ಚ ।
ಚಂದ್ರಋಕ್ಷಗ್ರಹಾಃ ಸರ್ವೇ ವಿಜ್ಞೇಯಾಃ ಸೂರ್ಯಸಂಭವಾಃ ॥೨೮॥

ಸುಷುಮ್ನಾ ಸೂರ್ಯರಶ್ಮಿರ್ಯಾ ಕ್ಷೀಣಂ ಶಶಿನಮೇಧತೇ ।
ಹರಿಕೇಶಃ ಪುರಸ್ತಾತ್ತು ಯೋ ವೈ ನಕ್ಷತ್ರಯೋನಿಕೃತ್ ॥೨೯॥

ದಕ್ಷಿಣೇ ವಿಶ್ವಕರ್ಮಾ ತು ರಶ್ಮಿರಾಪ್ಯಾಯಯದ್ಬುಧಂ ।
ವಿಶ್ವಾವಸುಶ್ಚ ಯಃ ಪಶ್ಚಾಚ್ಛುಕ್ರಯೋನಿಶ್ಚ ಸ ಸ್ಮೃತಃ ॥೩೦॥

ಸಂವರ್ಧನಸ್ತು ಯೋ ರಶ್ಮಿಃ ಸ ಯೋನಿರ್ಲೋಹಿತಸ್ಯ ಚ ।
ಷಷ್ಠಸ್ತು ಹ್ಯಶ್ವಭೂ ರಶ್ಮಿರ್ಯೋನಿಃ ಸ ಹಿ ಬೃಹಸ್ಪತೇಃ ॥೩೧॥

ಶನೈಶ್ಚರಂ ಪುನಶ್ಚಾಪಿ ರಶ್ಮಿರಾಪ್ಯಾಯತೇ ಸುರಾಟ್ ।
ನ ಕ್ಷೀಯತೇ ಯತಸ್ತಾನಿ ತಸ್ಮಾನ್ನಕ್ಷತ್ರತಾ ಸ್ಮೃತಾ ॥೩೨॥

---

೨೮. ನಕ್ಷತ್ರಗಳು, ಗ್ರಹಗಳು, ಚಂದ್ರ ಇವರೆಲ್ಲರಿಗೂ ಸೂರ್ಯನೇ ಆಧಾರವಾಗಿದ್ದಾನೆ. ಅವರ ಉತ್ಪತ್ತಿಕಾರಣನೂ ಅವನೇ. ಆದುದರಿಂದ ಜ್ಯೋತಿರ್ಗಣಗಳೆಲ್ಲವೂ ಸೂರ್ಯನಿಂದ ಉತ್ಪನ್ನವಾದುವೆಂದು ಅರಿಯಬೇಕು.

೨೯. ಸೂರ್ಯನ ಕಿರಣಗಳಲ್ಲಿ ಸುಷುಮ್ನವೆಂಬುದು ಚಂದ್ರನು ಕ್ಷಯಿಸಿದಾಗ ಅವನನ್ನು ಸೇರಿ ಬೆಳಸುತ್ತದೆ. ಮುಂಭಾಗದಲ್ಲಿರುವ ಹರಿಕೇಶವು ನಕ್ಷತ್ರಗಳ ಉತ್ಪತ್ತಿಗೆ ಕಾರಣವಾಗಿದೆ.

೩೦. ದಕ್ಷಿಣಭಾಗದ ವಿಶ್ವಕರ್ಮವೆಂಬ ಕಿರಣವು ಬುಧನನ್ನು ಪೋಷಿಸುತ್ತದೆ. ಪಶ್ಚಿಮಭಾಗದ ವಿಶ್ವಾವಸುವು ಶುಕ್ರನ ಜನ್ಮಕಾರಣವೆನಿಸಿದೆ.

೩೧. ಸಂವರ್ಧನವೆಂಬ ಕಿರಣವು ಅಂಗಾರಕನಿಗೂ, ಆರನೆಯದಾದ ಅಶ್ವಭೂವೆಂಬುದು ಬೃಹಸ್ಪತಿಗೂ ಉತ್ಪತ್ತಿಕಾರಣವಾಗಿವೆ.

೩೨. ಸುರಾಟ್ಕಿರಣವು ಶನಿಯನ್ನು ಪೋಷಿಸುತ್ತದೆ. ಕ್ಷಯಿಸದೆ ಸ್ಥಿರವಾಗಿ ಇರತಕ್ಕುವಾದ ಕಾರಣ ಅವುಗಳಿಗೆ ನಕ್ಷತ್ರಗಳೆಂಬ ಹೆಸರು ಬಂದಿದೆ.

ಕ್ಷೇತ್ರಾಣ್ಯೇತಾನಿ ವೈ ಸೂರ್ಯಮಾಪತಂತಿ ಗಭಸ್ತಿಭಿಃ ।
ಕ್ಷೇತ್ರಾಣಿ ತೇಷಾಮಾದತ್ತೇ ಸೂರ್ಯೋ ನಕ್ಷತ್ರತಾ ತತಃ ॥೩೩॥

ಅಸ್ಮಾಲ್ಲೋಕಾದಮುಂ ಲೋಕಂ ತೀರ್ಣಾನಾಂ ಸುಕೃತಾತ್ಮನಾಂ ।
ತಾರಣಾತ್ತಾರಕಾ ಹ್ಯೇತಾಃ ಶುಕ್ಲತ್ವಾಚ್ಚೈವ ಶುಕ್ಲಿಕಾಃ ॥೩೪॥

ದಿವ್ಯಾನಾಂ ಪಾರ್ಥಿವಾನಾಂ ಚ ವಂಶಾನಾಂ ಚೈವ ಸರ್ವಶಃ ।
ತಪನಸ್ತೇಜಸೋ ಯೋಗಾದಾದಿತ್ಯ ಇತಿ ಗದ್ಯತೇ ॥೩೫॥

ಸ್ರವತಿಃ ಸ್ಯಂದನಾರ್ಥೇ ಚ ಧಾತುರೇಷ ನಿಗದ್ಯತೇ ।
ಸ್ರವಣಾತ್ತೇಜಸಶ್ಚೈವ ತೇನಾಸೌ ಸವಿತಾ ಸ್ಮೃತಃ ॥೩೬॥

ಬಹ್ವರ್ಥಶ್ಚಂದ್ರ ಇತ್ಯೇಷ ಪ್ರಧಾನೋ ಧಾತುರುಚ್ಯತೇ ।
ಶುಕ್ಲತ್ವೇ ಹ್ಯಮೃತತ್ವೇ ಚ ಶೀತತ್ವೇ ಹ್ಲಾದನೇಽಪಿ ಚ ॥೩೭॥

---

೩೩. ಈ ಕ್ಷೇತ್ರಗಳು ಕಿರಣಗಳ ಮೂಲಕ ಸೂರ್ಯನನ್ನು ಸಂಬಂಧಿಸುವುದರಿಂದಲೂ, ಅವನು ಅವುಗಳ ಮೂಲಕ ಆ ಕ್ಷೇತ್ರಗಳನ್ನು ಸ್ವೀಕರಿಸುವುದರಿಂದಲೂ ನಕ್ಷತ್ರವೆಂಬ ಸಂಜ್ಞೆ ಬಂದಿದೆ.

೩೪. ಇಹಲೋಕದಿಂದ ಪರಲೋಕಕ್ಕೆ ಹೋದ ಪುಣ್ಯಶಾಲಿಗಳನ್ನು ಉದ್ಧಾರಮಾಡುವುದರಿಂದ ಇವುಗಳಿಗೆ ತಾರಕಗಳೆಂದೂ, ಶುಕ್ಲವರ್ಣವಾಗಿರುವುದರಿಂದ (ಬೆಳ್ಳಗಿರುವುದರಿಂದ) ಶುಕ್ಲಿಕಗಳೆಂದೂ ಪ್ರಸಿದ್ಧವಾಗಿವೆ.

೩೫. ದೇವಲೋಕದಲ್ಲಿಯೂ ಭೂಲೋಕದಲ್ಲಿಯೂ ಇರುವ ಎಲ್ಲವಂಶೀಯರ ತೇಜಸ್ಸನ್ನೂ ಕಿರಣಗಳ ಮೂಲಕ ಆದಾನಮಾಡಿ (ತೆಗೆದುಕೊಂಡು) ಅದರ ಸಂಬಂಧವನ್ನು ಪಡೆದಿರುವಕಾರಣ ಸೂರ್ಯನನ್ನು ಆದಿತ್ಯನೆಂದು ಹೇಳುತ್ತಾರೆ.

೩೬. "ಸ್ರು" ಧಾತುವನ್ನು ಹರಿಯುವುದು ಎಂಬ ಅರ್ಥದಲ್ಲಿ ಪ್ರಯೋಗಿಸುತ್ತಾರೆ. ತೇಜಸ್ಸು ಸೂರ್ಯನಿಂದ ಸ್ರವಿಸುವಕಾರಣ ಅವನಿಗೆ ಸವಿತೃವೆಂಬ ಹೆಸರು ಬಂದಿದೆ.

೩೭-೩೯. ಚದಿ ಆಹ್ಲಾದನೇ ಎಂಬುದೊಂದು ಪ್ರಸಿದ್ಧವಾದ ಧಾತು. ಇದರಿಂದ "ಚಂದ್ರ" ಎಂಬ ಪದವು ನಿಷ್ಪನ್ನವಾಗಿದೆ. ಇದಕ್ಕೆ ಅನೇಕ ಅರ್ಥಗಳುಂಟು. ಶುಭ್ರವರ್ಣದಲ್ಲಿಯೂ, ಅಮೃತತ್ವ ಮತ್ತು ಶೀತತ್ವಗಳೆಂಬ ಗುಣಗಳಲ್ಲಿಯೂ,

ಸೂರ್ಯಾಚಂದ್ರಮಸೋರ್ದಿವ್ಯೇ ಮಂಡಲೇ ಭಾಸ್ವರೇ ಖಗೇ ।
ಜಲತೇಜೋಮಯೇ ಶುಕ್ಲೇ ವೃತ್ತಕುಂಭನಿಭೇ ಶುಭೇ ॥೩೮॥

ವಸಂತಿ ಕರ್ಮದೇವಾಸ್ತು ಸ್ಥಾನಾನ್ಯೇತಾನಿ ಸರ್ವಶಃ ।
ಮನ್ವಂತರೇಷು ಸರ್ವೇಷು ಋಷಿಸೂರ್ಯಗ್ರಹಾದಯಃ ॥೩೯॥

ತಾನಿ ದೇವಗೃಹಾಣಿ ಸ್ಯುಃ ಸ್ಥಾನಾಖ್ಯಾನಿ ಭವಂತಿ ಹಿ ।
ಸೌರಂ ಸೂರ್ಯೋऽವಿಶತ್ಸ್ಥಾನಂ ಸೌಮ್ಯಂ ಸೋಮಸ್ತಥೈವ ಚ ॥೪೦॥

ಶೌಕ್ರಂ ಶುಕ್ರೋऽವಿಶತ್ಸ್ಥಾನಂ ಷೋಡಶಾರಂ ಪ್ರಭಾಸ್ವರಂ ।
ಬೃಹಸ್ಪತಿರ್ಬೃಹತ್ತ್ವಂ ಚ ಲೋಹಿತಂ ಚಾಪಿ ಲೋಹಿತಃ ॥೪೧॥

ಶನೈಶ್ಚರೋऽವಿಶತ್ಸ್ಥಾನಮೇವಂ ಶಾನೈಶ್ಚರಂ ತಥಾ ।
ಬುಧೋऽಪಿ ವೈ ಬುಧಸ್ಥಾನಂ ಭಾನುಂ ಸ್ವರ್ಭಾನುರೇವ ಚ ॥೪೨॥

---

ಆಹ್ಲಾದಕವಸ್ತುವಿನಲ್ಲಿಯೂ, ಚಂದ್ರಸೂರ್ಯರ ದಿವ್ಯಮಂಡಲಗಳಲ್ಲಿಯೂ, ಪ್ರಕಾಶ ಯುಕ್ತವಾದ ವಸ್ತುವಿನಲ್ಲಿಯೂ, ಪಕ್ಷಿಯಲ್ಲಿಯೂ, ಜಲದ ತೇಜಸ್ಸಿನಿಂದ ಕೂಡಿದ ಪದಾರ್ಥದಲ್ಲಿಯೂ, ವೃತ್ತಾಕಾರವಾದ ಕುಂಭದಂತಿರುವ ಶುಭ್ರವಸ್ತುವಿನಲ್ಲಿಯೂ ಇದು ಪ್ರಯೋಗಿಸಲ್ಪಡುತ್ತದೆ. ಇವುಗಲ್ಲೆಲ್ಲ ಕರ್ಮದೇವತೆಗಳು ವಾಸಿಸುವರು. ಎಲ್ಲ ಮನ್ವಂತರಗಳಲ್ಲಿಯೂ ಋಷಿಗಳು, ಸೂರ್ಯಾದಿಗ್ರಹಗಳು, ದೇವತೆಗಳು ಇವರಿಗೆ ಇವು ಸ್ಥಾನವೆನಿಸುವುವು.

೪೦. ಅವು ದೇವಗೃಹಗಳೆನಿಸುವುವು. ಅವುಗಳಿಗೆ ಸ್ಥಾನಗಳೆಂದೂ ಪ್ರಸಿದ್ಧಿ ಯುಂಟು. ಸೂರ್ಯನು ಸೌರಸ್ಥಾನವನ್ನೂ, ಚಂದ್ರನು ಸೌಮ್ಯಸ್ಥಾನವನ್ನೂ ಪ್ರವೇಶಿಸುವರು.

೪೧. ಶುಕ್ರನ ಸ್ಥಾನವು ಪ್ರಕಾಶಯುಕ್ತವಾದುದು. ಅದಕ್ಕೆ ಶೌಕ್ರವೆಂದು ಹೆಸರು. ಅದು ಹದಿನಾರು ಆರೆಗಾಲುಗಳಿಂದ ಕೂಡಿದೆ. ಬೃಹಸ್ಪತಿಯು ಬೃಹತ್ವ ಸ್ಥಾನವನ್ನೂ, ಅಂಗಾರಕನು ಲೋಹಿತಸ್ಥಾನವನ್ನೂ ಸೇರುವರು.

೪೨. ಶನಿಯು ಪ್ರವೇಶಿಸುವ ಸ್ಥಾನಕ್ಕೆ ಶಾನೈಶ್ಚರವೆಂದು ಹೆಸರು. ಬುಧನು ಬುಧಸ್ಥಾನವನ್ನೂ, ರಾಹುವು ಭಾನುಸ್ಥಾನವನ್ನೂ (ಸೂರ್ಯನನ್ನೂ) ಪ್ರವೇಶಿಸುವರು.

ನಕ್ಷತ್ರಾಣಿ ಚ ಸರ್ವಾಣಿ ನಾಕ್ಷತ್ರಾಣ್ಯಾವಿಶಂತಿ ಚ ।
ಜ್ಯೋತೀಂಷಿ ಸುಕೃತಾಮೇತೇ ಜ್ಞೇಯಾ ದೇವಗೃಹಾಸ್ತು ವೈ ॥೪೩॥

ಸ್ಥಾನಾನ್ಯೇತಾನಿ ತಿಷ್ಠಂತಿ ಯಾವದಾಭೂತಸಂಪ್ಲವಂ ।
ಮನ್ವಂತರೇಷು ಸರ್ವೇಷು ದೇವಸ್ಥಾನಾನಿ ತಾನಿ ವೈ ॥೪೪॥

ಅಭಿಮಾನೇನ ತಿಷ್ಠಂತಿ ತಾನಿ ದೇವಾಃ ಪುನಃ ಪುನಃ ।
ಅತೀತಾಸ್ತು ಸಹಾತೀತೈರ್ಭಾವ್ಯಾ ಭಾವ್ಯೈಃ ಸುರೈಃ ಸಹ ॥೪೫॥

ವರ್ತಂತೇ ವರ್ತಮಾನೈಶ್ಚ ಸುರೈಃ ಸಾರ್ಧಂ ತು ಸ್ಥಾನಿನಃ ।
ಸೂರ್ಯೋ ದೇವೋ ವಿವಸ್ವಾಂಶ್ಚ ಅಷ್ಟಮಸ್ತ್ವದಿತೇಃ ಸುತಃ ॥೪೬॥

ದ್ಯುತಿಮಾನ್ ಧರ್ಮಯುಕ್ತಶ್ಚ ಸೋಮೋ ದೇವೋ ವಸುಃ ಸ್ಮೃತಃ ।
ಶುಕ್ರೋ ದೈತ್ಯಸ್ತು ವಿಜ್ಞೇಯೋ ಭಾರ್ಗವೋಽಸುರಯಾಜಕಃ ॥೪೭॥

---

೪೩. ನಕ್ಷತ್ರಗಳೆಲ್ಲ ನಾಕ್ಷತ್ರಸ್ಥಾನಗಳನ್ನು ಸೇರುವುವು. ಗ್ರಹಗಳೂ ನಕ್ಷತ್ರಗಳೂ ಪುಣ್ಯಶಾಲಿಗಳ ಆವಾಸಸ್ಥಾನಗಳೆಂದರಿಯಬೇಕು.

೪೪. ಈ ಸ್ಥಾನಗಳು ಪ್ರಳಯಕಾಲದವರೆಗೂ ಇರುವುವು. ಎಲ್ಲ ಮನ್ವಂತರಗಳಲ್ಲಿಯೂ ಇವೇ ದೇವತೆಗಳ ಸ್ಥಾನಗಳು.

೪೫. ಪುನಃಪುನಃ ಈ ಸ್ಥಾನಗಳಲ್ಲಿ ದೇವತೆಗಳು ಅಭಿಮಾನಿಗಳಾಗಿ ನೆಲೆಸುವರು. ಹಿಂದಿದ್ದ ಸ್ಥಾನಗಳು ಆಗಿನ ದೇವತೆಗಳಿಗೂ, ಮುಂದೆ ಇರತಕ್ಕುವು ಭವಿಷ್ಯದ್ದೇವತೆಗಳಿಗೂ ನೆಲೆಯಾಗಿರುವುವು. ಹೀಗೆಯೇ ಈಗಿನ ದೇವತೆಗಳು ಈಗ ಇರುವ ಸ್ಥಾನಗಳಲ್ಲಿ ವಾಸಿಸುವರು.

೪೬-೪೭. ಭಗವಂತನಾದ ಸೂರ್ಯನಿಗೆ ವಿವಸ್ವಂತನೆಂದೂ ಹೆಸರು. ಅವನು ಅದಿತಿಯ ಎಂಟನೆಯ ಮಗ. ಪೂಜ್ಯನಾದ ಚಂದ್ರನು ಕಾಂತಿಯುಕ್ತ; ಧರ್ಮನಿರತ; ಮತ್ತು ವಸುಸ್ವರೂಪ. ಶುಕ್ರನನ್ನು ದೈತ್ಯನೆಂದರಿಯಬೇಕು. ಅವನು ಭೃಗುವಿನ ಪುತ್ರ; ಅಸುರರ ಆಚಾರ್ಯ.

ಬೃಹಸ್ಪತಿರ್ಬೃಹತ್ತೇಜಾ ದೇವಾಚಾರ್ಯೋಽಂಗಿರಸ್ಸುತಃ ।
ಬುಧೋ ಮನೋಹರಶ್ಚೈವ ಶಶಿಪುತ್ರಸ್ತು ಸ ಸ್ಮೃತಃ ॥೪೮॥

ಶನೈಶ್ಚರೋ ವಿರೂಪಶ್ಚ ಸಂಜ್ಞಾಪುತ್ರೋ ವಿವಸ್ವತಃ ।
ಅಗ್ನಿರ್ವಿಕೇಶ್ಯಾಂ ಜಜ್ಞೇ ತು ಯುವಾ ಸೌ ಲೋಹಿತಾಧಿಪಃ ॥೪೯॥

ನಕ್ಷತ್ರನಾಮ್ನಾ ಋಕ್ಷಾಣಿ ದಾಕ್ಷಾಯಣ್ಯಸ್ತು ತಾಃ ಸ್ಮೃತಾಃ ।
ಸ್ವರ್ಭಾನುಃ ಸಿಂಹಿಕಾಪುತ್ರೋ ಭೂತಸಂಸಾಧನೋಽಸುರಃ ॥೫೦॥

ಚಂದ್ರಾರ್ಕಗ್ರಹನಕ್ಷತ್ರೇಷ್ವಭಿಮಾನೀ ಪ್ರಕೀರ್ತಿತಃ ।
ಸ್ಥಾನಾನ್ಯೇತಾನಿ ಚೋಕ್ತಾನಿ ಸ್ಥಾನಿನ್ಯಶ್ಚೈವ ದೇವತಾಃ ॥೫೧॥

ಶುಕ್ಲಮಗ್ನಿಸಮಂ ದಿವ್ಯಂ ಸಹಸ್ರಾಂಶೋರ್ವಿವಸ್ವತಃ ।
ಸಹಸ್ರಾಂಶುತ್ವಿಷಃ ಸ್ಥಾನಮಮ್ಮಯಂ ತೈಜಸಂ ತಥಾ ॥೫೨॥

---

೪೮. ಮಹಾತೇಜಸ್ವಿಯಾದ ಬೃಹಸ್ಪತಿಯು ದೇವತೆಗಳಿಗೆ ಆಚಾರ್ಯನಾಗಿರುವನು. ಅವನು ಅಂಗಿರಸ ಮಹಾಮುನಿಯ ಪುತ್ರ. ಬುಧನು ಚಂದ್ರನ ಮಗ; ಬಹುಸುಂದರ.

೪೯. ಶನಿಯು ಕುರೂಪಿ; ಅವನು ಸೂರ್ಯನ ಪತ್ನಿಯಾದ ಸಂಜ್ಞಾದೇವಿಯ ಗರ್ಭದಲ್ಲಿ ಜನಿಸಿದನು. ಅಗ್ನಿಯು ವಿಕೇಶಿಯಲ್ಲಿ ಹುಟ್ಟಿದನು. ಅಂಗಾರಕನು ಯುವಕ.

೫೦. ನಕ್ಷತ್ರಗಳು ಅಶ್ವಿನಿ ಮೊದಲಾದ ಹೆಸರುಗಳಿಂದ ಪ್ರಸಿದ್ಧವಾಗಿವೆ. ಈ ಅಶ್ವಿನಿ ಮುಂತಾದವರು ದಕ್ಷಬ್ರಹ್ಮನ ಹೆಣ್ಣುಮಕ್ಕಳು. ಅವರಿಗೆ ದಾಕ್ಷಾಯಣಿಗಳೆಂದೂ ಹೆಸರು. ರಾಹುವು ಸಿಂಹಿಕೆಯ ಮಗ; ಅಸುರ ಮತ್ತು ಪ್ರಾಣಿಹಿಂಸಕ.

೫೧. ಇವನನ್ನು ಚಂದ್ರ, ಸೂರ್ಯ, ಗ್ರಹ ಮತ್ತು ನಕ್ಷತ್ರಗಳ ಅಭಿಮಾನಿಯೆನ್ನುವರು. ಹೀಗೆ ಸ್ಥಾನಗಳನ್ನೂ, ಅವುಗಳಲ್ಲಿ ನೆಲೆಸಿರುವ ದೇವತೆಗಳನ್ನೂ ಹೇಳಿದುದಾಯಿತು.

೫೨. ಸಹಸ್ರಕಿರಣನಾದ ಸೂರ್ಯದೇವನ ಸ್ಥಾನವು ಬಿಳಿಯದು; ಅಗ್ನಿಯಂತೆ ತೇಜೋಭರಿತವಾದುದು. ಚಂದ್ರನ ಸ್ಥಾನವು ಜಲಮಯವೂ ತೇಜಸ್ಸಹಿತವೂ ಆಗಿದೆ.

ಆಸ್ಥಾನಂ ತನ್ಮನೋಜ್ಞಸ್ಯ ರವಿರಶ್ಮಿಗೃಹೇ ಸ್ಥಿತಂ ।
ಶುಕ್ರಃ ಷೋಡಶರಶ್ಮಿಸ್ತು ಯಸ್ತು ದೇವೋ ಹ್ಯಪೋಮಯಃ ॥೩೩॥

ಲೋಹಿತೋ ನವರಶ್ಮಿಸ್ತು ಸ್ಥಾನಮಾಪಂ ತು ತಸ್ಯ ವೈ
ಬೃಹದ್ದ್ವಾದಶರಶ್ಮೀಕಂ ಹರಿದ್ರಾಭಂ ತು ವೇಧಸಃ ॥೩೪॥

ಅಷ್ಟರಶ್ಮಿ ಶನೇಸ್ತತ್ತು ಕೃಷ್ಣಂ ವೃದ್ಧಮಯಸ್ಮಯಂ ।
ಸ್ವರ್ಭಾನೋಸ್ತ್ವಯಸಂ ಸ್ಥಾನಂ ಭೂತಸಂತಾಪನಾಲಯಂ ॥೩೫॥

ಸುಕೃತಾಮಾಶ್ರಯಾಸ್ತಾರಾ ರಶ್ಮಯಸ್ತು ಹಿರಣ್ಮಯಾಃ ।
ತಾರಣಾಸ್ತಾರಕಾ ಹ್ಯೇತಾಃ ಶುಕ್ಲತ್ವಾಚ್ಚೈವ ತಾರಕಾಃ ॥೩೬॥

ನವಯೋಜನಸಾಹಸ್ರೋ ವಿಷ್ಕಂಭಃ ಸವಿತುಃ ಸ್ಮೃತಃ ।
ಮಂಡಲಂ ತ್ರಿಗುಣಂ ಚಾಸ್ಯ ವಿಸ್ತಾರೋ ಭಾಸ್ಕರಸ್ಯ ತು ॥೩೭॥

---

೩೩. ಬುಧನ ಆಸ್ಥಾನವು ಸೂರ್ಯಕಿರಣಗಳಿಂದ ರಂಜಿತವಾದ ಗೃಹದಲ್ಲಿರುವುದು. ಶುಕ್ರನಿಗೆ ಹದಿನಾರು ಕಿರಣಗಳಿವೆ; ಅವನು ಜಲಮಯನಾಗಿರುವನು.

೩೪. ಅಂಗಾರಕನಿಗೆ ಒಂಬತ್ತು ಕಿರಣಗಳಿವೆ. ಅವನ ಸ್ಥಾನವೂ ಸಹ ಜಲಮಯವೇ ಆಗಿದೆ. ಬೃಹಸ್ಪತಿಯ ಆಸ್ಥಾನವು ಹಳದಿಯ ಬಣ್ಣವಾಗಿದೆ. ಅವನಿಗೆ ಹನ್ನೆರಡು ಕಿರಣಗಳು.

೩೫. ಶನಿಯ ಸ್ಥಾನವು ಎಂಟು ಕಿರಣಗಳಿಂದ ಯುಕ್ತವಾಗಿದೆ. ಅದು ಬಹಳ ಹಳೆಯದು. ಕಬ್ಬಿಣದಿಂದ ರಚಿತವಾಗಿ ಕಪ್ಪಗಿದೆ. ರಾಹುವಿನ ಆಸ್ಥಾನವೂ ಕೂಡ ಕಬ್ಬಿಣದಿಂದಲೇ ನಿರ್ಮಿತವಾಗಿದೆ. ಅದು ಪ್ರಾಣಿಗಳಿಗೆ ಸಂತಾಪಕಾರಕವಾದ ಸ್ಥಳ.

೩೬. ನಕ್ಷತ್ರಗಳು ಪುಣ್ಯಶಾಲಿಗಳ ಆಶ್ರಯಸ್ಥಾನವಾಗಿವೆ. ಅವುಗಳ ಕಿರಣಗಳು ಹಿರಣ್ಮಯವಾದುವು. ಸದ್ಗತಿಯನ್ನು ಕೊಟ್ಟು ಉದ್ಧಾರಮಾಡುವುದರಿಂದಲೂ, ಬಿಳಿಯ ಬಣ್ಣವುಳ್ಳುದರಿಂದಲೂ ಅವುಗಳಿಗೆ ತಾರಕಗಳೆಂದು ಹೆಸರು ಬಂದಿದೆ.

೩೭. ಸೂರ್ಯಮಂಡಲದ ವ್ಯಾಸಪ್ರಮಾಣವು ಒಂಬತ್ತು ಸಾವಿರ ಯೋಜನವಿರುವುದು. ಸುತ್ತಳತೆಯು ಇದರ ಮೂರರಷ್ಟಿದೆ. ಇದೇ ಸೂರ್ಯನ ವಿಸ್ತಾರ.

ದ್ವಿಗುಣಃ ಸೂರ್ಯವಿಸ್ತಾರಾದ್ವಿಸ್ತಾರಃ ಶಶಿನಃ ಸ್ಮೃತಃ ।
ತ್ರಿಗುಣಂ ಮಂಡಲಂ ಚಾಸ್ಯ ವೈಪುಲ್ಯಾಚ್ಛಶಿನಃ ಸ್ಮೃತಂ ॥೫೮॥

ಸರ್ವೋಪರಿ ನಿಸೃಷ್ಟಾನಿ ಮಂಡಲಾನಿ ತು ತಾರಕಾಃ
ಯೋಜನಾರ್ಧಪ್ರಮಾಣಾನಿ ತಾಭ್ಯೋಽನ್ಯಾನಿ ಗಣಾನಿ ತು ॥೫೯॥

ತುಲ್ಯೋ ಭೂತ್ವಾ ತು ಸ್ವರ್ಭಾನುಸ್ತದಧಸ್ತಾತ್ಪ್ರಸರ್ಪತಿ ।
ಉದ್ಧೃತ್ಯ ಪಾರ್ಥಿವೀಂ ಛಾಯಾಂ ನಿರ್ಮಿತಾಂ ಮಂಡಲಾಕೃತಿಂ ॥೬೦॥

ಬ್ರಹ್ಮಣಾ ನಿರ್ಮಿತಂ ಸ್ಥಾನಂ ತೃತೀಯಂ ತು ತಮೋಮಯಂ ।
ಆದಿತ್ಯಾತ್ಸ ತು ನಿಷ್ಕ್ರಮ್ಯ ಸೋಮಂ ಗಚ್ಛತಿ ಪರ್ವಸು ॥೬೧॥

ಆದಿತ್ಯಮೇತಿ ಸೋಮಾಚ್ಚ ಪುನಃ ಸೌರೇಷು ಪರ್ವಸು ।
ಸ್ವಭಾಸಾ ತುದತೇ ಯಸ್ಮಾತ್ಸ್ವರ್ಭಾನುರಿತಿ ಸ ಸ್ಮೃತಃ ॥೬೨॥

---

೫೮. ಚಂದ್ರನು ವಿಸ್ತಾರದಲ್ಲಿ ಸೂರ್ಯನಿಗೆ ಇಮ್ಮಡಿಯಾಗಿದ್ದಾನೆ. ಇವನ ಮಂಡಲದ ಸುತ್ತಳತೆಯೂ ಸಹ ವ್ಯಾಸಪ್ರಮಾಣದ ಮೂರರಷ್ಟಿದೆ.

೫೯. ನಕ್ಷತ್ರಮಂಡಲವು ಎಲ್ಲಕ್ಕಿಂತ ಮೇಲ್ಗಡೆಯಲ್ಲಿದೆ. ಇವುಗಳಲ್ಲದೆ ಇನ್ನೂ ಕೆಲವು ಜ್ಯೋತಿರ್ಗಣಗಳ ಮಂಡಲಗಳುಂಟು. ಅವು ಅರ್ಧಯೋಜನ ಪ್ರಮಾಣವುಳ್ಳವಾಗಿವೆ.

೬೦. ಮಂಡಲಾಕಾರವಾದ ಭೂಚ್ಛಾಯೆಯನ್ನು ಪಡೆದು ರಾಹುವು ನಕ್ಷತ್ರಮಂಡಲದ ಕೆಳಗಡೆ ಸಂಚರಿಸುತ್ತಿರುವನು. ಪ್ರಮಾಣದಲ್ಲಿ ಅವನು ನಕ್ಷತ್ರದಷ್ಟೇ ಇರುವನು.

೬೧. ಬ್ರಹ್ಮನು ಅಂಧಕಾರಮಯವಾದ ಮೂರನೆಯ ಸ್ಥಾನವನ್ನು ರಾಹುವಿಗಾಗಿ ನಿರ್ಮಿಸಿದ್ದಾನೆ. ಅವನು (ರಾಹುವು) ಪರ್ವಕಾಲಗಳಲ್ಲಿ ಸೂರ್ಯನನ್ನು ಬಿಟ್ಟು ಚಂದ್ರನ ಬಳಿಗೆ ಹೋಗುತ್ತಾನೆ.

೬೨. ಪುನಃ ಸೂರ್ಯನ ಪರ್ವಗಳಲ್ಲಿ ಎಂದರೆ ಅಮಾವಾಸ್ಯೆಗಳಲ್ಲಿ ಚಂದ್ರನನ್ನು ಬಿಟ್ಟು ಸೂರ್ಯನ ಸಮೀಪಕ್ಕೆ ತೆರಳುತ್ತಾನೆ. ತನ್ನ ಕಾಂತಿಯಿಂದ ಚಂದ್ರಸೂರ್ಯರನ್ನು ಹಿಂಸೆಪಡಿಸುವ ಕಾರಣ ಅವನಿಗೆ ಸ್ವರ್ಭಾನುವೆಂದು ಹೆಸರು ಬಂದಿದೆ.

ಚಂದ್ರತಃ ಷೋಡಶೋ ಭಾಗೋ ಭಾರ್ಗವಸ್ಯ ವಿಧೀಯತೇ ।
ವಿಷ್ಕಂಭಾನ್ಮಂಡಲಾಚ್ಚೈವ ಯೋಜನಾನಾಂ ತು ಸ ಸ್ಮೃತಃ ॥೬೩॥

ಭಾರ್ಗವಾತ್ಪಾದಹೀನಶ್ಚ ವಿಜ್ಞೇಯೋ ವೈ ಬೃಹಸ್ಪತಿಃ ।
ಬೃಹಸ್ಪತೇಃ ಪಾದಹೀನೌ ಕೇತುವಕ್ರಾವುಭೌ ಸ್ಮೃತೌ ॥೬೪॥

ವಿಸ್ತಾರಮಂಡಲಾಭ್ಯಾಂ ತು ಪಾದಹೀನಸ್ತಯೋರ್ಬುಧಃ ।
ತಾರಾನಕ್ಷತ್ರರೂಪಾಣಿ ವಪುಷ್ಮಂತೀಹ ಯಾನಿ ವೈ ॥೬೫॥

ಬುಧೇನ ಸಮರೂಪಾಣಿ ವಿಸ್ತಾರಾನ್ಮಂಡಲಾತ್ತು ವೈ ।
ತಾರಾನಕ್ಷತ್ರರೂಪಾಣಿ ಹೀನಾನಿ ತು ಪರಸ್ಪರಂ ॥೬೬॥

ಶತಾನಿ ಪಂಚ ಚತ್ವಾರಿ ತ್ರೀಣಿ ದ್ವೇ ಚೈಕಮೇವ ಚ ।
ಸರ್ವೋಪರಿ ನಿಸೃಷ್ಟಾನಿ ಮಂಡಲಾನಿ ತು ತಾರಕಾಃ ॥೬೭॥

---

೬೩. ಶುಕ್ರನು ಚಂದ್ರನಿಗಿಂತ ವ್ಯಾಸದಲ್ಲಿಯೂ ಸುತ್ತಳತೆಯಲ್ಲಿಯೂ ಹದಿನಾರು ಪಾಲು ಅಧಿಕನಾಗಿರುವನೆಂದು ತಿಳಿಯಬೇಕು. ಈ ಪ್ರಮಾಣವು ಯೋಜನದ ಅಳತೆಯಲ್ಲಿರುವುದು.

೬೪. ಬೃಹಸ್ಪತಿಯು ಪ್ರಮಾಣದಲ್ಲಿ ಶುಕ್ರನಿಗಿಂತ ಕಾಲುಪಾಲು ಕಡಿಮೆಯಿರುವನು. ಕುಜನೂ, ಕೇತುವೂ ಬೃಹಸ್ಪತಿಗಿಂತಲೂ ಕಾಲುಭಾಗ ಕಿರಿಯವರು.

೬೫-೬೬. ಬುಧನು ವ್ಯಾಸದಲ್ಲಿಯೂ ಸುತ್ತಳತೆಯಲ್ಲಿಯೂ ಅವರಿಬ್ಬರಿಗಿಂತಲೂ ಕಾಲುಪಾಲು ಕಡಿಮೆಯಿರುವನು. ಸಶರೀರಗಳಾದ ತಾರೆಗಳೂ ನಕ್ಷತ್ರಗಳೂ ಬುಧನನ್ನು ರೂಪದಲ್ಲಿ ಹೋಲುತ್ತವೆ. ಅವು ವಿಸ್ತಾರದಲ್ಲಿಯೂ ಸುತ್ತಳತೆಯಲ್ಲಿಯೂ ಒಂದಕ್ಕಿಂತ ಇನ್ನೊಂದು ಕಿರಿಯವು.

೬೭. ಇವುಗಳ ಸಂಖ್ಯೆ ನಾಲ್ಕುಸಾವಿರದ ಐದುನೂರ ಏಳು. ಎಲ್ಲಕ್ಕಿಂತಲೂ ಮೇಲೆ ನಕ್ಷತ್ರಗಳ ಮಂಡಲಗಳು ಏರ್ಪಟ್ಟಿವೆ.

ಯೋಜನಾರ್ಧಪ್ರಮಾಣಾನಿ ತೇಭ್ಯೋ ಹ್ರಸ್ವಂ ನ ವಿದ್ಯತೇ ।
ಉಪರಿಷ್ಟಾತ್ತು ಯೇ ತೇಷಾಂ ಗ್ರಹಾ ಯೇ ಕ್ರೂರಸಾತ್ವಿಕಾಃ ॥೬೮॥

ಸೌರಿಶ್ಚಾಂಗಿರಸೋ ವಕ್ರೋ ವಿಜ್ಞೇಯಾ ಮಂದಚಾರಿಣಃ
ತೇಭ್ಯೋಽಧಸ್ತಾತ್ತು ಚತ್ವಾರಃ ಪುನಶ್ಚಾನ್ಯೇ ಮಹಾಗ್ರಹಾಃ ॥೬೯॥

ಸೋಮಃ ಸೂರ್ಯೋ ಬುಧಶ್ಚೈವ ಭಾರ್ಗವಶ್ಚೇತಿ ಶೀಘ್ರಗಾಃ ।
ಯಾವಂತಿ ಚೈವ ಋಕ್ಷಾಣಿ ಕೋಟ್ಯಸ್ತಾವಂತಿ ತಾರಕಾಃ ॥೭೦॥

ಸರ್ವೇಷಾಂ ತು ಗ್ರಹಾಣಾಂ ವೈ ಸೂರ್ಯೋಽಧಸ್ತಾತ್ಪ್ರಸರ್ಪತಿ ।
ವಿಸ್ತೀರ್ಣಂ ಮಂಡಲಂ ಕೃತ್ವಾ ತಸ್ಯೋರ್ಧ್ವಂ ಚರತೇ ಶಶೀ ॥೭೧॥

ನಕ್ಷತ್ರಮಂಡಲಂ ಚಾಪಿ ಸೋಮಾದೂರ್ಧ್ವಂ ಪ್ರಸರ್ಪತಿ ।
ನಕ್ಷತ್ರೇಭ್ಯೋ ಬುಧಶ್ಚೋರ್ಧ್ವಂ ಬುಧಾಚ್ಚೋರ್ಧ್ವಂ ತು ಭಾರ್ಗವಃ ॥೭೨॥

ವಕ್ರಸ್ತು ಭಾರ್ಗವಾದೂರ್ಧ್ವಂ ವಕ್ರಾದೂರ್ಧ್ವಂ ಬೃಹಸ್ಪತಿಃ ।
ತಸ್ಮಾಚ್ಛನೈಶ್ಚರಶ್ಚೋರ್ಧ್ವಂ ದೇವಾಚಾರ್ಯೋಽಪರಿ ಸ್ಥಿತಃ ॥೭೩॥

---

೬೮. ಇವುಗಳು ಅರ್ಧಯೋಜನ ಪ್ರಮಾಣವುಳ್ಳವಾಗಿವೆ. ಇವುಗಳಿಗಿಂತ ಕಿರಿದಾದ ಜ್ಯೋತಿರ್ಮಂಡಲವು ಬೇರೆ ಯಾವುದೂ ಇಲ್ಲ. ಇವುಗಳ ಮೇಲುಭಾಗ ದಲ್ಲಿ ಸಂಚರಿಸುವ ಆ ಗ್ರಹಗಳಲ್ಲಿ ಕ್ರೂರ ಮತ್ತು ಸೌಮ್ಯಗಳೆಂಬ ಪ್ರಭೇದಗಳಿವೆ.

೬೯-೭೦. ಶನಿ, ಗುರು ಮತ್ತು ಕುಜರು ಮಂದಗತಿಯುಳ್ಳವರು. ಅವರಿ ಗಿಂತ ಕೆಳಗಡೆ ಚಂದ್ರ, ಸೂರ್ಯ, ಬುಧ ಮತ್ತು ಶುಕ್ರರಿರುವರು. ಈ ನಾಲ್ಕು ಮಹಾ ಗ್ರಹಗಳಿಗೂ ಶೀಘ್ರಗತಿಯುಂಟು. ನಕ್ಷತ್ರಗಳೆಷ್ಟುಕೋಟಿ ಇರುವುವೋ, ತಾರಕೆ ಗಳೂ ಅಷ್ಟೇ ಇವೆ.

೭೧. ಸೂರ್ಯನು ಎಲ್ಲ ಗ್ರಹಗಳಿಗೂ ಕೆಳಗಡೆಯಲ್ಲಿ ಸಂಚರಿಸುವನು. ಅವನ ಮೇಲೆ ಚಂದ್ರನು ವಿಶಾಲವಾದ ಮಂಡಲದಿಂದ ಕಂಗೊಳಿಸುತ್ತ ಚಲಿಸುವನು.

೭೨. ಚಂದ್ರನಿಗಿಂತ ಮೇಲುಭಾಗದಲ್ಲಿ ನಕ್ಷತ್ರಮಂಡಲವೂ, ಅದರ ಮೇಲೆ ಬುಧನೂ, ಅದಕ್ಕೂ ಮೇಲ್ಗಡೆ ಶುಕ್ರನೂ ಸಂಚಾರಮಾಡುವರು.

೭೩. ಶುಕ್ರನ ಊರ್ಧ್ವಭಾಗದಲ್ಲಿ ಅಂಗಾರಕನೂ, ಅವನ ಮೇಲೆ ದೇವ ಗುರುವಾದ ಬೃಹಸ್ಪತಿಯೂ, ಆತನ ಮೇಲ್ಭಾಗದಲ್ಲಿ ಶನಿಯೂ ಇರುವರು.

ಶನೈಶ್ಚರಾತ್ತಥಾ ಚೋರ್ಧ್ವಂ ಜ್ಞೇಯಂ ಸಪ್ತರ್ಷಿಮಂಡಲಂ ।
ಸಪ್ತರ್ಷಿಭ್ಯೋ ಧ್ರುವಶ್ಚೋರ್ಧ್ವಂ ಸಮಸ್ತಂ ತ್ರಿದಿವಂ ಧ್ರುವೇ ॥೭೪॥

ದ್ವಿಗುಣೇಷು ಸಹಸ್ರೇಷು ಯೋಜನಾನಾಂ ಶತೇಷು ಚ ।
ಗ್ರಹಾಂತರಮಥೈಕೈಕಮೂರ್ಧ್ವಂ ನಕ್ಷತ್ರಮಂಡಲಾತ್ ॥೭೫॥

ತಾರಾಗ್ರಹಾಂತರಾಣಿ ಸ್ಯುರುಪರ್ಯುಪರ್ಯಧಿಷ್ಠಿತಂ ।
ಗ್ರಹಾಶ್ಚ ಚಂದ್ರಸೂರ್ಯೌ ಚ ದಿವಿ ದಿವ್ಯೇನ ತೇಜಸಾ ॥೭೬॥

ನಕ್ಷತ್ರೇಷು ಚ ಯುಜ್ಯಂತೇ ಗಚ್ಛಂತೋ ನಿಯತಕ್ರಮಾತ್ ।
ಚಂದ್ರಾರ್ಕಗ್ರಹನಕ್ಷತ್ರಾ ನೀಚೋಚ್ಚಗೃಹಮಾಶ್ರಿತಾಃ ॥೭೭॥

ಸಮಾಗಮೇ ಚ ಭೇದೇ ಚ ಪಶ್ಯಂತಿ ಯುಗಪತ್ಪ್ರಜಾಃ ।
ಪರಸ್ಪರಂ ಸ್ಥಿತಾ ಹ್ಯೇವಂ ಯುಜ್ಯಂತೇ ಚ ಪರಸ್ಪರಂ ॥೭೮॥

---

೭೪. ಶನಿಯ ಮೇಲೆ ಸಪ್ತರ್ಷಿಗಳ ಮಂಡಲವೂ, ಅದಕ್ಕೂ ಮೇಲ್ಗಡೆ ಧ್ರುವನೂ ಇರುವರು. ಸ್ವರ್ಗಲೋಕವೆಲ್ಲವೂ ಧ್ರುವನ ಆಧಾರದಿಂದಿರುವುದು.

೭೫. ನಕ್ಷತ್ರಮಂಡಲದ ಮೇಲೆ ಒಂದು ಗ್ರಹಕ್ಕೂ ಮತ್ತೊಂದಕ್ಕೂ ನಡುವೆ ಎರಡುಲಕ್ಷ ಯೋಜನಗಳ ಅಂತರವಿರುವುದು.

೭೬. ಇದಕ್ಕೂ ಮೇಲೆ ಬೇರೆ ಬೇರೆ ನಕ್ಷತ್ರಗಳೂ ಗ್ರಹಗಳೂ ಇರುವುವು. ಇವುಗಳೂ ಚಂದ್ರಸೂರ್ಯರೂ ತಮ್ಮ ಅಸಾಧಾರಣ ತೇಜಸ್ಸಿನಿಂದ ಬೆಳಗುತ್ತ, ಅಂತರಿಕ್ಷದಲ್ಲಿ ಗೊತ್ತಾದ ಕ್ರಮದಿಂದ ಸಂಚರಿಸುತ್ತ, ಉಳಿದ ಗ್ರಹ ನಕ್ಷತ್ರಗಳೊಡನೆ ಸೇರುತ್ತಾರೆ.

೭೭-೭೮. ಚಂದ್ರ, ಸೂರ್ಯ ಮೊದಲಾದ ಗ್ರಹಗಳಿಗೂ ಮತ್ತು ನಕ್ಷತ್ರಗಳಿಗೂ ನೀಚಗೃಹಗಳೂ ಉಚ್ಚಗೃಹಗಳೂ ಉಂಟು. ಅಲ್ಲಿಗೆ ಹೋಗಿ ಸೇರುವಾಗಲೂ ಅಲ್ಲಿಂದ ಅಗಲುವಾಗಲೂ ಅವರು ಪ್ರಜೆಗಳ ಮೇಲೆ ತಮ್ಮ ವೀಕ್ಷಣವನ್ನು ಬೀರಿ ಶುಭಾಶುಭ ಫಲಗಳನ್ನು ಕೊಡುತ್ತಾರೆ. ಹೀಗೆ ತಮ್ಮ ತಮ್ಮ ಸ್ಥಾನಗಳಲ್ಲಿದ್ದು ಬಬ್ಬರೊಡನೊಬ್ಬರು ಬೆರೆಯುತ್ತಾರೆ.

ಅಸಂಕರೇಣ ವಿಜ್ಞೇಯಸ್ತೇಷಾಂ ಯೋಗಸ್ತು ವೈ ಬುಧೈಃ ।
ಇತ್ಯೇವಂ ಸನ್ನಿವೇಶೋ ವೈ ಪೃಥಿವ್ಯಾ ಜ್ಯೋತಿಷಾಂ ಚ ಯಃ ॥೭೯॥

ದ್ವೀಪಾನಾಮುದಧೀನಾಂ ಚ ಪರ್ವತಾನಾಂ ತಥೈವ ಚ ।
ವರ್ಷಾಣಾಂ ಚ ನದೀನಾಂ ಚ ಯೇ ಚ ತೇಷು ವಸಂತಿ ವೈ ॥೮೦॥

ಇತ್ಯೇಷೋಽರ್ಕವಶೇನೈವ ಸನ್ನಿವೇಶಸ್ತು ಜ್ಯೋತಿಷಾಂ ।
ಆವರ್ತಃ ಸಾಂತರೋ ಮಧ್ಯೇ ಸಂಕ್ಷಿಪ್ತಸ್ತು ಧ್ರುವಾತ್ತು ಸಃ ॥೮೧॥

ಸರ್ವತಸ್ತೇಷು ವಿಸ್ತೀರ್ಣೋ ವೃತ್ತಾಕಾರ ಇವೋಚ್ಛ್ರಿತಃ ।
ಲೋಕಸಂವ್ಯವಹಾರಾರ್ಥಮೀಶ್ವರೇಣ ವಿನಿರ್ಮಿತಃ ॥೮೨॥

ಕಲ್ಪಾದೌ ಬುದ್ಧಿಪೂರ್ವಂ ತು ಸ್ಥಾಪಿತೋಽಸೌ ಸ್ವಯಂಭುವಾ ।
ಇತ್ಯೇಷ ಸನ್ನಿವೇಶೋ ವೈ ಸರ್ವಸ್ಯ ಜ್ಯೋತಿರಾತ್ಮಕಃ ॥೮೩॥

---

೭೯-೮೦. ಗ್ರಹಗಳು ಹಾಗೆ ಒಟ್ಟಾಗಿ ಸೇರಿದರೂ ಅವುಗಳ ವೈಯಕ್ತಿಕ ಗುಣಗಳು ವ್ಯತ್ಯಾಸವಾಗುವುದಿಲ್ಲವೆಂದು ಪ್ರಾಜ್ಞರು ಹೇಳುವರು. ಭೂಮಿ, ಗ್ರಹ ನಕ್ಷತ್ರಗಳು, ದ್ವೀಪಗಳು, ಸಮುದ್ರಗಳು, ಪರ್ವತಗಳು, ವರ್ಷಗಳು, ನದಿಗಳು, ಬೇರೆ ಬೇರೆ ಭೂಭಾಗಗಳಲ್ಲಿ ವಾಸಮಾಡುವ ಜನರು ಮುಂತಾದ ವಿಷಯಗಳ ಸ್ವರೂಪವನ್ನು ತಿಳಿಸಿದುದಾಯಿತು.

೮೧. ಈ ರೀತಿಯಲ್ಲಿ ಗ್ರಹಗಳಿಗೂ ನಕ್ಷತ್ರಗಳಿಗೂ ಸೂರ್ಯನಿಂದಲೇ ಸ್ಥಿತಿಯು ಏರ್ಪಟ್ಟಿರುವುದು. ಅವುಗಳ ಸಂಚಾರಮಾರ್ಗವು ಮಧ್ಯದಲ್ಲಿ ವಿಸ್ತೃತವಾಗಿಯೂ ಧ್ರುವನ ಕಡೆಗೆ ಹೋಗುತ್ತ ಹೋಗುತ್ತ ಸಂಕುಚಿತವಾಗಿಯೂ ಇರುವುದು.

೮೨. ಅವು ಬಳಸಿಕೊಂಡು ಬರುವ ಮಾರ್ಗವು ಎಲ್ಲಕಡೆಯಲ್ಲಿಯೂ ವೃತ್ತಾಕಾರವಾಗಿರುವುದು. ಭಗವಂತನು ಲೋಕಾನುಗ್ರಹಾರ್ಥವಾಗಿ ಹೀಗೆ ಏರ್ಪಡಿಸಿರುವನು.

೮೩. ಸೃಷ್ಟಿಯ ಆದಿಯಲ್ಲಿ ಬ್ರಹ್ಮನು ಉದ್ದೇಶಪೂರ್ವಕವಾಗಿಯೇ ಈ ರೀತಿ ನಿರ್ಮಾಣಮಾಡಿದನು. ಸಮಸ್ತವಾದ ಜ್ಯೋತಿರ್ಮಂಡಲದ ಸನ್ನಿವೇಶವು ಈ ತೆರನಾಗಿರುವುದು.

**ವೈಶ್ವರೂಪಂ ಪ್ರಧಾನಸ್ಯ ಪರಿಣಾಹೋಽಸ್ಯ ಯಃ ಸ್ಮೃತಃ ।**
**ತೇಷಾಂ ಶಕ್ಯಂ ನ ಸಂಖ್ಯಾತುಂ ಯಾಥಾತಥ್ಯೇನ ಕೇನಚಿತ್ ।**
**ಗತಾಗತಂ ಮನುಷ್ಯೇಣ ಜ್ಯೋತಿಷಾಂ ಮಾಂಸಚಕ್ಷುಷಾ ॥೮೪॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಭುವನಕೋಶೇ ದೇವಗ್ರಹವರ್ಣನಂ ನಾಮಾಷ್ಟವಿಂಶತ್ಯಧಿಕಶತತಮೋಽಧ್ಯಾಯಃ**

---

೮೪. ಪ್ರಕೃತಿಯ ವಿಕಾರವಾದ ಬ್ರಹ್ಮಾಂಡಗಳು ಇನ್ನೂ ಎಷ್ಟಿವೆ ? ಅವುಗಳ ವೈಶಾಲ್ಯವೆಷ್ಟು ? ಎಂಬುದನ್ನು ಯಾರೂ ನಿಷ್ಕರ್ಷೆಯಾಗಿ ಹೇಳಲಾರರು. ಸಾಧಾರಣ ಮನುಷ್ಯನು ಗ್ರಹಮಂಡಲಗಳಿಗೆ ಹೋಗಿಬರುವುದು ಅಸಾಧ್ಯ.

**ಅಧ್ಯಾಯದ ಸಾರಾಂಶ**

ಅಗ್ನಿಯಲ್ಲಿ ಪಾರ್ಥಿವ, ಶುಚಿ ಮತ್ತು ವೈದ್ಯುತವೆಂದು ಮೂರು ವಿಧ. ಸೂರ್ಯನು ಮುಳುಗಿದ ಮೇಲೆ ಅವನ ತೇಜಸ್ಸಿನಲ್ಲಿ ಕಾಲುಭಾಗವು ಅಗ್ನಿಯಲ್ಲಿ ಪ್ರವೇಶಿಸುತ್ತದೆ. ಆದರಿಂದಲೇ ರಾತ್ರಿಯ ವೇಳೆಯಲ್ಲಿ ಬೆಂಕಿಗೆ ಪ್ರಕಾಶ ಹೆಚ್ಚು. ಸೂರ್ಯನು ಉಳಿದ ಗ್ರಹಗಳಿಗೂ ಸಹ ತನ್ನ ಕಿರಣಗಳಿಂದ ಪುಷ್ಟಿಯನ್ನು ಕೊಡುತ್ತಾನೆ. ಆದುದರಿಂದ ಅವನನ್ನು ಗ್ರಹಪತಿಯೆನ್ನುವರು.

ಗ್ರಹಗಳು ಒಂದರ ಮೇಲೆ ಮತ್ತೊಂದಿವೆ. ಎಲ್ಲಕ್ಕಿಂತ ಕೆಳಗಡೆ ಸೂರ್ಯನೂ ಇವನ ಮೇಲೆ ಎರಡೆರಡು ಲಕ್ಷ ಯೋಜನಗಳ ಅಂತರದಲ್ಲಿ ಚಂದ್ರಾದಿ ಗ್ರಹಗ ಳೂ ಇವೆ. ಧ್ರುವಮಂಡಲವು ಕೊನೆಯದು. ಭಗವದಾಜ್ಞೆಯಂತೆ ಜ್ಯೋತಿರ್ಮಂಡಲಗಳಿಗೆಲ್ಲ ಧ್ರುವನು ಆಧಾರವಾಗಿ ನಿಂತಿರುವನು. ಗ್ರಹಗಳಿಗೆ ಮಂದಗತಿ ವಕ್ರಗತಿಗಳೂ, ಉಚ್ಚತ್ವನೀಚತ್ವಗಳೂ ಉಂಟು. ಅವುಗಳಲ್ಲಿ ಕೆಲವು ಕ್ರೂರಗಳು ; ಮತ್ತೆ ಕೆಲವು ಸೌಮ್ಯಸ್ವಭಾವದವು. ಅವು ತಮ್ಮ ಶುಭಾಶುಭ ವೀಕ್ಷಣವನ್ನು ಲೋಕದ ಮೇಲೆ ಬೀರುವುವು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಭುವನಕೋಶದಲ್ಲಿ ದೇವಗೃಹ ವರ್ಣನವೆಂಬ ನೂರಿಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು.

## ಅಥ ಏಕೋನತ್ರಿಂಶದಧಿಕಶತತಮೋಽಧ್ಯಾಯಃ

॥ ಋಷಯ ಊಚುಃ ॥

ಕಥಂ ಜಗಾಮ ಭಗವಾನ್ ಪುರಾರಿತ್ವಂ ಮಹೇಶ್ವರಃ ।
ದದಾಹ ಚ ಕಥಂ ದೇವಸ್ತನ್ನೋ ವಿಸ್ತರತೋ ವದ ॥ ೧ ॥

ಪೃಚ್ಛಾಮಸ್ತ್ವಾಂ ವಯಂ ಸರ್ವೇ ಬಹುಮಾನಾತ್ಪುನಃ ಪುನಃ ।
ತ್ರಿಪುರಂ ತದ್ಯಥಾ ದುರ್ಗಂ ಮಯಮಾಯಾವಿನಿರ್ಮಿತಂ ।
ದೇವೇನೈಕೇಷುಣಾ ದಗ್ಧಂ ತಥಾ ನೋ ವದ ಮಾನದ ॥ ೨ ॥

॥ ಸೂತ ಉವಾಚ ॥

ಶೃಣುಧ್ವಂ ತ್ರಿಪುರಂ ದೇವೋ ಯಥಾ ದಾರಿತವಾನ್ ಭವಃ ।
ಮಯೋ ನಾಮ ಮಹಾಮಾಯೋ ಮಾಯಾನಾಂ ಜನಕೋಽಸುರಃ ॥

ನಿರ್ಜಿತಃ ಸ ತು ಸಂಗ್ರಾಮೇ ತತಾಪ ಪರಮಂ ತಪಃ ।
ತಪಸ್ಯಂತಂ ತು ತಂ ದೃಷ್ಟ್ವಾ ದೈತ್ಯಾವನ್ಯಾವನುಗ್ರಹಾತ್ ॥ ೪ ॥

---

೧. ಋಷಿಗಳು ಹೇಳಿದರು.—ಭಗವಂತನಾದ ಮಹೇಶ್ವರನಿಗೆ ಪುರಾರಿಯೆಂಬ ಹೆಸರು ಬಂದುದು ಹೇಗೆ? ಅವನು ತ್ರಿಪುರಾಸುರರನ್ನು ಸುಟ್ಟುದೆಂತು? ಈ ವೃತ್ತಾಂತವನ್ನು ನಮಗೆ ವಿಸ್ತಾರವಾಗಿ ತಿಳಿಸು.

೨. ನಾವೆಲ್ಲರೂ ಗೌರವದಿಂದ ನಿನ್ನನ್ನು ಪುನಃಪುನಃ ಕೇಳುತ್ತೇವೆ. ಮಯನ ಮಾಯೆಯಿಂದ ನಿರ್ಮಿತವಾಗಿ ಇತರರ ಪ್ರವೇಶಕ್ಕೆ ಅಸಾಧ್ಯವಾಗಿದ್ದ ತ್ರಿಪುರಾಸುರರ ಪಟ್ಟಣವನ್ನು ಮಹಾದೇವನು ಒಂದೇ ಬಾಣದಿಂದ ಸುಟ್ಟುದ್ದು ಹೇಗೆ? ಎಲೈ ಗೌರವಪ್ರದನೇ, ಅದರ ವಿವರವನ್ನು ನಮಗೆ ತಿಳಿಸು.

೩. ಸೂತಪೌರಾಣಿಕನು ಹೇಳಿದನು.—ಭಗವಂತನಾದ ಮಹೇಶ್ವರನು ತ್ರಿಪುರಸಂಹಾರಮಾಡಿದ ವಿಧಾನವನ್ನು ಕೇಳಿ. ಮಯನೆಂಬ ಮಹಾಸುರನೊಬ್ಬನಿದ್ದನು. ಅವನು ಬಹು ಮಾಯಾವಿ. ಮಾಯೆಗಳೆಲ್ಲ ಹುಟ್ಟಿದುದು ಅವನಿಂದಲೇ.

೪. ಅವನು ದೇವತೆಗಳೊಡನೆ ಯುದ್ಧಮಾಡಿ ಸೋತುಹೋದನು. ಬಳಿಕ ತೀವ್ರವಾದ ತಪಸ್ಸನ್ನು ಮಾಡಿದನು. ಅವನನ್ನು ನೋಡಿ ಇನ್ನಿಬ್ಬರು ದೈತ್ಯರು ಅವನ ಕಾರ್ಯವನ್ನೇ ಉದ್ದೇಶಿಸಿ ಉಗ್ರವಾದ ತಪಸ್ಸನ್ನು ಕೈಗೊಂಡರು.

**ತಸ್ಯೈವ ಕೃತ್ಯಮುದ್ದಿಶ್ಯ ತೇಪತುಃ ಪರಮಂ ತಪಃ ।**
**ವಿದ್ಯುನ್ಮಾಲೀ ಚ ಬಲವಾಂಸ್ತಾರಕಾಖ್ಯಶ್ಚ ವೀರ್ಯವಾನ್ ॥ ೫ ॥**

**ಮಯತೇಜಸ್ಸಮಾಕ್ರಾಂತೌ ತೇಪತುರ್ಮಯಪಾರ್ಶ್ವಗೌ ।**
**ಲೋಕಾ ಇವ ಯಥಾ ಮೂರ್ತಾಸ್ತ್ರಯಸ್ತ್ರಯ ಇವಾಗ್ನಯಃ ॥ ೬ ॥**

**ಲೋಕತ್ರಯಂ ತಾಪಯಂತಸ್ತೇ ತೇಪುರ್ದಾನವಾಸ್ತಪಃ ।**
**ಹೇಮಂತೇ ಜಲಶಯ್ಯಾಸು ಗ್ರೀಷ್ಮೇ ಪಂಚತಪೇ ತಥಾ ॥ ೭ ॥**

**ವರ್ಷಾಸು ಚ ತಥಾಕಾಶೇ ಕ್ಷಪಯಂತಸ್ತನೂಃ ಪ್ರಿಯಾಃ ।**
**ಸೇವಂತಃ ಫಲಮೂಲಾನಿ ಪುಷ್ಪಾಣಿ ಚ ಜಲಾನಿ ಚ ॥ ೮ ॥**

**ಅನ್ಯದಾಚರಿತಾಹಾರಾಃ ಪಂಕೇನಾಚಿತವಲ್ಕಲಾಃ ।**
**ಮಗ್ನಾಃ ಶೈವಾಲಪಂಕೇಷು ವಿಮಲಾ ವಿಮಲೇಷು ಚ ॥ ೯ ॥**

---

೫-೬. ಬಲವಂತನಾದ ವಿದ್ಯುನ್ಮಾಲಿಯೂ, ವೀರ್ಯವಂತನಾದ ತಾರಕಾಖ್ಯನೂ ಮಯನ ತೇಜಸ್ಸಿನಿಂದ ಕೂಡಿ ಅವನ ಪಕ್ಕದಲ್ಲಿ ತಪಸ್ಸುಮಾಡುತ್ತಿದ್ದರು. ಆ ಮೂವರೂ ಆಕೃತಿವೆತ್ತ ಮೂರು ಲೋಕಗಳಂತೆಯೂ, ಮೂರು ಅಗ್ನಿಗಳಂತೆಯೂ ತೋರುತ್ತಿದ್ದರು.

೭. ಆ ದಾನವರ ತಪಸ್ಸಿನ ಜ್ವಾಲೆಗೆ ಮೂರು ಲೋಕಗಳೂ ತಪಿಸಿ ಹೋದುವು. ಅವರು ಚಳಿಗಾಲದಲ್ಲಿ ತಣ್ಣೀರಿನಲ್ಲಿಯೂ, ಬೇಸಗೆಯಲ್ಲಿ ಪಂಚಾಗ್ನಿಗಳ ಮಧ್ಯದಲ್ಲಿಯೂ ತಪಸ್ಸು ಮಾಡುತ್ತಿದ್ದರು.

೮. ಮಳೆಗಾಲದಲ್ಲಿ ಬಯಲಿನಲ್ಲಿ ನಿಲ್ಲುತ್ತಿದ್ದರು. ಗೆಡ್ಡೆ, ಗೆಣಸು, ಹಣ್ಣು, ಹೂ, ನೀರು ಇವುಗಳನ್ನು ತಿನ್ನುತ್ತ ತಮ್ಮ ಮೆಚ್ಚಿನ ಶರೀರವನ್ನು ಸೊರಗಿಸಿದರು.

೯. ಅವರ ಈಗಿನ ಆಹಾರವು ಹಿಂದಿನ ರಾಜಭೋಗಕ್ಕಿಂತ ಬೇರೆಯದಾಗಿತ್ತು. ಅವರುಟ್ಟಿದ್ದ ನಾರುಬಟ್ಟೆಗಳು ಕೆಸರಾಗಿದ್ದವು. ನಿರ್ಮಲರಾದ ಅವರು ಕೊಳೆಯಿಂದ ತುಂಬಿದ್ದ ಪಾಚಿಯು ಕೆಸರು ಮಡುವಿನಲ್ಲಿ ಮೀಯುತ್ತಿದ್ದರು.

ನಿರ್ಮಾಂಸಾಶ್ಚ ತತೋ ಜಾತಾಃ ಕೃಶಾ ಧಮನಿಸಂತತಾಃ ।
ತೇಷಾಂ ತಪಃಪ್ರಭಾವೇನ ಪ್ರಭಾವವಿಧುತಂ ಯಥಾ ॥೧೦॥

ನಿಷ್ಪ್ರಭಂ ತು ಜಗತ್ಸರ್ವಂ ಮಂದದನೇವಾಭಿಭಾಷಿತಂ ।
ದಹ್ಯಮಾನೇಷು ಲೋಕೇಷು ತ್ರೈಸ್ತ್ರಿಭಿರ್ದಾನವಾಗ್ನಿಭಿಃ ॥೧೧॥

ತೇಷಾಮಗ್ರೇ ಜಗದ್ಬಂಧುಃ ಪ್ರಾದುರ್ಭೂತಃ ಪಿತಾಮಹಃ ।
ತತಃ ಸಾಹಸಕರ್ತಾರಃ ಪ್ರಾಹುಸ್ತೇ ಸಹಸಾಗತಂ ॥೧೨॥

ಸ್ವಕಂ ಪಿತಾಮಹಂ ದೈತ್ಯಾಸ್ತಂ ವೈ ತುಷ್ಟುವುರೇವ ಚ ।
ಅಥ ತಾನ್ ದಾನವಾನ್ ಬ್ರಹ್ಮಾ ತಪಸಾ ತಪನಪ್ರಭಾನ್ ॥೧೩॥

ಉವಾಚ ಹರ್ಷಪೂರ್ಣಾಕ್ಷೋ ಹರ್ಷಪೂರ್ಣಮುಖಸ್ತದಾ ।
ವರದೋಽಹಂ ಹಿ ವೋ ವತ್ಸಾಸ್ತಪಸ್ತೋಷಿತ ಆಗತಃ ॥೧೪॥

---

೧೦. ಅವರ ಮಾಂಸಖಂಡಗಳು ಬತ್ತಿಹೋದುವು; ದೇಹವು ಕುಗ್ಗಿತು. ಮೈಮೇಲೆ ನರಗಳು ಎತ್ತಿಕಾಣುತ್ತಿದ್ದುವು. ಅವರ ಈ ತಪಸ್ಸಿನ ಪ್ರಭಾವವು ಮಿಕ್ಕ ತೇಜಸ್ಸೆಲ್ಲವನ್ನೂ ಓಡಿಸಿತೋ ಎನ್ನುವಂತೆ ಜಗತ್ತೆಲ್ಲ ಪ್ರಭಾಶೂನ್ಯವಾಗಿತ್ತು. ಅವರ ಧ್ವನಿಯೂ ಉಡುಗಿತು.

೧೧-೧೨. ಆ ಮೂವರು ದಾನವರ ತಪಸ್ಸಿನ ಜ್ವಾಲೆಯಿಂದ ಲೋಕಗಳೆಲ್ಲ ಸುಟ್ಟು ಹೋದುವು. ಆಗ ಜಗದ್ಬಂಧುವಾದ ಬ್ರಹ್ಮನು ಅವರಿಗೆ ಪ್ರತ್ಯಕ್ಷನಾದನು. ಆ ಸಾಹಸಿಗಳು ಅನಿರೀಕ್ಷಿತವಾಗಿ ಬಂದ ಆತನೊಡನೆ ಹೇಳಿದರು.

೧೩. ದೈತ್ಯರು ತಮ್ಮ ಪಿತಾಮಹನನ್ನು ಸ್ತೋತ್ರಮಾಡಿದರು. ಅವನ ಮುಖದಲ್ಲಿಯೂ ಕಣ್ಣುಗಳಲ್ಲಿಯೂ ಸಂತೋಷವು ಉಕ್ಕಿತು. ಅವನು ತಪಸ್ಸಿನಿಂದ ಸೂರ್ಯನಂತೆ ಪ್ರಕಾಶಿಸುವ ಅವರಿಗಿಂತೆಂದನು :—

೧೪. "ಮಕ್ಕಳಿರಾ, ನಿಮ್ಮ ತಪಸ್ಸಿಗೆ ಮೆಚ್ಚಿದೆನು. ನಿಮಗೆ ವರವನ್ನು ಕೊಡಬೇಕೆಂದು ಬಂದಿದ್ದೇನೆ. ಇಷ್ಟವಾದುದನ್ನು ಬೇಡಬಹುದು. ಯಾವುದರಲ್ಲಿ ಅಭಿಲಾಷೆ ಇದೆಯೋ ಅದನ್ನು ಹೇಳಿರಿ."

ಪ್ರಿಯತಾಮೀಪ್ಸಿತಂ ಯಚ್ಚ ಸಾಭಿಲಾಷಂ ತದುಚ್ಯತಾಂ ।
ಇತ್ಯೇವಮುಚ್ಯಮಾನಂ ತು ಪ್ರತಿಪನ್ನಂ ಪಿತಾಮಹಂ ॥೧೫॥

ವಿಶ್ವಕರ್ಮಾ ಮಯಃ ಪ್ರಾಹ ಪ್ರಹರ್ಷೋತ್ಫುಲ್ಲಲೋಚನಃ ।
ದೇವ ದೈತ್ಯಾಃ ಪುರಾ ದೇವೈಃ ಸಂಗ್ರಾಮೇ ತಾರಕಾಮಯೇ ॥೧೬॥

ನಿರ್ಜಿತಾಸ್ತಾಡಿತಾಶ್ಚೈವ ಹತಾಶ್ಚಾಸ್ತ್ರಾಯುಧೈರಪಿ ।
ದೇವೈರ್ವೈರಾನುಬಂಧಾಚ್ಚ ಧಾವಂತೋ ಭಯವೇಪಿತಾಃ ॥೧೭॥

ಶರಣಂ ನೈವ ಜಾನೀಮಃ ಶರ್ಮ ವಾ ಶರಣಾರ್ಥಿನಃ ।
ಸೋಽಹಂ ತಪಃಪ್ರಭಾವೇನ ತವ ಭಕ್ತ್ಯಾ ತಥೈವ ಚ ॥೧೮॥

ಇಚ್ಛಾಮಿ ಕರ್ತುಂ ತದ್ದುರ್ಗಂ ಯದ್ದೇವೈರಪಿ ದುಸ್ತರಂ ।
ತಸ್ಮಿಂಶ್ಚ ತ್ರಿಪುರೇ ದುರ್ಗೇ ಮತ್ಕೃತೇ ಕೃತಿನಾಂ ವರ ॥೧೯॥

---

೧೫. ಪೂಜ್ಯನಾದ ಬ್ರಹ್ಮದೇವನು ಹೀಗೆ ಹೇಳಲು, ಎಲ್ಲವನ್ನೂ ನಿರ್ವಹಿಸ ಬಲ್ಲ ಸಾಮರ್ಥ್ಯವುಳ್ಳ ಮಯನು ಇಂತು ಉತ್ತರವಿತ್ತನು. ಸಂತೋಷದಿಂದ ಅವನ ಕಣ್ಣುಗಳು ಅರಳಿದುವು.

೧೬–೧೭. "ಎಲೈ ಪೂಜ್ಯನೇ, ಹಿಂದೆ ತಾರಕಾಸುರನೊಡನೆ ನಡೆದ ಯುದ್ಧದಲ್ಲಿ ದೇವತೆಗಳು ದೈತ್ಯರನ್ನು ಸೋಲಿಸಿದರು ; ದ್ವೇಷದಿಂದ ಹೊಡೆದರು ; ಆಯುಧಗಳಿಂದ ಕೊಂದರು. ಆಗ ಇವರು ಭಯದಿಂದ ನಡುಗುತ್ತ ಓಡಿದರು.

೧೮. ನಮಗೆ ದಿಕ್ಕೇ ಇಲ್ಲ ; ಸುಖವಂತೂ ಇಲ್ಲವೇ ಇಲ್ಲ. ನಿನ್ನನ್ನು ಮರೆ ಹೊಕ್ಕಿರುವೆವು. ದೇವಾ, ತಪಸ್ಸಿನ ಮಹಿಮೆಯಿಂದಲೂ, ನಿನ್ನಲ್ಲಿಟ್ಟಿರುವ ಭಕ್ತಿ ಯಿಂದಲೂ ದೇವತೆಗಳಿಗೆ ಕೂಡ ಅಸಾಧ್ಯವಾದ ದುರ್ಗವನ್ನು ನಿರ್ಮಿಸಬೇಕೆಂದು ಅಪೇಕ್ಷಿಸುತ್ತೇನೆ.

೧೯–೨೦. ಕೃತಜ್ಞರಲ್ಲಿ ಶ್ರೇಷ್ಠನಾದ ಎಲೈ ಬ್ರಹ್ಮನೇ, ನನ್ನ ಕೋರಿಕೆಯು ನಿನಗೆ ಪ್ರಿಯವಾದರೆ ನಾನು ರಚಿಸಿದ ಆ ದುರ್ಗವು ಭೂಮಿಯಲ್ಲೂ ನೀರಿನಲ್ಲೂ

ಭೂವ್ಯಾನಾಂ ಜಲಜಾನಾಂ ಚ ಶಾಪಾನಾಂ ಮುನಿತೇಜಸಾಂ ।
ದೇವಪ್ರಹರಣಾನಾಂ ಚ ದೇವಾನಾಂ ಚ ಪ್ರಜಾಪತೇ ॥೨೦॥

ಅಲಂಘನೀಯಂ ಭವತು ತ್ರಿಪುರಂ ಯದಿ ತೇ ಪ್ರಿಯಂ ।
ವಿಶ್ವಕರ್ಮಾ ಇತೀವ್ಯೋಕ್ತಃ ಸ ತದಾ ವಿಶ್ವಕರ್ಮಣಾ ॥೨೧॥

ಉವಾಚ ಪ್ರಹಸನ್ವಾಕ್ಯಂ ಮಯಂ ದೈತ್ಯಗಣಾಧಿಪಂ ।
ಸರ್ವಾಮರತ್ವಂ ನೈವಾಸ್ತಿ ಅಸದ್ವೃತ್ತಸ್ಯ ದಾನವ ॥೨೨॥

ತಸ್ಮಾದ್ದುರ್ಗವಿಧಾನಂ ಹಿ ಕ್ಷಣಾದಪಿ ವಿಧೀಯತಾಂ ।
ಪಿತಾಮಹವಚಃ ಶ್ರುತ್ವಾ ತದ್ದೈವಂ ದಾನವೋ ಮಯಃ ॥೨೩॥

ಪ್ರಾಂಜಲಿಃ ಪುನರಪ್ಯಾಹ ಬ್ರಹ್ಮಾಣಂ ಪದ್ಮಸಂಭವಂ ।
ಶಂಭುರೇಕೇಷುಣಾ ದುರ್ಗಂ ಸಕೃನ್ಮುಕ್ತೇನ ನಿರ್ದಹೇತ್ ॥೨೪॥

ಸಮಂ ಸ ಸಂಯುಗೇ ಹನ್ಯಾದವಧ್ಯಂ ಶೇಷತೋ ಭವೇತ್ ।
ಏವಮಸ್ತ್ವಿತಿ ಚಾಪ್ಯುಕ್ತ್ವಾ ಮಯಂ ದೇವಃ ಪಿತಾಮಹಃ ॥೨೫॥

---

ಹುಟ್ಟಿದ ಪ್ರಾಣಿಗಳು, ಋಷಿಶಾಪಗಳು, ದೇವತೆಗಳು ಮತ್ತು ಅವರ ಆಯುಧಗಳು ಇವುಗಳಿಗೆ ವಶವಾಗದಿರಲಿ ?"

೨೧-೨೨. ದೈತ್ಯಗಣಗಳ ಅಧಿಪತಿಯಾದ ಮಯನು ಹೀಗೆ ಹೇಳಲು ಬ್ರಹ್ಮನು ನಗುತ್ತ ಉತ್ತರವಿತ್ತನು. "ಓ ದಾನವಾ, ನಡೆವಳಿಕೆ ಕೆಟ್ಟವನಿಗೆ ಯಾರಿಂದಲೂ ಮರಣವೇ ಆಗಬಾರದೆಂಬುದು ನಡೆಯದ ಮಾತು. ಆದುದರಿಂದ ಬೇಗನೆ ದುರ್ಗವನ್ನೇನೋ ನಿರ್ಮಾಣಮಾಡಿಕೋ."

೨೩-೨೪. ಪದ್ಮಸಂಭೂತನಾದ ಬ್ರಹ್ಮದೇವನ ಮಾತನ್ನು ಕೇಳಿ ದಾನವೇಶ್ವರನಾದ ಮಯನು ಕೈಮುಗಿದುಕೊಂಡು ಮತ್ತೆ ಹೇಳಿದನು. "ಹಾಗಾದರೆ, ಈಶ್ವರನು ಒಂದೇ ಸಾರಿ ಬಿಟ್ಟ ಒಂದೇ ಬಾಣದಿಂದ ದುರ್ಗವನ್ನು ಸುಡಲಿ; ಅವನು ಯುದ್ಧದಲ್ಲಿ ಒಟ್ಟಿಗೆ ನಮ್ಮನ್ನು ಕೊಲ್ಲಲಿ. ಮಿಕ್ಕವರಾರಿಂದಲೂ ವಧವು ನಮಗೆ ಆಗದಿರಲಿ."

೨೫. ಬ್ರಹ್ಮನು ಹಾಗೆಯೇ ಆಗಲೆಂದು ಮಯನಿಗೆ ಹೇಳಿ ಸ್ವಪ್ನದಲ್ಲಿ ಕಂಡ ಪದಾರ್ಥದಂತೆ ಅಲ್ಲೇ ಮಾಯವಾದನು.

ಸ್ವಪ್ನೇ ಲಬ್ಧೋ ಯಥಾರ್ಥೋ ವೈ ತತ್ರೈವಾದರ್ಶನಂ ಯಯೌ ।
ಗತೇ ಪಿತಾಮಹೇ ದೈತ್ಯಾ ಗತಾ ವಹ್ನಿರವಿಪ್ರಭಾಃ ॥೨೬॥

ವರದಾನಾದ್ವಿರೇಜುಸ್ತೇ ತಪಸಾ ಚ ಮಹಾಬಲಾಃ ।
ಸ ಮಯಸ್ತು ಮಹಾಬುದ್ಧಿರ್ದಾನವೋ ಋಷಿಸತ್ತಮಾಃ ॥೨೭॥

ದುರ್ಗಂ ವ್ಯವಸಿತಃ ಕರ್ತುಮಿತಿ ಚಾಚಿಂತಯತ್ತದಾ ।
ಕಥಂ ನಾಮ ಭವೇದ್ದುರ್ಗಂ ತನ್ಮಯಾ ತ್ರಿಪುರಂ ಕೃತಂ ॥೨೮॥

ವತ್ಸ್ಯತೇ ತತ್ಪುರಂ ದಿವ್ಯಂ ಮತ್ತೋ ನಾನ್ಯೈರ್ನ ಸಂಶಯಃ ।
ಯಥಾ ಚೈಕೇಷುಪಾತೇನ ತತ್ಪುರಂ ನ ಹಿ ಹನ್ಯತೇ ॥೨೯॥

ದೇವೈಸ್ತಥಾ ವಿಧಾತವ್ಯಂ ಮಯಾ ಮತಿವಿಚಾರಣಾತ್ ।
ವಿಸ್ತಾರೋ ಯೋಜನಶತಮೇಕೈಕಸ್ಯ ಪುರಸ್ಯ ತು ॥೩೦॥

ಕಾರ್ಯಸ್ತೇಷಾಂ ಚ ವಿಷ್ಕಂಭಶ್ಚೈಕೈಕಶತಯೋಜನಂ ।
ಪುಷ್ಯಯೋಗೇನ ನಿರ್ಮಾಣಂ ಪುರಾಣಾಂ ಚ ಭವಿಷ್ಯತಿ ॥೩೧॥

---

೨೬. ಬ್ರಹ್ಮನು ಹೊರಟುಹೋದ ಮೇಲೆ ದೈತ್ಯರೂ ತಮ್ಮತಮ್ಮ ಸ್ಥಾನಗಳಿಗೆ ತೆರಳಿದರು. ಅವರು ಅಗ್ನಿಸೂರ್ಯರಂತೆ ಕಾಂತಿಯುಕ್ತರಾಗಿ, ತಪಸ್ಸಿನಿಂದ ಮಹಾಬಲಿಷ್ಠರಾಗಿ ಬ್ರಹ್ಮನ ವರದಿಂದ ಪ್ರಕಾಶಿಸಿದರು.

೨೭-೨೮. ಓ ಋಷಿವರ್ಯರೇ, ಮಹಾಬುದ್ಧಿವಂತನೂ, ದಾನವಾಗ್ರಣಿಯೂ ಆದ ಮಯನು ದುರ್ಗವನ್ನು ರಚಿಸತೊಡಗಿ ಹೀಗೆ ಯೋಚಿಸಿದನು. "ನಾನು ನಿರ್ಮಿಸಬೇಕೆಂದಿರುವ ತ್ರಿಪುರದುರ್ಗವು ಹೇಗಿರಬೇಕು. ?

೨೯. ಆ ಪಟ್ಟಣದಲ್ಲಿ ನನ್ನನ್ನುಳಿದು ಮತ್ತಾರೂ ವಾಸಿಸಬಾರದು. ಒಂದೇ ಬಾಣದ ಪ್ರಹಾರದಿಂದ ಆ ಪಟ್ಟಣವನ್ನು ಹಾಳುಮಾಡುವುದಕ್ಕೆ ದೇವತೆಗಳಿಗೆ ಅಸಾಧ್ಯವಾಗಿರುವಂತೆ ಬುದ್ಧಿಯನ್ನುಪಯೋಗಿಸಿ ಅದನ್ನು ನಿರ್ಮಾಣಮಾಡಬೇಕು.

೩೦-೩೧. ಒಂದೊಂದು ಪಟ್ಟಣವೂ ನೂರುಯೋಜನ ಉದ್ದ, ನೂರು ಯೋಜನ ಅಗಲವಿರಬೇಕು. ಪುಷ್ಯ ನಕ್ಷತ್ರದ ದಿವಸ ಅವು ನಿರ್ಮಿತವಾಗುವುವು.

ಪುಷ್ಯಯೋಗೇನ ಚ ದಿವಿ ಸಮೇಷ್ಯಂತಿ ಪರಸ್ಪರಂ ।
ಪುಷ್ಯಯೋಗೇನ ಯುಕ್ತಾನಿ ಯಸ್ತಾನ್ಯಾಸಾದಯಿಷ್ಯತಿ ॥೩೨॥

ಪುರಾಣ್ಯೇಕಪ್ರಹಾರೇಣ ಶತಾನಿ ಚ ಹನಿಷ್ಯತಿ ।
ಆಯಸಂ ತು ಕ್ಷಿತಿತಲೇ ರಾಜತಂ ತು ನಭಸ್ಥಲೇ ॥೩೩॥

ರಾಜತಸ್ಯೋಪರಿಷ್ಟಾತ್ತು ಸೌವರ್ಣಂ ಭವಿತಾ ಪುರಂ ।
ಏವಂ ತ್ರಿಭಿಃ ಪುರೈರ್ಯುಕ್ತಂ ತ್ರಿಪುರಂ ತದ್ಭವಿಷ್ಯತಿ ।
ಶತಯೋಜನವಿಷ್ಕಂಭೈರಂತರೈಸ್ತದ್ದುರಾಸದಂ ॥೩೪॥

ಅಟ್ಟಾಲಕೈರ್ಯಂತ್ರಶತಘ್ನಿಭಿಶ್ಚ
ಸಚಕ್ರಶೂಲೋಪಲಕಂಪನೈಶ್ಚ ।
ದ್ವಾರೈರ್ಮಹಾಮಂದರಮೇರುಕಲ್ಪೈಃ
ಪ್ರಾಕಾರಶೃಂಗೈಃ ಸುವಿರಾಜಮಾನಂ ॥೩೫॥

---

೩೨. ಅವು ಪುಷ್ಯ ನಕ್ಷತ್ರಯೋಗವಿದ್ದಾಗ ಮಧ್ಯಾಹ್ನ ಒಂದರೊಡನೊಂದು ಸೇರುವುವು. ಹಾಗೆ ಸೇರಿದುದನ್ನು ಕಂಡವನು ಅವುಗಳನ್ನು ಒಂದೇ ಬಾಣಪ್ರಹಾರದಿಂದ ಧ್ವಂಸಮಾಡಬೇಕು.

೩೩-೩೪. ಕಬ್ಬಿಣದ ಪಟ್ಟಣವು ಭೂಮಿಯಮೇಲೂ, ಬೆಳ್ಳಿಯ ಪಟ್ಟಣವು ಆಕಾಶದಲ್ಲೂ ಇರುವುವು. ಚಿನ್ನದ ಪಟ್ಟಣವು ಇದರ ಮೇಲ್ಗಡೆ ನಿರ್ಮಿತವಾಗುವುದು. ಹೀಗೆ ಮೂರು ನಗರಗಳಿಂದ ಕೂಡಿ ತ್ರಿಪುರದುರ್ಗವು ಏರ್ಪಡುವುದು. ನೂರುಯೋಜನ ಪ್ರಮಾಣವುಳ್ಳ ಅದನ್ನು ಯಾರೂ ಪ್ರವೇಶಿಸಲಾರರು."

೩೫. ಬುರುಜುಗಳು, ಯಂತ್ರಗಳು, ಫಿರಂಗಿಗಳು, ಚಕ್ರ, ಶೂಲ, ಉಪಲ, ಕಂಪನ ಮುಂತಾದ ಆಯುಧಗಳು ಆ ಕೋಟೆಯಲ್ಲಿದ್ದುವು. ಅದರ ಬಾಗಿಲುಗಳು ಮಂದರ ಮತ್ತು ಮೇರುಪರ್ವತಗಳಂತಿದ್ದುವು. ಕೋಟೆಯ ಮೇಲೆ ಅಲ್ಲಲ್ಲಿ ಗೋಪುರಗಳು ಕಂಗೊಳಿಸುತ್ತಿದ್ದುವು.

**ಸತಾರಕಾಖ್ಯೇನ ಮಯೇನ ಗುಪ್ತಂ**
**ಸ್ವಸ್ಥಂ ಚ ಗುಪ್ತಂ ತಡಿಮಾಲಿನಾಪಿ ।**
**ಕೋ ನಾಮ ಹಂತುಂ ತ್ರಿಪುರಂ ಸಮರ್ಥೋ**
**ಮುಕ್ತ್ವಾ ತ್ರಿನೇತ್ರಂ ಭಗವಂತಮೇಕಂ ॥೩೬॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ತ್ರಿಪುರೋಪಾಖ್ಯಾನೇ**
**ಏಕೋನತ್ರಿಂಶದಧಿಕಶತತಮೋಽಧ್ಯಾಯಃ**

---

೩೬. ಮಯನು ತಾರಕಾಖ್ಯ ಮತ್ತು ವಿದ್ಯುನ್ಮಾಲಿ ಇವರೊಡಗೂಡಿ ಆ ಪಟ್ಟಣವನ್ನು ರಕ್ಷಿಸುತ್ತಿದ್ದನು. ಅದು ಆಕಾಶದಲ್ಲಿ ಗುಪ್ತವಾಗಿ ಸಂಚರಿಸುತ್ತಿತ್ತು. ಅಂತಹ ತ್ರಿಪುರದುರ್ಗವನ್ನು ನಾಶಮಾಡಲು ಭಗವಂತನಾದ ಪರಮೇಶ್ವರನೊಬ್ಬನಲ್ಲದೆ ಮತ್ತಾರು ಸಮರ್ಥರು ?

## ಅಧ್ಯಾಯದ ಸಾರಾಂಶ

ತ್ರಿಪುರದಹನದ ವೃತ್ತಾಂತವು ಈ ಅಧ್ಯಾಯದಲ್ಲಿ ಪ್ರಾರಂಭವಾಗುತ್ತದೆ.

ದೇವಾಸುರ ಯುದ್ಧದಲ್ಲಿ ಪರಾಜಿತನಾದ ಮಯನು ತಾರಕಾಖ್ಯ ಮತ್ತು ವಿದ್ಯುನ್ಮಾಲಿಯೆಂಬ ದೈತ್ಯರೊಡಗೂಡಿ ಘೋರವಾದ ತಪಸ್ಸನ್ನು ಮಾಡಿದನು. ಅವರ ತಪೋಜ್ವಾಲೆಗೆ ಮೂರುಲೋಕವೂ ಸಂತಪ್ತವಾಯಿತು. ಬ್ರಹ್ಮನು ಅವರಿಗೆ ಪ್ರತ್ಯಕ್ಷನಾಗಿ ಅವರ ಕೋರಿಕೆಯೇನೆಂದು ಕೇಳಿದನು. ದೇವತೆಗಳಿಗೆ ಕೂಡ ಭೇದಿಸಲಸಾಧ್ಯವಾದ ಕೋಟೆಯನ್ನು ತಾನು ಕಟ್ಟಿಕೊಳ್ಳುವೆನೆಂದೂ ಯಾರಿಂದಲೂ ತನಗೆ ಮರಣವು ಕೂಡದೆಂದೂ ಮಯನು ಕೇಳಿಕೊಂಡನು. "ಸಾವೇ ಬರಬಾರದು ಎಂಬ ಕೋರಿಕೆಯನ್ನು ನಡೆಸುವುದು ಸಾಧ್ಯವಿಲ್ಲ"ವೆಂದು ಬ್ರಹ್ಮನು ಉತ್ತರವಿತ್ತನು. "ಹಾಗಾದರೆ ಒಂದೇ ಬಾಣದಿಂದ ಒಂದೇ ಸಾರಿ ನನ್ನನ್ನು ಕೊಲ್ಲುವುದಾದರೆ ಯಾರಾದರೂ ಕೊಲ್ಲಲಿ" ಎಂದು ದೈತ್ಯನು ಬೇಡಿಕೊಂಡನು. ಬ್ರಹ್ಮನು ಅದಕ್ಕೊಪ್ಪಿ ಅದೃಶ್ಯನಾದನು.

## ಅಧ್ಯಾಯ ೧೨೯

ಇತ್ತ ದೈತ್ಯರು ತಮ್ಮ ಸ್ಥಳಕ್ಕೆ ಹೋದರು. ಮಯನು ಬಹಳ ಬುದ್ಧಿಯನ್ನುಪಯೋಗಿಸಿ ನೂರುಯೋಜನ ಪ್ರಮಾಣವುಳ್ಳ ಮೂರು ನಗರಗಳನ್ನು ನಿರ್ಮಿಸಿದನು. ಅವು ಕಬ್ಬಿಣ, ಬೆಳ್ಳಿ ಮತ್ತು ಚಿನ್ನದಿಂದಾದುವು. ಕಬ್ಬಿಣದ್ದು ಭೂಮಿಯ ಮೇಲೂ, ಬೆಳ್ಳಿಯದು ಆಕಾಶದಲ್ಲೂ, ಚಿನ್ನದ್ದು ಅದರ ಮೇಲ್ಗಡೆಯೂ ಸಂಚರಿಸುತ್ತಿದ್ದುವು. ಪುಷ್ಯ ನಕ್ಷತ್ರದ ದಿನ ಮಾತ್ರ ಅವು ಮೂರೂ ಒಟ್ಟಿಗೆ ಆಕಾಶದಲ್ಲಿ ಸೇರುತ್ತಿದ್ದುವು. ಅದನ್ನು ತಿಳಿದು ಒಂದೇ ಬಾಣದಿಂದ ಅವುಗಳನ್ನು ಹೊಡೆಯಬೇಕಾಗಿತ್ತು. ಮಯನು ಬಹಳ ಎಚ್ಚರಿಕೆಯಿಂದ ತನ್ನ ದುರ್ಗವನ್ನು ರಕ್ಷಿಸಿಕೊಳ್ಳುತ್ತಿದ್ದನು. ಪರಮೇಶ್ವರನಲ್ಲದೆ ಬೇರೆ ಮತ್ತಾರಿಗೆ ತಾನೆ ಅದನ್ನು ಭೇದಿಸಲು ಸಾಧ್ಯ ?

ಶ್ರೀಮತ್ಸ್ಯಮಹಾಪುರಾಣದಲ್ಲಿ ತ್ರಿಪುರೋಪಾಖ್ಯಾನದಲ್ಲಿ
ನೂರಿಪ್ಪತ್ತೊಂಬತ್ತನೆಯ ಅಧ್ಯಾಯ ಮುಗಿದುದು.



## ಅಥ ತ್ರಿಂಶದಧಿಕಶತತಮೋಽಧ್ಯಾಯಃ

॥ ಸೂತ ಉವಾಚ ॥

ಇತಿ ಚಿಂತ್ಯ ಮಯೋ ದೈತ್ಯೋ ದಿವ್ಯೋಪಾಯಪ್ರಭಾವಜಂ ।
ಚಕಾರ ತ್ರಿಪುರಂ ದುರ್ಗಂ ಮನಃಸಂಚಾರಚಾರಿತಂ ॥ ೧ ॥

ಪ್ರಾಕಾರೋಽನೇನ ಮಾರ್ಗೇಣ ಇಹ ವಾಮುತ್ರ ಗೋಪುರಂ ।
ಇಹ ಚಾಟ್ಟಾಲಕದ್ವಾರಮಿಹ ಚಾಟ್ಟಾಲಗೋಪುರಂ ॥ ೨ ॥

ರಾಜಮಾರ್ಗ ಇತಶ್ಚಾಪಿ ವಿಪುಲಂ ಭವನಾದಿಭಿಃ ।
ರಥ್ಯೋಪರಥ್ಯಾಃ ಸದೃಶಾ ಇಹ ಚತ್ವರ ಏವ ಚ ॥ ೩ ॥

ಇದಮಂತಃಪುರಸ್ಥಾನಂ ರುದ್ರಾಯತನಮತ್ರ ಚ ।
ಸವಟಾನಿ ತಡಾಗಾನಿ ಹ್ಯತ್ರ ವಾಪ್ಯಃ ಸರಾಂಸಿ ಚ ॥ ೪ ॥

---

೧. ಸೂತಪೌರಾಣಿಕನು ಹೇಳಿದನು.—ದೈತ್ಯನಾದ ಮಯನು ಹೀಗೆ ಯೋಚಿಸಿ, ಬ್ರಹ್ಮದೇವನ ವರದಿಂದ ಬಂದ ಮಹಿಮೆಯಿಂದಲೂ, ಉಪಾಯದಿಂದಲೂ ಮನಸ್ಸಿನ ಸಂಕಲ್ಪಮಾತ್ರದಿಂದ ತ್ರಿಪುರವೆಂಬ ದುರ್ಗವನ್ನು ಕಟ್ಟಿದನು.

೨. ಈ ದಾರಿಯಲ್ಲಿ ಕೋಟೆ; ಅಲ್ಲಿ ಗೋಪುರ; ಇಲ್ಲಿ ಮುಗಿಲಟ್ಟಳೆಯ ಬಾಗಿಲು; ಇಗೋ! ಇಲ್ಲಿ ಅಟ್ಟಳೆಯ ಗೋಪುರ.

೩. ಈ ಕಡೆ ಮನೆ ಮಠಗಳಿಂದ ತುಂಬಿದ ರಾಜಮಾರ್ಗ. ಅದಕ್ಕೆ ತಕ್ಕಂತೆ ಬೀದಿಗಳು ಮತ್ತು ಅಡ್ಡಬೀದಿಗಳು. ಆ ಕಡೆ ರಸ್ತೆಗಳು ಕೂಡುವ ಚೌಕ.

೪. ಇದು ಅಂತಃಪುರಪ್ರದೇಶ; ಇಲ್ಲಿ ಶಿವದೇವಸ್ಥಾನ; ಇಲ್ಲಿ ಉದ್ಯಾನಗಳು; 'ಅತ್ತ ಕೆರೆಗಳು; ಅವುಗಳ ಹತ್ತಿರದಲ್ಲೆ ಆಲದ ಮರಗಳು; ಈ ಕಡೆ ಬಾವಿಗಳು ಮತ್ತು ಸರೋವರಗಳು.

ಆರಾಮಾಶ್ಚ ಸಭಾಶ್ಚಾತ್ರ ಉದ್ಯಾನಾನ್ಯತ್ರ ವಾ ತಥಾ ।
ಉಪನಿರ್ಗಮೋ ದಾನವಾನಾಂ ಭವತ್ಯತ್ರ ಮನೋಹರಃ ॥ ೫ ॥

ಇತ್ಯೇವಂ ಮಾನಸಂ ತತ್ರಾಕಲ್ಪಯತ್ ಪುರಕಲ್ಪವಿತ್ ।
ಮಯೇನ ತತ್ಪುರಂ ಸೃಷ್ಟಂ ತ್ರಿಪುರಂ ತ್ವಿತಿ ನಃ ಶ್ರುತಂ ॥ ೬ ॥

ಕಾರ್ಷ್ಣಾಯಸಮಯಂ ಯತ್ತು ಮಯೇನ ವಿಹಿತಂ ಪುರಂ ।
ತಾರಕಾಖ್ಯೋಽಧಿಪಸ್ತತ್ರ ಕೃತಸ್ಥಾನಾಧಿಪೋಽವಸತ್ ॥ ೭ ॥

ಯತ್ತು ಪೂರ್ಣೇಂದುಸಂಕಾಶಂ ರಾಜತಂ ನಿರ್ಮಿತಂ ಪುರಂ ।
ವಿದ್ಯುನ್ಮಾಲೀ ಪ್ರಭುಸ್ತತ್ರ ವಿದ್ಯುನ್ಮಾಲೀ ತ್ವಿವಾಂಬುದಃ ॥ ೮ ॥

ಸುವರ್ಣಾಧಿಕೃತಂ ಯಚ್ಚ ಮಯೇನ ವಿಹಿತಂ ಪುರಂ ।
ಸ್ವಯಮೇವ ಮಯಸ್ತತ್ರ ಗತಸ್ತದಧಿಪಃ ಪ್ರಭುಃ ॥ ೯ ॥

---

೫. ಇಲ್ಲಿ ತೋಟಗಳು ಮತ್ತು ಸಭಾಸ್ಥಾನಗಳು; ಇಲ್ಲಿ ಉದ್ಯಾನಗಳು; ಇಲ್ಲಿ ದಾನವರು ಹೋಗಿ ಬರುವುದಕ್ಕಾಗಿ ಸಂದರವಾದ ಬಾಗಿಲು.

೬. ಪಟ್ಟಣವನ್ನು ರಚಿಸುವ ರೀತಿಯನ್ನು ಬಲ್ಲ ಮಯನು ತನ್ನ ಸಂಕಲ್ಪ ಮಾತ್ರದಿಂದಲೇ ಈ ತೆರನಾದ ನಗರವನ್ನು ನಿರ್ಮಿಸಿದನು. ಇದಕ್ಕೆ ತ್ರಿಪುರವೆಂದು ಪ್ರಸಿದ್ಧಿ ಬಂದಿತು.

೭. ಮಯನು ಕಟ್ಟಿದ ಆ ಉಕ್ಕಿನ ನಗರಕ್ಕೆ ತಾರಕಾಖ್ಯನು ಅಧಿಪತಿಯಾದನು. ಅವನು ಅದರ ಯಜಮಾನನಾಗಿ ಅಲ್ಲೇ ವಾಸಿಸಿದನು.

೮. ಪೂರ್ಣಚಂದ್ರನಂತೆ ಪ್ರಕಾಶಿಸುವ ಬೆಳ್ಳಿಯ ನಗರವು ನಿರ್ಮಿತವಾಯಿತಷ್ಟೆ! ವಿದ್ಯುನ್ಮಾಲಿಯು ಅದರ ಅಧಿಪತಿಯಾದನು. ಆ ನಗರವು ಮಿಂಚಿನ ಮಾಲೆಗಳಿಂದ ಕಂಗೊಳಿಸುವ ಮೋಡದಂತೆ ಪ್ರಕಾಶಿಸುತ್ತಿತ್ತು.

೯. ಬಂಗಾರದಿಂದ ಕಟ್ಟಿದ ಮೂರನೆಯ ಪಟ್ಟಣದಲ್ಲಿ ದೈತ್ಯರಾಜನಾದ ಮಯನೇ ಅಧಿಪತಿಯಾಗಿ ನಿಂತನು.

ತಾರಕಸ್ಯ ಪುರಂ ತತ್ರ ಶತಯೋಜನಮಾಯತಂ ।
ವಿದ್ಯುನ್ಮಾಲಿಪುರಂ ಚಾಪಿ ಶತಯೋಜನಕೇಽಂತರೇ ॥೧೦॥

ಮೇರುಪರ್ವತಸಂಕಾಶಂ ಮಯಸ್ಯಾಪಿ ಪುರಂ ಮಹತ್ ।
ಪುಷ್ಯಸಂಯೋಗಮಾತ್ರೇಣ ಕಾಲೇನ ಸ ಮಯಃ ಪುರಾ ॥೧೧॥

ಕೃತವಾಂಸ್ತ್ರಿಪುರಂ ದೈತ್ಯಸ್ತ್ರಿನೇತ್ರಃ ಪುಷ್ಪಕಂ ಯಥಾ ।
ಯೇನ ಯೇನ ಮಯೋ ಯಾತಿ ಪ್ರಕುರ್ವಾಣಃ ಪುರಂ ಪುರಾತ್ ॥೧೨॥

ಪ್ರತಸ್ಥೇ ತತ್ರ ತತ್ರೈವ ಪ್ರಚಕ್ರೇ ಮಾಯಯಾ ಸ್ವಯಂ ।
ರುಕ್ಮರೂಪ್ಯಾಯಸಾನಾಂ ಚ ಶತಶೋಽಥ ಸಹಸ್ರಶಃ ॥೧೩॥

ರತ್ನಾಚಿತಾನಿ ಶೋಭಂತೇ ಪುರಾಣ್ಯಮರವಿದ್ವಿಷಾಂ ।
ಪ್ರಾಸಾದಶತಜುಷ್ಟಾನಿ ಕೂಟಾಗಾರೋತ್ಕಟಾನಿ ಚ ॥೧೪॥

---

೧೦. ಅವುಗಳಲ್ಲಿ ತಾರಕನ ನಗರವು ನೂರುಯೋಜನ ವಿಸ್ತೃತವಾಗಿತ್ತು. ವಿದ್ಯುನ್ಮಾಲಿಯ ಪಟ್ಟಣವೂ ಕೂಡ ಅಷ್ಟೇ ಅಳತೆಯದಾಗಿ ಒಂದುನೂರುಯೋಜನ ದೂರದಲ್ಲಿ ಇದ್ದಿತು.

೧೧. ಮಯನ ಪಟ್ಟಣವು ಮೇರುಪರ್ವತಕ್ಕೆ ಸಮಾನವಾಗಿ ದೊಡ್ಡದಾಗಿತ್ತು. ಪುಷ್ಯನಕ್ಷತ್ರ ಯುಕ್ತವಾದ ಕಾಲದಲ್ಲಿ ಅವನು, ಈಶ್ವರನು ಪುಷ್ಪಕವನ್ನು ನಿರ್ಮಿಸಿದಂತೆ ಆ ತ್ರಿಪುರವನ್ನು ನಿರ್ಮಿಸಿದನು.

೧೨. ಒಂದು ಪಟ್ಟಣವನ್ನು ಬಿಟ್ಟು ಮತ್ತೊಂದಕ್ಕೆ ಮಯನು ಯಾವ ಯಾವ ದಾರಿಯಲ್ಲಿ ಹೋಗುತ್ತಾನೋ ಅಲ್ಲೆಲ್ಲವೂ ತನ್ನ ಮಾಯೆಯಿಂದ ಚಿತ್ರವಿಚಿತ್ರವಾಗಿ ಹೊಸಹೊಸ ನಗರವನ್ನು ರಚಿಸುತ್ತಿದ್ದನು.

೧೩. ಚಿನ್ನ, ಬೆಳ್ಳಿ ಮತ್ತು ಕಬ್ಬಿಣದಿಂದ ನಿರ್ಮಿತವಾದ ದೈತ್ಯರ ಪಟ್ಟಣಗಳು ಸಾವಿರಾರು ಲೆಕ್ಕದಲ್ಲಿ ರತ್ನಖಚಿತವಾಗಿ ಶೋಭಿಸುತ್ತಿದ್ದುವು.

೧೪-೧೫. ರಾಕ್ಷಸರೆಲ್ಲರ ನಗರಗಳೂ ಸ್ವೇಚ್ಛೆಯಿಂದ ಸಂಚರಿಸತಕ್ಕುವು. ಎಲ್ಲ ಲೋಕಗಳನ್ನೂ ದಾಟಿಹೋಗಬಲ್ಲುವು. ಅವುಗಳಲ್ಲಿ ನೂರಾರು ಉಪ್ಪರಿಗೆಗಳೂ,

**ಸರ್ವೇಷಾಂ ಕಾಮಗಾನಿ ಸ್ಯುಃ ಸರ್ವಲೋಕಾತಿಗಾನಿ ಚ ।**
**ಸೋದ್ಯಾನವಾಪೀಕೂಪಾನಿ ಸಪದ್ಮಸರವಂತಿ ಚ ॥೧೫॥**

**ಅಶೋಕವನರಮ್ಯಾಣಿ ಕೋಕಿಲಾರುತವಂತಿ ಚ ।**
**ಚಿತ್ರಶಾಲಾವಿಶಾಲಾನಿ ಚತುಃಶಾಲೋತ್ತಮಾನಿ ಚ ॥೧೬॥**

**ಸಪ್ತಾಷ್ಟದಶಭೌಮಾನಿ ಸತ್ಕೃತಾನಿ ಮಯೇನ ಚ ।**
**ಬಹುಧ್ವಜಪತಾಕಾನಿ ಸ್ರಗ್ದಾಮಾಲಂಕೃತಾನಿ ಚ ॥೧೭॥**

**ಕಿಂಕಿಣೀಜಾಲಶಬ್ದಾನಿ ಗಂಧವಂತಿ ಮಹಾಂತಿ ಚ ।**
**ಸುಸಂಯುಕ್ತೋಪಲಿಪ್ತಾನಿ ಪುಷ್ಪನೈವೇದ್ಯವಂತಿ ಚ ॥೧೮॥**

**ಯಜ್ಞಧೂಮಾಂಧಕಾರಾಣಿ ಸಂಪೂರ್ಣಕಲಶಾನಿ ಚ ।**
**ಗಗನಾವರಣಾಭಾನಿ ಹಂಸಪಙ್ಕ್ತಿನಿಭಾನಿ ಚ ॥೧೯॥**

---

ಶಿರೋಗೃಹಗಳೂ, ಉದ್ಯಾನಗಳೂ, ಬಾವಿಗಳೂ, ಕೊಳಗಳೂ ಪದ್ಮಸರೋವರಗಳೂ ಇದ್ದುವು.

೧೬. ಅವು ಅಶೋಕವನಗಳಿಂದ ರಮ್ಯವಾಗಿದ್ದುವು. ವಿಶಾಲವಾದ ಚಿತ್ರಶಾಲೆಗಳೂ, ಉತ್ತಮವಾದ ಕೈಸಾಲೆಗಳಿಂದ ಕೂಡಿದ ಮನೆಗಳೂ ಶೋಭಿಸುತ್ತಿದ್ದುವು.

೧೭. ಅವುಗಳಲ್ಲಿ ಏಳು, ಎಂಟು ಅಥವಾ ಹತ್ತು ಮಹಡಿಗಳಿದ್ದವು. ಮಯನ ಮಾಯಾಜಲದಿಂದ ಅವು ಅಲಂಕೃತವಾಗಿದ್ದುವು. ಹಲವು ಬಾವುಟಗಳು ಮೇಲೆ ಹಾರಾಡುತ್ತಿದ್ದುವು. ಹೂವಿನ ಮಾಲೆಗಳನ್ನು ಅಲಂಕಾರಕ್ಕಾಗಿ ಕಟ್ಟಿದ್ದರು.

೧೮. ಅಲ್ಲಿ ಕಿರುಗೆಜ್ಜೆಗಳು ಇಂಪಾಗಿ ಧ್ವನಿಮಾಡುತ್ತಿದ್ದುವು. ಶ್ರೇಷ್ಠವಾದ ಪರಿಮಳವು ವ್ಯಾಪಿಸಿತ್ತು. ದಿವ್ಯಪರಿಮಳ ದ್ರವ್ಯಗಳಿಂದ ನೆಲವನ್ನು ಸಾರಿಸಿದ್ದರು. ಬಗೆಬಗೆಯ ಪುಷ್ಪಗಳೂ ನೈವೇದ್ಯವೂ ತುಂಬಿದ್ದುವು.

೧೯. ಯಜ್ಞಧೂಮದಿಂದ ಕತ್ತಲು ಕವಿದಿತ್ತು. ಪೂರ್ಣಕಲಶಗಳನ್ನು ಅಲ್ಲಲ್ಲಿಟ್ಟಿದ್ದರು. ಆ ನಗರಗಳು ಗಗನತಲದಂತೆಯೂ ಹಂಸಗಳ ಪಙ್ಕ್ತಿಯಂತೆಯೂ ಶೋಭಿಸಿದುವು.

**ಪಙ್ಕ್ತೀಕೃತಾನಿ ರಾಜಂತೇ ಗೃಹಾಣಿ ತ್ರಿಪುರೇ ಪುರೇ ।**
**ಮುಕ್ತಾಕಲಾಪೈರ್ಲಂಬದ್ಭಿರ್ಹಸಂತೀವ ಶಶಿಶ್ರಿಯಂ ॥೨೦॥**

**ಮಲ್ಲಿಕಾಜಾತಿಪುಷ್ಪಾದ್ಯೈರ್ಗಂಧಧೂಪಾಧಿವಾಸಿತೈಃ ।**
**ಪಂಚೇಂದ್ರಿಯಸುಖೈರ್ನಿತ್ಯಂ ಸಮ್ಯೈಃ ಸತ್ಪುರುಷೈರಿವ ॥೨೧॥**

**ಹೇಮರಾಜತಲೋಹಾಶ್ಚ ಮಣಿರತ್ನಾಂಜನಾಂಕಿತಾಃ ।**
**ಪ್ರಾಕಾರಾಸ್ತ್ರಿಪುರೇ ತಸ್ಮಿನ್ ಗಿರಿಪ್ರಾಕಾರಸನ್ನಿಭಾಃ ॥೨೨॥**

**ಏಕೈಕಸ್ಮಿನ್ ಪುರೇ ತಸ್ಮಿನ್ ಗೋಪುರಾಣಾಂ ಶತಂ ಶತಂ ।**
**ಸಪತಾಕಾಧ್ವಜವತೀರ್ದೃಶ್ಯಂತೇ ಗಿರಿಶೃಂಗವತ್ ॥೨೩॥**

---

೨೦. ತ್ರಿಪುರ ನಗರದಲ್ಲಿ ಸಾಲಾಗಿ ಮನೆಗಳು ಪ್ರಕಾಶಿಸುತ್ತಿದ್ದುವು. ಮುತ್ತಿನ ಕುಚ್ಚುಗಳು ಜೋಲಾಡುತ್ತಿದ್ದುವು. ಅವುಗಳನ್ನು ನೋಡಿದರೆ ಅವು ಚಂದ್ರನ ಕಾಂತಿಯನ್ನು ಹಾಸ್ಯಮಾಡುತ್ತಿವೆಯೋ ಎಂಬಂತೆ ತೋರುತ್ತಿತ್ತು.

೨೧. ಅವು ಮಲ್ಲಿಗೆ ಮತ್ತು ಜಾಜಿಯ ಹೂಗಳಿಂದ ತುಂಬಿದ್ದುವು. ಗಂಧ ಮತ್ತು ಧೂಪಗಳಿಂದ ಪರಿಮಳ ವಿಶಿಷ್ಟವಾಗಿದ್ದುವು. ಪಂಚೇಂದ್ರಿಯಗಳಿಗೆ ಸದಾ ಸುಖವನ್ನು ಕೊಡುತ್ತಿದ್ದುವು. ಅತಿಥಿಗಳಿಗೆ ಅಲ್ಲಿ ಉಪಚಾರವು ದೊರಕುತ್ತಿದ್ದುದರಿಂದ ಅವು ಸತ್ಪುರುಷರನ್ನು ಹೋಲುತ್ತಿದ್ದುವು. ಇಂತಹ ಮನೆಗಳಿಂದ ನಗರವು ತುಂಬಿತ್ತು.

೨೨. ಆ ತ್ರಿಪುರದಲ್ಲಿ ಚಿನ್ನ, ಬೆಳ್ಳಿ ಮತ್ತು ಕಬ್ಬಿಣಗಳಿಂದ ಆದ ಪ್ರಾಕಾರಗಳಿದ್ದುವು. ಅವುಗಳು ಮಣಿ, ರತ್ನ ಮತ್ತು ನೀಲ ರತ್ನಗಳಿಂದ ಖಚಿತವಾಗಿದ್ದುವು. ಬೆಟ್ಟಗಳ ಸಾಲುಗಳಂತೆ ಕಂಗೊಳಿಸುತ್ತಿದ್ದುವು.

೨೩. ಒಂದೊಂದು ಪಟ್ಟಣದಲ್ಲೂ ನೂರಾರು ಗೋಪುರಗಳಿದ್ದುವು. ಅವುಗಳ ಮೇಲೆ ಪತಾಕೆಗಳನ್ನೂ, ಧ್ವಜಗಳನ್ನೂ ಹಾರಿಸಿದ್ದರು. ಅವು ಬೆಟ್ಟದ ಶಿಖರಗಳನ್ನು ಹೋಲುತ್ತಿದ್ದುವು.

ನೂಪುರಾರಾವರಮ್ಯಾಣಿ ತ್ರಿಪುರೇ ತತ್ಪುರಾಣ್ಯಪಿ ।
ಸ್ವರ್ಗಾತಿರಿಕ್ತಶ್ರೀಕಾಣಿ ತತ್ರ ಕನ್ಯಾಪುರಾಣಿ ಚ ॥೨೪॥

ಆರಾಮೈಶ್ಚ ವಿಹಾರೈಶ್ಚ ತಟಾಕಾವಟಪಲ್ವಲೈಃ ।
ಸರೋಭಿಶ್ಚ ಸರಿದ್ಭಿಶ್ಚ ವನೈಃಶ್ಚೋಪವನೈರಪಿ ॥೨೫॥

ದಿವ್ಯಭೋಗೋಪಭೋಗಾನಿ ನಾನಾರತ್ನಯುತಾನಿ ಚ ।
ಪುಷ್ಪೋತ್ಕರೈಶ್ಚ ಸುಭಗಾಸ್ತ್ರಿಪುರಸ್ಯೋಪನಿರ್ಗಮಾಃ ।
ಪರಿಖಾಶತಗಂಭೀರಾಃ ಕೃತಾ ಮಾಯಾನಿವಾರಣೈಃ ॥೨೬॥

ನಿಶಮ್ಯ ತದ್ದುರ್ಗವಿಧಾನಮುತ್ತಮಂ
ಕೃತಂ ಮಯೇನಾದ್ಭುತವೀರ್ಯಕರ್ಮಣಾ ।
ದಿತೇಃ ಸುತಾ ದೈವತರಾಜವೈರಿಣಃ
ಸಹಸ್ರಶಃ ಪ್ರಾಪುರನಂತವಿಕ್ರಮಾಃ ॥೨೭॥

---

೨೪. ಆ ತ್ರಿಪುರದಲ್ಲಿ ನಗರಗಳು ರಮಣಿಯರ ಕಾಲಂದಿಗೆಯ ಧ್ವನಿಯಿಂದ ರಮ್ಯವಾಗಿದ್ದುವು. ಕನ್ಯಾಂತಃಪುರಗಳು ಐಶ್ವರ್ಯದಲ್ಲಿ ಸ್ವರ್ಗವನ್ನು ಮೀರಿಸುತ್ತಿದ್ದುವು.

೨೫-೨೬. ತೋಟಗಳಿಂದಲೂ, ವಿಹಾರಸ್ಥಳಗಳಿಂದಲೂ, ಕೆರೆ, ಹಳ್ಳ, ಹೊಂಡ, ಸರೋವರ, ಹೊಳೆ, ವನ ಮತ್ತು ಉಪವನಗಳಿಂದಲೂ ನಗರಗಳು ಮನೋಹರವಾಗಿದ್ದುವು. ದೇವಯೋಗ್ಯವಾದ ಸುಖಸಾಧನಗಳೂ ಬಗೆಬಗೆಯ ರತ್ನಗಳೂ ಅಲ್ಲಿ ತುಂಬಿದ್ದುವು. ತ್ರಿಪುರದ ಹೊರವಳಯವು ಬಗೆ ಬಗೆಯ ಹೂದೋಟಗಳಿಂದ ಅಂದವಾಗಿತ್ತು. ಮಾಯಾವಿಯಾದ ಮಯನು ನೂರಾರು ಕಂದಕಗಳಿಂದ ಅವುಗಳನ್ನು ದುರ್ಗಮವಾಗಿ ಮಾಡಿದ್ದನು. ಶತ್ರುಗಳ ಮಾಯೆಗೆ ಅವು ಒಳಗಾಗುತ್ತಿರಲಿಲ್ಲ.

೨೭. ಅದ್ಭುತವಾದ ವೀರ್ಯಪರಾಕ್ರಮಗಳಿಂದ ಕೂಡಿದ ಮಯನು ಉತ್ತಮವಾದ ದುರ್ಗವನ್ನು ರಚಿಸಿದನೆಂಬುದನ್ನು ಕೇಳಿ ಇಂದ್ರನ ವೈರಿಗಳೂ, ಅಪರಿಮಿತ ಪರಾಕ್ರಮಶಾಲಿಗಳೂ ಆದ ದೈತ್ಯರು ಸಾವಿರಗಟ್ಟಲೆಯಾಗಿ ಅಲ್ಲಿಗೆ ಬಂದರು.

**ತದಾ ಸುರೈರ್ದರ್ಪಿತವೈರಿಮರ್ದನೈಃ**
**ಜನಾರ್ದನೈಃ ಶೈಲಕರೀಂದ್ರಸನ್ನಿಭೈಃ ।**
**ಬಭೂವ ಪೂರ್ಣಂ ತ್ರಿಪುರಂ ತಥಾ ಪುರಾ**
**ಯಥಾಂಬರಂ ಭೂರಿಜಲೈರ್ಜಲಪ್ರದೈಃ ॥೨೮॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ತ್ರಿಪುರೋಪಾಖ್ಯಾನೇ**
**ತ್ರಿಂಶದಧಿಕಶತತಮೋಽಧ್ಯಾಯಃ**

---

೨೮. ನೀರಿನಿಂದ ತುಂಬಿದ ಮೋಡಗಳು ಆಕಾಶವನ್ನು ವ್ಯಾಪಿಸಿಕೊಳ್ಳು ವಂತೆ, ಬೆಟ್ಟಗಳನ್ನೂ ಸಲಗಗಳನ್ನೂ ಹೋಲುತ್ತ, ಜನರಿಗೆ ತೊಂದರೆಕೊಡುತ್ತ, ದರ್ಪದಿಂದ ಶತ್ರುಗಳನ್ನು ಸದೆಬಡಿಯಬಲ್ಲ ಅಸುರರು ತ್ರಿಪುರವನ್ನು ತುಂಬಿ ಕೊಂಡರು.

**ಅಧ್ಯಾಯದ ಸಾರಾಂಶ**

ಈ ಅಧ್ಯಾಯದಲ್ಲಿ ಮಯನು ರಚಿಸಿದ ತ್ರಿಪುರವನ್ನು ವರ್ಣಿಸಿದೆ.

ಮಯನು ತಾನು ಯೋಚಿಸಿದಂತೆ ಪುಷ್ಯನಕ್ಷತ್ರದ ದಿವಸ ಕಬ್ಬಿಣ, ಬೆಳ್ಳಿ ಮತ್ತು ಚಿನ್ನದಿಂದ ಮೂರು ಪಟ್ಟಣಗಳನ್ನು ಒಂದರ ಮೇಲೊಂದರಂತೆ ರಚಿಸಿದನು. ಒಂದೊಂದರಲ್ಲೂ ಶಸ್ತ್ರಸಜ್ಜಿತವಾದ ಕೋಟೆಕೊತ್ತಲುಗಳೂ, ಅನೇಕ ಶಾಖಾನಗರ ಗಳೂ, ಸಕಲೋಪಭೋಗಭರಿತಗಳಾದ ದಿವ್ಯಮಂದಿರಗಳೂ ಇದ್ದುವು. ದೇವ ಶತ್ರುಗಳಾದ ದೈತ್ಯರು ಸಾವಿರಗಟ್ಟಲೆಯಾಗಿ ಅಲ್ಲಿ ಬಂದು ನೆಲಸಿದರು.

ಶ್ರೀಮತ್ಸ್ಯಮಹಾಪುರಾಣದಲ್ಲಿ ತ್ರಿಪುರೋಪಾಖ್ಯಾನದಲ್ಲಿ
ನೂರಮೂವತ್ತನೆಯ ಅಧ್ಯಾಯವು ಮುಗಿದುದು.

## ಅಥೈಕತ್ರಿಂಶದಧಿಕಶತತಮೋಽಧ್ಯಾಯಃ

॥ ಸೂತ ಉವಾಚ ॥

ನಿರ್ಮಿತೇ ತ್ರಿಪುರೇ ದುರ್ಗೇ ಮಯೇನಾಸುರಶಿಲ್ಪಿನಾ ।
ತದ್ದುರ್ಗಂ ದುರ್ಗತಾಂ ಪ್ರಾಪ ಬದ್ಧವೈರೈಃ ಸುರಾಸುರೈಃ ॥ ೧ ॥

ಸಕಲತ್ರಾಃ ಸಪುತ್ರಾಶ್ಚ ಶಸ್ತ್ರವಂತೋಽನ್ತಕೋಪಮಾಃ ।
ಮಯಾದಿಷ್ಟಾನಿ ವಿವಿಶುರ್ಗೃಹಾಣಿ ಹೃಷಿತಾಶ್ಚ ತೇ ॥ ೨ ॥

ಸಿಂಹಾ ವನಮಿವಾನೇಕೇ ಮಕರಾ ಇವ ಸಾಗರಂ ।
ರೋಷೈಶ್ಚೈವಾತಿಪಾರುಷ್ಯೈಃ ಶರೀರಮಿವ ಸಂಹತೈಃ ॥ ೩ ॥

ತದ್ವದ್ಬಲಿಭಿರಧ್ಯಸ್ತಂ ತತ್ಪುರಂ ದೇವತಾರಿಭಿಃ ।
ತ್ರಿಪುರಂ ಸಂಕುಲಂ ಜಾತಂ ದೈತ್ಯಕೋಟಿಶತಾಕುಲಂ ॥ ೪ ॥

---

೧. ಸೂತಪೌರಾಣಿಕನು ಹೇಳಿದನು.—ದೈತ್ಯರ ಶಿಲ್ಪಿಯಾದ ಮಯನು ತ್ರಿಪುರದುರ್ಗವನ್ನು ನಿರ್ಮಿಸಿದನಷ್ಟೆ! ಅದು ದೈತ್ಯರಿಗಾಗಲೀ ಅವರ ಶತ್ರುಗಳಾದ ದೇವತೆಗಳಿಗಾಗಲೀ ಅಪ್ಪಣೆಯಿಲ್ಲದೆ ಪ್ರವೇಶಿಸುವುದಕ್ಕೆ ಅಸಾಧ್ಯವಾಗಿತ್ತು.

೨. ಆಯುಧಧಾರಿಗಳೂ, ಯಮಸದೃಶರೂ ಆದ ಆ ದೈತ್ಯರು ಪತ್ನೀ ಪುತ್ರರೊಡನೆ ಮಯನ ಅಪ್ಪಣೆಯಂತೆ ಅವನು ತೋರಿಸಿದ ಮನೆಗಳನ್ನು ಸಂತೋಷದಿಂದ ಪ್ರವೇಶಿಸಿ ಅಲ್ಲಿ ವಾಸಮಾಡತೊಡಗಿದರು.

೩-೪. ಸಿಂಹಗಳು ಕಾಡನ್ನೂ, ಮೊಸಳೆಗಳು ಸಾಗರವನ್ನೂ ಸೇರುವಂತೆ ಅಸಂಖ್ಯಾತರಾದ ದೈತ್ಯರು ತ್ರಿಪುರವನ್ನು ಹೊಕ್ಕರು. ಕ್ರೋಧವೂ, ಕ್ರೌರ್ಯವೂ ಶರೀರವನ್ನು ಪಡೆದಂತೆ ಅವರು ತೋರುತ್ತಿದ್ದರು. ಹೀಗೆ ಬಲಿಷ್ಠರೂ, ದೇವಶತ್ರುಗಳೂ ಆದ ಕೋಟಿಗಟ್ಟಲೆಯ ದೈತ್ಯರಿಂದ ತ್ರಿಪುರ ದುರ್ಗವು ಕಿಕ್ಕಿರಿದು ಹೋಯಿತು.

ಸುತಲಾದಪಿ ನಿಷ್ಪತ್ಯ ಪಾತಾಲಾದ್ದಾನವಾಲಯಾತ್ ।
ಉಪತಸ್ಥುಃ ಪಯೋದಾಭಾ ಯೇ ಚ ಗಿರ್ಯುಪಜೀವಿನಃ ॥ ೫ ॥

ಯೋ ಯಂ ಪ್ರಾರ್ಥಯತೇ ಕಾಮಂ ಸಂಪ್ರಾಪ್ತಸ್ತ್ರಿಪುರಾಶ್ರಯಾತ್ ।
ತಸ್ಯ ತಸ್ಯ ಮಯಸ್ತತ್ರ ಮಾಯಯಾ ವಿದಧಾತಿ ಸಃ ॥ ೬ ॥

ಸಚಂದ್ರೇಷು ಚ ದೋಷೇಷು ಸಾಂಬುಜೇಷು ಸರಸ್ಸು ಚ ।
ಆರಾಮೇಷು ಸಚೂತೇಷು ತಪೋಧನವನೇಷು ಚ ॥ ೭ ॥

ಸ್ವಂಗಾಶ್ಚಂದನದಿಗ್ಧಾಂಗಾ ಮಾತಂಗಾಸ್ಸಮದಾ ಇವ ।
ಮೃಷ್ಟಾಭರಣವಸ್ತ್ರಾಶ್ಚ ಮೃಷ್ಟಸ್ರಗನುಲೇಪನಾಃ ॥ ೮ ॥

ಪ್ರಿಯಾಭಿಃ ಪ್ರಿಯಕಾಮಾಭಿರ್ಹಾವಭಾವಪ್ರಸೂತಿಭಿಃ ।
ನಾರೀಭಿಃ ಸತತಂ ರೇಮುರ್ಮುದಿತಾಶ್ಚೈವ ದಾನವಾಃ ॥ ೯ ॥

---

೫. ಸುತಲವೆಂಬ ಅಧೋಲೋಕದಿಂದಲೂ ದಾನವರ ವಾಸಸ್ಥಲವಾದ ಪಾತಾಲದಿಂದಲೂ ಅವರು ಎದ್ದು ಬಂದರು. ಬೆಟ್ಟಗಳಲ್ಲಿ ವಾಸಿಸುತ್ತ ಮೋಡಗಳಂತೆ ಮೈ ಬಣ್ಣವುಳ್ಳ ರಾಕ್ಷಸರೂ ಬಂದು ಸೇರಿದರು.

೬. ತ್ರಿಪುರ ದುರ್ಗದಲ್ಲಿರುವ ಯಾವನು ಯಾವ ಇಷ್ಟಾರ್ಥವನ್ನು ಕೋರಿದರೂ ಮಯನು ತನ್ನ ಮಾಯಾಬಲದಿಂದ ಅವನಿಗೆ ಅದನ್ನು ನೆರವೇರಿಸಿ ಕೊಡುತ್ತಿದ್ದನು.

೭-೯. ಚಂದ್ರೋದಯದಿಂದ ಶೋಭಿಸುವ ಸಂಧ್ಯಾಕಾಲಗಳಲ್ಲೂ, ತಾವರೆಗಳು ಅರಳಿರುವ ಸರೋವರಗಳಲ್ಲಿಯೂ, ಮಾವಿನಮರಗಳು ಚಿಗುರಿದ ತೋಟಗಳಲ್ಲಿಯೂ, ಋಷ್ಯಾಶ್ರಮ ವನಗಳಲ್ಲಿಯೂ ದಾನವರು ಹಾವಭಾವಾದಿ ವಿಲಾಸ ಚತುರೆಯರಾದ ತಮ್ಮ ಪ್ರಿಯನಾರಿಯರೊಡನೆ ಎಡೆಬಿಡದೆ ಕ್ರೀಡಿಸುತ್ತಿದ್ದರು. ಅವರು ಸುಂದರಾಂಗರಾಗಿ ಚಂದನವನ್ನು ಲೇಪಿಸಿಕೊಂಡು ಮದಹತ್ತಿದ ಆನೆಗಳಂತೆ ಶೋಭಿಸುತ್ತಿದ್ದರು. ಪ್ರಕಾಶಿಸುವ ಆಭರಣಗಳನ್ನೂ ವಸ್ತ್ರಗಳನ್ನೂ ತೊಟ್ಟು, ದಿವ್ಯ ಮಾಲೆಯನ್ನೂ ಗಂಧವನ್ನೂ ಧರಿಸಿದ್ದರು.

ಮಯೇನ ನಿರ್ಮಿತೇ ಸ್ಥಾನೇ ಮೋದಮಾನಾ ಮಹಾಸುರಾಃ ।
ಅರ್ಥೇ ಧರ್ಮೇ ಚ ಕಾಮೇ ಚ ನಿದಧುಸ್ತೇ ಮತೀಃ ಸ್ವಯಂ ॥೧೦॥

ತೇಷಾಂ ತ್ರಿಪುರಯುಕ್ತಾನಾಂ ತ್ರಿಪುರೇ ತ್ರಿದಶಾರಿಣಾಂ ।
ವ್ರಜತಿ ಸ್ಮ ಸುಖಂ ಕಾಲಃ ಸ್ವರ್ಗಸ್ಥಾನಾಂ ಯಥಾ ತಥಾ ॥೧೧॥

ಶುಶ್ರೂಷಂತೇ ಪಿತೄನ್ ಪುತ್ರಾಃ ಪತ್ನ್ಯಶ್ಚಾಪಿ ಪತೀಂಸ್ತಥಾ ।
ವಿಮುಕ್ತಕಲಹಾಶ್ಚಾಪಿ ಪ್ರೀತಯಃ ಪ್ರಚುರಾಭವನ್ ॥೧೨॥

ನಾಧರ್ಮಸ್ತ್ರಿಪುರಸ್ಥಾನಾಂ ಬಾಧತೇ ವೀರ್ಯವಾನಪಿ ।
ಅರ್ಚಯಂತೋ ದಿತೇಃ ಪುತ್ರಾಸ್ತ್ರಿಪುರಾಯತನೇ ಹರಂ ॥೧೩॥

ಪುಣ್ಯಾಹಶಬ್ದಾನುಚ್ಚೈರಾಶೀರ್ವಾದಾಂಶ್ಚ ವೇದಗಾನ್ ।
ಸ್ವನೂಪುರರವೋನ್ಮಿಶ್ರಾನ್ ವೇಣುವೀಣಾರವಾನಪಿ ॥೧೪॥

---

೧೦. ಮಯನು ನಿರ್ಮಾಣಮಾಡಿದ ಆ ತ್ರಿಪುರದಲ್ಲಿ ಮಹಾಸುರರು ಸಂತೋಷದಿಂದಿರುತ್ತ ಧರ್ಮಾರ್ಥಕಾಮಗಳೆಂಬೀ ಪುರುಷಾರ್ಥಗಳಲ್ಲಿ ಸ್ವಯಂ ಪ್ರೇರಿತರಾಗಿಯೇ ಮನಸ್ಸಿಟ್ಟಿದ್ದರು.

೧೧. ತ್ರಿಪುರದಲ್ಲಿ ವಾಸಮಾಡುತ್ತಿದ್ದ ಆ ದೈತ್ಯರಿಗೆ ಸ್ವರ್ಗವಾಸಿಗಳಿಗೆ ಹೇಗೋ ಹಾಗೆ ಕಾಲವು ಸುಖವಾಗಿ ಕಳೆಯುತ್ತಿತು.

೧೨. ಮಕ್ಕಳು ತಂದೆತಾಯಿಗಳನ್ನೂ, ಪತ್ನಿಯರು ಪತಿಗಳನ್ನೂ ಸೇವೆ ಮಾಡುತ್ತಿದ್ದರು. ಅವರು ಪರಸ್ಪರ ಕಲಹವಿಲ್ಲದೆ ವಿಶೇಷಪ್ರೀತಿಯಿಂದಿರುತ್ತಿದ್ದರು.

೧೩. ಅಧರ್ಮವು ಎಷ್ಟೇ ಪ್ರಬಲವಾದರೂ ತ್ರಿಪುರದಲ್ಲಿ ವಾಸಿಸುತ್ತಿದ್ದ ದೈತ್ಯರನ್ನು ಅದು ಬಾಧಿಸುತ್ತಿರಲಿಲ್ಲ. ಅವರು ಆ ದುರ್ಗದಲ್ಲಿ ಈಶ್ವರನನ್ನು ಪೂಜಿಸುತ್ತಿದ್ದರು.

೧೪. ಪುಣ್ಯಾಹಮಂತ್ರಗಳ ಮತ್ತು ವೇದೋಕ್ತವಾದ ಆಶೀರ್ವಾದ ಮಂತ್ರಗಳ ಘೋಷವು ಅವರಲ್ಲಿ ಕೇಳಿಬರುತ್ತಿತ್ತು. ಅದರೊಡನೆ ಅವರ ಕಾಲಂದಿಗೆಯ ಧ್ವನಿಗಳೂ, ಕೊಳಲು, ವೀಣೆ ಮೊದಲಾದ ವಾದ್ಯಗಳ ಮಧುರ ನಿನಾದವೂ ಬೆರೆಯುತ್ತಿದ್ದುವು.

ಹಾಸಶ್ಚ ವರನಾರೀಣಾಂ ಚಿತ್ತವ್ಯಾಕುಲಕಾರಕಃ ।
ತ್ರಿಪುರೇ ದಾನವೇಂದ್ರಾಣಾಂ ರಮತಾಂ ಶ್ರೂಯತೇ ಸದಾ ॥೧೫॥

ತೇಷಾಮರ್ಚಯತಾಂ ದೇವಾನ್ ಬ್ರಾಹ್ಮಣಾಂಶ್ಚ ನಮಸ್ಯತಾಂ ।
ಧರ್ಮಾರ್ಥಕಾಮತಂತ್ರಾಣಾಂ ಮಹಾನ್ ಕಾಲೋಽಭ್ಯವರ್ತತ ॥೧೬॥

ಅಥಾಲಕ್ಷ್ಮೀರಸೂಯಾ ಚ ತೃಡ್ಬುಭುಕ್ಷೇ ತಥೈವ ಚ ।
ಕಲಿಶ್ಚ ಕಲಹಶ್ಚೈವ ತ್ರಿಪುರಂ ವಿವಿಶುಃ ಸಹ ॥೧೭॥

ಸಂಧ್ಯಾಕಾಲಂ ಪ್ರವಿಷ್ಟಾಸ್ತೇ ತ್ರಿಪುರಂ ಚ ಭಯಾವಹಾಃ ।
ಸಮಧ್ಯಾಸುಃ ಸಮಂ ಘೋರಾಃ ಶರೀರಾಣಿ ಯಥಾಽಽಮಯಾಃ ॥೧೮॥

ಸರ್ವ ಏತೇ ವಿಶಂತಸ್ತು ಮಯೇನ ತ್ರಿಪುರಾಂತರಂ ।
ಸ್ವಪ್ನೇ ಭಯಾವಹಾ ದೃಷ್ಟಾ ಆವಿಶಂತಸ್ತು ದಾನವಾನ್ ॥೧೯॥

---

೧೫. ತ್ರಿಪುರನಗರದಲ್ಲಿ ದಾನವನಾಯಕರು ತಮ್ಮ ಪ್ರಿಯತಮೆಯರೊಡನೆ ಯಾವಾಗಲೂ ವಿಹರಿಸುತ್ತಿದ್ದರು. ಆಕೆಯರ ಮಂದಹಾಸವು ಅವರ ಮನಸ್ಸನ್ನು ವ್ಯಾಕುಲಗೊಳಿಸುತ್ತಿತ್ತು.

೧೬. ದೇವತೆಗಳನ್ನು ಅರ್ಚಿಸುತ್ತ, ಬ್ರಾಹ್ಮಣರನ್ನು ನಮಸ್ಕರಿಸುತ್ತ ಧರ್ಮಾರ್ಥಕಾಮಗಳನ್ನು ಅವರು ಸಾಧಿಸುತ್ತಿದ್ದರು. ಹೀಗೆ ಬಹುಕಾಲ ಕಳೆಯಿತು.

೧೭. ಬಳಿಕ ಅಲಕ್ಷ್ಮಿ, ಅಸೂಯೆ, ಬಾಯಾರಿಕೆ, ಹಸಿವು, ಕಲಿ, ಕಲಹ ಇವೆಲ್ಲವೂ ಒಟ್ಟಿಗೆ ತ್ರಿಪುರವನ್ನು ಪ್ರವೇಶಿಸಿದುವು.

೧೮. ಘೋರವಾದ ರೋಗಗಳು ಶರೀರವನ್ನು ಪ್ರವೇಶಿಸುವಂತೆ ಭಯಂಕರವಾದ ಆ ಅಸೂಯಾದಿಗಳು ಸಾಯಂಕಾಲದ ವೇಳೆಯಲ್ಲಿ ತ್ರಿಪುರವನ್ನು ಹೊಕ್ಕು ಅಲ್ಲಿ ಒಟ್ಟಿಗೆ ನೆಲಸಿದುವು.

೧೯. ಭಯಂಕರಗಳಾದ ಇವೆಲ್ಲವೂ ತ್ರಿಪುರವನ್ನು ಹೊಕ್ಕು ದಾನವರ ದೇಹದೊಳಗೆ ಪ್ರವೇಶಿಸುವುದನ್ನು ಮಯನು ಕನಸಿನಲ್ಲಿ ಕಂಡನು.

ಉದಿತೇ ಚ ಸಹಸ್ರಾಂಶೌ ಶುಭಭಾಸಾಕರೇ ರವೌ ।
ಮಯಃ ಸಭಾಮಾವಿವೇಶ ಭಾಸ್ಕರಾಭ್ಯಾಮಿವಾಂಬುದಃ ॥೨೦॥

ಮೇರುಕೂಟನಿಭೇ ರಮ್ಯೇ ಆಸನೇ ಸ್ವರ್ಣಮಂಡಿತೇ ।
ಆಸೀನಾಃ ಕಾಂಚನಗಿರೇಃ ಶೃಂಗೇ ತೋಯಮುಚೋ ಯಥಾ ॥೨೧॥

ಪಾರ್ಶ್ವಯೋಸ್ತಾರಕಾಖ್ಯಶ್ಚ ವಿದ್ಯುನ್ಮಾಲೀ ಚ ದಾನವಃ ।
ಉಪವಿಷ್ಟೌ ಮಯಸ್ಯಾಂತೇ ಹಸ್ತಿನಃ ಕಲಭಾವಿವ ॥೨೨॥

ತತಃ ಸುರಾರಯಃ ಸರ್ವೇಽಶೇಷಕೋಪಾ ರಣಾಜಿರೇ ।
ಉಪವಿಷ್ಟಾ ದೃಢಂ ವಿದ್ಧಾ ದಾನವಾ ದೇವಶತ್ರವಃ ॥೨೩॥

ತೇಷ್ವಾಸೀನೇಷು ಸರ್ವೇಷು ಸುಖಾಸನಗತೇಷು ಚ ।
ಮಯೋ ಮಾಯಾವಿಜನಕ ಇತ್ಯುವಾಚ ಸ ದಾನವಾನ್ ॥೨೪॥

---

೨೦. ಜಗತ್ತಿಗೆ ಶುಭವನ್ನು ಕೊಡುವ ತೇಜಸ್ಸಿಗೆ ಆಶ್ರಯನಾದ ಸೂರ್ಯನು ಹುಟ್ಟಿದನು. ಆಗ ಸೂರ್ಯರಿಬ್ಬರೊಡನೆ ತಲೆದೋರಿದ ಮೇಘದಂತೆ ಮಯನು ತಾರಕಾಖ್ಯ ಮತ್ತು ವಿದ್ಯುನ್ಮಾಲಿಗಳ ಸಂಗಡ ಸಭೆಗೆ ಬಂದನು.

೨೧. ಸುವರ್ಣಗಿರಿಯ ಶಿಖರದಲ್ಲಿ ಮೇಘಗಳು ಕುಳಿತುಕೊಳ್ಳುವಂತೆ ಆ ದೈತ್ಯಶ್ರೇಷ್ಠರು ಮೇರುಶಿಖರದಂತೆ ರಮ್ಯವಾದ, ಸುವರ್ಣಾಲಂಕೃತವಾದ ಆಸನದಲ್ಲಿ ಕುಳಿತರು.

೨೨. ಮಯನ ಎರಡು ಪಕ್ಕಗಳಲ್ಲಿಯೂ ವಿದ್ಯುನ್ಮಾಲಿ ಮತ್ತು ತಾರಕಾಖ್ಯರು ಆನೆಯ ಪಕ್ಕದಲ್ಲಿ ಅದರ ಮರಿಗಳಂತೆ ಕುಳಿತರು.

೨೩. ಅನಂತರ ಯುದ್ಧರಂಗದಲ್ಲಿ ಅಪರಿಮಿತವಾದ ಕೋಪವನ್ನು ಪ್ರಕಟಿಸತಕ್ಕ, ದೇವಶತ್ರುಗಳಾದ ಅಸುರರೆಲ್ಲರೂ ಮನಸ್ಸಿನಲ್ಲಿ ದ್ವೇಷಪೂರಿತರಾಗಿ ಕುಳಿತರು.

೨೪. ಅವರೆಲ್ಲರೂ ಸುಖಾಸನಗಳಲ್ಲಿ ಕುಳಿತ ತರುವಾಯ ಮಾಯಾವಿಗಳಲ್ಲಿ ಅಗ್ರೇಸರನಾದ ಮಯನು ಅವರೊಡನೆ ಇಂತೆಂದನು :—

ಖೇಚರಾಃ ಖೇಚರಾರಾವಾ ಭೋ ಭೋ ದಾಕ್ಷಾಯಣೀಸುತಾಃ ।
ನಿಶಾಮಯಧ್ವಂ ಸ್ವಪ್ನೋಽಯಂ ಮಯಾ ದೃಷ್ಟೋ ಭಯಾವಹಃ ॥೨೫॥

ಚತಸ್ರಃ ಪ್ರಮದಾಸ್ತತ್ರ ತ್ರಯೋ ಮರ್ತ್ಯಾ ಭಯಾವಹಾಃ ।
ಕೋಪಾನಲಾ ದೀಪ್ತಮುಖಾಃ ಪ್ರವಿಷ್ಟಾಸ್ತ್ರಿಪುರಾರ್ದಿನಃ ॥೨೬॥

ಪ್ರವಿಶ್ಯ ರುಷಿತಾಸ್ತೇ ಚ ಪುರಾಣ್ಯತುಲವಿಕ್ರಮಾಃ ।
ಪ್ರವಿಷ್ಟಾಽಸ್ಮಚ್ಛರೀರಾಣಿ ಭೂತ್ವಾ ಬಹುಶರೀರಿಣಃ ॥೨೭॥

ನಗರಂ ತ್ರಿಪುರಂ ಚೇದಂ ತಮಸಾ ಸಮವಸ್ಥಿತಂ ।
ಸಗೃಹಂ ಸಹ ಯುಷ್ಮಾಭಿಃ ಸಾಗರಾಂಭಸಿ ಮಜ್ಜಿತಂ ॥೨೮॥

ಉಲೂಕಂ ರುಚಿರಾ ನಾರೀ ನಗ್ನಾ ರೂಢಾ ಖರಂ ತಥಾ ।
ಪುರುಷಶ್ಚೇಂದುತಿಲಕಶ್ಚತುರಂಘ್ರಿಸ್ತ್ರಿಲೋಚನಃ ॥೨೯॥

---

೨೫. "ಗಗನದಲ್ಲಿ ಸಂಚರಿಸುತ್ತ ಮೇಘಗಗಳಂತೆ ಆರ್ಭಟಿಸುವ ಓ ದೈತ್ಯರೇ, ನಾನು ಕಂಡ ಭಯಂಕರವಾದ ಸ್ವಪ್ನವನ್ನು ಕೇಳಿರಿ.

೨೬. ಬೆಂಕಿಯಂತಿರುವ ಕೋಪದಿಂದ ಮುಖವು ಉರಿಯುತ್ತಿರಲು, ಭಯಂಕರರಾದ ನಾಲ್ವರು ಹೆಂಗಸರೂ, ಮೂವರು ಗಂಡಸರೂ ತ್ರಿಪುರ ದುರ್ಗ ವನ್ನು ಧ್ವಂಸಮಾಡುತ್ತ ಒಳಹೊಕ್ಕರು.

೨೭. ಬಹಳ ಸಾಹಸವಂತರಾದ ಅವರು ಸಿಟ್ಟುಗೊಂಡು ನಮ್ಮ ಪಟ್ಟಣ ಗಳನ್ನು ಪ್ರವೇಶಿಸಿದರು. ಅಷ್ಟೇ ಅಲ್ಲ; ಹಲವು ಶರೀರಗಳನ್ನು ಧರಿಸಿ ನಮ್ಮ ದೇಹಗಳನ್ನು ಹೊಕ್ಕರು.

೨೮. ಈ ತ್ರಿಪುರ ನಗರವು ಕತ್ತಲೆಯಿಂದ ತುಂಬಿ ಎಲ್ಲ ಮನೆಗಳೊಡನೆಯೂ ನಿಮ್ಮೊಡನೆಯೂ ಸಾಗರದ ನೀರಿನಲ್ಲಿ ಮುಳುಗಿತು.

೨೯. ಚೆಲುವೆಯಾದ ಹೆಂಗಸೊಬ್ಬಳು ಬೆತ್ತಲೆಯಾಗಿ ಗೂಬೆಯನ್ನು ಏರಿ ಕುಳಿತಳು. ಚಂದ್ರನ ಆಕಾರದ ತಿಲಕವೂ, ನಾಲ್ಕು ಕಾಲುಗಳೂ, ಮೂರು ಕಣ್ಣು ಗಳೂ ಉಳ್ಳ ಒಬ್ಬ ಪುರುಷನು ಕತ್ತೆಯ ಮೇಲೆ ಕುಳಿತಿದ್ದನು.

ಯೇನ ಸಾ ಪ್ರಮದಾ ನುನ್ನಾ ಅಹಂ ಚೈವ ವಿಬೋಧಿತಃ ।
ಈದೃಶೀ ಪ್ರಮದಾ ದೃಷ್ಟ್ವಾ ಮಯಾ ಚಾತಿಭಯಾವಹಾ ॥೩೦॥

ಏಷ ಈದೃಶಿಕಃ ಸ್ವಪ್ನೋ ದೃಷ್ಟೋ ವೈ ದಿತಿನಂದನಾಃ ।
ದೃಷ್ಟಃ ಕಥಂ ಹಿ ಕಷ್ಟಾಯ ಅಸುರಾಣಾಂ ಭವಿಷ್ಯತಿ ॥೩೧॥

ಯದಿ ವೋಽಹಂ ಕ್ಷಮೋ ರಾಜಾ ಯದಿದಂ ವೇತ್ಥ ಚೇದ್ಧಿತಂ ।
ನಿಬೋಧಧ್ವಂ ಸುಮನಸೋ ನ ಚಾಸೂಯಿತುಮರ್ಹಥ ॥೩೨॥

ಕಾಮಂ ಚೇರ್ಷ್ಯಾಂ ಚ ಕೋಪಂ ಚ ಅಸೂಯಾಂ ಸಂವಿಹಾಯ ಚ ।
ಸತ್ಯೇ ದಮೇ ಚ ಧರ್ಮೇ ಚ ಮುನಿವಾದೇ ಚ ತಿಷ್ಠತ ॥೩೩॥

ಶಾಂತಯಶ್ಚ ಪ್ರಯುಜ್ಯಂತಾಂ ಪೂಜ್ಯತಾಂ ಚ ಮಹೇಶ್ವರಃ ।
ಯದಿ ನಾಮಾಸ್ಯ ಸ್ವಪ್ನಸ್ಯ ಹ್ಯೇವಂ ಚೋಪರಮೋ ಭವೇತ್ ॥೩೪॥

---

೩೦. ಆತನು ಹೆಂಗಸನ್ನು ನೂಕುತ್ತಿದ್ದನಲ್ಲದೆ ನನ್ನನ್ನೂ ಎಬ್ಬಿಸಿದನು. ಇಂತಹ ಭಯಂಕರಳಾದ ಹೆಂಗಸನ್ನು ನಾನು ಕಂಡೆನು.

೩೧. ಓ ದೈತ್ಯರೇ, ನಾನು ಕಂಡುದು ಈ ಬಗೆಯ ಕನಸು! ಇದರಿಂದ ಅಸುರರಿಗೆ ಹೇಗೆ ಕಷ್ಟವೊದಗುತ್ತದೆ ಬಲ್ಲಿರಾ?

೩೨. ನಾನು ನಿಮಗೆ ತಕ್ಕ ರಾಜನೆಂದೂ, ನನ್ನ ಮಾತು ಹಿತಕರವೆಂದೂ ನಿಮಗೆ ತಿಳಿದರೆ, ಎಲೈ ಪ್ರಾಜ್ಞರೇ, ನಾನು ಹೇಳುವುದನ್ನು ಗಮನವಿಟ್ಟು ಕೇಳಿ. ಅಸೂಯೆ ಮಾಡಬೇಡಿ.

೩೩. ಕಾಮ, ಈರ್ಷ್ಯೆ, ಕೋಪ, ಅಸೂಯೆ ಇವನ್ನು ಬಿಡಿ. ಸತ್ಯ, ಇಂದ್ರಿಯ ನಿಗ್ರಹ, ಧರ್ಮ, ಋಷಿಗಳ ಹಿತವಚನ ಇವುಗಳನ್ನು ಅನುಸರಿಸಿ.

೩೪. ಶಾಂತಿಕರ್ಮಗಳನ್ನು ನೆರವೇರಿಸಿ. ಪರಮೇಶ್ವರನನ್ನು ಪೂಜಿಸಿ. ಇದರಿಂದಲಾದರೂ ಈ ಸ್ವಪ್ನದ ದುಷ್ಫಲವು ತಪ್ಪಲಿ.

ಕುಪ್ಯತೇ ನೋ ಧ್ರುವಂ ರುದ್ರೋ ದೇವದೇವಸ್ತ್ರಿಲೋಚನಃ ।
ಯತೋತ್ಪಾತಾಶ್ಚ ದೃಶ್ಯಂತೇ ಸದಾ ಚ ತ್ರಿಪುರೇಽಸುರಾಃ ॥೩೫॥

ಕಲಹಂ ವರ್ಜಯಂತಶ್ಚ ಅರ್ಜಯಂತಸ್ತಥಾರ್ಜವಂ ।
ಸ್ವಪ್ನಶಾಂತಿಂ ಪ್ರತೀಕ್ಷಧ್ವಂ ಕಾಲೋದಯಮಥಾಪಿ ವಾ ॥೩೬॥

ಶ್ರುತ್ವಾ ದಾಕ್ಷಾಯಣೀಪುತ್ರಾ ಇತ್ಯೇವಂ ಮಯಭಾಷಿತಂ ।
ಕ್ರೋಧೇರ್ಷ್ಯಾವಸ್ಥಯಾ ಯುಕ್ತಾ ದೃಶ್ಯಂತೇ ಚ ವಿನಾಶಗಾಃ ॥೩೭॥

ವಿನಾಶಮುಪಪಶ್ಯಂತೋ ಹ್ಯಲಕ್ಷ್ಮ್ಯಾ ವ್ಯಾಪಿತಾಽಸುರಾಃ ।
ತತ್ರೈವ ದೃಷ್ಟ್ವಾ ತೇಽನ್ಯೋನ್ಯಂ ಸಂಕ್ರೋಧಾಪೂರಿತೇಕ್ಷಣಾಃ ॥೩೮॥

ಅಥ ದೈವಪರಿಧ್ವಸ್ತಾ ದಾನವಾಸ್ತ್ರಿಪುರಾಲಯಾಃ ।
ಹಿತ್ವಾ ಸತ್ಯಂ ಚ ಧರ್ಮಂ ಚ ಅಕಾರ್ಯಾಣ್ಯುಪಚಕ್ರಮುಃ ॥೩೯॥

---

೩೫. ದೇವದೇವನೂ ತ್ರಿಲೋಚನನೂ ಆದ ಮಹೇಶ್ವರನು ನಮ್ಮ ಮೇಲೆ ಕೋಪಿಸಿಕೊಳ್ಳುವುದಿಲ್ಲ. ಇದು ನಿಜ. ಓ ಅಸುರರೇ! ನಾನು ಹೇಳುವುದೇಕೆಂದರೆ ತ್ರಿಪುರದಲ್ಲಿ ಯಾವಾಗಲೂ ಉತ್ಪಾತಗಳು ಕಾಣುತ್ತಲೇ ಇವೆ.

೩೬. ಕಲಹವನ್ನು ಬಿಟ್ಟು, ಸರಳಸ್ವಭಾವವನ್ನನುಸರಿಸುತ್ತ ದುಃಸ್ವಪ್ನದ ಶಾಂತಿಯನ್ನೂ, ಅನುಕೂಲಕಾಲವನ್ನೂ ಇದುರು ನೋಡುತ್ತಿರಿ"

೩೭. ಮಯನು ಹೇಳಿದ ಮಾತನ್ನು ಕೇಳಿ ವಿನಾಶಕಾಲವೊದಗಿದ್ದ ದೈತ್ಯರು ಕ್ರೋಧ ಮತ್ತು ಈರ್ಷ್ಯೆಗಳಿಗೆ ವಶರಾದರು.

೩೮. ಅಲಕ್ಷ್ಮಿಯು ಆಕ್ರಮಿಸಿಕೊಂಡಿದ್ದ ಆ ಅಸುರರಿಗೆ ವಿನಾಶಕಾಲವೇ ಕಾಣಬರುತ್ತಿತ್ತು. ಒಬ್ಬರನ್ನೊಬ್ಬರು ನೋಡಿದಾಗ ಅವರ ಕಣ್ಣುಗಳಲ್ಲಿ ಸಿಟ್ಟು ತುಂಬಿತು.

೩೯. ಬಳಿಕ ದುರ್ದೈವವಶರಾಗಿ ತ್ರಿಪುರವಾಸಿಗಳಾದ ಅಸುರರು ಸತ್ಯವನ್ನೂ ಧರ್ಮವನ್ನೂ ಬಿಟ್ಟು ಅಕಾರ್ಯಗಳಿಗೆ ತೊಡಗಿದರು.

ದ್ವಿಷಂತಿ ಬ್ರಾಹ್ಮಣಾನ್ ಪುಣ್ಯಾನ್ ನ ಚಾರ್ಚಂತಿ ಹಿ ದೇವತಾಃ ।
ಗುರುಂ ಚೈವ ನ ಮನ್ಯಂತೇ ಹ್ಯನ್ಯೋನ್ಯಂ ಚಾಪಿ ಚುಕ್ರುಧುಃ ॥೪೦॥

ಕಲಹೇಷು ಚ ಸಜ್ಜಂತೇ ಸ್ವಧರ್ಮೇಷು ಹಸಂತಿ ಚ ।
ಪರಸ್ಪರಂ ಚ ನಿಂದಂತಿ ಅಹಮಿತ್ಯೇವ ವಾದಿನಃ ॥೪೧॥

ಉಚ್ಚೈರ್ಗುರೂನ್ ಪ್ರಭಾಷಂತೇ ನಾಭಿಭಾಷಂತಿ ಪೂಜಿತಾಃ ।
ಅಕಸ್ಮಾತ್ಸಾಶ್ರುನಯನಾ ಜಾಯಂತೇ ಚ ಸಮುತ್ಸುಕಾಃ ॥೪೨॥

ದಧಿಸಕ್ತೂನ್ ಪಪುಶ್ಚೈವ ಕಪಿತ್ಥಾನಿ ಚ ರಾತ್ರಿಷು ।
ಭಕ್ಷಯಂತಿ ಚ ಶೇರಂತ ಉಚ್ಛಿಷ್ಟಾಃ ಸಂವೃತಾಸ್ತಥಾ ॥೪೩॥

ಮೂತ್ರಂ ಕೃತ್ವಾ ನ ಸ್ಪೃಶ್ಯಂತಿ ಚಾಕೃತ್ವಾ ಪಾದಧಾವನಂ ।
ಸಂವಿಶಂತಿ ಚ ಶಯ್ಯಾಸು ಶೌಚಾಚಾರವಿವರ್ಜಿತಾಃ ॥೪೪॥

---

೪೦. ಅವರು ಧರ್ಮನಿರತರಾದ ಬ್ರಾಹ್ಮಣರನ್ನು ದ್ವೇಷಿಸುವರು. ದೇವತೆಗಳನ್ನು ಪೂಜಿಸರು. ಗುರುವಿಗೆ ಮನ್ನಣೆಯೀಯರು. ಒಬ್ಬರ ಮೇಲೊಬ್ಬರು ಸಿಟ್ಟಾಗುವರು.

೪೧. ಅವರು ಕಲಹಗಳಲ್ಲಿ ತೊಡಗುವರು. ಸ್ವಧರ್ಮಾಚರಣೆಯೆಂದರೆ ಅವರಿಗೆ ಹಾಸ್ಯ. ಅಹಂಕಾರ ನಿರತರಾಗಿ ಒಬ್ಬರನ್ನೊಬ್ಬರು ನಿಂದಿಸುವರು.

೪೨. ಹಿರಿಯರೊಡನೆ ಗಟ್ಟಿಯಾಗಿ ಮಾತನಾಡುವರು. ಗೌರವಿಸಿದರೂ ಉತ್ತರವನ್ನು ಕೊಡರು. ಇದ್ದಕ್ಕಿದ್ದಂತೆಯೇ ಕಣ್ಣಿನಲ್ಲಿ ನೀರು ಹಾಕುವರು; ಮತ್ತು ಗಾಬರಿಗೊಳ್ಳುವರು.

೪೩. ರಾತ್ರಿಯಲ್ಲಿ ಮೊಸರನ್ನು ಕುಡಿಯುವರು. ಮತ್ತು ಹುರಿಹಿಟ್ಟನ್ನೂ ಬೇಲದ ಹಣ್ಣುಗಳನ್ನೂ ತಿನ್ನುವರು. ಎಂಜಲು ಕೈ ತೊಳೆಯದೆಯೂ, ಮುಸುಕನ್ನು ಹಾಕಿಕೊಂಡೂ ಮಲಗುವರು.

೪೪. ಮೂತ್ರ ವಿಸರ್ಜನ ಮಾಡಿ ಜಲವನ್ನು ಸ್ಪರ್ಶಿಸುವುದಿಲ್ಲ. ಕಾಲು ತೊಳೆಯದೆ ಹಾಸಿಗೆಯಲ್ಲಿ ಮಲಗುವರು. ಶೌಚಾಚಾರಗಳನ್ನು ಅನುಸರಿಸರು.

ಸಂಕುಚಂತಿ ಭಯಾಚ್ಚೈವ ಮಾರ್ಜಾರಾಣಾಂ ಯಥಾಖುಕಾಃ ।
ಭಾರ್ಯಾಂ ಗತ್ವಾ ನ ಶುದ್ಧ್ಯಂತಿ ರಹೋವೃತ್ತಿಷು ನಿಸ್ತ್ರಪಾಃ ||೪೫||

ಪುರಾ ಸುಶೀಲಾ ಭೂತ್ವಾ ಚ ದುಶ್ಶೀಲತ್ವಮುಪಾಗತಾಃ ।
ದೇವಾಂಸ್ತಪೋಧನಾಂಶ್ಚೈವ ಬಾಧಂತೇ ತ್ರಿಪುರಾಲಯಾಃ ||೪೬||

ಮಯೇನ ವಾರ್ಯಮಾಣಾಪಿ ತೇ ವಿನಾಶಮುಪಸ್ಥಿತಾಃ ।
ವಿಪ್ರಿಯಾಣ್ಯೇವ ವಿಪ್ರಾಣಾಂ ಕುರ್ವಾಣಾಃ ಕಲಹೈಷಿಣಃ ||೪೭||

ವೈಭ್ರಾಜಂ ನಂದನಂ ಚೈವ ತಥಾ ಚೈತ್ರರಥಂ ವನಂ ।
ಅಶೋಕಂ ಚ ವರಾಶೋಕಂ ಸರ್ವರ್ತುಕಮಥಾಪಿ ಚ ||೪೮||

ಸ್ವರ್ಗಂ ಚ ದೇವತಾವಾಸಂ ಪೂರ್ವದೇವಾ ಬಲಾನ್ವಿತಾಃ ।
ವಿಧ್ವಂಸಯಂತಿ ಸಂಕ್ರುದ್ಧಾಸ್ತಪೋಧನವನಾನಿ ಚ ||೪೯||

---

೪೫. ಬೆಕ್ಕನ್ನು ಕಂಡ ಇಲಿಯಂತೆ ಭಯದಿಂದ ಕುಗ್ಗಿಹೋಗುವರು. ಪತ್ನೀ ಸಂಗಮವನ್ನು ಮಾಡಿದ ತರುವಾಯ ಶುದ್ಧಿಮಾಡಿಕೊಳ್ಳುವುದಿಲ್ಲ. ಗುಟ್ಟಾಗಿ ಅಕಾರ್ಯಗಳನ್ನು ಮಾಡುವರು. ಅದಕ್ಕಾಗಿ ಅವರಿಗೆ ಲಜ್ಜೆಯೂ ಇಲ್ಲ.

೪೬. ತ್ರಿಪುರವಾಸಿಗಳಾದ ಅಸುರರು ಮೊದಲು ಒಳ್ಳೆಯ ನಡತೆವಂತರಾಗಿದ್ದು ಬಳಿಕ ಹೀಗೆ ದುಷ್ಟಚರಿತ್ರರಾದರು. ಅವರು ದೇವತೆಗಳನ್ನೂ ತಪಸ್ವಿಜನರನ್ನೂ ಬಾಧಿಸತೊಡಗಿದರು.

೪೭. ಮಯನು ಅಡ್ಡಿಪಡಿಸಿದರೂ ಕೇಡುಗಾಲವೊದಗಿದ್ದುದರಿಂದ ಆ ದೈತ್ಯರು ಕಲಹಪ್ರಿಯರಾಗಿ ಬ್ರಾಹ್ಮಣರಿಗೆ ಬಾಧೆಯನ್ನೇ ಕೊಡುತ್ತಿದ್ದರು.

೪೮-೪೯. ಬಲಿಷ್ಠರಾದ ಆ ದೈತ್ಯರು ವೈಭ್ರಾಜ, ನಂದನ, ಚೈತ್ರರಥ, ಅಶೋಕ, ವರಾಶೋಕ, ಸರ್ವರ್ತುಕ, ಮುಂತಾದ ದೇವೋದ್ಯಾನಗಳನ್ನೂ ದೇವತೆಗಳ ವಾಸಸ್ಥಾನವಾದ ಸ್ವರ್ಗವನ್ನೂ, ಮತ್ತು ಋಷ್ಯಾಶ್ರಮಗಳನ್ನೂ ಕ್ರೋಧವಶದಿಂದ ಹಾಳುಮಾಡುತ್ತಿದ್ದರು.

ವಿಧ್ವಸ್ತದೇವಾಯತನಾಶ್ರಮಂ ಚ
ಸಂಭಗ್ನದೇವದ್ವಿಜಪೂಜಕಂ ತು ।
ಜಗದ್ಬಭೂವಾಮರರಾಜದುಷ್ಟೈ
ರಭಿದ್ರುತಂ ಸಸ್ಯಮಿವಾಲಿವೃಂದೈಃ ॥೫೦॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ತ್ರಿಪುರೋಪಾಖ್ಯಾನೇ
ದುಃಸ್ವಪ್ನದರ್ಶನಂ ನಾಮೈಕತ್ರಿಂಶದಧಿಕಶತತಮೋಽಧ್ಯಾಯಃ

---

೫೦. ದೇವೇಂದ್ರನ ಶತ್ರುಗಳಾದ ದುಷ್ಟದೈತ್ಯರು ದೇವಸ್ಥಾನಗಳನ್ನೂ, ಆಶ್ರಮಗಳನ್ನೂ ಧ್ವಂಸಮಾಡಿದರು. ದೇವತೆಗಳು, ಬ್ರಾಹ್ಮಣರು, ಪೂಜಾನಿರತರು ಇವರೆಲ್ಲರನ್ನೂ ಕೊಂದರು. ಮಿಡಿತೆಗಳು ಸಸ್ಯವರ್ಗವನ್ನು ಪೀಡಿಸುವಂತೆ ಲೋಕ ವನ್ನು ಬಾಧಿಸಿದರು.

## ಅಧ್ಯಾಯದ ಸಾರಾಂಶ

ತ್ರಿಪುರನಿವಾಸಿಗಳಾದ ಅಸುರರು ಧರ್ಮವನ್ನು ತಪ್ಪದೆ ಪಾಲಿಸುತ್ತ ಸುಖವಾಗಿರು ತ್ತಿದ್ದರು. ದೇವಬ್ರಾಹ್ಮಣ ಭಕ್ತರಾಗಿದ್ದರು. ಒಂದು ದಿನ ಸಾಯಂಕಾಲ ಹಸಿವು ಬಾಯಾರಿಕೆಗಳೂ, ಈರ್ಷ್ಯಾಸೂಯಾದಿಗಳೂ ಆ ದುರ್ಗವನ್ನು ಪ್ರವೇಶಿಸಿ ಅಸುರರಲ್ಲಿ ನೆಲೆಸಿದವು. ಅಂದಿನ ರಾತ್ರಿಯೇ ಮಯನಿಗೆ ದುಃಸ್ವಪ್ನವು ಕಾಣಿಸಿತು. ಮರುದಿನ ಸಭೆಯಲ್ಲಿ ಅಸುರರನ್ನು ಎಚ್ಚರಿಸಿ, ಧರ್ಮವನ್ನು ತಪ್ಪದೆ ಅನುಸರಿಸುವಂತೆ ಅವನು ಹೇಳಿದನು. ಆದರೂ ಅವರು ಕ್ರೋಧಾಸೂಯೆಗಳನ್ನು ಜಯಿಸಲು ಶಕ್ತರಾಗಲಿಲ್ಲ. ಅದು ಮೊದಲು ಅವರು ಅಧರ್ಮಪ್ರವರ್ತಕರಾಗಿ ದೇವತೆಗಳನ್ನೂ, ಧರ್ಮಿಷ್ಠ ರನ್ನೂ ಬಗೆಬಗೆಯಾಗಿ ಪೀಡಿಸಲಾರಂಭಿಸಿದರು. ಮಯನು ಅಡ್ಡಿಪಡಿಸಿದರೂ ಪ್ರಯೋಜನವಾಗಲಿಲ್ಲ.

ಶ್ರೀಮತ್ಸ್ಯಮಹಾಪುರಾಣದಲ್ಲಿ ತ್ರಿಪುರೋಪಾಖ್ಯಾನದಲ್ಲಿ ದುಃಸ್ವಪ್ನದರ್ಶನವೆಂಬ
ನೂರಮೂವತ್ತೊಂದನೆಯ ಅಧ್ಯಾಯವು ಮುಗಿದುದು.

## ಅಥ ದ್ವಾತ್ರಿಂಶದಧಿಕಶತತಮೋಽಧ್ಯಾಯಃ

॥ ಸೂತ ಉವಾಚ ॥

ಅಶೀಲೇಷು ಪ್ರದುಷ್ಟೇಷು ದಾನವೇಷು ದುರಾತ್ಮಸು ।
ಲೋಕೇಷೂತ್ಸಾದ್ಯಮಾನೇಷು ತಪೋಧನವನೇಷು ಚ ॥ ೧ ॥

ಸಿಂಹನಾದೇನ ದೈತ್ಯಾನಾಂ ಭಯಭೀತೇಷು ಜಂತುಷು ।
ತ್ರೈಲೋಕ್ಯೇ ಭಯಸಂಮೂಢೇ ತಮೋಽಂಧತ್ವಮುಪಾಗತೇ ॥ ೨ ॥

ಆದಿತ್ಯಾ ವಸವಃ ಸಾಧ್ಯಾಃ ಪಿತರೋ ಮರುತಾಂ ಗಣಾಃ ।
ಭೀತಾಃ ಶರಣಮಾಜಗ್ಮುರ್ಬ್ರಹ್ಮಾಣಂ ಪ್ರಪಿತಾಮಹಂ ॥ ೩ ॥

ತೇ ತಂ ಸ್ವರ್ಣೋತ್ಪಲಾಸೀನಂ ಬ್ರಹ್ಮಾಣಂ ಸಮುಪಾಗತಾಃ ।
ನೇಮುರೂಚುಶ್ಚ ಸಹಿತಾಃ ಪಂಚಾಸ್ಯಂ ಚತುರಾನನಂ ॥ ೪ ॥

---

೧. ಸೂತಪೌರಾಣಿಕನು ಹೇಳಿದನು.—ದುರಾತ್ಮರಾದ ದಾನವರು ನಡತೆಗೆಟ್ಟು ಬಹಳ ದುಷ್ಟರಾದರು. ಲೋಕಗಳೂ ಋಷ್ಯಾಶ್ರಮಗಳೂ ಹಾಳುಬಿದ್ದವು.

೨. ದೈತ್ಯರ ಸಿಂಹನಾದದಿಂದ ಪ್ರಾಣಿಗಳು ಹೆದರಿ ತತ್ತರಿಸಿದುವು. ಮೂರು ಲೋಕವೂ ಭೀತಿಯಿಂದ ದಿಕ್ಕುಗೆಟ್ಟು ಕಗ್ಗತ್ತಲಲ್ಲಿ ಮುಳುಗಿತು.

೩. ಆದಿತ್ಯರು, ವಸುಗಳು, ಸಾಧ್ಯರು, ಪಿತೃಗಳು ಮತ್ತು ಮರುದ್ಗಣಗಳು ಎಲ್ಲರೂ ಹೆದರಿ ಪಿತಾಮಹನಾದ ಬ್ರಹ್ಮನನ್ನು ಮರೆಹೊಕ್ಕರು.

೪. ಅವರು ಸುವರ್ಣಕಮಲದ ಮೇಲೆ ಕುಳಿತಿರುವ ಬ್ರಹ್ಮನ ಬಳಿಗೆ ಬಂದರು. ಪಂಚಮುಖಗಳಿಂದ ವಿರಾಜಿಸುತ್ತಿರುವ ಆತನಿಗೆ ನಮಸ್ಕಾರಮಾಡಿ ಇಂತೆಂದರು.

ವರಗುಪ್ತಾಸ್ತ್ವತ್ವೈವೇಹ ದಾನವಾಸ್ತ್ರಿಪುರಾಲಯಾಃ ।
ಬಾಧಂತೇಽಸ್ಮಾನ್ಯಥಾ ಪ್ರೇಷ್ಯಾನನುಶಾಧಿ ತಪೋಽನಘ ॥ ೫ ॥

ಮೇಘಾಗಮೇ ಯಥಾ ಹಂಸಾ ಮೃಗಾಃ ಸಿಂಹಭಯಾದಿವ ।
ದಾನವಾನಾಂ ಭಯಾತ್ತದ್ವದ್ಭ್ರಾಮ ಪ್ರಪಿತಾಮಹ ॥ ೬ ॥

ಪುತ್ರಾಣಾಂ ನಾಮಧೇಯಾನಿ ಕಲತ್ರಾಣಾಂ ತಥೈವ ಚ ।
ದಾನವೈರ್ಭ್ರಾಮ್ಯಮಾಣಾನಾಂ ವಿಸ್ಮೃತಾನಿ ತತೋಽನಘ ॥ ೭ ॥
ದೇವವೇಶ್ಮಪ್ರಭಂಗಾಶ್ಚ ಆಶ್ರಮಭ್ರಂಶನಾನಿ ಚ ।
ದಾನವೈರ್ಲೋಭಮೋಹಾಂಧೈಃ ಕ್ರಿಯಂತೇ ಚ ಭ್ರಮಂತಿ ಚ ॥ ೮ ॥
ಯದಿ ನ ತ್ರಾಯಸೇ ಲೋಕಂ ದಾನವೈರ್ವಿದ್ರುತಂ ದ್ರುತಂ ।
ಧರ್ಷಣಾನೇನ ನಿರ್ದೇವಂ ನಿರ್ಮನುಷ್ಯಾಶ್ರಮಂ ಜಗತ್ ॥ ೯ ॥

---

೫. "ತ್ರಿಪುರವಾಸಿಗಳಾದ ದಾನವರು ನಿನ್ನ ವರದಿಂದಲೇ ರಕ್ಷಣೆಹೊಂದಿ ನಮ್ಮನ್ನು ಹಿಂಸಿಸುತ್ತಿದ್ದಾರೆ. ಎಲೈ ಮಹಾತ್ಮನೇ, ನಿನ್ನ ಕಿಂಕರರಾದ ನಮಗೆ ಅಪ್ಪಣೆಯನ್ನು ಕೊಡು.

೬. ಎಲೈ ಪಿತಾಮಹನೇ, ಮೇಘೋದಯದಿಂದ ಹಂಸಗಳೂ, ಸಿಂಹದಿಂದ ಮೃಗಗಳೂ ಹೆದರಿ ಓಡುವಂತೆ ದಾನವರ ಭಯದಿಂದ ನಾವು ದಿಕ್ಕುಗೆಟ್ಟು ಅಲೆದಾಡುತ್ತೇವೆ.

೭. ಎಲೈ ನಿರ್ಮಲನೇ, ದೈತ್ಯರಿಗೆ ಅಂಜಿ ಅಲೆದಾಡುತ್ತಿರುವ ನಮಗೆ ನಮ್ಮ ಮಕ್ಕಳ ಮತ್ತು ಪತ್ನಿಯರ ಹೆಸರುಗಳೂ ಮರೆತುಹೋಗಿವೆ.

೮. ಆ ದಾನವರು ದೇವಾಲಯಗಳನ್ನೂ ನೆಲಸಮಮಾಡುವರು. ಆಶ್ರಮಗಳನ್ನು ನಿರ್ಮೂಲಮಾಡುವರು. ಲೋಭ, ಮೋಹ ಇವುಗಳಿಗೆ ತುತ್ತಾಗಿ ಮದಾಂಧತೆಯಿಂದ ಜಗತ್ತಿನಲ್ಲೆಲ್ಲ ಅಲೆದಾಡುವರು.

೯. ದೈತ್ಯರ ಬಾಧೆಗೊಳಗಾದ ಲೋಕವನ್ನು ನೀನು ರಕ್ಷಿಸದೇ ಹೋದರೆ ಅವರ ಕೋಟಲೆಗೆ ತುತ್ತಾಗಿ ಜಗತ್ತಿನಲ್ಲಿ ದೇವತೆಗಳು, ಮನುಷ್ಯರು, ಆಶ್ರಮಗಳು ಇವು ಯಾವುವೂ ಉಳಿಯವು"

ಇತ್ಯೇವಂ ತ್ರಿದಶೈರುಕ್ತಃ ಪದ್ಮಯೋನಿಃ ಪಿತಾಮಹಃ ।
ಪ್ರತ್ಯಾಹ ತ್ರಿದಶಾನ್ ಸೇಂದ್ರಾನಿಂದುತುಲ್ಯಾನನಃ ಪ್ರಭುಃ ॥೧೦॥

ಮಯಸ್ಯ ಯೋ ವರೋ ದತ್ತೋ ಮಯಾ ಮತಿಮತಾಂ ವರಾಃ ।
ತಸ್ಯಾಂತ ಏವ ಸಂಪ್ರಾಪ್ತೋ ಯಃ ಪುರೋಕ್ತೋ ಮಯಾ ಸುರಾಃ ॥೧೧॥

ತಚ್ಚ ತೇಷಾಮಧಿಷ್ಠಾನಂ ತ್ರಿಪುರಂ ತ್ರಿದಶರ್ಷಭಾಃ ।
ಏಕೇಷುಪಾತಮೋಕ್ಷೇಣ ಹಂತವ್ಯಂ ನೇಷುವೃಷ್ಟಿಭಿಃ ॥೧೨॥

ಭವತಾಂ ಚ ನ ಪಶ್ಯಾಮಿ ಕಮಪ್ಯತ್ರ ಸುರರ್ಷಭಾಃ ।
ಯಸ್ತ್ವೇಕಪ್ರಹಾರೇಣ ಪುರಂ ಹನ್ಯಾತ್ಸದಾನವಂ ॥೧೩॥

ತ್ರಿಪುರಂ ನಾಲ್ಪವೀರ್ಯೇಣ ಶಕ್ಯಂ ಹಂತುಂ ಶರೇಣ ತು ।
ಏಕಂ ಮುಕ್ತ್ವಾ ಮಹಾದೇವಂ ಮಹೇಶಾನಂ ಪ್ರಜಾಪತಿಂ ॥೧೪॥

---

೧೦. ಇಂದ್ರಾದಿ ದೇವತೆಗಳು ಹೀಗೆ ಬಿನ್ನವಿಸಲು ಚಂದ್ರಮುಖನೂ, ಪದ್ಮಗರ್ಭನೂ ಆದ ಬ್ರಹ್ಮದೇವನು ಹೀಗೆ ಉತ್ತರವಿತ್ತನು.

೧೧. "ಪ್ರಾಜ್ಞರಲ್ಲಿ ಉತ್ತಮರೆನಿಸಿದ ಎಲೈ ದೇವತೆಗಳಿರಾ, ಮಯನಿಗೆ ನಾನು ಕೊಟ್ಟ ವರದ ಕೊನೆಗಾಲವು ಇನ್ನೇನು ಬಂದಿತೆಂದು ತಿಳಿಯಿರಿ. ಈ ಸಂಗತಿಯನ್ನು ನಾನು ಹಿಂದೆಯೇ ಹೇಳಿದ್ದೇನೆ.

೧೨. ಓ ದೇವೋತ್ತಮರೇ, ದೈತ್ಯರ ವಾಸಸ್ಥಾನವಾದ ಆ ತ್ರಿಪುರವನ್ನು ಒಂದೇ ಬಾಣದ ಪ್ರಹಾರದಿಂದ ಧ್ವಂಸಮಾಡಬೇಕು. ಬಾಣಗಳ ಮಳೆಯಿಂದ ಅದು ಸಾಧ್ಯವಾಗದು.

೧೩. ಸುರಶ್ರೇಷ್ಠರೇ, ದಾನವಸಹಿತವಾದ ಆ ನಗರವನ್ನು ಒಂದೇ ಪ್ರಹಾರದಿಂದ ಭೇದಿಸಬಲ್ಲವರಾರೂ ನಿಮ್ಮಲ್ಲಿಲ್ಲವೆಂದು ನನಗೆ ತೋರುತ್ತದೆ.

೧೪. ಮಹೇಶ್ವರನೂ, ಪ್ರಜಾಪತಿಯೂ ಆದ ಮಹಾದೇವನನ್ನು ಬಿಟ್ಟರೆ ಅಲ್ಪವೀರ್ಯವುಳ್ಳ ಮತ್ತಾರ ಬಾಣದಿಂದಲೂ ತ್ರಿಪುರಹನನವು ಸಾಧ್ಯವಿಲ್ಲ.

ತೇ ಯೂಯಂ ಯದಿ ಅನ್ಯೇ ಚ ಕ್ರತುವಿಧ್ವಂಸಕಂ ಹರಂ।
ಯಾಚಾಮ ಸಹಿತಾ ದೇವಂ ತ್ರಿಪುರಂ ಸ ಹನಿಷ್ಯತಿ ॥೧೫॥

ಕೃತಃ ಪುರಾಣಾಂ ವಿಷ್ಕಂಭೋ ಯೋಜನಾನಾಂ ಶತಂ ಶತಂ।
ಯಥಾ ಚೈಕಪ್ರಹಾರೇಣ ಹನ್ಯತೇ ವೈ ಭವೇನ ತು।
ಪುಷ್ಯಯೋಗೇನ ಯುಕ್ತಾನಿ ತಾನಿ ಚೈಕಕ್ಷಣೇನ ತು ॥೧೬॥

ತತೋ ದೇವೈಶ್ಚ ಸಂಪ್ರೋಕ್ತೋ ಯಾಸ್ಯಾಮ ಇತಿ ದುಃಖಿತೈಃ।
ಪಿತಾಮಹಶ್ಚ ತೈಃ ಸಾರ್ಧಂ ಭವಸಂಸದಮಾಗತಃ ॥೧೭॥

ತಂ ಭವಂ ಭೂತಭವ್ಯೇಶಂ ಗಿರಿಶಂ ಶೂಲಪಾಣಿನಂ।
ಪಶ್ಯಂತಿ ಚೋಮಯಾ ಸಾರ್ಧಂ ನಂದಿನಾ ಚ ಮಹಾತ್ಮನಾ ॥೧೮॥

ಅಗ್ನಿವರ್ಣಮಜಂ ದೇವಮಗ್ನಿಕುಂಡನಿಭೇಕ್ಷಣಂ।
ಅಗ್ನ್ಯಾದಿತ್ಯಸಹಸ್ರಾಭಮಗ್ನಿವರ್ಣವಿಭೂಷಿತಂ ॥೧೯॥

---

೧೫. ನೀವೂ, ಮಿಕ್ಕವರೂ, ನಾನೂ ಕೂಡಿ ದಕ್ಷಬ್ರಹ್ಮನ ಯಜ್ಞಭಂಗವನ್ನು ಮಾಡಿದ ಪರಮೇಶ್ವರನನ್ನು ಪ್ರಾರ್ಥಿಸಿದರೆ ತ್ರಿಪುರಾಸುರರನ್ನು ಆತನು ಕೊಲ್ಲುವನು.

೧೬. ಮೂರು ಪಟ್ಟಣಗಳ ವಿಸ್ತಾರವೂ ನೂರು ನೂರು ಯೋಜನವಿರುವುದು. ಪುಷ್ಯನಕ್ಷತ್ರದಲ್ಲಿ ಮಾತ್ರ ಅವು ಒಂದುಗಳಿಗೆಯ ಹೊತ್ತು ಒಟ್ಟುಗೂಡುವುವು. ಆ ಅಲ್ಪಕಾಲದೊಳಗೆ ಈಶ್ವರನು ಒಂದೇ ಬಾಣದ ಏಟಿನಿಂದ ಅವುಗಳನ್ನು ಧ್ವಂಸಮಾಡಬೇಕು.

೧೭. ಬಳಿಕ ದುಃಖಿತರಾದ ದೇವತೆಗಳು ಹೋಗೋಣವೆಂದು ಹೇಳಲು ಬ್ರಹ್ಮನು ಅವರೊಡಗೂಡಿ ಈಶ್ವರನ ಸಭೆಗೆ ಬಂದನು.

೧೮. ಕಳೆದುಹೋದ ಮತ್ತು ಮುಂದೆ ಬರಲಿರುವ ಜಗತ್ತುಗಳಿಗೆಲ್ಲ ಅಧಿಪತಿಯೂ, ಕೈಲಾಸಶಾಯಿಯೂ, ಶೂಲಪಾಣಿಯೂ ಆದ ಪರಮೇಶ್ವರನನ್ನು ಪಾರ್ವತಿಯೊಡನೆಯೂ ಮಹಾತ್ಮನಾದ ನಂದಿಯೊಡನೆಯೂ ಅವರು ನೋಡಿದರು.

೧೯. ಆ ಮಹೇಶ್ವರನು ಅಗ್ನಿವರ್ಣನೂ, ಉತ್ಪತ್ತಿರಹಿತನೂ, ಷಡ್ಗುಣಪರಿಪೂರ್ಣನೂ ಆದವನು. ಅವನ ಕಣ್ಣುಗಳು ಅಗ್ನಿಕುಂಡದಂತೆ ಜ್ವಲಿಸುತ್ತಿದ್ದುವು. ಸಾವಿರಾರು ಸೂರ್ಯರ ಮತ್ತು ಅಗ್ನಿಗಳ ಕಾಂತಿಯಿಂದ ಅವನು ಬೆಳಗುತ್ತಿದ್ದನು; ಅಗ್ನಿಯ ವರ್ಣದಿಂದ ಅಲಂಕೃತನಾಗಿದ್ದನು.

ಚಂದ್ರಾವಯವಲಕ್ಷ್ಮಾಣಂ ಚಂದ್ರಸೌಮ್ಯತರಾನನಂ ।
ಆಗಮ್ಯ ತಮಜಂ ದೇವಮಥ ತಂ ನೀಲಲೋಹಿತಂ ॥೨೦॥

ಸ್ತುವಂತೋ ವರದಂ ಶಂಭುಂ ಗೋಪತಿಂ ಪಾರ್ವತೀಪತಿಂ ॥೨೧॥

ನಮೋ ಭವಾಯ ಶರ್ವಾಯ ರುದ್ರಾಯ ವರದಾಯ ಚ ।
ಪಶೂನಾಂ ಪತಯೇ ನಿತ್ಯಮುಗ್ರಾಯ ಚ ಕಪರ್ದಿನೇ ॥೨೨॥

॥ ದೇವಾ ಊಚುಃ ॥

ಮಹಾದೇವಾಯ ಭೀಮಾಯ ತ್ರ್ಯಂಬಕಾಯ ಚ ಶಾಂತಯೇ ।
ಈಶಾನಾಯ ಭಯಘ್ನಾಯ ನಮಸ್ತ್ವಂಧಕಘಾತಿನೇ ॥೨೩॥

ನೀಲಗ್ರೀವಾಯ ಭೀಮಾಯ ವೇಧಸೇ ವೇಧಸಾ ಸ್ತುತೇ ।
ಕುಮಾರಶತ್ರುನಿಘ್ನಾಯ ಕುಮಾರಜನಕಾಯ ಚ ॥೨೪॥

---

೨೦-೨೧. ಆತನು ಚಂದ್ರನ ಕಳೆಯನ್ನು ತಲೆಯಲ್ಲಿ ಮುಡಿದಿದ್ದನು. ಅವನ ಮುಖವು ಚಂದ್ರನಿಗಿಂತಲೂ ಸೌಮ್ಯವಾಗಿತ್ತು. ವರಪ್ರದನೂ, ಸುಖದಾತನೂ, ವೃಷಭವಾಹನನೂ, ಪಾರ್ವತೀಪತಿಯೂ ಆದ ಆ ಪರಮೇಶ್ವರನನ್ನು ದೇವತೆಗಳು ಸ್ತುತಿಸಿದರು.

೨೨. ದೇವತೆಗಳು ಹೇಳಿದರು.---ಶಾಶ್ವತನೂ, ದುಷ್ಟರನ್ನು ದಂಡಿಸುವವನೂ, ರುದ್ರನೂ, ವರಪ್ರದನೂ, ಸಕಲಜಂತುಗಳ ಅಧಿಪತಿಯೂ, ಉಗ್ರನೂ, ಜಟಾಧಾರಿಯೂ ಆದ ಪರಮೇಶ್ವರನಿಗೆ ಸದಾ ನಮಸ್ಕಾರ.

೨೩. ಮಹಾದೇವನೂ, ಭೀಮನೂ, ತ್ರಿಣೇತ್ರನೂ, ಶಾಂತಿಮಯನೂ, ಈಶ್ವರನೂ, ಭಯನಿವಾರಕನೂ, ಅಂಧಕಾಸುರ ಸಂಹಾರಕನೂ ಆದ ಮಹೇಶ್ವರನಿಗೆ ನಮಸ್ಕಾರ.

೨೪. ನೀಲಕಂಠನೂ, ಭಯಂಕರನೂ, ಸೃಷ್ಟಿಕಾರಣನೂ, ಬಹ್ಮನಿಂದ ಸ್ತುತಿಸಲ್ಪಡುವವನೂ, ಷಣ್ಮುಖನ ಪಿತನೂ ಆದ ಮನ್ಮಥಸಂಹಾರಕನಿಗೆ ನಮಸ್ಕಾರ.

ವಿಲೋಹಿತಾಯ ಧೂಮ್ರಾಯ ವರಾಯ ಕಥನಾಯ ಚ ।
ನಿತ್ಯಂ ನೀಲಶಿಖಂಡಾಯ ಶೂಲಿನೇ ದಿವ್ಯಶಾಯಿನೇ ॥೨೫॥

ಉರಗಾಯ ತ್ರಿನೇತ್ರಾಯ ಹಿರಣ್ಯವಸುರೇತಸೇ ।
ಅಚಿಂತ್ಯಾಯಾಂಬಿಕಾಭರ್ತ್ರೇ ಸರ್ವದೇವಸ್ತುತಾಯ ಚ ॥೨೬॥

ವೃಷಧ್ವಜಾಯ ಚಂಡಾಯ ಜಟಿನೇ ಬ್ರಹ್ಮಚಾರಿಣೇ ।
ತಪ್ಯಮಾನಾಯ ಸಲಿಲೇ ಬಹ್ಮಣ್ಯಾಯ ಜಿತಾಯ ಚ ॥೨೭॥

ವಿಶ್ವಾತ್ಮನೇ ವಿಶ್ವಸೃಜೇ ವಿಶ್ವಮಾವೃತ್ಯ ತಿಷ್ಠತೇ ।
ನಮೋಽಸ್ತು ದಿವ್ಯರೂಪಾಯ ಪ್ರಭವೇ ದಿವ್ಯಶಂಭವೇ ॥೨೮॥

---

೨೫. ರಕ್ತವರ್ಣನೂ, ಧೂಮವರ್ಣನೂ, ಶ್ರೇಷ್ಠನೂ, ಸ್ತೋತ್ರಾರ್ಹನೂ, ನೀಲವರ್ಣದ ಕೇಶಪಾಶದಿಂದ ಅಲಂಕೃತನೂ, ಶೂಲಧಾರಿಯೂ, ದಿವ್ಯಶಾಯಿಯೂ ಆದ ಈಶ್ವರನಿಗೆ ನಮಸ್ಕಾರ.

೨೬. ಸರ್ಪಭೂಷಣನೂ, ತ್ರಿನೇತ್ರನೂ, ಸುವರ್ಣರೇತಸ್ಕನೂ, ಅಚಿಂತ್ಯನೂ, ಪಾರ್ವತೀಪತಿಯೂ, ಸರ್ವದೇವಸ್ತುತ್ಯನೂ ಆದ ಮಹಾದೇವನಿಗೆ ನಮಸ್ಕಾರ.

೨೭. ವೃಷಧ್ವಜನೂ, ಚಂಡರೂಪನೂ, ಜಟಾಧಾರಿಯೂ, ಬಹ್ಮಚರ್ಯ ವ್ರತನಿಷ್ಠನೂ, ಜಲದಲ್ಲಿ ತಪಸ್ಸುಮಾಡುತ್ತಿರುವವನೂ, ಬ್ರಹ್ಮನಿಷ್ಠನೂ, ಅಜೇಯನೂ ಆದ ಪರಮೇಶ್ವರನಿಗೆ ನಮಸ್ಕಾರ.

೨೮. ವಿಶ್ವರೂಪನೂ, ವಿಶ್ವವನ್ನು ಸೃಷ್ಟಿಸಿದವನೂ, ವಿಶ್ವವನ್ನು ವ್ಯಾಪಿಸಿರುವವನೂ, ದಿವ್ಯರೂಪನೂ, ಸರ್ವಶಕ್ತನೂ ಆದ ಶಂಭುವಿಗೆ ನಮಸ್ಕಾರ.

**ಅಭಿಗಮ್ಯಾಯ ಕಾಮ್ಯಾಯ ಸ್ತುತ್ಯಾಯಾರ್ಚ್ಯಾಯ ಸರ್ವದಾ ।**
**ಭಕ್ತಾನುಕಂಪಿನೇ ನಿತ್ಯಂ ದಿಶತೇ ಯನ್ಮನೋಗತಂ ॥೨೯॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ತ್ರಿಪುರದಾಹೇ**
**ಬ್ರಹ್ಮಾದಿಸರ್ವದೇವಕೃತ ಮಹೇಶ್ವರಸ್ತವೋ ನಾಮ**
**ದ್ವಾತ್ರಿಂಶದಧಿಕಶತತಮೋಽಧ್ಯಾಯಃ**

---

೨೯. ದೇವಾ, ಭಕ್ತರು ಎಲ್ಲ ಕಡೆಯಿಂದಲೂ ಬಂದು ರಕ್ಷಣೆಗಾಗಿ ನಿನ್ನನ್ನು ಆಶ್ರಯಿಸುವರು. ಅವರ ಇಷ್ಟಾರ್ಥವನ್ನು ನೀನು ಕರುಣಿಸುವೆ. ಅವರಿಂದ ಸ್ತೋತ್ರ ಮಾಡಿಸಿಕೊಳ್ಳುವೆ. ಯಾವಾಗಲೂ ಅರ್ಚಿಸಲ್ಪಡುವೆ. ಅವರಲ್ಲಿ ದಯೆತೋರಿ ಅವರ ಅಭಿಲಾಷೆಗಳನ್ನು ಪೂರ್ಣಮಾಡುವೆ. ಇಂತಹ ಮಹಿಮಶಾಲಿಯಾದ ನಿನಗೆ ನಮಸ್ಕಾರ.

**ಅಧ್ಯಾಯದ ಸಾರಾಂಶ**

ದೇವತೆಗಳು ದಾನವರ ಬಾಧೆಯನ್ನು ತಾಳಲಾರದೆ ಬ್ರಹ್ಮದೇವನಲ್ಲಿಗೆ ಹೋಗಿ ಅವನ ವರದ ಬಲದಿಂದಲೇ ದೈತ್ಯರು ಅಷ್ಟು ಪ್ರಬಲರಾದರೆಂದೂ, ತಮ್ಮನ್ನು ಸಲಹಬೇಕೆಂದೂ ಬಿನ್ನವಿಸಿದರು.

ತ್ರಿಪುರಾಸುರರು ಸಾಮಾನ್ಯರಲ್ಲವೆಂದೂ, ಮಹಾದೇವನನ್ನುಳಿದು ಮತ್ತಾರಿಗೂ ಅವರನ್ನು ಸಂಹರಿಸುವ ಶಕ್ತಿಯಿಲ್ಲವೆಂದೂ ಬ್ರಹ್ಮನು ಹೇಳಿ, ಅವರೊಡನೆ ಪರಮೇಶ್ವರನ ಬಳಿಗೆ ಹೋಗಿ ಬಗೆಬಗೆಯಾಗಿ ಸ್ತುತಿಸಿದನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ತ್ರಿಪುರದಹನ ಪ್ರಕರಣದಲ್ಲಿ ಬ್ರಹ್ಮಾದಿಗಳು ಮಾಡಿದ ಮಹೇಶ್ವರಸ್ತುತಿಯೆಂಬ ನೂರ ಮೂವತ್ತೆರಡನೆಯ ಅಧ್ಯಾಯವು ಮುಗಿದುದು.

## ಅಥ ತ್ರಯಸ್ತ್ರಿಂಶದಧಿಕಶತತಮೋಽಧ್ಯಾಯಃ

॥ ಸೂತ ಉವಾಚ ॥

ಬ್ರಹ್ಮಾದ್ಯೈಃ ಸ್ತೂಯಮಾನಸ್ತು ದೇವೈರ್ದೇವೋ ಮಹೇಶ್ವರಃ ।
ಪ್ರಜಾಪತಿಮುವಾಚೇದಂ ದೇವಾನಾಂ ಕ್ವ ಭಯಂ ಮಹತ್ ॥ ೧ ॥

ಭೋ ದೇವಾಃ ಸ್ವಾಗತಂ ವೋಽಸ್ತು ಬ್ರೂತ ಯದ್ವೋ ಮನೋಗತಂ ।
ತಾವದೇವ ಪ್ರಯಚ್ಛಾಮಿ ನಾಸ್ತ್ಯದೇಯಂ ಮಯಾ ಹಿ ವಃ ॥ ೨ ॥

ಯುಷ್ಮಾಕಂ ನಿತರಾಂ ಶಂ ವೈ ಕರ್ತಾಹಂ ವಿಬುಧರ್ಷಭಾಃ ।
ಚರಾಮಿ ಮಹದತ್ಯುಗ್ರಂ ಯಚ್ಚಾಪಿ ಪರಮಂ ತಪಃ ॥ ೩ ॥

ವಿದ್ವಿಷ್ಟಾ ವೋ ಮಮ ದ್ವಿಷ್ಟಾಃ ಕಷ್ಟಾಃ ಕಷ್ಟಪರಾಕ್ರಮಾಃ ।
ತೇಷಾಮಭಾವಃ ಸಂಪಾದ್ಯೋ ಯುಷ್ಮಾಕಂ ಭವ ಏವ ಚ ॥ ೪ ॥

---

೧. ಬ್ರಹ್ಮಾದಿ ದೇವತೆಗಳಿಂದ ಸ್ತುತಿಸಲ್ಪಟ್ಟ ಮಹೇಶ್ವರನು “ ದೇವತೆಗಳಿಗೆ ಈ ಮಹಾಭೀತಿಯು ಎಲ್ಲಿಯದು ? ” ಎಂದು ಬ್ರಹ್ಮನನ್ನು ಕೇಳಿದನು.

೨. “ ಎಲೈ ದೇವತೆಗಳಿರಾ, ನಿಮಗೆ ಸುಖಾಗಮನವಾಗಲಿ. ನಿಮ್ಮ ಮನೋರಥವೇನು ಹೇಳಿ. ಅದೆಲ್ಲವನ್ನೂ ನೆರವೇರಿಸುವೆನು. ನಿಮಗೆ ಕೊಡಬಾರದ ವಸ್ತುವಾವುದೂ ಇಲ್ಲವಷ್ಟೆ !

೩. ಓ ವಿಬುಧೋತ್ತಮರೇ, ನಾನು ನಿಮಗೆ ಸಂಪೂರ್ಣವಾಗಿ ಸುಖವನ್ನೇ ಮಾಡತಕ್ಕವನು. ಅದಕ್ಕಾಗಿಯೇ ಅತ್ಯುಗ್ರವಾದ ತಪಸ್ಸನ್ನು ಮಾಡುತ್ತಿರುವೆನು.

೪. ನಿಮ್ಮ ದ್ವೇಷಿಗಳೇ ನನ್ನ ದ್ವೇಷಿಗಳು. ನಿಮಗೆ ಕಷ್ಟಕೊಡತಕ್ಕವರೇ ನನಗೂ ಕಷ್ಟ ಕೊಡುವವರು. ಅವರ ನಾಶವನ್ನೂ ನಿಮ್ಮ ರಕ್ಷಣೆಯನ್ನೂ ಮಾಡುವೆನು.”

ಏವಮುಕ್ತಾಸ್ತು ದೇವೇನ ಪ್ರೇಮ್ಣಾ ಸಬ್ರಹ್ಮಕಾಃ ಸುರಾಃ ।
ರುದ್ರಮೂಚುರ್ಮಹಾಭಾಗಂ ಭಾಗಾರ್ಹಾಃ ಸರ್ವ ಏವ ತೇ ॥ ೫ ॥

ಭಗವಂಸ್ತೈಸ್ತಪಸ್ತಪ್ತಂ ರೌದ್ರಂ ರೌದ್ರಪರಾಕ್ರಮೈಃ ।
ಅಸುರೈರ್ವಧ್ಯಮಾನಾಃ ಸ್ಮ ವಯಂ ತ್ವಾಂ ಶರಣಂ ಗತಾಃ ॥ ೬ ॥

ಮಯೋ ನಾಮ ದಿತೇಃ ಪುತ್ರಸ್ತ್ರಿನೇತ್ರ ಕಲಹಪ್ರಿಯಃ ।
ತ್ರಿಪುರಂ ಯೇನ ತದ್ದುರ್ಗಂ ಕೃತಂ ಪಾಂಡುರಗೋಪುರಂ ॥ ೭ ॥

ತದಾಶ್ರಿತ್ಯ ಪುರಂ ದುರ್ಗಂ ದಾನವಾ ವರನಿರ್ಭಯಾಃ ।
ಬಾಧಂತೇಽಸ್ಮಾನ್ ಮಹಾದೇವ ಪ್ರೇಷ್ಯಮಸ್ವಾಮಿನಂ ಯಥಾ ॥ ೮ ॥

ಉದ್ಯಾನಾನಿ ಚ ಭಗ್ನಾನಿ ನಂದನಾದೀನಿ ಯಾನಿ ಚ ।
ವರಾಶ್ಚಾಪ್ಸರಸಃ ಸರ್ವಾ ರಂಭಾದ್ಯಾ ದನುಜೈರ್ಹೃತಾಃ ॥ ೯ ॥

---

೫. ಪರಮೇಶ್ವರನು ಪ್ರೀತಿಯಿಂದ ಹೀಗೆ ಹೇಳಲು ಬ್ರಹ್ಮಾದಿ ದೇವತೆಗಳು ಮಹಾ ಮಹಿಮಶಾಲಿಯಾದ ರುದ್ರನೊಡನೆ ಹೇಳಿದರು. ಏಕೆಂದರೆ ಅವರೆಲ್ಲರೂ ಕಷ್ಟಸುಖಗಳಲ್ಲಿ ಸಮಾನ ಭಾಗಿಗಳಷ್ಟೆ !

೬. "ಎಲೈ ಪೂಜ್ಯನೇ, ಭಯಂಕರ ಪರಾಕ್ರಮಶಾಲಿಗಳಾದ ಅಸುರರು ತೀವ್ರವಾದ ತಪಸ್ಸನ್ನು ಆಚರಿಸಿದರು. ಅವರು ನಮ್ಮನ್ನು ವಧಿಸುತ್ತಿರುವರು. ನಾವು ನಿನ್ನನ್ನು ಮರೆಹೊಕ್ಕಿರುವೆವು.

೭. ಓ ತ್ರಿಲೋಚನಾ, ಮಯನೆಂಬ ದೈತ್ಯನು ಕಲಹಪ್ರಿಯನು. ಅವನು ತ್ರಿಪುರವೆಂಬ ದುರ್ಗವನ್ನು ರಚಿಸಿರುವನು. ಅದು ಬಿಳಿಯ ಗೋಪುರಗಳಿಂದ ಕಂಗೊಳಿಸುತ್ತಿರುವುದು.

೮. ಬ್ರಹ್ಮನ ವರದಿಂದ ಕೊಬ್ಬಿ ಸ್ವಲ್ಪವೂ ಭಯವಿಲ್ಲದೆ ದಾನವರು ದುರ್ಗಮವಾದ ಆ ತ್ರಿಪುರದಲ್ಲಿ ಸೇರಿಕೊಂಡು ನಮ್ಮನ್ನು ಪೀಡಿಸುತ್ತಿರುವರು. ನಾವೆಲ್ಲರೂ ಒಡೆಯನಿಲ್ಲದ ಸೇವಕರಂತೆ ಆಗಿದ್ದೇವೆ.

೯. ದನುಜರು ನಂದನವೇ ಮೊದಲಾದ ನಮ್ಮ ಉದ್ಯಾನಗಳನ್ನು ಧ್ವಂಸ ಮಾಡಿದರು. ರಂಭೆ ಮುಂತಾದ ಅಪ್ಸರ ಸ್ತ್ರೀಯರನ್ನೆಲ್ಲ ಅಪಹರಿಸಿದರು.

ಇಂದ್ರಸ್ಯ ವಾಹ್ಯಾಶ್ಚ ಗಜಾಃ ಕುಮುದಾಂಜನವಾಮನಾಃ ।
ಐರಾವತಾದ್ಯಾಪಹೃತಾ ದೇವತಾನಾಂ ಮಹೇಶ್ವರ ॥೧೦॥

ಯೇ ಚಂದ್ರರಥಮುಖ್ಯಾಶ್ಚ ಹರಯೋಽಪಹೃತಾಸುರೈಃ ।
ಜಾತಾಶ್ಚ ದಾನವಾನಾಂ ತೇ ರಥಯೋಗ್ಯಾಸ್ತುರಂಗಮಾಃ ॥೧೧॥

ಯೇ ರಥಾ ಯೇ ಗಜಾಶ್ಚೈವ ಯಾಃ ಸ್ತ್ರಿಯೋ ವಸು ಯಚ್ಚ ನಃ ।
ತನ್ನೋ ವ್ಯಪಹೃತಂ ದೈತ್ಯೈಃ ಸಂಶಯೋ ಜೀವಿತೇ ಪುನಃ ॥೧೨॥

ತ್ರಿನೇತ್ರ ಏವಮುಕ್ತಸ್ತು ದೇವೈಃ ಶಕ್ರಪುರೋಗಮೈಃ ।
ಉವಾಚ ದೇವಾನ್ ದೇವೇಶೋ ವರದೋ ವೃಷವಾಹನಃ ॥೧೩॥

ವ್ಯಪಗಚ್ಛತು ವೋ ದೇವಾ ಮಹದ್ದಾನವಜಂ ಭಯಂ ।
ತದಹಂ ತ್ರಿಪುರಂ ಧಕ್ಷ್ಯೇ ಕ್ರಿಯತಾಂ ಯದ್ಬ್ರವೀಮಿ ತತ್ ॥೧೪॥

---

೧೦. ಎಲೈ ಮಹೇಶ್ವರನೇ, ಇಂದ್ರನ ಕುದುರೆಗಳೂ, ಗಜಗಳೂ, ಕುಮುದ, ಅಂಜನ, ವಾಮನ, ಐರಾವತ ಮೊದಲಾದ ದಿಗ್ಗಜಗಳೂ, ಇನ್ನೂ ಉಳಿದ ದೇವತೆಗಳ ವಾಹನಗಳೂ ಅವರಿಂದ ಅಪಹೃತವಾದುವು.

೧೧. ಇಂದ್ರನ ರಥಕ್ಕೆ ಕಟ್ಟುತ್ತಿದ್ದ ದಿವ್ಯಾಶ್ವಗಳನ್ನು ಅಸುರರು ಎಳೆದುಕೊಂಡು ಹೋಗಿ ತಮ್ಮ ತೇರುಗಳಿಗೆ ಕಟ್ಟುತ್ತಿರುವರು.

೧೨. ನಮ್ಮ ರಥಗಳು, ಆನೆಗಳು, ಸ್ತ್ರೀಯರು, ದ್ರವ್ಯ ಇವೆಲ್ಲವನ್ನೂ ದೈತ್ಯರು ಅಪಹರಿಸಿದರು. ಈಗ ನಾವು ಬದುಕುವುದೇ ಸಂದೇಹವಾಗಿದೆ.''

೧೩. ಇಂದ್ರಾದಿ ದೇವತೆಗಳು ಹೀಗೆ ಹೇಳಲು ವರಪ್ರದನೂ, ವೃಷಭವಾಹನನೂ ಆದ ಮಹಾದೇವನು ಅವರಿಗೆ ಉತ್ತರವಿತ್ತನು.

೧೪. ಎಲೈ ದೇವತೆಗಳಿರಾ, ದಾನವರಿಂದ ನಿಮಗೆ ಒದಗಿರುವ ಈ ಮಹಾಭಯವು ಹೋಗಲಿ. ಆ ತ್ರಿಪುರವನ್ನು ನಾನು ದಹಿಸುವೆನು. ನಾನು ಹೇಳುವಂತೆ ನೀವು ಮಾಡಿ.

ಯದೀಚ್ಛಥ ಮಯಾ ದಗ್ಧುಂ ತತ್ಪುರಂ ಸಹ ದಾನವಂ ।
ರಥವನೌಪಯಿಕಂ ಮಹ್ಯಂ ಸಜ್ಜಯಧ್ವಂ ಕಿಮಾಸ್ಯತೇ ॥೧೫॥

ದಿಗ್ವಾಸಸಾ ತಥೋಕ್ತಾಸ್ತೇ ಸಪಿತಾಮಹಕಾಃ ಸುರಾಃ ।
ತಥೇತ್ಯುಕ್ತ್ವಾ ಮಹಾದೇವಂ ಚಕ್ರುಸ್ತೇ ರಥಮುತ್ತಮಂ ॥೧೬॥

ಧರಾಂ ಕೂಬರಕೌ ದ್ವೌ ತು ರುದ್ರಪಾರ್ಶ್ವಚರಾವುಭೌ ।
ಅಧಿಷ್ಠಾನಂ ಶಿರೋ ಮೇರೋರಕ್ಷೋ ಮಂದರ ಏವ ಚ ॥೧೭॥

ಚಕ್ರುಶ್ಚಂದ್ರಶ್ಚ ಸೂರ್ಯಶ್ಚ ಚಕ್ರೇ ಕಾಂಚನರಾಜತೇ ।
ಕೃಷ್ಣಪಕ್ಷಂ ಶುಕ್ಲಪಕ್ಷಂ ಪಕ್ಷದ್ವಯಮಪೀಶ್ವರಾಃ ॥೧೮॥

ರಥನೇಮಿದ್ವಯಂ ಚಕ್ರುರ್ಮೇಘಾ ಬ್ರಹ್ಮಪುರಸ್ಸರಾಃ ।
ಆದಿದ್ವಯಂ ಪಕ್ಷಯಂತ್ರಂ ಯಂತ್ರಮೇತಾಶ್ಚ ದೇವತಾಃ ॥೧೯॥

---

೧೫. ದೈತ್ಯಸಮೇತವಾದ ಆ ಪುರವನ್ನು ನಾನು ಸುಡಬೇಕೆಂದು ನೀವು ಅಪೇಕ್ಷಿಸಿದರೆ ನನ್ನ ಉಪಯೋಗಕ್ಕೆ ತಕ್ಕ ರಥವನ್ನು ಸಿದ್ಧಗೊಳಿಸಿರಿ. ಏಕೆ ತಡಮಾಡುವಿರಿ?

೧೬. ಪರಮೇಶ್ವರನು ಹೀಗೆ ಹೇಳಲು, ಬ್ರಹ್ಮಾದಿ ದೇವತೆಗಳು ಹಾಗೆಯೇ ಆಗಲೆಂದು ಒಪ್ಪಿ ಉತ್ತಮವಾದ ಒಂದು ರಥವನ್ನು ನಿರ್ಮಿಸಿದರು.

೧೭. ಭೂಮಿಯೇ ತೇರಾಯಿತು. ರುದ್ರನ ಸಮೀಪವರ್ತಿಗಳಿಬ್ಬರೂ ನೊಗಗಳಾದರು. ಮೇರುಶಿಖರವು ಕುಳಿತುಕೊಳ್ಳುವ ಪೀಠವಾಯಿತು. ಮಂದರ ಪರ್ವತವೇ ಅಚ್ಚಾಯಿತು.

೧೮. ಚಂದ್ರಸೂರ್ಯರಿಬ್ಬರೂ ಚಿನ್ನದ ಮತ್ತು ಬೆಳ್ಳಿಯ ಗಾಲಿಗಳಾದರು. ಕೃಷ್ಣಪಕ್ಷವೂ, ಶುಕ್ಲಪಕ್ಷವೂ ಎರಡು ಪಕ್ಕಕ್ಕೂ ರೆಕ್ಕೆಯ ಹಲಗೆಗಳಾದುವು.

೧೯. ಬ್ರಹ್ಮಾದಿದೇವತೆಗಳು ಮೇಘಗಳನ್ನು ತೇರಿನ ಗಾಲಿಗಳ ಪಟ್ಟಿಗಳಾಗಿ ಮಾಡಿದರು. ನೊಗಗಳನ್ನೂ, ಪಕ್ಷಯಂತ್ರವನ್ನೂ ಕಂಬಳ ಮತ್ತು ಅಶ್ವತರಗಳೆಂಬ ಸರ್ಪಗಳಿಂದ ಬಿಗಿದು ಕಟ್ಟಿದರು.

ಕಂಬಳಾಶ್ವತರಾಭ್ಯಾಂ ವೈ ನಾಗಾಭ್ಯಾಂ ಸಮವೇಷ್ಟಯೋರ್ ।
ಭಾರ್ಗವಶ್ಚಾಂಗಿರಾಶ್ಚೈವ ಬುಧೋಽಂಗಾರಕ ಏವ ಚ ॥೨೦॥

ಶನೈಶ್ಚರಸ್ತಥಾಚಾತ್ರ ಸರ್ವೇ ತೇ ದೇವಸತ್ತಮಾಃ ।
ವರೂಥಂ ಗಗನಂ ಚಕ್ರುಶ್ಚಾರುರೂಪಂ ರಥಸ್ಯ ತೇ ॥೨೧॥

ಕೃತಂ ದ್ವಿಜಿಹ್ವನಯನಂ ತ್ರಿವೇಣುಂ ಶಾತಕೌಂಭಿಕಂ ।
ಮಣಿಮುಕ್ತೇಂದ್ರನೀಲೈಶ್ಚ ವೃತಂ ಹ್ಯಷ್ಟಮುಖೈ ಸುರೈಃ ॥೨೨॥

ಗಂಗಾ ಸಿಂಧುಃ ಶತದ್ರುಶ್ಚ ಚಂದ್ರಭಾಗಾ ಇರಾವತೀ ।
ವಿತಸ್ತಾ ಚ ವಿಪಾಶಾ ಚ ಯಮುನಾ ಗಂಡಕೀ ತಥಾ ॥೨೩॥

ಸರಸ್ವತೀ ದೇವಿಕಾ ಚ ತಥಾ ಚ ಸರಯೂರಪಿ ।
ಏತಾಃ ಸರಿದ್ವಾರಾಃ ಸರ್ವಾ ವೇಣುಸಂಜ್ಞಾಃ ಕೃತಾ ರಥೇ ॥೨೪॥

ಧಾರ್ತರಾಷ್ಟ್ರಾಶ್ಚ ಯೇ ನಾಗಾ ಯೇ ಚ ಕರ್ಕೋಟಕಾತ್ಮಜಾಃ ।
ವಾಸುಕೇಃ ಕುಲಜಾ ಯೇ ಚ ಯೇ ಚ ರೈವತವಂಶಜಾಃ ॥೨೫॥

---

೨೦-೨೧. ಶುಕ್ರ, ಬೃಹಸ್ಪತಿ, ಬುಧ, ಅಂಗಾರಕ, ಶನಿ ಮೊದಲಾದ ದೇವಶ್ರೇಷ್ಠರೆಲ್ಲರೂ ಆಕಾಶವನ್ನು ಆ ರಥದ ಮುಸುಕನ್ನಾಗಿ ಮಾಡಿ ಅದನ್ನು ಸುಂದರವಾಗಿ ಅಲಂಕರಿಸಿದರು.

೨೨-೨೪. ಇಂದ್ರನೇ ಮೊದಲಾದ ಅಷ್ಟದಿಕ್ಪಾಲಕರಿಂದ ಸರ್ಪಗಳು ಕುದುರೆಯನ್ನು ಅಟ್ಟುವ ಚಾವಟಿಯಾಗಿ ಮಾರ್ಪಟ್ಟುವು. ಅದು ಮೂರು ಬಿದಿರುಕೋಲುಗಳಿಂದ ಆಗಿದ್ದಿತು. ಅದಕ್ಕೆ ಚಿನ್ನದ ಕಟ್ಟುಗಳನ್ನು ಹಾಕಿ ಮುತ್ತು, ಇಂದ್ರನೀಲ ಮುಂತಾದ ರತ್ನಗಳಿಂದ ಅಲಂಕಾರವನ್ನು ಮಾಡಿದ್ದರು. ಗಂಗೆ, ಸಿಂಧು, ಶತದ್ರು, ಚಂದ್ರಭಾಗೆ, ಇರಾವತಿ, ವಿತಸ್ತೆ, ವಿಪಾಶೆ, ಯಮುನೆ, ಗಂಡಕಿ, ಸರಸ್ವತಿ, ದೇವಿಕೆ, ಸರಯು ಈ ನದಿಗಳೆಲ್ಲವೂ ಬಿದಿರಿನ ಗಳುಗಳ ರೂಪದಿಂದ ಆ ರಥದಲ್ಲಿ ಬಂದು ಸೇರಿದುವು.

೨೫-೨೬. ಧೃತರಾಷ್ಟ್ರ, ಕರ್ಕೋಟಕ, ವಾಸುಕಿ, ಮತ್ತು ರೈವತಗಳೆಂಬ ಪ್ರಸಿದ್ಧವಾದ ಸರ್ಪಗಳ ವಂಶದಲ್ಲಿ ಹುಟ್ಟಿದ ನಾಗಗಳು ದರ್ಪದಿಂದ ಕೂಡಿ ವೇಗ

ತೇ ಸರ್ಪಾ ದರ್ಪಸಂಪೂರ್ಣಾಸ್ತ್ವಾಪತೂಣೇಷ್ವನೂನಗಾಃ ।
ಅವತಸ್ಥುಃ ಶರಾ ಭೂತ್ವಾ ನಾನಾಜಾತಿಶುಭಾನನಾಃ ॥೨೬॥

ಸುರಸಾ ಸರಮಾ ಕದ್ರೂರ್ವಿನತಾ ಶುಚಿರೇವ ಚ ।
ತೃಷಾ ಬುಭುಕ್ಷಾ ಸರ್ವೋಗ್ರಾ ಮೃತ್ಯುಃ ಸರ್ವಸಮಸ್ತಥಾ ॥೨೭॥

ಬ್ರಹ್ಮವಧ್ಯಾ ಚ ಗೋವಧ್ಯಾ ಬಾಲವಧ್ಯಾಃ ಪ್ರಜಾಭಯಾಃ ।
ಗದಾ ಭೂತ್ವಾ ಶಕ್ತಯಶ್ಚ ತದಾ ದೇವರಥೇಽಭ್ಯಯುಃ ॥೨೮॥

ಯುಗಂ ಕೃತಯುಗಂ ಚಾತ್ರ ಚಾತುರ್ಹೋತ್ರಪ್ರಯೋಜಕಾಃ ।
ಚತುರ್ವರ್ಣಾಃ ಸಲೀಲಾಶ್ಚ ಬಭೂವುಃ ಸ್ವರ್ಣಕುಂಡಲಾಃ ॥೨೯॥

ತದ್ಯುಗಂ ಯುಗಸಂಕಾಶಂ ರಥಶೀರ್ಷೇ ಪ್ರತಿಷ್ಠಿತಂ ।
ಧೃತರಾಷ್ಟ್ರೇಣ ನಾಗೇನ ಬದ್ಧಂ ಬಲವತಾ ಮಹತ್ ॥೩೦॥

---

ಶಾಲಿಗಳೂ ತೀಕ್ಷ್ಣಾಗ್ರವೂ ಆದ ಬಗೆಬಗೆಯ ಬಾಣಗಳಾಗಿ ಬಿಲ್ಲುಗಳಲ್ಲೂ ಬತ್ತಳಿಕೆಗಳಲ್ಲೂ ನೆಲೆಸಿದುವು.

೨೭-೨೮. ಸರಸೆ, ಸರಮೆ, ಕದ್ರು, ವಿನತೆ, ಶುಚಿ, ಹಸಿವು, ಬಾಯಾರಿಕೆ, ಮೃತ್ಯು, ಬ್ರಹ್ಮಹತ್ಯೆ, ಗೋಹತ್ಯೆ ಬಾಲಹತ್ಯೆ, ಪ್ರಜಾಭೀತಿ ಇವೆಲ್ಲವೂ ಗದೆಗಳೂ, ಶಕ್ತಿಗಳೂ ಆಗಿ ಆ ದೇವರಥದಲ್ಲಿ ಬಂದು ನಿಂತುವು.

೨೯. ಕೃತಯುಗವು ನೊಗದ ಆಕಾರವನ್ನು ತಾಳಿತು. ಚಾತುರ್ಹೋತ್ರ ಪ್ರಯೋಜಕಗಳಾದ ಬ್ರಾಹ್ಮಣಾದಿ ಚತುರ್ವರ್ಣಗಳು ಸುಂದರವಾದ ಸುವರ್ಣ ಕುಂಡಲಗಳಾದುವು.

೩೦. ಕೃತಯುಗವು ನೊಗದ ರೂಪವನ್ನು ತಾಳಿ ಆ ತೇರಿನ ಮುಂಗಡೆ ಯಲ್ಲಿ ಪ್ರಕಾಶಿಸುತ್ತಿತ್ತು. ಧೃತರಾಷ್ಟ್ರವೆಂಬ ಬಲಿಷ್ಠವಾದ ಸರ್ಪದಿಂದ ಅದನ್ನು ಮೂಕಿಮರಕ್ಕೆ ಬಿಗಿದು ಕಟ್ಟಿದ್ದರು.

ಋಗ್ವೇದಃ ಸಾಮವೇದಶ್ಚ ಯಜುರ್ವೇದಸ್ತಥಾಪರಃ ।
ವೇದಾಶ್ಚತ್ವಾರ ಏವೈತೇ ಚತ್ವಾರಸ್ತುರಗಾ ಭವನ್ ॥೩೧॥

ಅನ್ನದಾನಪುರೋಗಾಣಿ ಯಾನಿ ದಾನಾನಿ ಕಾನಿಚಿತ್ ।
ತಾನ್ಯಾಸನ್ವಾಜಿನಾಂ ತೇಷಾಂ ಭೂಷಣಾನಿ ಸಹಸ್ರಶಃ ॥೩೨॥

ಪದ್ಮದ್ವಯಂ ತಕ್ಷಕಶ್ಚ ಕರ್ಕೋಟಕಧನಂಜಯೌ ।
ನಾಗಾ ಬಭೂವುರೇವೈತೇ ಹಯಾನಾಂ ವಾಲಬಂಧನಾಃ ॥೩೩॥

ಓಂಕಾರಪ್ರಭವಾಸ್ತಾ ವಾ ಮಂತ್ರಯಜ್ಞಕ್ರತುಕ್ರಿಯಾಃ ।
ಉಪದ್ರವಾಃ ಪ್ರತೀಕಾರಾಃ ಪಶುಬಂಧೇಷ್ಟಯಸ್ತಥಾ ॥೩೪॥

ಯಜ್ಞೋಪವಾಹಾನ್ಯೇತಾನಿ ತಸ್ಮಿನ್ ಲೋಕರಥೇ ಶುಭೇ ।
ಮಣಿಮುಕ್ತಾಪ್ರವಾಲೈಸ್ತು ಭೂಷಿತಾನಿ ಸಹಸ್ರಶಃ ॥೩೫॥

---

೩೧. ಋಗ್ವೇದ, ಸಾಮವೇದ, ಯಜುರ್ವೇದ ಮತ್ತು ಅಥರ್ವಣವೇದ ಗಳೆಂಬ ನಾಲ್ಕು ವೇದಗಳೂ ನಾಲ್ಕು ಕುದುರೆಗಳಾದುವು.

೩೨. ಅನ್ನದಾನವೇ ಮೊದಲಾದ ದಾನಗಳೆಲ್ಲವೂ ಸಾವಿರಾರು ಒಡವೆಗಳ ರೂಪವನ್ನು ಧರಿಸಿ ಆ ಕುದುರೆಗಳನ್ನು ಅಲಂಕರಿಸಿದ್ದುವು.

೩೩. ಪದ್ಮ, ತಕ್ಷಕ, ಕರ್ಕೋಟಕ, ಧನಂಜಯ ಎಂಬ ಸರ್ಪಗಳು ಕುದುರೆಗಳ ಕೂದಲನ್ನು ಬಿಗಿದುಕಟ್ಟುವ ಹಗ್ಗಗಳಾದುವು.

೩೪-೩೫. ಓಂಕಾರದಿಂದ ಹುಟ್ಟಿದ ಮಂತ್ರಗಳು, ಯಜ್ಞಗಳು, ಕ್ರತು ಕರ್ಮಗಳು, ಉಪದ್ರವಗಳು, ಪ್ರತೀಕಾರಗಳು, ಪಶುಬಂಧಗಳು, ಇಷ್ಟಿಗಳು ಈ ಯಜ್ಞಸಾಧನಗಳೆಲ್ಲವೂ ಆ ಲೋಕಮಯವಾದ ಶುಭರಥದಲ್ಲಿ ಮುತ್ತು, ರತ್ನ, ಹವಳ ಇವುಗಳ ಒಡವೆಯ ರೂಪದಿಂದ ಸಾವಿರಗಟ್ಟಲೆಯಾಗಿ ಪ್ರಕಾಶಿಸಿದುವು.

ಪ್ರತೋದೋಂಕಾರ ಏವಾಸೀತ್ತದಗ್ರೇ ಚ ವಷಟ್ಕೃತಂ ।
ಸಿನೀವಾಲೀ ಕುಹೂ ರಾಕಾ ತಥಾ ಚಾನುಮತೀ ಶುಭಾ ॥೩೬॥

ಯೋಕ್ತ್ರಾಣ್ಯಾಸಂಸ್ತುರಂಗಾಣಾಮುಪಸರ್ಪಣವಿಗ್ರಹಾಃ ॥೩೭॥

ಕೃಷ್ಣಾನ್ಯಥ ಚ ಪೀತಾನಿ ಶ್ವೇತಮಾಂಜಿಷ್ಠಕಾನಿ ಚ ।
ಅವದಾತಾಃ ಪತಾಕಾಸ್ತು ಬಭೂವುಃ ಪವನೇರಿತಾಃ ॥೩೮॥

ಋತುಭಿಶ್ಚ ಕೃತಃ ಷಡ್ಭಿರ್ಧನುಸ್ಸಂವತ್ಸರೋಽಭವತ್ ।
ಅಜರಾ ಜ್ಯಾಭವಚ್ಚಾಪಿ ಸಾಂಬಿಕಾ ಧನುಷೋ ದೃಢಾ ॥೩೯॥

ಕಾಲೋ ಹಿ ಭಗವಾನ್ ರುದ್ರಸ್ತಂ ಚ ಸಂವತ್ಸರಂ ವಿದುಃ ।
ತಸ್ಮಾದುಮಾ ಕಾಲರಾತ್ರಿರ್ಧನುಷೋ ಜ್ಯಾಽಜರಾಭವತ್ ॥೪೦॥

ಸಗರ್ಭಂ ತ್ರಿಪುರಂ ಯೇನ ದಗ್ಧವಾನ್ ಸ ತ್ರಿಲೋಚನಃ ।
ಸ ಇಷುರ್ವಿಷ್ಣುಸೋಮಾಗ್ನಿತ್ರಿದೈವತಮಯೋಽಭವತ್ ॥೪೧॥

---

೩೬-೩೭. ಓಂಕಾರವು ಚಾವಟಿಯಲ್ಲೂ, ವಷಟ್ಕಾರವು ಅದರ ತುದಿಯಲ್ಲೂ ನೆಲೆಸಿದುವು. ಸಿನೀವಾಲಿ, ಕುಹೂ, ರಾಕೆ ಮತ್ತು ಅನುಮತಿಗಳು ಕುದುರೆಗಳ ಹಗ್ಗವಾದುವು. ಅವು ಕುದುರೆಗಳು ಓಡಿಹೋಗದಂತೆ ತಡೆಯಲು ಶಕ್ತಿಯುಳ್ಳವಾಗಿದ್ದುವು.

೩೮. ಕಪ್ಪು, ಹಳದಿ, ಮಾಸಲುಕೆಂಪು, ಮತ್ತು ಬಿಳಿಯ ಬಣ್ಣದ ಬಾವುಟಗಳು ಗಾಳಿಗೆ ಹಾರಾಡುತ್ತಿದ್ದುವು.

೩೯. ಆರು ಋತುಗಳಿಂದ ಕೂಡಿತ ಸಂವತ್ಸರವು ಬಿಲ್ಲಾಯಿತು. ಮುಪ್ಪಿನ ಸಂಬಂಧವೇ ಇಲ್ಲದ ಆ ಪಾರ್ವತೀದೇವಿಯೇ ಬಲವಾದ ಹೆದೆಯಾದಳು.

೪೦. ಭಗವಂತನಾದ ರುದ್ರನೇ ಕಾಲಸ್ವರೂಪನು. ಅವನನ್ನು ಸಂವತ್ಸರವೆಂದೂ ಹೇಳುತ್ತಾರೆ. ಆ ಮಹಾಕಾಲನು ಹೀಗೆ ಬಿಲ್ಲಿನ ರೂಪವನ್ನು ತಳೆದುದರಿಂದ ಕಾಲರಾತ್ರಿಯೂ, ಜರಾರಹಿತಳೂ ಆದ ಪಾರ್ವತಿಯು ಅದರ ಹೆದೆಯಾದಳು.

೪೧. ಆ ಧನುಸ್ಸಿನ ಸಹಾಯದಿಂದ ಪರಮೇಶ್ವರನು ತ್ರಿಪುರವನ್ನು ಅವುಗಳಲ್ಲಿ ಅಡಗಿದ್ದ ಸಕಲ ಜಂತುಗಳೊಡನೆ ಸುಟ್ಟನು. ಅದಕ್ಕೆ ಹೂಡಿದ ಬಾಣವು ವಿಷ್ಣು, ಸೋಮ, ಅಗ್ನಿಗಳೆಂಬ ಮೂವರು ದೇವತೆಗಳ ಸ್ವರೂಪದಿಂದಿತ್ತು.

ಆನನಂ ಹ್ಯಗ್ನಿರಭವಚ್ಛಲ್ಯಂ ಸೋಮಸ್ತಮೋನುದಃ ।
ತೇಜಸಃ ಸಮವಾಯೋಽಥ ಚೇಷೋಸ್ತೇಜೋ ರಥಾಂಗಧೃತ್ ||೪೨||

ತಸ್ಮಿಂಶ್ಚ ವೀರ್ಯವೃಧ್ಯರ್ಥಂ ವಾಸುಕಿರ್ನಾಗಪಾರ್ಥಿವಃ ।
ತೇಜಸ್ಸಂವಸನಾರ್ಥಂ ವೈ ಮುಮೋಚಾತಿವಿಷೋ ವಿಷಂ ||೪೩||

ಕೃತ್ವಾ ದೇವಾ ರಥಂ ಚಾಪಿ ದಿವ್ಯಂ ದಿವ್ಯಪ್ರಭಾವತಃ ।
ಲೋಕಾಧಿಪತಿಮಭ್ಯೇತ್ಯ ಇದಂ ವಚನಮಬ್ರುರ್ವ ||೪೪||

ಸಂಸ್ಕೃತೋಽಯಂ ರಥೋಽಸ್ಮಾಭಿಸ್ತವ ದಾನವಶತ್ರುಜಿತ್ ।
ಇದಮಾಪತ್ಪರಿತ್ರಾಣಂ ದೇವಾ ಸೇಂದ್ರಪುರೋಗರ್ಮಾ ||೪೫||

ತಂ ಮೇರುಶಿಖರಾಕಾರಂ ತ್ರೈಲೋಕ್ಯರಥಮುತ್ತಮಂ ।
ಪ್ರಶಸ್ಯ ದೇವಾ ಸಾಧ್ವಿತಿ ರಥಂ ಪಶ್ಯತಿ ಶಂಕರಃ ||೪೬||

---

೪೨. ಅಗ್ನಿಯು ಬಾಣದ ಮುಖವೂ, ಅಂಧಕಾರನಿವರ್ತಕನಾದ ಸೋಮನು ಮೊನೆಯೂ ಆದರು. ಸಕಲ ತೇಜೋಮಯನಾದ ವಿಷ್ಣುವು ಅದರ ತೇಜಸ್ಸಾಗಿ ನಿಂತನು.

೪೩. ವೀರ್ಯವು ಹೆಚ್ಚಲೆಂದೂ, ತೇಜಸ್ಸು ಸ್ಥಿರವಾಗಿರಲೆಂದೂ ನಾಗರಾಜನಾದ ವಾಸುಕಿಯು ಆ ಬಾಣದಲ್ಲಿ ತೀಕ್ಷ್ಣವಾದ ವಿಷವನ್ನು ಬಿಟ್ಟನು.

೪೪. ದೇವತೆಗಳು ದಿವ್ಯ ಪ್ರಭಾವದಿಂದ ಇಂತಹ ಅದ್ಭುತವಾದ ರಥವನ್ನು ನಿರ್ಮಿಸಿ, ಲೋಕೇಶ್ವರನಾದ ರುದ್ರನ ಬಳಿಗೆ ಹೋಗಿ ಹೀಗೆಂದರು.

೪೫. "ಶತ್ರುಗಳಾದ ದೈತ್ಯರನ್ನು ಜಯಿಸಬಲ್ಲ ರಥವನ್ನು ನಾವು ರಚಿಸಿದ್ದೇವೆ. ಇಂದ್ರಾದಿದೇವತೆಗಳನ್ನು ಕಷ್ಟದಿಂದ ಪಾರುಮಾಡಲು ಇದು ಸಹಕಾರಿಯಾಗಿದೆ.

೪೬. ಶಂಕರನು ಸರಿಯೆಂದು ದೇವತೆಗಳನ್ನು ಶ್ಲಾಘಿಸಿ, ಮೇರುಶಿಖರಾಕಾರವೂ, ತ್ರೈಲೋಕ್ಯಮಯವೂ ಆದ ಆ ರಥವನ್ನು ನೋಡಿದನು.

ಮುಹುರ್ದೃಷ್ಟ್ವಾ ರಥಂ ಸಾಧು ಸಾಧ್ವಿತ್ಯುಕ್ತ್ವಾ ಮುಹುರ್ಮುಹುಃ ।
ಉವಾಚ ಸೇಂದ್ರಾನಮರಾನಮರಾಧಿಪತಿಃ ಸ್ವಯಂ ॥೪೭॥

ಯಾದೃಶೋಽಯಂ ರಥಃ ಕ್ಲೃಪ್ತೋ ಯುಷ್ಮಾಭಿರ್ಮಮ ಸತ್ತಮಾಃ ।
ಈದೃಶೋ ರಥಸಂಪತ್ತ್ಯಾ ಯಂತಾ ಶೀಘ್ರಂ ವಿಧೀಯತಾಂ ॥೪೮॥

ಇತ್ಯುಕ್ತಾ ದೇವದೇವೇನ ದೇವಾ ವಿದ್ಧಾ ಇವೇಷುಭಿಃ ।
ಅವಾಪುರ್ಮಹತೀಂ ಚಿಂತಾಂ ಕಥಂ ಕಾರ್ಯಮಿತಿ ಬ್ರುವನ್ ॥೪೯॥

ಮಹಾದೇವಸ್ಯ ದೇವೋಽನ್ಯಃ ಕೋ ನಾಮ ಸದೃಶೋ ಭವೇತ್ ।
ಮುಕ್ತ್ವಾ ಚಕ್ರಾಯುಧಂ ದೇವಂ ಸೋಽಪ್ಯಸ್ಯೇಷುಂ ಸಮಾಶ್ರಿತಃ ॥೫೦॥

ಧುರಿ ಯುಕ್ತಾ ಇವೋಕ್ಷಾಣೋ ಘಟಂತ ಇವ ಪರ್ವತೈಃ ।
ನಿಶ್ವಸಂತಃ ಸುರಾಃ ಸರ್ವೇ ಕಥಮೇತದಿತಿ ಬ್ರುವನ್ ॥೫೧॥

---

೪೭. ತೇರನ್ನು ಮತ್ತೆಮತ್ತೆ ನೋಡಿ, ಸರಿಸರಿಯೆಂದು ಅಡಿಗಡಿಗೆ ಹೊಗಳಿ ಮಹಾದೇವನು ಇಂದ್ರಾದಿದೇವತೆಗಳಿಗೆ ತಾನೇ ಹೀಗೆ ಹೇಳಿದನು.

೪೮. "ಓ ದೇವಶ್ರೇಷ್ಠರಿರಾ, ನನಗಾಗಿ ನೀವು ಈ ದಿವ್ಯರಥವನ್ನೇನೋ ನಿರ್ಮಿಸಿದಿರಿ. ಇನ್ನು ಇದಕ್ಕೆ ಅನುರೂಪನಾದ ಸಾರಥಿಯೊಬ್ಬನನ್ನು ಬೇಗನೆ ಏರ್ಪಡಿಸಿ."

೪೯. ಈಶ್ವರನು ಹೀಗೆ ಹೇಳಲು ದೇವತೆಗಳಿಗೆ ಬಾಣದಿಂದ ಚುಚ್ಚಿದಂತಾಯಿತು. ಸಾರಥಿಯನ್ನು ಗೊತ್ತುಮಾಡುವುದು ಹೇಗೆಂದು ಅವರು ಬಹಳ ಚಿಂತೆಗೊಳಗಾದರು.

೫೦. "ಚಕ್ರಧಾರಿಯಾದ ವಿಷ್ಣುವನ್ನು ಬಿಟ್ಟರೆ ಮಹಾದೇವನಿಗೆ ತಕ್ಕ ಸಾರಥಿಯಾಗಬಲ್ಲ ದೇವನು ಮತ್ತಾರಿರುವನು ? ಅವನೂ ಸಹ ಈತನ ಬಾಣದಲ್ಲೇ ನೆಲೆಸಿರುವನು."

೫೧. ಪರ್ವತವು ಅಡ್ಡಲಾಗಿ ಸಿಕ್ಕಿದಾಗ ಗಾಡಿಯನ್ನೆಳೆಯಲಾರದೆ ನಿಟ್ಟುಸಿರನ್ನು ಬಿಡುವ ಎತ್ತುಗಳಂತೆ ದೇವತೆಗಳೆಲ್ಲರೂ ಪೇಚಾಡುತ್ತಾ "ಇದರಿಂದ ಪಾರಾಗುವುದು ಹೇಗೆ" ಎಂದು ತಮ್ಮಲ್ಲೇ ಹೇಳಿಕೊಂಡರು.

ದೇವ್ಯೋಽದೃಶ್ಯತ ದೇವಾಂಸ್ತು ಲೋಕನಾಥಸ್ಯ ಧೂರ್ಗತಾನ್ ।
ಅಹಂ ಸಾರಥಿರಿತ್ಯುಕ್ತ್ವಾ ಜಗ್ರಾಹಾಶ್ವಾಂಸ್ತತೋಽಗ್ರಜಃ ॥೩೨॥

ತತೋ ದೇವೈಃ ಸಗಂಧರ್ವೈಃ ಸಿಂಹನಾದೋ ಮಹಾನ್ ಕೃತಃ ।
ಪ್ರತೋದಹಸ್ತಂ ಸಂಪ್ರೇಕ್ಷ್ಯ ಬ್ರಹ್ಮಾಣಂ ಸೂತತಾಂ ಗತಂ ॥೩೩॥

ಭಗವಾನಪಿ ವಿಶ್ವೇಶೋ ರಥಸ್ಥೇ ವೈ ಪಿತಾಮಹೇ ।
ಸದೃಶಃ ಸೂತ ಇತ್ಯುಕ್ತ್ವಾ ಚಾರುರೋಹ ರಥಂ ಹರಃ ॥೩೪॥

ಆರೋಹತಿ ರಥಂ ದೇವೇ ಹ್ಯಶ್ವಾ ಹರಭರಾತುರಾಃ ।
ಜಾನುಭಿಃ ಪತಿತಾ ಭೂಮೌ ರಜೋಗ್ರಾಸಶ್ಚ ಗ್ರಾಸಿತಃ ॥೩೫॥

ದೇವೋ ದೃಷ್ಟ್ವಾಥ ವೇದಾಂಸ್ತಾನಭೀರುಗ್ರಹಯಾನ್ ಭಯಾತ್ ।
ಉಜ್ಜಹಾರ ಪಿತ್ಯನಾರ್ತಾನ್ ಸುಪುತ್ರ ಇವ ದುಃಖಿತಾನ್ ॥೩೬॥

---

೩೨. ಲೋಕರಕ್ಷಕನಾದ ಮಹಾದೇವನ ಅಪ್ಪಣೆಯ ಹೊರೆಯನ್ನು ಹೊತ್ತ ದೇವತೆಗಳನ್ನು ನೋಡಿ, ಎಲ್ಲರ ಹಿರಿಯನಾದ ಬ್ರಹ್ಮನು "ನಾನೇ ಸಾರಥಿಯಾಗುವೆನು" ಎಂದು ಹೇಳಿ ಕುದುರೆಗಳ ಕಡಿವಾಣವನ್ನು ಹಿಡಿದುಕೊಂಡನು.

೩೩. ಬ್ರಹ್ಮನು ಕೈಯಲ್ಲಿ ಚಾವಟಿಯನ್ನು ಹಿಡಿದು ಸಾರಥಿಯಾದುದನ್ನು ಕಂಡು, ದೇವತೆಗಳೂ ಗಂಧರ್ವರೂ ಗಟ್ಟಿಯಾಗಿ ಸಿಂಹನಾದಮಾಡಿದರು.

೩೪. ಭಗವಂತನಾದ ವಿಶ್ವೇಶ್ವರನೂ ಸಹ ಬ್ರಹ್ಮನು ತೇರಿನಲ್ಲಿ ಕುಳಿತಾಗ "ತಕ್ಕ ಸಾರಥಿ ಸಿಕ್ಕಿದನು" ಎನ್ನುತ್ತ ರಥವನ್ನೇರಿದನು.

೩೫. ಈಶ್ವರನು ತೇರನ್ನು ಹತ್ತಲು ಅವನ ಭಾರದಿಂದ ಬಳಲಿ, ಕುದುರೆಗಳು ಮಂಡಿಯೂರಿಕೊಂಡು ನೆಲದಲ್ಲಿ ಬಿದ್ದು ಧೂಳನ್ನು ಕುಡಿದುವು.

೩೬. ಕುದರೆಗಳ ರೂಪದಲ್ಲಿದ್ದ ವೇದಗಳು ಭಯದಿಂದ ಗಾಬರಿಗೊಂಡದ್ದನ್ನು ಕಂಡು, ಮಹಾದೇವನು ಕಷ್ಟದಿಂದ ದುಃಖಿಸುತ್ತಿರುವ ಪಿತೃಗಳನ್ನು ಸತ್ಪುತ್ರನು ಹಿಡಿದು ಎತ್ತುವಂತೆ ಎತ್ತಿದನು.

ತತಃ ಸಿಂಹರವೋ ಭೂಯೋ ಬಭೂವ ರಣಭೈರವಃ ।
ಜಯಶಬ್ದಶ್ಚ ದೇವಾನಾಂ ಸಂಬಭೂವಾರ್ಣವೋಪಮಃ ॥೫೭॥

ತದೋಂಕಾರಮಯಂ ಗೃಹ್ಯ ಪ್ರತೋದಂ ವರದಂ ಪ್ರಭುಃ ।
ಸ್ವಯಂಭೂಃ ಪ್ರಯಯೌ ವಾಹಾನನುಮಂತ್ರ್ಯ ಯಥಾಜವಂ ॥೫೮॥

ಗ್ರಸಮಾನಾ ಇವಾಕಾಶಂ ಮುಷ್ಣಂತ ಇವ ಮೇದಿನೀಂ ।
ಮುಖೇಭ್ಯಃ ಸಸೃಜುಃ ಶ್ವಾಸಾನುಚ್ಛ್ವಸಂತ ಇವೋರಗಾಃ ॥೫೯॥

ಸ್ವಯಂಭುವಾ ಚೋದ್ಯಮಾನಾಶ್ಚೋದಿತೇನ ಕಪರ್ದಿನಾ ।
ವ್ರಜಂತಿ ತೇಽಶ್ವಾ ಜವನಾಃ ಕ್ಷಯಕಾಲ ಇವಾನಿಲಾಃ ॥೬೦॥

ಧ್ವಜೋಚ್ಛ್ರಯವಿನಿರ್ಮಾಣೇ ಧ್ವಜಯಷ್ಟಿಮನುತ್ತಮಾಂ ।
ಆಕ್ರಮ್ಯ ನಂದೀ ವೃಷಭಸ್ತಸ್ಥೌ ತಸ್ಮಿಞ್ಶಿವೇಚ್ಛಯಾ ॥೬೧॥

---

೫೭. ಬಳಿಕ ರಣಭಯಂಕರವಾದ ಸಿಂಹನಾದವು ಮತ್ತೆ ಆಯಿತು. ದೇವತೆಗಳ ಜಯಕಾರವು ಸಮುದ್ರಘೋಷಕ್ಕೆ ಸದೃಶವಾಯಿತು.

೫೮. ವರಪ್ರದನಾದ ಬ್ರಹ್ಮದೇವನು ಓಂಕಾರ ರೂಪವಾದ ಆ ಚಾವಟಿಯನ್ನು ಕೈಯಲ್ಲಿ ಹಿಡಿದುಕೊಂಡು ಕುದುರೆಗಳು ವೇಗವಾಗಿ ಹೋದಂತೆಲ್ಲ ಅವುಗಳಿಗೆ ಉತ್ತೇಜನವನ್ನು ಕೊಡುತ್ತಿದ್ದನು.

೫೯. ಆಕಾಶವನ್ನು ನುಂಗುವಂತೆಯೂ, ಭೂಮಿಯನ್ನು ಅಪಹರಿಸುವಂತೆಯೂ ಕುದುರೆಗಳು ಉಸಿರ್ಗರೆವ ಹಾವುಗಳಂತೆ ಬಾಯಿಯಿಂದ ನಿಟ್ಟುಸಿರು ಬಿಡುತ್ತಿದ್ದುವು.

೬೦. ಈಶ್ವರನು ಹೇಳಿದಂತೆ ಬ್ರಹ್ಮನು ಕುದುರೆಗಳನ್ನು ಅಟ್ಟಲು, ಅವು ಮಹಾವೇಗಶಾಲಿಗಳಾಗಿ ಪ್ರಳಯಕಾಲದ ವಾಯುವಿನಂತೆ ನಡೆದುವು.

೬೧. ಶಂಕರನ ಅಪ್ಪಣೆಯಂತೆ ನಂದಿಕೇಶ್ವರನು ದೊಡ್ಡ ಬಾವುಟವನ್ನು ಹಾರಿಸುವುದಕ್ಕಾಗಿ ಏರ್ಪಡಿಸಿದ್ದ ಉತ್ತಮವಾದ ಧ್ವಜಸ್ತಂಭವನ್ನು ಹತ್ತಿ ಕುಳಿತನು.

ಭಾರ್ಗವಾಂಗಿರಸೌ ದೇವೌ ದಂಡಹಸ್ತೌ ರವಿಪ್ರಭೌ ।
ರಥಚಕ್ರೇ ತು ರಕ್ಷೇತೇ ರುದ್ರಸ್ಯ ಪ್ರಿಯಕಾಂಕ್ಷಿಣೌ ॥೬೨॥

ಶೇಷಶ್ಚ ಭಗವಾನ್ನಾಗೋಽನಂತೋಽನಂತಕರೋಽರಿಣಾಂ ।
ಶರಹಸ್ತೋ ರಥಂ ಪಾತಿ ಶಯನಂ ಬ್ರಹ್ಮಣಸ್ತದಾ ॥೬೩॥

ಯಮಸ್ತೂರ್ಣಂ ಸಮಾಸ್ಥಾಯ ಮಹಿಷಂ ಚಾತಿದಾರುಣಂ ।
ದ್ರವಿಣಾಧಿಪತಿರ್ವ್ಯಾನಂ ಸುರಾಣಾಮಧಿಪೋ ದ್ವಿಪಂ ॥೬೪॥

ಮಯೂರಂ ಶತಚಂದ್ರಂ ಚ ಕೂಜಂತಂ ಕಿನ್ನರಂ ಯಥಾ ।
ಸ್ಕಂದೋ ಹ್ಯಾರುಹ್ಯ ವರದೋ ಜುಗೋಪ ಸ್ವರಥಂ ಪಿತುಃ ॥೬೫॥

ನಂದೀಶ್ವರಶ್ಚ ಭಗವಾಞ್ಛೂಲಮಾದಾಯ ದೀಪ್ತಿಮಾನ್ ।
ಪೃಷ್ಠತಶ್ಚಾಪಿ ಪಾರ್ಶ್ವಾಭ್ಯಾಂ ಲೋಕಸ್ಯ ಕ್ಷಯಕೃದ್ಯಥಾ ॥೬೬॥

---

೬೨. ಸೂರ್ಯನಂತೆ ತೇಜೋಯುಕ್ತರಾದ ಶುಕ್ರಬೃಹಸ್ಪತಿಗಳು ಮಹೇಶ್ವರನಿಗೆ ಪ್ರಿಯವಾಗಲೆಂದು ದಂಡಹಸ್ತರಾಗಿ ರಥದ ಚಕ್ರದಲ್ಲಿ ಕುಳಿತು ರಕ್ಷಿಸುತ್ತಿದ್ದರು.

೬೩. ಮಹಾವಿಷ್ಣುವಿಗೆ ಶಯನವೆನಿಸಿದ ಪೂಜ್ಯನಾದ ಆದಿಶೇಷನು ಲೆಕ್ಕವಿಲ್ಲದಷ್ಟು ಕೈಗಳನ್ನು ತಾಳಿ ಬಾಣಗಳನ್ನು ಹಿಡಿದು ಶತ್ರುಗಳಿಂದ ಅಪಾಯವಾಗದಂತೆ ರಥವನ್ನು ರಕ್ಷಿಸುತ್ತಿದ್ದನು.

೬೪-೬೫. ಯಮನು ತಡಮಾಡದೆ ಉಗ್ರವಾದ ಮಹಿಷವನ್ನೂ, ಕುಬೇರನು ಪಲ್ಲಕ್ಕಿಯನ್ನೂ, ದೇವೇಂದ್ರನು ಐರಾವತವನ್ನೂ ಏರಿಬಂದರು. ಹೀಗೆಯೇ ವರಪ್ರದನಾದ ಕುಮಾರಸ್ವಾಮಿಯು ಕಿನ್ನರನಂತೆ ಕೂಗುತ್ತ ನೂರಾರು ಗರಿಗಳಿಂದ ಮೆರೆವ ನವಿಲನ್ನೇರಿ ಕುಳಿತು ತನ್ನ ತಂದೆಯ ರಥಕ್ಕೆ ಕಾವಲಾಗಿದ್ದನು.

೬೬. ಭಗವಂತನಾದ ನಂದಿಕೇಶ್ವರನು ತೇಜೋಯುಕ್ತನಾಗಿ ಶೂಲವನ್ನು ಕೈಯಲ್ಲಿ ಹಿಡಿದುಕೊಂಡು, ಪ್ರಳಯಕಾಲದ ಯಮನಂತೆ ಭಯಂಕರನಾಗಿ ಪಕ್ಕಗಳಲ್ಲಿಯೂ ಹಿಂದುಗಡೆಯಲ್ಲಿಯೂ ತೇರನ್ನು ಕಾಯುತ್ತಿದ್ದನು.

ಪ್ರಮಥಾಶ್ಚಾಗ್ನಿವರ್ಣಾಭಾಃ ಸಾಗ್ನಿಜ್ವಾಲಾ ಇವಾಚಲಾಃ ।
ಅನುಜಗ್ಮೂ ರಥಂ ಶಾರ್ವಂ ನಕ್ರಾ ಇವ ಮಹಾರ್ಣವಂ ॥೬೭॥

ಭೃಗುರ್ಭರದ್ವಾಜವಸಿಷ್ಠಗೌತಮಾಃ
ಕ್ರತುಃ ಪುಲಸ್ತ್ಯಃ ಪುಲಹಸ್ತಪೋಧನಾಃ ।
ಮರೀಚಿರತ್ರಿರ್ಭಗವಾನಥಾಂಗಿರಾಃ ।
ಪರಾಶರಾಗಸ್ತ್ಯಮುಖಾ ಮಹರ್ಷಯಃ ॥೬೮॥

ಹರಮಜಿತಮಜಂ ಪ್ರತುಷ್ಟುವು ।
ರ್ವಚನವಿಶೇಷೈರ್ವಿಚಿತ್ರ ಭೂಷಣೈಃ ।
ರಥಸ್ತ್ರಿಪುರೇ ಸಕಾಂಚನಾಚಲೋ ।
ವ್ರಜತಿ ಸಪಕ್ಷ ಇವಾದ್ರಿರಂಬರೇ ॥೬೯॥

ಕರಿಗಿರಿರವಿಮೇಘಸನ್ನಿಭಾಃ ।
ಸಜಲಪಯೋದನಿನಾದನಾದಿನಃ ।
ಪ್ರಮಥಗಣಾಃ ಪರಿವಾರ್ಯ ದೇವಗುಪ್ತಂ ।
ರಥಮಭಿತಃ ಪ್ರಯಯುಃ ಸ್ವದರ್ಪಯುಕ್ತಾಃ ॥೭೦॥

---

೯೭. ಕಾಳ್ಗಿಚ್ಚಿನ ಉರಿಯೆದ್ದ ಬೆಟ್ಟಗಳಂತಿರುವ ಪ್ರಮಥಗಣಗಳು ಅಗ್ನಿಯಂತೆ ಕಾಂತಿಯುಕ್ತರಾಗಿ, ಸಾಗರವನ್ನು ಮೊಸಳೆಗಳು ಅನುಸರಿಸುವಹಾಗೆ ಈಶ್ವರನ ರಥದ ಹಿಂದೆ ನಡೆದರು.

೬೮-೬೯. ಭೃಗು, ಭರದ್ವಾಜ, ವಸಿಷ್ಠ, ಗೌತಮ, ಕ್ರತು, ಪುಲಸ್ತ್ಯ, ಪುಲಹ, ಮರೀಚಿ, ಅತ್ರಿ, ಪೂಜ್ಯನಾದ ಅಂಗಿರಸ, ಪರಾಶರ ಮತ್ತು ಅಗಸ್ತ್ಯ ಮುಂತಾದ ಮಹರ್ಷಿಗಳು ವಿವಿಧವಾದ ಸ್ತುತಿವಚನಗಳಿಂದ ಉತ್ಪತ್ತಿರಹಿತನೂ ಅಜೇಯನೂ ಆದ ಈಶ್ವರನನ್ನು ಸ್ತೋತ್ರಮಾಡಿದರು. ವಿಚಿತ್ರಭೂಷಣಗಳಿಂದ ಅಲಂಕೃತವಾಗಿ ಮೇರುಪರ್ವತ ಸದೃಶವಾದ ಆ ರಥವು ರೆಕ್ಕೆಗಳುಳ್ಳ ಬೆಟ್ಟದಂತೆ ಆಕಾಶದಲ್ಲಿ ಹೋಗುತ್ತಿದ್ದಿತು.

೭೦. ಆನೆ, ಬೆಟ್ಟ, ಸೂರ್ಯ ಮತ್ತು ಮೇಘಗಳಿಗೆ ಸಮಾನರಾದ ಪ್ರಮಥಗಣಗಳು ಮಳೆಯ ಮೋಡದಂತೆ ಅಬ್ಬರಿಸುತ್ತ ಈಶ್ವರನಿಂದ ರಕ್ಷಿತವಾದ ಆ ದಿವ್ಯ ರಥದ ಸುತ್ತಲೂ ದರ್ಪದಿಂದ ನಡೆದರು.

ಮಕರತಿ ಮಿತಿಮಿಂಗಿಲಾವೃತಃ ।
  ಪ್ರಲಯ ಇವಾತಿಸಮುದ್ಧತೋಽರ್ಣವಃ ।
ವ್ರಜತಿ ರಥವರೋಽತಿಭಾಸ್ವರೋ ।
  ಹ್ಯಶನಿನಿಪಾತಪಯೋದನಿಃಸ್ವನಃ ॥೭೨॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ತ್ರಿಪುರದಾಹೇ ರಥಪ್ರಯಾಣಂ ನಾಮ ತ್ರಯಸ್ತ್ರಿಂಶದಧಿಕಶತತಮೋಽಧ್ಯಾಯಃ

---

೭೧. ಪ್ರಮಥಗಣಗಳು ಸಿಡಿಲು ಗುಡುಗುಗಳಂತೆ ಅಬ್ಬರಿಸುತ್ತಿರಲು, ಅತಿಶಯ ಕಾಂತಿಯುಕ್ತವಾದ ಆ ಉತ್ತಮರಥವು ಪ್ರಳಯಕಾಲದಲ್ಲಿ ಮೊಸಳೆ, ತಿಮಿ, ತಿಮಿಂಗಿಲಗಳಿಂದ ತುಂಬಿ ಅಲ್ಲೋಲಕಲ್ಲೋಲವಾದ ಸಾಗರದಂತೆ ಚಲಿಸುತ್ತಿತ್ತು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯವು ದೇವತೆಗಳ ವಿಜಯಯಾತ್ರೆಯನ್ನು ವರ್ಣಿಸುತ್ತದೆ.

ದೇವತೆಗಳ ಸ್ತೋತ್ರಕ್ಕೆ ಮೆಚ್ಚಿದ ಪರಮೇಶ್ವರನು ಅವರ ಕಷ್ಟವನ್ನು ಕೇಳಿ, ತ್ರಿಪುರದಹನವನ್ನು ಮಾಡುವುದಾಗಿ ಅಭಯವಿತ್ತನು. ಅವನ ಅಪ್ಪಣೆಯಂತೆ ದೇವತೆಗಳು ದಿವ್ಯ ರಥವೊಂದನ್ನು ಅವನಿಗಾಗಿ ನಿರ್ಮಾಣಮಾಡಿದರು. ಭೂಮಿಯೇ ತೇರಾಯಿತು. ಚಂದ್ರ ಸೂರ್ಯರೇ ಗಾಲಿಗಳಾದರು. ಹೀಗೆಯೇ ಅಚ್ಚು, ನೊಗ, ಚಕ್ರದ ಪಟ್ಟಿ ಇವೆಲ್ಲವೂ ಅಲೌಕಿಕವೇ ಆದವು. ಸಂವತ್ಸರವು ಬಿಲ್ಲೂ, ಪಾರ್ವತಿಯು ಹೆದೆಯೂ ಆದರು. ಅಗ್ನಿ, ಸೋಮ, ವಿಷ್ಣು ಈ ಮೂವರೂ ಬಾಣದಲ್ಲಿ ನೆಲೆಸಿದರು. ಬ್ರಹ್ಮನು ಸಾರಥಿಯಾದನು. ಹೀಗೆ ಸನ್ನದ್ಧವಾದ ತೇರನ್ನು ಮಹಾದೇವನು ಹತ್ತಿದನು.

ಪ್ರಮಥಗಣಗಳೂ, ಮಹರ್ಷಿಗಳೂ, ಅವನನ್ನು ಅನುಸರಿಸಿ ನಡೆದರು. ಅವರ ಜಯಕಾರವೂ, ಸಿಂಹನಾದವೂ ಸಮುದ್ರಘೋಷವನ್ನು ಮೀರಿಸುತ್ತಿದ್ದುವು. ಆಕಾಶದಲ್ಲಿ ತೇರು ಹೋಗುತ್ತಿದ್ದರೆ ಹಾರುತ್ತಿರುವ ಬೆಟ್ಟವೋ ಎನ್ನುವಂತಿತ್ತು.

ಶ್ರೀಮತ್ಸ್ಯಮಹಾಪುರಾಣದಲ್ಲಿ ತ್ರಿಪುರದಹನ ಪ್ರಕರಣದಲ್ಲಿ ರಥ ಪ್ರಯಾಣವೆಂಬ ನೂರಮೂವತ್ತಮೂರನೆಯ ಅಧ್ಯಾಯವು ಮುಗಿದುದು.

*

## ಅಥ ಚತುಸ್ತ್ರಿಂಶದಧಿಕಶತತಮೋಽಧ್ಯಾಯಃ

|| ಸೂತ ಉವಾಚ ||

ಪೂಜ್ಯಮಾನೇ ರಥೇ ತಸ್ಮಿನ್ ಲೋಕೈರ್ದೇವೇ ರಥೇ ಸ್ಥಿತೇ ।
ಪ್ರಮಥೇಷು ನದತ್ಸೂಗ್ರಂ ಪ್ರವದತ್ಸು ಚ ಸಾಧ್ವಿತಿ || ೧ ||

ಈಶ್ವರಸ್ವರಘೋಷೇಣ ನರ್ದಮಾನೇ ಮಹಾವೃಷೇ ।
ಜಪತ್ಸು ವಿಪ್ರೇಷು ತಥಾ ಗರ್ಜತ್ಸು ತುರಗೇಷು ಚ || ೨ ||

ವ್ಯೋಮಾಂಗಣಾತ್ಸಮುತ್ಪತ್ಯ ದೇವರ್ಷಿರ್ನಾರದಃ ಪ್ರಭುಃ ।
ಕಾಂತ್ಯಾ ಚಂದ್ರೋಪಮಸ್ತೂರ್ಣಂ ತ್ರಿಪುರಂ ಪುರಮಾಗತಃ || ೩ ||

ಔತ್ಪಾತಿಕಂ ತು ದೈತ್ಯಾನಾಂ ತ್ರಿಪುರೇ ವರ್ತತೇ ಧ್ರುವಂ ।
ನಾರದಶ್ಚಾತ್ರ ಭಗವಾನ್ ಪ್ರಾದುರ್ಭೂತಸ್ತಪೋಧನಃ || ೪ ||

---

೧. ಸೂತಪೌರಾಣಿಕನು ಹೇಳಿದನು.—ಪವಿತ್ರವಾದ ಆ ರಥದಲ್ಲಿ ಪರಮೇಶ್ವರನು ಕುಳಿತಿದ್ದನು. ಪ್ರಮಥಗಣಗಳು ಭಯಂಕರವಾಗಿ ಧ್ವನಿಮಾಡುತ್ತ ಸರಿಸರಿಯೆಂದು ಕೂಗುತ್ತಿದ್ದರು.

೨. ಈಶ್ವರನ ಸ್ವರವನ್ನು ಕೇಳಿ ಅವನ ವಾಹನವಾದ ವೃಷಭವು ಗುಟುರು ಹಾಕುತ್ತಿತ್ತು. ಬ್ರಾಹ್ಮಣರು ಮಂತ್ರಗಳನ್ನು ಜಪಿಸುತ್ತಿದ್ದರು. ಕುದುರೆಗಳು ಕೆನೆಯುತ್ತಿದ್ದುವು.

೩. ಆಗ ಸರ್ವಸಮರ್ಥನೂ, ದೇವರ್ಷಿಯೂ, ಚಂದ್ರನಂತೆ ಕಾಂತಿಮಂತನೂ ಆದ ನಾರದಮುನಿಯು ಗಗನಮಾರ್ಗದಲ್ಲಿ ಸಂಚರಿಸುತ್ತ ತ್ರಿಪುರನಗರಕ್ಕೆ ಬೇಗನೆ ಬಂದನು.

೪. ತ್ರಿಪುರದುರ್ಗದಲ್ಲಿ ದೈತ್ಯರ ವಿನಾಶಸೂಚಕವಾದ ಚಿಹ್ನೆಗಳು ಮೇಲೆ ಮೇಲೆ ಆಗುತ್ತಿದ್ದುವು. ಪೂಜ್ಯನಾದ ನಾರದ ಮಹರ್ಷಿಯು ಅವರಿಗೆ ಗೋಚರನಾದನು.

**ಆಗತಂ ಜಲದಾಭಾಸಂ ಸಮೇತಾಃ ಸರ್ವದಾನವಾಃ ।**
**ಉತ್ತಸ್ಥುರ್ನಾರದಂ ದೃಷ್ಟ್ವಾ ಅಭಿವಾದನವಾದಿನಃ ॥ ೫ ॥**

**ತಮರ್ಘ್ಯೇಣ ಚ ಪಾದ್ಯೇನ ಮಧುಪರ್ಕೇಣ ಚೇಶ್ವರಾಃ ।**
**ನಾರದಂ ಪೂಜಯಾಮಾಸುರ್ಬ್ರಹ್ಮಾಣಮಿವ ವಾಸವಃ ॥ ೬ ॥**

**ತೇಷಾಂ ಸ ಪೂಜಾಂ ಪೂಜಾರ್ಹಃ ಪ್ರತಿಗೃಹ್ಯ ತಪೋಧನಃ ।**
**ನಾರದಃ ಸುಖಮಾಸೀನಃ ಕಾಂಚನೇ ಪರಮಾಸನೇ ॥ ೭ ॥**

**ಮಯಸ್ತು ಸುಖಮಾಸೀನೇ ನಾರದೇ ನಾರದೋದ್ಭವೇ ।**
**ಯಥಾರ್ಹಂ ದಾನವೈಃ ಸಾರ್ಧಮಾಸೀನೋ ದಾನವಾಧಿಪಃ ॥ ೮ ॥**

**ಆಸೀನಂ ನಾರದಂ ಪ್ರೇಕ್ಷ್ಯ ಮಯಸ್ತ್ವಥ ಮಹಾಸುರಃ ।**
**ಅಬ್ರವೀದ್ವಚನಂ ತುಷ್ಟೋ ಹೃಷ್ಟರೋಮಾನನೇಕ್ಷಣಃ ॥ ೯ ॥**

---

೫. ಮೇಘವರ್ಣನಾದ ನಾರದಮುನಿಯು ತಮ್ಮ ಬಳಿಗೆ ಬಂದುದನ್ನು ಕಂಡು ದಾನವರೆಲ್ಲರೂ ಎದ್ದುನಿಂತು ನಮಸ್ಕಾರವನ್ನು ಮಾಡಿದರು.

೬. ದೇವೇಂದ್ರನು ಬ್ರಹ್ಮನನ್ನು ಸತ್ಕರಿಸುವಂತೆ ದೈತ್ಯಪ್ರಮುಖರು ಅರ್ಘ್ಯ, ಪಾದ್ಯ, ಮಧುಪರ್ಕ ಇವುಗಳಿಂದ ಆ ಮಹರ್ಷಿಯನ್ನು ಪೂಜಿಸಿದರು.

೭. ಪೂಜಾರ್ಹನಾದ ಆ ತಪಸ್ವಿಯು ಅವರ ಸತ್ಕಾರವನ್ನು ಸ್ವೀಕರಿಸಿ ಶ್ರೇಷ್ಠವಾದ ಸುವರ್ಣಾಸನದಲ್ಲಿ ಕುಳಿತನು.

೮. ನಾರದನು ಸುಖಾಸನವನ್ನು ಅಲಂಕರಿಸಿದನು. ಬಳಿಕ ಆತನ ಆಜ್ಞೆಯಾಗಲು ದಾನವಾಧಿಪನಾದ ಮಯನು ಉಳಿದ ದೈತ್ಯರೊಡನೆ ಯೋಗ್ಯವಾದ ರೀತಿಯಲ್ಲಿ ಕುಳಿತನು.

೯. ನಾರದಮುನಿಯು ಸುಖವಾಗಿ ಕುಳಿತುದನ್ನು ಅರಿತು, ರೋಮಾಂಚವು ಏಳುತ್ತಿರಲು, ಮುಖದಲ್ಲೂ ಕಣ್ಣುಗಳಲ್ಲೂ ಸಂತೋಷವು ಉಕ್ಕುತ್ತಿರಲು ಮಯನು ಹೀಗೆ ಹೇಳಿದನು.

**ಔತ್ಪಾತಿಕಂ ಪುರೇಽಸ್ಮಾಕಂ ಯಥಾ ನಾನ್ಯತ್ರ ಕುತ್ರಚಿತ್ ।**
**ವರ್ತತೇ ವರ್ತಮಾನಜ್ಞ ವದ ತ್ವಂ ಚ ಹಿ ನಾರದ ॥೧೦॥**

**ದೃಶ್ಯಂತೇ ಭಯದಾಃ ಸ್ವಪ್ನಾ ಭಜ್ಯಂತೇ ಚ ಧ್ವಜಾಃ ಪರಂ ।**
**ವಿನಾ ಚ ವಾಯುನಾ ಕೇತುಃ ಪತತೇ ಚ ತಥಾ ಭುವಿ ॥೧೧॥**

**ಅಟ್ಟಾಲಕಾಶ್ಚ ನೃತ್ಯಂತೇ ಸಪತಾಕಾಃ ಸಗೋಪುರಾಃ ।**
**ಹಿಂಸ ಹಿಂಸೇತಿ ಶ್ರೂಯಂತೇ ಗಿರಶ್ಚ ಭಯದಾಃ ಪುರೇ ॥೧೨॥**

**ನಾಹಂ ಬಿಭೇಮಿ ದೇವಾನಾಂ ಸೇಂದ್ರಾಣಾಮಪಿ ನಾರದ ।**
**ಮುಕ್ತ್ವೈಕಂ ವರದಂ ಸ್ಥಾಣುಂ ಭಕ್ತಾಭಯಕರಂ ಹರಂ ॥೧೩॥**

**ಭಗವನ್ ನಾಸ್ತ್ಯವಿದಿತಮುತ್ಪಾತೇಷು ತವಾನಘ ।**
**ಅನಾಗತಮತೀತಂ ಚ ಭವಾನ್ ಜಾನಾತಿ ತತ್ತ್ವತಃ ॥೧೪॥**

---

೧೦. "ನಮ್ಮ ಪಟ್ಟಣದಲ್ಲಿ ಉತ್ಪಾತಗಳು ಆಗುತ್ತಿವೆ. ಬೇರೆ ಇನ್ನೆಲ್ಲೂ ಇಲ್ಲ. ಸಕಲವಿಚಾರವನ್ನೂ ಬಲ್ಲ ಓ ನಾರದಾ, ಇದರ ವಿವರವನ್ನು ತಿಳಿಸು.

೧೧. ಕೇಡನ್ನುಸೂಚಿಸುವ ಕೆಟ್ಟ ಕನಸುಗಳು ಆಗುತ್ತಿವೆ. ಧ್ವಜಸ್ತಂಭ ಗಳು ಮುರಿಯುತ್ತಿವೆ. ಗಾಳಿಯಿಲ್ಲದಿದ್ದರೂ ಬಾವುಟವು ಕಿತ್ತು ನೆಲದಮೇಲೆ ಬೀಳುತ್ತಿದೆ.

೧೨. ಪತಾಕೆಗಳೊಡನೆಯೂ, ಗೋಪುರಗಳೊಡನೆಯೂ ಅಟ್ಟಳೆಗಳು ಕುಣಿಯುತ್ತಿವೆ. ಪಟ್ಟಣದಲ್ಲಿ ಎಲ್ಲಿ ನೋಡಿದರೂ "ಹಿಂಸಿಸು, ಹಿಂಸಿಸು" ಎಂಬ ಭಯಂಕರವಾದ ಮಾತುಗಳು ಕೇಳಬರುತ್ತಿವೆ.

೧೩. ಓ ನಾರದಾ, ವರಪ್ರದಾತನೂ, ಶಾಶ್ವತನೂ, ಭಕ್ತರಿಗೆ ಅಭಯವನ್ನು ಕೊಡತಕ್ಕವನೂ ಆದ ಪರಮೇಶ್ವರನೊಬ್ಬನನ್ನು ಬಿಟ್ಟು ನಾನು ಇಂದ್ರಾದಿ ದೇವತೆ ಗಳಲ್ಲಿ ಯಾರಿಗೂ ಹೆದರುವುದಿಲ್ಲ.

೧೪. ಎಲೈ ಪೂಜ್ಯನೇ, ಮಹಾತ್ಮನೇ, ಉತ್ಪಾತಗಳ ವಿಷಯದಲ್ಲಿ ನಿನಗೆ ತಿಳಿಯದ ಸಂಗತಿಯು ಯಾವುದೂ ಇಲ್ಲ. ಕಳೆದುಹೋದುದೂ, ಮುಂದೆ ಬರಲಿರು ವುದೂ ನಿನಗೆ ನಿಜವಾಗಿ ಗೊತ್ತಿದೆ.

ತದೇತನ್ನೋ ಭಯಸ್ಥಾನಮುತ್ಪಾತಾಭಿನಿವೇದಿತಂ ।
ಕಥಯಸ್ವ ಮುನಿಶ್ರೇಷ್ಠ ಪ್ರಸನ್ನಸ್ಯ ತು ನಾರದ ॥೧೫॥

ಇತ್ಯುಕ್ತೋ ನಾರದಸ್ತೇನ ಮಯೇನಾಮಯವರ್ಜಿತಃ ॥೧೬॥

॥ ನಾರದ ಉವಾಚ ॥

ಶೃಣು ದಾನವ ತತ್ತ್ವೇನ ಭವಂತ್ಯುತ್ಪಾತಿಕಾ ಯಥಾ ।
ಧರ್ಮೇತಿ ಧಾರಣೇ ಧಾತುರ್ಮಾಹಾತ್ಮ್ಯೇ ಚೈವ ಪಠ್ಯತೇ ।
ಧಾರಣಾಚ್ಚ ಮಹತ್ತ್ವೇನ ಧರ್ಮ ಏಷ ನಿರುಚ್ಯತೇ ॥೧೭॥

ಸ ಇಷ್ಟಪ್ರಾಪಕೋ ಧರ್ಮ ಆಚಾರ್ಯೈರುಪದಿಶ್ಯತೇ ।
ಇತರಶ್ಚಾನಿಷ್ಟಫಲ ಆಚಾರ್ಯೈರ್ನೋಪದಿಶ್ಯತೇ ॥೧೮॥

ಉತ್ಪಥಾನ್ಮಾರ್ಗಮಾಗಚ್ಛೇನ್ಮಾರ್ಗಾಚ್ಚೈವ ವಿಮಾರ್ಗತಾಂ ।
ವಿನಾಶಸ್ತಸ್ಯ ನಿರ್ದೇಶ್ಯ ಇತಿ ವೇದವಿದೋ ವಿದುಃ ॥೧೯॥

---

೧೫. ಈ ಅಪಶಕುನಗಳಿಂದ ನಮಗೆ ಭಯವೊದಗುವುದೆಂದು ಗೊತ್ತಾಗುವುದು. ಮುನಿಶ್ರೇಷ್ಠನಾದ ಎಲೈ ನಾರದಾ, ನಿನ್ನನ್ನು ಮರೆ ಹೊಕ್ಕಿರುವೆನು. ಹೇಳು."

೧೬. ಚಿಂತಾಕ್ಲೇಶಗಳಿಲ್ಲದ ನಾರದಮುನಿಗೆ ಮಯನು ಹೀಗೆ ಹೇಳಿದನು.

೧೭. ನಾರದ ಮಹರ್ಷಿ ಹೇಳಿದನು.—ಓ ದಾನವಾ, ಉತ್ಪಾತಗಳು ಆಗುವುದು ಹೇಗೆಂಬದನ್ನು ಯಥಾವತ್ತಾಗಿ ಕೇಳು. ಧಾರಣಾರ್ಥದಲ್ಲೂ, ಮಾಹಾತ್ಮ್ಯದಲ್ಲೂ "ಧೃಞ್" ಎಂಬ ಧಾತುವು ಉಕ್ತವಾಗಿದೆ. ತನ್ನ ಮಹಿಮೆಯಿಂದ ಎಲ್ಲವನ್ನೂ ಧಾರಣಮಾಡಿರುವ ಕಾರಣ ಧರ್ಮವೆಂಬ ಹೆಸರು ಬಂದಿತು. ಇದೇ ಧರ್ಮಶಬ್ದದ ನಿರ್ವಚನ.

೧೮. ಇಷ್ಟಾರ್ಥವನ್ನು ಕೊಡುವ ಧರ್ಮವನ್ನು ಆಚಾರ್ಯರು ಉಪದೇಶಿಸುತ್ತಾರೆ. ಇದಕ್ಕೆ ವಿರುದ್ಧವಾದುದು ಅನಿಷ್ಟವನ್ನುಂಟುಮಾಡತಕ್ಕುದು. ಅದನ್ನು ಅವರು ಉಪದೇಶಿಸುವುದಿಲ್ಲ.

೧೯. ದುರ್ಮಾರ್ಗದಲ್ಲಿರುವವನು ಸನ್ಮಾರ್ಗಕ್ಕೂ, ಸನ್ಮಾರ್ಗದಲ್ಲಿರುವಾತನು ದುರ್ಮಾರ್ಗಕ್ಕೂ ಹೋಗಬಹುದು. ಕುಮಾರ್ಗಪ್ರವರ್ತಕನಿಗೆ ಮುಂದೆ ಬರುವ ಕೇಡು ಮೊದಲೇ ಸೂಚಿತವಾಗುವುದೆಂದು ಶಾಸ್ತ್ರಜ್ಞರು ತಿಳಿಯುತ್ತಾರೆ.

ತ್ವಮಧರ್ಮರಥಾರೂಢಃ ಸಹೈಭಿರ್ಮತ್ತದಾನವೈಃ ।
ಅಪಕಾರಿಷು ದೇವಾನಾಂ ಕುರುಷೇ ತ್ವಂ ಸಹಾಯತಾಂ ॥೨೦॥

ತದೇತಾನ್ಯೇವಮಾದೀನಿ ಉತ್ಪಾತಾವೇದಿತಾನಿ ಚ ।
ವೈನಾಶಿಕಾನಿ ದೃಶ್ಯಂತೇ ದಾನವಾನಾಂ ತಥೈವ ಚ ॥೨೧॥

ಏಷ ರುದ್ರಃ ಸಮಾಸ್ಥಾಯ ಮಹಾಲೋಕಮಯಂ ರಥಂ ।
ಆಯಾತಿ ತ್ರಿಪುರಂ ಹಂತುಂ ಮಯ ತ್ವಾಮಸುರಾನಪಿ ॥೨೨॥

ಸ ತ್ವಂ ಮಹೌಜಸಂ ನಿತ್ಯಂ ಪ್ರಪದ್ಯಸ್ವ ಮಹೇಶ್ವರಂ ।
ಯಾಸ್ಯಸೇ ಸಹ ಪುತ್ರೇಣ ದಾನವೈಃ ಸಹ ಮಾನದ ॥೨೩॥

ಇತ್ಯೇವಮಾವೇದ್ಯ ಭಯಂ ದಾನವೋಪಸ್ಥಿತಂ ಮಹತ್ ।
ದಾನವಾನಾಂ ಪುನರ್ದೇವೋ ದೇವೇಶಪದಮಾಗತಃ ॥೨೪॥

---

೨೦. ಮದೋನ್ಮತ್ತರಾದ ಈದಾನವರೊಡಗೂಡಿ ನೀನು ಅಧರ್ಮವೆಂಬ ರಥವನ್ನೇರಿ ಕುಳಿತಿರುವೆ. ದೇವತೆಗಳಿಗೆ ಅಪಕಾರಮಾಡತಕ್ಕವರಿಗೆ ನೀನು ಸಹಾಯನಾಗಿದ್ದೀಯೆ.

೨೧. ಇಂತಹವೆಲ್ಲವೂ ಉತ್ಪಾತಗಳಿಂದ ಸೂಚಿತವಾಗುತ್ತವೆ. ಅಷ್ಟೇ ಅಲ್ಲದೆ ಇವು ದಾನವರ ವಿನಾಶವನ್ನು ತಿಳಿಸತಕ್ಕುವಾಗಿವೆ.

೨೨. ಇಗೋ! ಪರಮೇಶ್ವರನು ತ್ರಿಲೋಕಮಯವಾದ ರಥವನ್ನೇರಿ ನಿನ್ನನ್ನೂ, ಉಳಿದ ಅಸುರರನ್ನೂ, ತ್ರಿಪುರವನ್ನೂ ಧ್ವಂಸಮಾಡುವುದಕ್ಕಾಗಿ ಬರುತ್ತಾನೆ.

೨೩. ಅಭಿಮಾನಶಾಲಿಯಾದ ಎಲೈ ಮಯನೇ, ಪುತ್ರರೊಡನೆಯೂ ದೈತ್ಯರೊಡನೆಯೂ ಕೂಡಿ ಮಹಾತೇಜಸ್ವಿಯೂ ಶಾಶ್ವತನೂ ಆದ ಪರಮೇಶ್ವರನಲ್ಲಿಗೆ ಹೋಗಿ ಅವನನ್ನು ಮರೆಹೊಗು.

೨೪. ದಾನವರಿಗೆ ಒದಗಲಿರುವ ದೊಡ್ಡ ಆಪತ್ತನ್ನು ಅವರಿಗೆ ತಿಳಿಸಿ ಭಗವಂತನಾದ ನಾರದ ಮುನಿಯು ಮಹಾದೇವನಲ್ಲಿಗೆ ಬಂದನು.

ನಾರದೇ ತು ಮುನೌ ಯಾತೇ ಮಯೋ ದಾನವನಾಯಕಃ ।
ಶೂರಸಮ್ಮತಮಿತ್ಯೇವಂ ದಾನವಾನಾಹ ದಾನವಃ ॥೨೫॥

ಶೂರಾಃ ಸ್ಥ ಜಾತಪುತ್ರಾಃ ಸ್ಥ ಕೃತಕೃತ್ಯಾಃ ಸ್ಥ ದಾನವಾಃ ।
ಯುಧ್ಯಧ್ವಂ ದೈವತೈಃ ಸಾರ್ಧಂ ಕರ್ತವ್ಯಂ ಚಾಪಿ ನೋ ಭಯಂ ॥೨೬॥

ಜಿತ್ವಾ ವಯಂ ಭವಿಷ್ಯಾಮ ಸರ್ವೇಽಮರಸಭಾಸದಃ ।
ದೇವಾಂಶ್ಚ ಸೇಂದ್ರಕಾನ್ ಹತ್ವಾ ಲೋಕಾನ್ ಭೋಕ್ಷ್ಯಾಮಹೇಽಸುರಾಃ ॥

ಅಟ್ಟಾಲಕೇಷು ಚ ತಥಾ ತಿಷ್ಠಧ್ವಂ ಶಸ್ತ್ರಪಾಣಯಃ ।
ದಂಶಿತಾ ಯುದ್ಧಸಜ್ಜಾಶ್ಚ ತಿಷ್ಠಧ್ವಂ ಪ್ರೋದ್ಯತಾಯುಧಾಃ ॥೨೮॥

ಪುರಾಣಿ ತ್ರೀಣಿ ಚೈತಾನಿ ಯಥಾಸ್ಥಾನೇಷು ದಾನವಾಃ ।
ತಿಷ್ಠಧ್ವಂ ಲಂಘನೀಯಾನಿ ಭವಿಷ್ಯಂತಿ ಪುರಾಣಿ ಚ ॥೨೯॥

---

೨೫. ನಾರದ ಮಹರ್ಷಿಯು ಹೊರಟುಹೋದ ಮೇಲೆ ದೈತರ ರಾಜನಾದ ಮಯನು ಶೂರರಿಗೆ ತಕ್ಕ ವಚನವನ್ನು ತನ್ನವರೊಡನೆ ಹೇಳಿದನು.

೨೬. "ಎಲೈ ದಾನವರೇ, ನೀವು ಶೂರರು; ವಂಶಕರ್ತರಾದ ಮಕ್ಕಳು ನಿಮಗೆ ಆಗಿದ್ದಾರೆ; ಮತ್ತು ಇಲ್ಲಿ ನೀವು ಮಾಡಬೇಕಾದ ಕರ್ತವ್ಯವನ್ನು ಮಾಡಿರುವಿರಿ. ಆದುದರಿಂದಲೇ ದೇವತೆಗಳೊಡನೆ ಯುದ್ಧಮಾಡಿ; ಹೆದರಬೇಡಿ.

೨೭. ಓ ಅಸುರರೇ, ಯುದ್ಧದಲ್ಲಿ ಗೆದ್ದು ನಾವೆಲ್ಲರೂ ದೇವಸಭೆಯಲ್ಲಿ ಕುಳಿತುಕೊಳ್ಳೋಣ. ಇಂದ್ರನ ಸಹಿತವಾಗಿ ದೇವತೆಗಳನ್ನು ಕೊಂದು ಅವರ ದಿವ್ಯ ಲೋಕಗಳಲ್ಲಿ ಸುಖಪಡೋಣ.

೨೮. ಕೈಗಳಲ್ಲಿ ಶಸ್ತ್ರಗಳನ್ನು ಹಿಡಿದುಕೊಂಡು ಅಟ್ಟಳೆಗಳಲ್ಲಿ ನಿಲ್ಲಿರಿ. ಕವಚಗಳನ್ನು ತೊಟ್ಟು ಆಯುಧಗಳನ್ನೆತ್ತಿಹಿಡಿದು ಯುದ್ಧ ಸನ್ನದ್ಧರಾಗಿರಿ.

೨೯. ಎಲೈ ದಾನವರೇ, ಈ ಮೂರು ಪಟ್ಟಣಗಳು ತಮ ತಮಗೆ ಗೊತ್ತಾದ ಸ್ಥಳಗಳಲ್ಲಿರಲಿ. ಇವು ಶತ್ರುಗಳಿಗೆ ಏರಿ ಬರಲು ಅಸಾಧ್ಯವಾಗಿರುವಂತೆ ರಕ್ಷಿತವಾಗಿರಲಿ.

ನಭೋಗತಾಸ್ತಥಾ ಶೂರಾ ದೇವತಾ ವಿದಿತಾ ಹಿ ವಃ ।
ತಾಃ ಪ್ರಯತ್ನೇನ ವಾರ್ಯಾಶ್ಚ ವಿದಾರ್ಯಾಶ್ಚೈವ ಸಾಯಕೈಃ ॥೩೦॥

ಇತಿ ದನುತನಯಾನ್ ಮಯಸ್ತಥೋಕ್ತ್ವಾ
ಸುರಗಣವಾರಣವಾರಣೇ ವಚಾಂಸಿ ।
ಯುವತಿಜನವಿಷಣ್ಣಮಾನಸಂ ತ
ತ್ತ್ರಿಪುರಪುರಂ ಸಹಸಾ ವಿವೇಶ ರಾಜಾ ॥೩೧॥

ಅಥ ರಜತವಿಶುದ್ಧಭಾವಭಾವೋ
ಭವಮಭಿಪೂಜ್ಯ ದಿಗಂಬರಂ ಸುಗೀರ್ಭಿಃ ।
ಶರಣಮುಪಜಗಾಮ ದೇವದೇವಂ
ಯಮಮದನಾಂಧಕಯಜ್ಞದೇಹಘಾತಂ ॥೩೨॥

---

೩೦. ದೇವತೆಗಳು ಶೂರರೆಂದೂ ಆಕಾಶಗಾಮಿಗಳೆಂದೂ ನಿಮಗೆ ಗೊತ್ತಿದೆ. ಅವರನ್ನು ಪ್ರಯತ್ನದಿಂದ ತಡೆಯಿರಿ. ಬಾಣಗಳಿಂದ ಸೀಳಿರಿ.

೩೧. ದೈತ್ಯರಾಜನಾದ ಮಯನು ದೇವತೆಗಳನ್ನೂ ಅವರ ಆನೆಗಳನ್ನೂ ತಡೆದು ನಿಲ್ಲಿಸುವಂತೆ ದೈತ್ಯರಿಗೆ ಹಿತವಚನಗಳನ್ನು ಹೇಳಿ ತ್ರಿಪುರವನ್ನು ಥಟ್ಟನೆ ಪ್ರವೇಶಿಸಿದನು. ಮುಂದೆ ಏನು ಅನಿಷ್ಟವು ಒದಗುವುದೋ ಎಂದು ಯುವತಿಯರೆಲ್ಲರೂ ಕೊರಗುತ್ತಿದ್ದರು.

೩೨. ಮಯನು ಬಳಿಕ ಬೆಳ್ಳಿಯಂತೆ ವಿಶುದ್ಧವಾದ ಮನಸ್ಸಿನಿಂದ, ದಿಗಂಬರಮೂರ್ತಿಯಾದ ಪರಮೇಶ್ವರನನ್ನು ಭಕ್ತಿಭರಿತವಾದ ಸ್ತೋತ್ರಗಳಿಂದ ಸ್ತುತಿಸಿ ಪೂಜಿಸಿದನು. ಯಮ, ಮನ್ಮಥ, ಅಂಧಕ, ದಕ್ಷ ಇವರನ್ನು ಅಡಗಿಸಿದ ಆ ದೇವದೇವನನ್ನು ಮರೆಹೊಕ್ಕನು.

**ಮಯಮಭಯಪದೈಷಿಣಂ ಪ್ರಪನ್ನಂ**
**ನ ಕಿಲ ಬುಬೋಧ ತೃತೀಯದೀಪ್ತನೇತ್ರಃ ।**
**ತದಭಿಮತಮುದಾತ್ತತಃ ಶಶಾಂಕೀ**
**ಸ ಚ ಕಿಲ ನಿರ್ಭಯ ಏವ ದಾನವೋಽಭೂತ್ ॥೩೩॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ತ್ರಿಪುರದಾಹೇ ನಾರದಗಮನಂ ನಾಮ ಚತುಸ್ತ್ರಿಂಶದಧಿಕಶತತಮೋಽಧ್ಯಾಯಃ**

---

೩೩. ಶರಣಾಗತನಾದ ಮಯನು ಸರ್ವಾಭಯತ್ವವನ್ನು ಬಯಸುತ್ತಾನೆಂದು ಮಹೇಶ್ವರನು ಆಲೋಚಿಸಲಿಲ್ಲ. ಆದುದರಿಂದ ಅವನಿಗೆ ಇಷ್ಟಾರ್ಥವನ್ನು ಕರುಣಿಸಿದನು. ಆ ದಾನವನಾದರೋ ವರದ ಬಲದಿಂದ ನಿರ್ಭಯನಾಗಿದ್ದನು.

## ಅಧ್ಯಾಯದ ಸಾರಾಂಶ

ದೇವರ್ಷಿಯಾದ ನಾರದನು ತ್ರಿಪುರನಗರಕ್ಕೆ ಹೋದನು. ದಾನವರು ಅವನಿಗೆ ಅರ್ಘ್ಯಪಾದ್ಯಾದಿಸತ್ಕಾರವನ್ನಿತ್ತರು. ಬಳಿಕ ತನ್ನ ನಗರದಲ್ಲಿ ಉತ್ಪಾತಗಳು ಆಗುತ್ತಿರುವುದಕ್ಕೆ ಕಾರಣವೇನೆಂದು ಮಯನು ಮಹರ್ಷಿಯನ್ನು ಪ್ರಶ್ನಿಸಿದನು. ದೈತ್ಯರು ಅಧರ್ಮಮಾರ್ಗದಲ್ಲಿರುವರೆಂದೂ, ಪರಮೇಶ್ವರನು ಲೋಕಮಯವಾದ ತೇರನ್ನೇರಿ ಬಂದು ಅವರನ್ನು ಧ್ವಂಸಮಾಡುವನೆಂದೂ, ಉತ್ಪಾತಗಳು ದೈತ್ಯವಿನಾಶ ಸೂಚಕಗಳೆಂದೂ ತಿಳಿಸಿ ನಾರದಮುನಿಯು ಹೊರಟುಹೋದನು. ಆಮೇಲೆ ಮಯನು ತನ್ನ ಕಡೆಯವರಿಗೆ ಯುದ್ಧಸನ್ನದ್ಧರಾಗಿರುವಂತೆಯೂ, ನಿರ್ಭಯದಿಂದ ದೇವತೆಗಳನ್ನು ಎದುರಿಸಿ ಪ್ರಹರಿಸುವಂತೆಯೂ ಹೇಳಿ ಮಹಾದೇವನನ್ನು ಪೂಜಿಸಿ ಮರೆಹೊಕ್ಕು ನಿರ್ಭಯನಾಗಿದ್ದನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ತ್ರಿಪುರದಾಹ ಪ್ರಕರಣದಲ್ಲಿ ನಾರದ ಗಮನ ವೆಂಬ ನೂರ ಮೂವತ್ತನಾಲ್ಕನೆಯ ಅಧ್ಯಾಯವು ಮುಗಿದುದು.

## ಅಥ ಪಂಚತ್ರಿಂಶದಧಿಕಶತತಮೋಽಧ್ಯಾಯಃ

॥ ಸೂತ ಉವಾಚ ॥

ತತೋ ರಣೇ ದೇವಬಲಂ ನಾರದೋಽಭ್ಯಗಮತ್ಪುನಃ ।
ಆಗತ್ಯ ಚೈವ ತ್ರಿಪುರಾತ್ಸಭಾಯಾಮಾಸ್ಥಿತಃ ಸ್ವಯಂ ॥ ೧ ॥

ಇಲಾವೃತಮಿತಿ ಖ್ಯಾತಂ ತದ್ವರ್ಷಂ ವಿಸ್ತೃತಾಯತಂ ।
ಯತ್ರ ಯಜ್ಞೋ ಬಲೇರ್ವೃತ್ತೋ ಬಲಿರ್ಯತ್ರ ಚ ಸಂಯತಃ ॥ ೨ ॥

ದೇವಾನಾಂ ಜನ್ಮಭೂಮಿರ್ಯಾ ತ್ರಿಷು ಲೋಕೇಷು ವಿಶ್ರುತಾ ।
ವಿವಾಹಾಃ ಕ್ರತವಶ್ಚೈವ ಜಾತಕರ್ಮಾದಿಕಾಃ ಕ್ರಿಯಾಃ ॥ ೩ ॥

ದೇವಾನಾಂ ಯತ್ರ ವೃತ್ತಾನಿ ಕನ್ಯಾದಾನಾನಿ ಯಾನಿ ಚ ।
ರೇಮೇ ನಿತ್ಯಂ ಭವೋ ಯತ್ರ ಸಹಾಯೈಃ ಪಾರ್ಷದೈರ್ಗಣೈಃ ।
ಲೋಕಪಾಲಾಃ ಸದಾ ಯತ್ರ ತಸ್ಥುರ್ಮೇರುಗಿರೌ ಯಥಾ ॥ ೪ ॥

---

೧. ಸೂತಪೌರಾಣಿಕನು ಹೇಳಿದನು.—ನಾರದಮಹರ್ಷಿಯು ತ್ರಿಪುರ ದಿಂದ ಹೊರಟು ದೇವಸೈನ್ಯದ ಬಳಿಗೆ ಬಂದು ಸಭಾಸ್ಥಾನವನ್ನು ಪ್ರವೇಶಿಸಿದನು.

೨. ಅತಿವಿಶಾಲವಾದ ಇಲಾವೃತವೆಂಬ ಪ್ರಸಿದ್ಧವಾದ ವರ್ಷವುಂಟಷ್ಟೆ! ಅಲ್ಲಿ ಬಲಿಚಕ್ರವರ್ತಿಯ ಯಾಗವು ನಡೆಯಿತು. ಅವನು ಬದ್ಧನಾದುದೂ ಅಲ್ಲಿಯೇ.

೩-೪. ಅದು ದೇವತೆಗಳ ಜನ್ಮಭೂಮಿಯೆಂದು ಮೂರು ಲೋಕಗಳಲ್ಲಿಯೂ ಪ್ರಸಿದ್ಧವಾಗಿದೆ. ಅವರ ವಿವಾಹಗಳು, ಯಾಗಗಳು ಜಾತಕರ್ಮಾದಿ ಸಂಸ್ಕಾರಗಳು, ಕನ್ಯಾದಾನಗಳು ಇವೆಲ್ಲವೂ ನಡೆಯುವುದು ಅಲ್ಲಿಯೇ. ಪರಮೇಶ್ವರನು ತನ್ನ ಪ್ರಮಥಗಣಗಳೊಡನೆ ನಿತ್ಯವೂ ಅಲ್ಲಿ ವಿಹರಿಸುವನು. ಮೇರುಪರ್ವತದ ಶಿಖರ ದಲ್ಲಿರುವಂತೆಯೇ ಲೋಕಪಾಲಕರು ಸದಾ ಅಲ್ಲಿಯೂ ಇರುವರು.

ಮಧುಪಿಂಗಲನೇತ್ರಸ್ತು ಚಂದ್ರಾವಯವಭೂಷಣಃ ।
ದೇವನಾಮಧಿಪಂ ಪ್ರಾಹ ಗಣಪಾಂಶ್ಚ ಮಹೇಶ್ವರಃ ॥ ೫ ॥

ವಾಸವೈತದರೀಣಾಂ ತೇ ತ್ರಿಪುರಂ ಪರಿದೃಶ್ಯತೇ ।
ವಿಮಾನೈಶ್ಚ ಪತಾಕಾಭಿರ್ಧ್ವಜೈಶ್ಚ ಸಮಲಂಕೃತಂ ॥ ೬ ॥

ಇದಂ ಚಿತ್ರಮಿದಂ ಖ್ಯಾತಂ ವಹ್ನಿವದ್ಭೃಶತಾಪನಂ ।
ಏತೇ ಜನಾ ಗಿರಿಪ್ರಖ್ಯಾಃ ಸಕುಂಡಲಕಿರೀಟಿನಃ ॥ ೭ ॥

ಪ್ರಾಕಾರಗೋಪುರಾಟ್ಟೇಷು ಕಕ್ಷಾಂತೇ ದಾನವಾಃ ಸ್ಥಿತಾಃ ।
ಇಮೇ ಚ ತೋಯದಾಭಾಸಾ ದನುಜಾ ವಿಕೃತಾನನಾಃ ॥ ೮ ॥

---

೫. ಜೇನುತುಪ್ಪದಂತೆ ಹೊಂಬಣ್ಣದ ಕಣ್ಣುಗಳಿಂದ ಕೂಡಿದ, ಬಾಲಚಂದ್ರನನ್ನು ಶಿರಸ್ಸಿನಲ್ಲಿ ಧರಿಸಿದ ಮಹೇಶ್ವರನು ದೇವೇಂದ್ರನನ್ನೂ, ಗಣಾಧಿಪರನ್ನೂ ನೋಡಿ ಹೀಗೆ ಹೇಳಿದನು.

೬. ಇಂದ್ರಾ, ನಿನ್ನ ಶತ್ರುಗಳಾದ ದಾನವರ ತ್ರಿಪುರದುರ್ಗವು ಕಾಣುತ್ತಿದೆ. ಇದು ವಿಮಾನಗಳಿಂದಲೂ, ಪತಾಕೆಗಳಿಂದಲೂ, ಧ್ವಜಗಳಿಂದಲೂ ಅಲಂಕೃತವಾಗಿದೆ.

೭. ಇದು ಆಶ್ಚರ್ಯಕರವೂ, ಪ್ರಸಿದ್ಧವೂ ಆಗಿದೆ. ಅಗ್ನಿಯಂತೆ ವಿಶೇಷ ತಾಪವನ್ನು ಹುಟ್ಟಿಸುತ್ತಿದೆ. ಈ ಜನಗಳು ಬೆಟ್ಟದಂತಿದ್ದಾರೆ. ಕುಂಡಲಗಳನ್ನೂ, ಕಿರೀಟಗಳನ್ನೂ ಧರಿಸಿದ್ದಾರೆ.

೮. ಪ್ರಾಕಾರ, ಗೋಪುರ, ಉಪ್ಪರಿಗೆ, ಹುಲ್ಲುಬಣವೆ ಇವುಗಳ ಮೇಲೆಲ್ಲ ಅಸುರರು ಸುಳಿದಾಡುತ್ತಿರುವರು. ಇವರ ಬಣ್ಣವು ಮೊಡವನ್ನು ಹೋಲುತ್ತದೆ. ಮುಖವು ವಿಕಾರವಾಗಿದೆ.

ನಿರ್ಗಚ್ಛಂತಿ ಪುರೋ ದೈತ್ಯಾಃ ಸಾಯುಧಾ ವಿಜಯೈಷಿಣಃ ॥ ೯ ॥
ಸ ತ್ವಂ ಸುರಶತೈಃ ಸಾರ್ಧಂ ಸಸಹಾಯೋ ವರಾಯುಧಃ ।
ಸಹೈವ ಮಾಮಕೈರ್ಭೃತ್ಯೈರ್ವ್ಯಾಪಾದಯ ಮಹಾಸುರಾನ್ ॥೧೦॥
ಅಹಂ ಚ ರಥವೀರ್ಯೇಣ ನಿಶ್ಚಲಾಚಲವತ್ಸ್ಥಿತಃ ।
ಪುರಃ ಪುರಸ್ಯ ರಂಧ್ರಾರ್ಥೀ ಸ್ಥಾಸ್ಯಾಮಿ ವಿಜಯಾಯ ವಃ ॥೧೧॥
ಯದಾ ತು ಪುಷ್ಯಯೋಗೇನ ಏಕತ್ವಂ ಸ್ಥಾಸ್ಯತೇ ಪುರಂ ।
ತದೇತನ್ನಿರ್ದಹಿಷ್ಯಾಮಿ ಶರೇಣೈಕೇನ ವಾಸವ ॥೧೨॥
ಇತ್ಯುಕ್ತೋ ವೈ ಭಗವತಾ ರುದ್ರೇಣೇಹ ಸುರೇಶ್ವರಃ ।
ಯಯೌ ತತ್ತ್ರಿಪುರಂ ಜೇತುಂ ತೇನ ಸೈನ್ಯೇನ ಸಂವೃತಃ ॥೧೩॥
ಪ್ರಕ್ರಾಂತರಥಭೀಮೈಸ್ತೈಃ ಸದೇವೈಃ ಪಾರ್ಷದಾಂ ಗಣೈಃ ।
ಕೃತಸಿಂಹರವೋಪೇತೈರುದ್ಗಚ್ಛದ್ಭಿರಿವಾಂಬುದೈಃ ॥೧೪॥

---

೯-೧೦. ವಿಜಯಾಕಾಂಕ್ಷಿಗಳಾದ ದೈತ್ಯರು ಆಯುಧಗಳನ್ನು ಹಿಡಿದು ನಗರದಿಂದ ಹೊರಡುತ್ತಾರೆ. ನೀನು ನೂರಾರು ಜನ ದೇವತೆಗಳೊಡಗೂಡಿ, ಸನ್ನದ್ಧನಾಗಿ, ದಿವ್ಯಾಯುಧಗಳನ್ನು ಧರಿಸಿ, ನನ್ನ ಭೃತ್ಯರ ಸಾಹಾಯ್ಯದಿಂದ ಈ ಮಹಾಸುರನನ್ನು ಸಂಹರಿಸು.

೧೧. ನಾನೂ ಕೂಡ ಅಲೌಕಿಕವಾದ ಈ ರಥದ ಮಹಿಮೆಯಿಂದ ಬೆಟ್ಟದಂತೆ ನಿಶ್ಚಲವಾಗಿ ಮುಂದೆ ನಿಂತು, ನಿಮ್ಮ ವಿಜಯಕ್ಕೋಸ್ಕರ ತ್ರಿಪುರಾಸುರನ ಛಿದ್ರವನ್ನೇ ಹುಡುಕುತ್ತಿರುವೆನು.

೧೨. ಓ ಇಂದ್ರಾ, ಪುಷ್ಯನಕ್ಷತ್ರಯೋಗದಿಂದ ಪಟ್ಟಣಗಳು ಮೂರೂ ಒಟ್ಟಿಗೆ ಸೇರಿದಾಗ ನಾನು ಒಂದೇ ಬಾಣದಿಂದ ಅವುಗಳನ್ನು ಸುಡುವೆನು.

೧೩. ಭಗವಂತನಾದ ರುದ್ರನು ಹೀಗೆ ಹೇಳಲು ದೇವೇಂದ್ರನು ಆ ಸೈನ್ಯದೊಡನೆ ತ್ರಿಪುರಜಯಕ್ಕಾಗಿ ಹೋದನು.

೧೪. ಭಯಂಕರವಾದ ರಥಗಳು ಹೊರಟುವು. ಮುಂಗಾರು ಮೋಡಗಳು ಕವಿದಂತೆ ದೇವತೆಗಳೂ ಪ್ರಮಥಗಣಗಳೂ ಒಟ್ಟುಗೂಡಿ ಸಿಂಹನಾದ ಮಾಡಿದರು.

ತೇನ ನಾದೇನ ತ್ರಿಪುರಾದ್ದಾನವಾ ಯುದ್ಧಲಾಲಸಾಃ ।
ಉತ್ಪತ್ಯ ದುದ್ರುವುಕ್ಷ್ವೇಲುಃ ಸಾಯುಧಾಃ ಖೇ ಗಣೇಶ್ವರಾನ್ ॥೧೫॥

ಅನ್ಯೇ ಪಯೋಧರಾರಾವಾಃ ಪಯೋಧರಸಮಾ ಬಭುಃ ।
ಸಸಿಂಹನಾದಂ ವಾದಿತ್ರಂ ವಾದಯಾಮಾಸುರುದ್ಧತಾಃ ॥೧೬॥

ದೇವಾನಾಂ ಸಿಂಹನಾದಶ್ಚ ಸರ್ವತೂರ್ಯರವೋ ಮಹಾನ್ ।
ಗ್ರಸ್ತೋಽಭೂದ್ದೈತ್ಯನಾದೈಶ್ಚ ಚಂದ್ರಸ್ತೋಯಧರೈರಿವ ॥೧೭॥

ಚಂದ್ರೋದಯಾತ್ಸಮುದ್ಭೂತಃ ಪೌರ್ಣಮಾಸ ಇವಾರ್ಣವಃ ।
ತ್ರಿಪುರಂ ಪ್ರಬಭೌ ತದ್ವದ್ಭೀಮರೂಪಮಹಾಸುರೈಃ ॥೧೮॥

ಪ್ರಾಕಾರೇಷು ಪುರೇ ತತ್ರ ಗೋಪುರೇಷ್ವಪಿ ಚಾಪರೇ ।
ಅಟ್ಟಾಲಕಾನ್ ಸಮಾರುಹ್ಯ ಕೇಚಿತ್ತಸ್ಥುರ್ವಿಲಾಸಿನಃ ॥೧೯॥

---

೧೫. ಆ ಧ್ವನಿಯನ್ನು ಕೇಳಿ ಯುದ್ಧಾಭಿಲಾಷಿಗಳಾದ ದಾನವರು ಆಯುಧ ಧಾರಿಗಳಾಗಿ ತ್ರಿಪುರ ದುರ್ಗದಿಂದ ಆಕಾಶಕ್ಕೆ ನೆಗೆದು ಓಡಿದರು. ಗಣಾಧಿಪರನ್ನು ನಡುಗಿಸಿದರು.

೧೬. ಉಳಿದವರು ಗುಡುಗಿನಂತೆ ಆರ್ಭಟಿಸುತ್ತ ಮೇಘದಂತೆ ಪ್ರಕಾಶಿಸಿದರು. ಸಿಂಹನಾದ ಮಾಡುತ್ತ ಭಯಂಕರವಾಗಿ ರಣವಾದ್ಯಗಳನ್ನು ಬಾರಿಸಿದರು.

೧೭. ದೇವತೆಗಳ ಸಿಂಹನಾದವೂ, ಬಗೆಬಗೆಯ ವಾದ್ಯಧ್ವನಿಗಳೂ ಚಂದ್ರನು ಮೋಡಗಳಲ್ಲಿ ಮರೆಯಾಗುವಂತೆ ದೈತ್ಯರ ಸಿಂಹನಾದದಲ್ಲಿ ಮುಳುಗಿಹೋದವು.

೧೮. ಹುಣ್ಣಿಮೆಯ ದಿನ ಚಂದ್ರೋದಯವಾದಾಗ ಸಮುದ್ರವು ಉಕ್ಕುವಂತೆ, ತ್ರಿಪುರವು ಭಯಂಕರರೂಪವಾದ ಮಹಾಸುರರ ಉತ್ಸಾಹದಿಂದ ಶೋಭಿಸಿತು.

೧೯. ವಿಲಾಸಪ್ರಿಯರಾದ ಕೆಲವರು ದಾನವರು ಪ್ರಾಕಾರಗಳಲ್ಲಿಯೂ, ಕೆಲವರು ಗೋಪುರಗಳಲ್ಲಿಯೂ, ಇನ್ನೂ ಕೆಲವರು ಮುಗಿಲಟ್ಟಳೆಗಳಲ್ಲಿಯೂ ಏರಿ ಕುಳಿತರು.

ಸ್ವರ್ಣಮಾಲಾಧರಾಃ ಶೂರಾಃ ಪ್ರಭಾಸಿತಕರಾಂಬರಾಃ ।
ಕೇಚಿನ್ನದಂತಿ ದನುಜಾಸ್ತೋಯಮತ್ತಾ ಇವಾಂಬುದಾಃ ॥೨೦॥

ಇತಶ್ಚೇತಶ್ಚ ಧಾವಂತಃ ಕೇಚಿದುದ್ಧೂತವಾಸಸಃ ।
ಕಿಮೇತದಿತಿ ಪಪ್ರಚ್ಛುರನ್ಯೋನ್ಯಂ ಗೃಹಮಾಶ್ರಿತಾಃ ॥೨೧॥

ಕಿಮೇತನ್ನೈವ ಜಾನಾಮಿ ಜ್ಞಾನಮಂತರ್ಹಿತಂ ಹಿ ಮೇ ।
ಜ್ಞಾಸ್ಯಸೇಽನಂತರೇಣೇತಿ ಕಾಲೋ ವಿಸ್ತಾರತೋ ಮಹಾನ್ ॥೨೨॥

ಸೋಽಹ್ಯಸೌ ಪೃಥಿವೀಪಾಲಸ್ಸಿಂಹಸ್ಯ ರಥಮಾಸ್ಥಿತಃ ।
ವರ್ತತೇ ತ್ರಿಪುರಂ ಪೀಡ್ಯ ದೇಹಂ ವ್ಯಾಧಿರಿವೋತ್ಥಿತಃ ॥೨೩॥

ಯ ವಿಷೋಽಸ್ತಿ ಸ ವಿಷೋಽಸ್ತು ಕಾ ಚಿಂತಾ ಸಂಭ್ರಮೋ ಸತಿ ।
ಏಹಿ ಆಯುಧಮಾದಾಯ ಕ್ವ ಮೇ ಪೃಚ್ಛಾ ಭವಿಷ್ಯತಿ ॥೨೪॥

---

೨೦. ಚಿನ್ನದ ಹಾರವನ್ನು ಹಾಕಿಕೊಂಡು, ಕೈವಸ್ತ್ರವು ಪ್ರಕಾಶಿಸುತ್ತಿರಲು, ಶೂರರಾದ ಕೆಲವರು ದಾನವರು ನೀರು ತುಂಬಿದ ಮೋಡಗಳಂತೆ ಧ್ವನಿ ಮಾಡುತ್ತಿದ್ದರು.

೨೧. ಮನೆಯೊಳಗಿದ್ದ ಕೆಲವರು ಇಲ್ಲಿಂದಲ್ಲಿಗೆ ಓಡಾಡುತ್ತ, ಬಟ್ಟೆಯನ್ನು ಬೀಸುತ್ತ "ಇದೇನಿದು" ಎಂದು ಒಬ್ಬರನೊಬ್ಬರು ಕೇಳುತ್ತಿದ್ದರು.

೨೨. "ಇದೇನು? ನನಗೇನೂ ಗೊತ್ತೇ ಆಗುವುದಿಲ್ಲ. ನನ್ನ ಬದ್ಧಿ ಮಂಕಾಗಿದೆ." ಎಂದು ಒಬ್ಬನು ಹೇಳಲು "ಆ ಮೇಲೆ ನಿನಗೆ ಗೊತ್ತಾಗುತ್ತದೆ. ಕಾಲವು ಅಪಾರವಾದುದು" ಎಂದು ಮತ್ತೊಬ್ಬನು ಉತ್ತರವಿತ್ತನು.

೨೩. "ಸಿಂಹದ ತೇರನ್ನೇರಿ ಕುಳಿತಿರುವ ಈ ರಾಜನಾರು? ವ್ಯಾಧಿಯು ಶರೀರವನ್ನು ಪೀಡಿಸುವಂತೆ ತ್ರಿಪುರವನ್ನು ಪೀಡಿಸುತ್ತಿರುವನಲ್ಲಾ?"

೨೪. "ಇವನು ಯಾರಾದರೂ ಆಗಿರಲಿ. ಸಡಗರ ಒದಗಿರುವಾಗ ಚಿಂತೆ ಏಕೆ? ಆಯುಧವನ್ನು ತೆಗೆದುಕೊಂಡು ಬಾ. ನಿನ್ನ ಪ್ರಶ್ನೆಗೆ ಉತ್ತರವನ್ನು ನಾನೆಲ್ಲಿ ತಿಳಿದುಕೊಂಡುಬರಲಿ?"

ಇತಿ ತೇಽನ್ಯೋನ್ಯಮಾವಿಗ್ನಾ ಉತ್ತರೋತ್ತರಭಾಷಿಣಃ ।
ಆಸಾದ್ಯಾಸಾದ್ಯ ಪೃಚ್ಛಂತಿ ದಾನವಾಸ್ತ್ರಿಪುರಾಲಯಾಃ ॥೨೫॥

ತಾರಕಾಖ್ಯಪುರೇ ದೈತ್ಯಾಸ್ತಾರಕಾಖ್ಯಪುರಸ್ಸರಾಃ ।
ನಿರ್ಗತಾಃ ಕುಪಿತಾಸ್ತೂರ್ಣಂ ಬಿಲಾದಿವ ಮಹೋರಗಾಃ ॥೨೬॥

ನಿರ್ಧಾವಂತಸ್ತು ತೇ ದೈತ್ಯಾಃ ಪ್ರಮಥಾಧಿಪಯೂಥಪೈಃ ।
ನಿರುದ್ಧಾ ಗಜರಾಜಾನೋ ಯಥಾ ಕೇಸರಿಯೂಥಪೈಃ ॥೨೭॥

ದರ್ಪಿತಾನಾಂ ತತಸ್ತೇಷಾಂ ದರ್ಪಿತಾನಾಮಿವಾಗ್ನಿನಾಂ ।
ರೂಪಾಣಿ ಜಜ್ವಲುಸ್ತೇಷಾಮಗ್ನೀನಾಮಿವ ಧೂಯತಾಂ ॥೨೮॥

ತತೋ ಬೃಹಂತಿ ಚಾಪಾನಿ ಭೀಮನಾದಾನಿ ಸರ್ವಶಃ ।
ನಿಕೃಷ್ಯ ಜಘ್ನುರನ್ಯೋನ್ಯಮಿಷುಭಿಃ ಪ್ರಾಣಭೋಜನೈಃ ॥೨೯॥

ಮಾರ್ಜಾರಮೃಗಭೀಮಾಸ್ಯಾನ್ ಪಾರ್ಷದಾನ್ ವಿಕೃತಾನನಾನ್ ।
ದೃಷ್ಟ್ವಾ ದೃಷ್ಟ್ವಾ ಹಸನ್ನುಚ್ಚೈರ್ದಾನವಾ ರೂಪಸಂಪದಾ ॥೩೦॥

---

೨೫. ತ್ರಿಪುರವಾಸಿಗಳಾದ ದಾನವರು ಹೀಗೆ ಗಾಬರಿಗೊಂಡು ಒಬ್ಬೊಬ್ಬರ ಬಳಿಗೂ ಹೋಗಿಹೋಗಿ ತಮತಮಗೆ ತೋರಿದಂತೆ ಮಾತನಾಡುತ್ತಿದ್ದರು.

೨೬. ತಾರಕಾಖ್ಯನೇ ಮೊದಲಾದ ದೈತ್ಯರು ಕುಪಿತರಾಗಿ ಬಿಲದಿಂದ ಮಹಾ ಸರ್ಪಗಳು ಹೊರಡುವಂತೆ ತ್ರಿಪುರನಗರದಿಂದ ಬೇಗನೆ ಹೊರಟರು.

೨೭. ಪ್ರಮಥಗಣಗಳ ಮುಂದಾಳುಗಳು ಸಿಂಹಗಳು ಮದಿಸಿದ ಆನೆಗಳನ್ನು ತಡೆಯುವಂತೆ ಓಡಿಹೋಗುತ್ತಿರುವ ದೈತ್ಯರನ್ನು ತಡೆದರು.

೨೮. ಜ್ವಲಿಸುವ ಅಗ್ನಿಯಂತೆ ದರ್ಪಯುಕ್ತರಾದ ಅವರ ರೂಪಗಳು ತಿದಿಯಿಂದ ಒತ್ತಿದ ಕುಲುಮೆಯ ಬೆಂಕಿಯ ಹಾಗೆ ತಾಪವನ್ನು ಬೀರುತ್ತಿದ್ದುವು.

೨೯. ಬಳಿಕ ದೊಡ್ಡ ದೊಡ್ಡ ಬಿಲ್ಲುಗಳನ್ನೆಳೆದು, ಭಯಂಕರವಾಗಿ ಧ್ವನಿ ಮಾಡುತ್ತ, ಪ್ರಾಣಹಾರಿಗಳಾದ ಬಾಣಗಳಿಂದ ಒಬ್ಬರೊಡನೊಬ್ಬರು ಹೊಡೆದಾಡಿದರು.

೩೦. ಸುಂದರರಾದ ದಾನವರು ಬೆಕ್ಕು, ಜಿಂಕೆ ಇವುಗಳಂತೆ ವಿಕಾರವಾಗಿಯೂ ಭಯಂಕರವಾಗಿಯೂ ಮುಖವಿರುವ ಪ್ರಮಥಗಣಗಳನ್ನು ನೋಡಿ ನೋಡಿ ಗಟ್ಟಿಯಾಗಿ ನಕ್ಕರು.

ಬಾಹುಭಿಃ ಪರಿಘಾಕಾರೈಃ ಕೃಷ್ಯತಾಂ ಧನುಷಾಂ ಶರಾಃ ।
ಭಟವರ್ಮೇಷು ವಿವಿಶುಸ್ತಡಾಗಾನೀವ ಪಕ್ಷಿಣಃ ॥೩೧॥

ಮೃತಾಃ ಸ್ಥ ಕ್ವ ನು ಯಾಸ್ಯಧ್ವಂ ಹನಿಷ್ಯಾಮೋ ನಿವರ್ತತಾಂ ।
ಇತ್ಯೇವಂ ಪರುಷಾನ್ಯುಕ್ತ್ವಾ ದಾನವಾಃ ಪಾರ್ಷದರ್ಷಭಾನ್ ॥೩೨॥

ಬಿಭಿದುಃ ಸಾಯಕೈಸ್ತೀಕ್ಷ್ಣೈಃ ಸೂರ್ಯಪಾದಾ ಇವಾಂಬುದಾನ್ ।
ಪ್ರಮಥಾ ಅಪಿ ಸಿಂಹಾಕ್ಷಾಃ ಸಿಂಹವಿಕ್ರಾಂತವಿಕ್ರಮಾಃ ।
ಖಂಡಶೈಲಶಿಲಾವೃಕ್ಷೈರ್ಬಿಭಿದುರ್ದೈತ್ಯದಾನವಾನ್ ॥೩೩॥

ಅಂಬುದೈರಾಕುಲಮಿವ ಹಂಸಾಕುಲಮಿವಾಂಬರಂ ।
ದಾನವಾಕುಲಮತ್ಯರ್ಥಂ ತತ್ಪುರಂ ಸಕಲಂ ಬಭೌ ॥೩೪॥

ವಿಕೃಷ್ಟಚಾಪಾ ದೈತ್ಯೇಂದ್ರಾಃ ಸೃಜಂತಿ ಶರದುರ್ದಿನಂ ।
ಇಂದ್ರಚಾಪಾಂಕಿತೋರಸ್ಕಾ ಜಲದಾ ಇವ ದುರ್ದಿನಂ ॥೩೫॥

---

೩೧. ಪರಿಘಗಳಂತೆ ದೀರ್ಘವಾದ ಬಾಹುಗಳಿಂದ ಬಿಲ್ಲುಗಳನ್ನೆಳೆದು ಬಾಣಗಳನ್ನು ಪ್ರಯೋಗಿಸಲು, ಅವು ಪಕ್ಷಿಗಳು ಕೆರೆಯನ್ನು ಪ್ರವೇಶಿಸುವಂತೆ ಭಟರ ಕವಚಗಳಲ್ಲಿ ನಾಟಿಕೊಂಡುವು.

೩೨. "ಸಾಯುತ್ತೀರಿ. ಹೋಗುವುದೆಲ್ಲಿಗೆ? ಕೊಂದು ಹಾಕುವೆವು. ಹಿಂದಿರುಗಿರಿ." ಎಂದು ಪ್ರಮಥಾಧಿಪರನ್ನು ಕ್ರೂರವಾಗಿ ಜರೆದು, ಸೂರ್ಯಕಿರಣಗಳು ಮೇಘಗಳನ್ನು ಭೇದಿಸುವಂತೆ ತೀಕ್ಷ್ಣವಾದ ಬಾಣಗಳಿಂದ ಇರಿದರು.

೩೩. ಸಿಂಹದ ಕಣ್ಣುಗಳಿಂದಲೂ ಶೌರ್ಯ ಪರಾಕ್ರಮಗಳಿಂದಲೂ ಕೂಡಿದ ಪ್ರಮಥರೂ ಸಹ ಕಲ್ಲುಗಳಿಂದಲೂ, ಬಂಡೆಗಳಿಂದಲೂ, ಮರಗಳಿಂದಲೂ ದೈತ್ಯದಾನವರನ್ನು ಪ್ರಹರಿಸಿದರು.

೩೪. ಆಕಾಶವು ಮೋಡಗಳಿಂದಲೂ ಹಂಸಪಕ್ಷಿಗಳಿಂದಲೂ ತುಂಬಿದಂತೆ ಆ ತ್ರಿಪುರವೆಲ್ಲವೂ ದಾನವರಿಂದ ತುಂಬಿ ಪ್ರಕಾಶಿಸುತ್ತಿತ್ತು.

೩೫. ಕಾಮನ ಬಿಲ್ಲಿನಿಂದ ಶೋಭಿಸುವ ಮೋಡಗಳು ಮಳೆಯನ್ನು ಕರೆಯುವಂತೆ ಬಿಲ್ಲುಗಳನ್ನೆಳೆಯುತ್ತಿರುವ ದೈತ್ಯೇಂದ್ರರು ಬಾಣಗಳನ್ನು ಸುರಿಸಿದರು.

**ಇಷುಭಿಸ್ತಾಡ್ಯಮಾನಾಸ್ತೇ ಭೂಯೋ ಭೂಯೋ ಗಣೇಶ್ವರಾಃ ।**
**ಚಕ್ರುಸ್ತೇ ದೇಹನಿರ್ಯಾಸಂ ಸ್ವರ್ಣಧಾತುಮಿವಾಚಲಾಃ ॥೩೬॥**

**ತಥಾ ವೃಕ್ಷಶಿಲಾವಜ್ರಶೂಲಪಟ್ಟಿಪರಶ್ವಧೈಃ ।**
**ಚೂರ್ಣ್ಯಂತೇಽಭಿಹತಾ ದೈತ್ಯಾಃ ಕಾಚಾಷ್ಟಂಕಹತಾ ಇವ ॥೩೭॥**

**ಚಂದ್ರೋದಯಾತ್ಸಮುದ್ಭೂತಃ ಪೌರ್ಣಮಾಸ ಇವಾರ್ಣವಃ ।**
**ತ್ರಿಪುರಂ ಪ್ರಭವತ್ತದ್ವದ್ಭೀಮರೂಪಮಹಾಸುರೈಃ ॥೩೮॥**

**ತಾರಕಾಖ್ಯೋ ಜಯತ್ಯೇಷ ಇತಿ ದೈತ್ಯಾ ಅಘೋಷಯನ್ ।**
**ಜಯತೀಂದ್ರಶ್ಚ ರುದ್ರಶ್ಚ ಇತ್ಯೇವ ಚ ಗಣೇಶ್ವರಾಃ ॥೩೯॥**

**ವಾರಿತಾ ದಾರಿತಾ ಬಾಣೈರ್ಯೋಧಾಸ್ತಸ್ಮಿನ್ ಬಲಾರ್ಣವೇ ।**
**ನ್ವಿಃಸ್ವನಂತೋಽಂಬುಸಮಯೇ ಜಲಗರ್ಭಾ ಇವಾಂಬುದಾಃ ॥೪೦॥**

---

೩೬. ಬಾಣಗಳಿಂದ ದಾನವರು ಎಡೆಬಿಡದೆ ಪ್ರಹರಿಸುತ್ತಿರಲು, ಗಣಾಧಿಪರ ದೇಹದಿಂದ ರಕ್ತವು, ಹೊಂಬಣ್ಣದ ಧಾತುರಸವು ಬೆಟ್ಟಗಳಿಂದ ಪ್ರವಹಿಸುವಂತೆ ಸುರಿಯಿತು.

೩೭. ದೇವತೆಗಳು ಪ್ರಯೋಗಿಸಿದ ಮರ, ಬೆಟ್ಟ, ವಜ್ರಾಯುಧ, ಶೂಲ, ಪಟ್ಟಿಸ, ಕೊಡಲಿ ಮುಂತಾದ ಶಸ್ತ್ರಗಳ ಪ್ರಹಾರದಿಂದ ದೈತ್ಯರು ಉಳಿಗಳ ಹೊಡೆತದಿಂದ ಗಾಜುಗಳು ನುಚ್ಚುನೂರಾಗುವಂತೆ ಪುಡಿಪುಡಿಯಾದರು.

೩೮. ಹುಣ್ಣಿಮೆಯ ದಿನ ಚಂದ್ರೋದಯವಾದಾಗ ಉಕ್ಕುವ ಸಮುದ್ರದಂತೆ ಭಯಂಕರರಾದ ಆ ಮಹಾಸುರರಿಂದ ತ್ರಿಪುರನಗರವು ಕಿಕ್ಕಿರಿಯಿತು.

೩೯. "ದೈತ್ಯರಾಜನಾದ ತಾರಕಾಖ್ಯನಿಗೆ ಜಯವಾಗಲಿ" ಎಂದು ದೈತ್ಯರೂ, "ದೇವೇಂದ್ರನೂ ರುದ್ರನೂ ಜಯಿಸಲಿ" ಎಂದು ಗಣೇಶ್ವರರೂ ಘೋಷಿಸುತ್ತಿದ್ದರು.

೪೦. ಸಮುದ್ರದಂತೆ ಅಪರಿಮಿತವಾದ ಆ ಸೈನ್ಯದಲ್ಲಿ ಬಾಣಗಳ ವೇಗಕ್ಕೆ ಸಿಕ್ಕಿ ಮುಂದೆ ನುಗ್ಗಲಾರದೆ, ಮೈಕೈ ಸೀಳಿಹೋಗಿರಲು ಯೋಧರು ಮಳೆಗಾಲದಲ್ಲಿ ನೀರು ತುಂಬಿದ ಮೋಡಗಳಂತೆ ಅಬ್ಬರಿಸುತ್ತಿದ್ದರು.

ಕರೈಶ್ಛಿನ್ನೈಃ ಶಿರೋಭಿಶ್ಚ ಧ್ವಜೈಶ್ಛತ್ರೈಶ್ಚ ಪಾಂಡುರೈಃ ।
ಯುದ್ಧಭೂಮಿರ್ಭಯವತೀ ಮಾಂಸಶೋಣಿತಪೂರಿತಾ ॥೪೧॥

ವ್ಯೋಮ್ನಿ ಚೋತ್ಪ್ಲುತ್ಯ ಸಹಸಾ ತಾಲಮಾತ್ರಂ ವರಾಯುಧೈಃ ।
ದೃಢಾಹತಾಃ ಪತಂತ್ಯೂರ್ಧ್ವಂ ದಾನವಾಃ ಪ್ರಮಥಾಸ್ತಥಾ ॥೪೨॥

ಸಿದ್ಧಾಶ್ಚಾಪ್ಸರಸಶ್ಚೈವ ಚಾರಣಾಶ್ಚ ನಭೋಗತಾಃ ।
ದೃಢಪ್ರಹಾರಹೃಷಿತಾಃ ಸಾಧುಸಾಧ್ವಿತಿ ಚುಕ್ರುಶುಃ ॥೪೩॥

ಅನಾಹತಾಶ್ಚ ವಿಯತಿ ದೇವದುಂದಭಯಸ್ತಥಾ ।
ನದಂತೋ ಮೇಘಶಬ್ದೇನ ಶರಭಾ ಇವ ರೋಷಿತಾಃ ॥೪೪॥

ತೇ ತಸ್ಮಿಂಸ್ತ್ರಿಪುರೇ ದೈತ್ಯಾ ನದ್ಯಃ ಸಿಂಧುಪತಾವಿವ ।
ವಿಶಂತಿ ಕ್ರುದ್ಧವದನಾ ವಲ್ಮೀಕ ಇವ ಪನ್ನಗಾಃ ॥೪೫॥

---

೪೧. ಕತ್ತರಿಸಿ ತುಂಡುತುಂಡಾದ ಕೈಗಳು, ತಲೆಗಳು, ಧ್ವಜಗಳು ಮತ್ತು ಬೆಳ್ಗೊಡೆಗಳು ಇವುಗಳಿಂದಲೂ ರಕ್ತಮಾಂಸಗಳಿಂದಲೂ ತುಂಬಿದ ಯುದ್ಧ ಭೂಮಿಯು ಬಹು ಭಯಂಕರವಾಗಿತ್ತು.

೪೨. ದಾನವರೂ ಪ್ರಮಥರೂ ಆಕಾಶಕ್ಕೆ ತಾಲವೃಕ್ಷದಷ್ಟು ಎತ್ತರವಾಗಿ ಹಾರಿದರು. ಆಯುಧಧಾರಿಗಳಾದ ವೀರಭಟರಿಂದ ಪೆಟ್ಟನ್ನು ತಿಂದು ಮೇಲಿನಿಂದ ಬಿದ್ದರು.

೪೩. ವೀರರು ಸಾಹಸದಿಂದ ಒಬ್ಬರನ್ನೊಬ್ಬರು ಹೊಡೆದಾಗ ಆಕಾಶದಲ್ಲಿದ್ದ ಸಿದ್ಧರು, ಅಪ್ಸರಸ್ತ್ರೀಯರು ಮತ್ತು ಚಾರಣರು ಸಂತೋಷಪಟ್ಟು ಸರಿಸರಿ ಎಂದು ಕೂಗುತ್ತಿದ್ದರು.

೪೪. ಅಂತರಿಕ್ಷದಲ್ಲಿ ಎಡೆಬಿಡದೆ ಬಾರಿಸಿದ ದೇವತೆಗಳ ನಗಾರಿಗಳು ಗುಡುಗಿನಂತೆ ಶಬ್ದಮಾಡುತ್ತಾ ರೋಷಗೊಂಡ ಶರಭಗಳನ್ನು ಹೋಲುತ್ತಿದ್ದುವು.

೪೫. ನದಿಗಳು ಸಮುದ್ರವನ್ನೂ, ಹಾವುಗಳು ಹುತ್ತವನ್ನೂ ಪ್ರವೇಶಿಸುವಂತೆ ದೈತ್ಯರು ತ್ರಿಪುರನಗರವನ್ನು ಪ್ರವೇಶಿಸಿದರು. ಅವರ ಮುಖದಲ್ಲಿ ಕೋಪವು ಎದ್ದು ಕುಣಿಯುತ್ತಿತ್ತು.

ತಾರಕಾಖ್ಯಪುರೇ ತಸ್ಮಿನ್ ಸುರಾಃ ಶೂರಾಃ ಸಮಂತತಃ ।
ಸಶಸ್ತ್ರಾ ನಿಪತಂತಿ ಸ್ಮ ಸಪಕ್ಷಾ ಇವ ಭೂಧರಾಃ ॥೪೬॥

ಯೋಧಯಂತಿ ತ್ರಿಭಾಗೇನ ತ್ರಿಪುರೇ ತು ಗಣೇಶ್ವರಾಃ ।
ವಿದ್ಯುನ್ಮಾಲೀ ಮಯಶ್ಚೈವ ಮಗ್ನೌ ಚ ದ್ರುಮವದ್ರಣೇ ॥೪೭॥

ವಿದ್ಯುನ್ಮಾಲೀ ಸ ದೈತ್ಯೇಂದ್ರೋ ಗಿರೀಂದ್ರಸದೃಶದ್ಯುತಿಃ ।
ಆದಾಯ ಪರಿಘಂ ಘೋರಂ ತಾಡಯಾಮಾಸ ನಂದಿನಂ ॥೪೮॥

ಸ ನಂದೀ ದಾನವೇಂದ್ರೇಣ ಪರಿಘೇಣ ದೃಢಾಹತಃ ।
ಭ್ರಮತೇ ಮಧುನಾ ಭಗ್ನಃ ಪುರಾ ನಾರಾಯಣೋ ಯಥಾ ॥೪೯॥

ನಂದೀಶ್ವರೇ ಹತೇ ತತ್ರ ಗಣಪಾಃ ಖ್ಯಾತವಿಕ್ರಮಾಃ ।
ದುದ್ರುವುರ್ಜಾತಸಂರಂಭಾ ವಿದ್ಯುನ್ಮಾಲಿನಮಾಸುರಂ ॥೫೦॥

---

೪೬. ಆ ತಾರಕಾಖ್ಯನ ಪಟ್ಟಣದಲ್ಲಿ ಶೂರರಾದ ದೇವತೆಗಳು ದೈತ್ಯರ ಪ್ರಹಾರಗಳನ್ನು ತಾಳಲಾರದೆ ಶಸ್ತ್ರಸಹಿತರಾಗಿ ರೆಕ್ಕೆಗಳೊಡಗೂಡಿದ ಪರ್ವತಗಳಂತೆ ಎಲ್ಲೆಲ್ಲೂ ಬಿದ್ದಿದ್ದರು.

೪೭. ಗಣೇಶ್ವರರ ಮುಕ್ಕಾಲುಭಾಗ ಸೈನ್ಯವು ತ್ರಿಪುರದಲ್ಲಿ ಯುದ್ಧಮಾಡುತ್ತಿತ್ತು. ಮಯನೂ ವಿದ್ಯುನ್ಮಾಲಿಯೂ ಮರಗಳಂತೆ ಉನ್ನತವಾದ ಆಕಾರದಿಂದ ಯುದ್ಧರಂಗಕ್ಕೆ ಇಳಿದರು.

೪೮. ದೊಡ್ಡ ಬೆಟ್ಟದಂತಿದ್ದ ದೈತ್ಯಾಧಿಪನಾದ ವಿದ್ಯುನ್ಮಾಲಿಯು ಭಯಂಕರವಾದ ಪರಿಘಾಯುಧದಿಂದ ನಂದಿಯನ್ನು ಹೊಡೆದನು.

೪೯. ದಾನವೇಂದ್ರನ ಪರಿಘಾಯುಧದ ಬಲವಾದ ಹೊಡೆತದಿಂದ ಆ ನಂದೀಶ್ವರನು, ಹಿಂದೆ ಮಧುವೆಂಬ ರಾಕ್ಷಸನು ಪ್ರಹರಿಸಿದಾಗ ಭ್ರಾಂತನಾದ ನಾರಾಯಣನಂತೆ ಗರಗರನೆ ತಿರುಗಿದನು.

೫೦. ನಂದೀಶ್ವರನಿಗೆ ಪೆಟ್ಟುಬೀಳಲು ಪ್ರಸಿದ್ಧ ಪರಾಕ್ರಮಿಗಳಾದ ಘಂಟಾಕರ್ಣ, ಶಂಕುಕರ್ಣ, ಮಹಾಪಾರ್ಶ್ವ ಎಂಬ ಗಣಾಧಿಪರು ಸಡಗರದಿಂದು ವಿದ್ಯುನ್ಮಾಲಿಯ ಬಳಿಗೆ ಓಡಿದರು.

**ಘಂಟಾಕರ್ಣಃ ಶಂಕುಕರ್ಣೋ ಮಹಾಕಾಲಶ್ಚ ಪಾರ್ಷದಾಃ ।**
**ತತಶ್ಚ ಸಾಯಕೈಃ ಸರ್ವಾನ್ ಗಣಪಾನ್ ಗಣಪಾಕೃತೀನ್ ॥೫೧॥**

**ಭೂಯೋ ಭೂಯಃ ಸ ವಿವ್ಯಾಧ ಗಣೇಶ್ವರಮಹತ್ತಮಾನ್ ।**
**ಭಿತ್ವಾ ಭಿತ್ವಾ ರುರಾವೋಚ್ಚೈರ್ನಭಸ್ಯಂಬುಧರೋ ಯಥಾ ॥೫೨॥**

**ತಸ್ಯ ನರ್ದಿತಶಬ್ದೇನ ನಂದೀ ದಿನಕರಪ್ರಭಃ ।**
**ಸಂಜ್ಞಾಂ ಲಬ್ಧ್ವಾ ತತಃ ಸೋಽಪಿ ವಿದ್ಯುನ್ಮಾಲಿನಮಾದ್ರವತ್ ॥೫೩॥**

**ರುದ್ರದತ್ತಂ ತದಾ ದೀಪ್ತಂ ದೀಪ್ತಾನಲಸಮಪ್ರಭಂ ।**
**ವಜ್ರಂ ವಜ್ರನಿಭಾಂಗಸ್ಯ ದಾನವಸ್ಯ ಸಸರ್ಜ ಹ ॥೫೪॥**

**ನಂದಿನೋ ಭುಜನಿರ್ಮುಕ್ತಂ ಮುಕ್ತಾಫಲವಿಭೂಷಿತಂ ।**
**ಪಪಾತ ವಕ್ಷಸಿ ತದಾ ವಜ್ರಂ ದೈತ್ಯಸ್ಯ ಭೀಷಣಂ ॥೫೫॥**

**ಸ ವಜ್ರನಿಹತೋ ದೈತ್ಯೋ ವಜ್ರಸಂಹನನೋಪಮಃ ।**
**ಪಪಾತ ವಜ್ರಾಭಿಹತಃ ಶಕ್ರೇಣಾದ್ರಿರಿವಾಹತಃ ॥೫೬॥**

---

೫೧-೫೨. ಬಳಿಕ ಆ ದಾನವನು ಗಣಪತಿಯ ಆಕಾರವುಳ್ಳ ಗಣಾಧೀಶ್ವರರೆಲ್ಲರನ್ನೂ ಬಾಣಗಳಿಂದ ಮೇಲೆ ಮೇಲೆ ಇರಿದನು. ಹೊಡೆಹೊಡೆದು ಅಂತರಿಕ್ಷದಲ್ಲಿ ಮೋಡದಂತೆ ಗಟ್ಟಿಯಾಗಿ ಅಬ್ಬರಿಸಿದನು.

೫೩. ಅವನ ಸಿಂಹನಾದದಿಂದ ಸೂರ್ಯನಂತೆ ಪ್ರಕಾಶಯುಕ್ತನಾದ ನಂದಿಕೇಶ್ವರನು ಎಚ್ಚೆತ್ತನು. ಬಳಿಕ ಅವನು ವಿದ್ಯುನ್ಮಾಲಿಯ ಮೇಲೆ ಬೀಳಲು ಹೋದನು.

೫೪. ನಂದಿಯು ರುದ್ರದತ್ತವಾದ ವಜ್ರಾಯುಧವನ್ನು ವಜ್ರದಂತೆ ಧೃಢದೇಹವುಳ್ಳ ಆ ದಾನವನ ಮೇಲೆ ಪ್ರಯೋಗಿಸಿದನು. ಅದು ಉರಿಯುವ ಬೆಂಕಿಯಂತೆ ಜ್ವಲಿಸುತ್ತಿತ್ತು.

೫೫. ಮುತ್ತಿನಿಂದ ಅಲಂಕೃತವಾಗಿ ಭಯಂಕರವಾದ ಆ ವಜ್ರಾಯುಧವು ನಂದಿಯ ಕೈಯನ್ನು ಬಿಟ್ಟು ಹೊರಟು ದೈತ್ಯನ ಎದೆಯ ಮೇಲೆ ಬಿದ್ದಿತು.

೫೬. ಇಂದ್ರನ ವಜ್ರಾಯುಧದ ಪ್ರಹಾರದಿಂದ ನೆಲಕ್ಕೆ ಬಿದ್ದ ಪರ್ವತದಂತೆ ನಂದಿಯ ವಜ್ರಾಯುಧದಿಂದ ಹತನಾಗಿ ವಜ್ರಸಮಾನ ದೇಹನಾದ ವಿದ್ಯುನ್ಮಾಲಿಯು ಬಿದ್ದನು.

ದೈತ್ಯೇಶ್ವರಂ ವಿನಿಹತಂ ನಂದಿನಾ ಕುಲನಂದಿನಾ ।
ಚುಕ್ರುಶುರ್ದಾನವಾಃ ಪ್ರೇಕ್ಷ್ಯ ದುದ್ರುವುಶ್ಚ ಗಣಾಧಿಪಾಃ ॥೫೭॥

ದುಃಖಾಮರ್ಷಿತರೋಷಾಸ್ತೇ ವಿದ್ಯುನ್ಮಾಲಿನಿ ಪಾತಿತೇ ।
ದ್ರುಮಶೈಲಮಹಾವೃಷ್ಟಿಂ ಪಯೋದಾಃ ಸಸೃಜುರ್ಯಥಾ ॥೫೮॥

ತೇ ಪೀಡ್ಯಮಾನಾ ಗುರುಭಿರ್ಗಿರಿಭಿಶ್ಚ ಗಣೇಶ್ವರಾಃ ।
ಕರ್ತವ್ಯಂ ನ ವಿದುಃ ಕಿಂಚಿದ್ವಂದ್ಯಮಾಧಾರ್ಮಿಕಾ ಇವ ॥೫೯॥

ತತೋ ಸುರವರಃ ಶ್ರೀಮಾಂಸ್ತಾರಕಾಖ್ಯಃ ಪ್ರತಾಪವಾನ್ ।
ಸ ತರೂಣಾಂ ಗಿರೀಣಾಂ ವೈ ತುಲ್ಯರೂಪಧರೋ ಬಭೌ ॥೬೦॥

ಭಿನ್ನೋತ್ತಮಾಂಗಾ ಗಣಪಾ ಭಿನ್ನಪಾದಾನನಾಸ್ತಥಾ ।
ವಿರೇಜುರ್ಭುಜಗಾ ಮಂತ್ರೈರ್ವಾರ್ಯಮಾಣಾ ಯಥಾ ತಥಾ ॥೬೧॥

---

೫೭. ಪ್ರಮಥಗಣಗಳಿಗೆಲ್ಲ ಆನಂದದಾಯಕನಾದ ನಂದಿಯಿಂದ ದೈತ್ಯೇಶ್ವರನು ಹತನಾದುದನ್ನು ನೋಡಿ ದಾನವರು ದುಃಖದಿಂದ ಕೂಗಿಕೊಂಡರು. ಗಣಾಧಿಪರು ಉತ್ಸಾಹದಿಂದ ಓಡಾಡಿದರು.

೫೮. ವಿದ್ಯುನ್ಮಾಲಿಯು ಬೀಳಲು ದೈತ್ಯರು ದುಃಖದಿಂದ ಕುಪಿತರಾಗಿ ಮೋಡಗಳು ಮಳೆಯನ್ನು ಕರೆಯುವ ಹಾಗೆ ಮರಗಳನ್ನೂ ಬೆಟ್ಟಗಳನ್ನೂ ಎಡೆಬಿಡದೆ ಬಿಸುಟರು.

೫೯. ದೈತ್ಯರು ದೊಡ್ಡ ದೊಡ್ಡ ಬೆಟ್ಟಗಳಿಂದ ಹೊಡೆಯುತ್ತಿರಲು, ಅಧಾರ್ಮಿಕನು ಪೂಜ್ಯನನ್ನು ತಿಳಿಯದಿರುವಂತೆ, ಗಣೇಶ್ವರರು ಮುಂದೇನು ಮಾಡಬೇಕೆಂಬುದನ್ನು ಅರಿಯದೇ ಹೋದರು.

೬೦. ಬಳಿಕ ಅಸುರ ಶ್ರೇಷ್ಠನೂ, ಶ್ರೀಮಂತನೂ, ಪ್ರತಾಪವಂತನೂ ಆದ ತಾರಕಾಖ್ಯನು ಮರಗಳೊಡಗೂಡಿದ ಬೆಟ್ಟವನ್ನು ರೂಪದಲ್ಲಿ ಹೋಲುತ್ತ ಮುಂದೆ ಬಂದನು.

೬೧. ತಲೆಗಳೂ, ಮುಖಗಳೂ, ಕಾಲುಗಳೂ ಒಡೆದು ಹೋಗಿರಲು, ಗಣೇಶ್ವರರು ಮಂತ್ರಗಳಿಂದ ತಡೆಗಟ್ಟಿದ ಹಾವುಗಳಂತೆ ತೋರುತ್ತಿದ್ದರು.

ಮಯೇನ ಮಾಯಾವೀರ್ಯೇಣ ವಧ್ಯಮಾನಾ ಗಣೇಶ್ವರಾಃ ।
ಭ್ರಮಂತಿ ಬಹುಶಬ್ದಾಲಾಃ ಪಂಜರೇ ಶಕುನಾ ಇವ ॥೬೨॥

ತಥಾಽಸುರವರಃ ಶ್ರೀಮಾಂಸ್ತಾರಕಾಖ್ಯಃ ಪ್ರತಾಪವಾನ್ ।
ದದಾಹ ಚ ಬಲಂ ಸರ್ವಂ ಶುಷ್ಕೇಂಧನಮಿವಾನಲಃ ॥೬೩॥

ತಾರಕಾಖ್ಯೇಣ ವಾರ್ಯಂತೇ ಶರವರ್ಷೈಸ್ತದಾ ಗಣಾಃ ।
ಮಯೇನ ಮಾಯಾನಿಹತಾಸ್ತಾರಕಾಖ್ಯೇನ ಚೇಷುಭಿಃ ॥೬೪॥

ಗಣೇಶಾ ವಿಧುರಾ ಜಾತಾ ಜೀರ್ಣಮೂಲಾ ಯಥಾ ದ್ರುಮಾಃ ॥೬೫॥

ಭೂಯಸ್ಸಂಪತತೇ ಚಾಗ್ನಿರ್ಗ್ರಹಾನ್ ಗ್ರಾಹಾನ್ ಭುಜಂಗಮಾನ್ ।
ಗಿರೀಂದ್ರಾಂಶ್ಚ ಹರೀನ್ ವ್ಯಾಘ್ರಾನ್ ವೃಕ್ಷಾನ್ ಭೇರುಂಡಪಕ್ಷಿಣಃ ॥೬೬॥

ಶರಭಾನಷ್ಟಪಾದಾಂಶ್ಚ ಅಪಃ ಪವನಮೇವ ಚ ।
ಮಯೋ ಮಾಯಾಬಲೇನೈವ ಪಾತಯತ್ಯೇವ ಶತ್ರುಷು ॥೬೭॥

---

೬೨. ಮಯನು ತನ್ನ ಮಾಯಾಬಲದಿಂದ ಗಣೇಶ್ವರರನ್ನು ವಧಿಸುತ್ತಿರಲು ಅವರು ಪಂಜರದಲ್ಲಿನ ಪಕ್ಷಿಗಳಂತೆ ಕೂಗಿಕೊಳ್ಳುತ್ತ ಅಲೆದಾಡುತ್ತಿದ್ದರು.

೬೩. ಪ್ರತಾಪವಂತನೂ, ಕಾಂತಿಯುಕ್ತನೂ, ಅಸುರಶ್ರೇಷ್ಠನೂ ಆದ ತಾರಕಾಖ್ಯನು ಒಣಸೌದೆಯನ್ನು ಬೆಂಕಿ ಸುಡುವಂತೆ ಸೈನ್ಯವೆಲ್ಲವನ್ನೂ ದಹಿಸಿದನು.

೬೪. ಆಗ ತಾರಕಾಖ್ಯನು ಬಾಣಗಳ ಮಳೆಗರೆದು ಗಣೇಶ್ವರರನ್ನು ತಡೆದು ನಿಲ್ಲಿಸಿದನು. ಮಯನ ಮಾಯೆಯಿಂದಲೂ, ತಾರಕಾಖ್ಯನ ಬಾಣಗಳಿಂದಲೂ ಅವರು ಹತರಾದರು.

೬೫. ಬೇರು ಸತ್ತ ಮರಗಳಂತೆ ಗಣೇಶ್ವರರು ಶಕ್ತಿರಹಿತರಾದರು.

೬೬-೬೭. ಮರಳಿ ಯುದ್ಧಭೂಮಿಯನ್ನೆಲ್ಲ ಅಗ್ನಿ ವ್ಯಾಪಿಸಿತು. ಗ್ರಹಗಳು, ಮೊಸಳೆಗಳು, ಸರ್ಪಗಳು, ದೊಡ್ಡ ದೊಡ್ಡ ಬೆಟ್ಟಗಳು, ಸಿಂಹಗಳು, ಹುಲಿಗಳು, ಮರಗಳು, ಭೇರುಂಡ ಪಕ್ಷಿಗಳು, ಶರಭಗಳು, ನೀರು, ವಾಯು ಇವನ್ನೆಲ್ಲ ಮಯನು ತನ್ನ ಬಲದಿಂದಲೇ ನಿರ್ಮಾಣಮಾಡಿ ಶತ್ರುಗಳ ಮೇಲೆ ಬೀಳಿಸುತ್ತಿದ್ದನು.

ತೇ ತಾರಕಾಖ್ಯೇನ ಮಯೇನ ಮಾಯಯಾ ।
  ಸಂಮುಹ್ಯಮಾನಾ ವಿವಶಾ ಗಣೇಶ್ವರಾಃ ।
ನಾಶಕ್ನುವಂಸ್ತೇ ಮನಸಾಪಿ ಚೇಷ್ಟಿತುಂ
  ಯಥೇಂದ್ರಿಯಾರ್ಥಾ ಮುನಿನಾಭಿಸಂಯತಾಃ ॥೧೮॥

ಮಹಾಜಲಾಗ್ನ್ಯಾದಿಸಕುಂಜರೋರಗೈ
  ರ್ಹರೀಂದ್ರವ್ಯಾಘ್ರರ್ಕ್ಷತರಕ್ಷುರಾಕ್ಷಸೈಃ ।
ವಿಬಾಧ್ಯಮಾನಾಸ್ತಮಸಾ ವಿಮೋಹಿತಾಃ
  ಸಮುದ್ರಮಧ್ಯೇಷ್ವಿವ ಜೀವಕಾಂಕ್ಷಿಣಃ ॥೧೯॥

ಸಂಮರ್ದ್ಯಮಾನೇಷು ಗಣೇಶ್ವರೇಷು
  ಸಂನರ್ದಮಾನೇಷು ಸುರೇತರೇಷು ।
ತತಃ ಸುರಾಣಾಂ ಪ್ರವರಾಸ್ತು ರಕ್ಷಿತುಂ
  ರಿಪೋರ್ಬಲಂ ಸಂವಿವಿಶುಃ ಸಹಾಯುಧಾಃ ॥೨೦॥

---

೧೮. ಆ ಗಣೇಶ್ವರರು ತಾರಕನ ಮತ್ತು ಮಯನ ಮಾಯೆಯಿಂದ ಮೋಹಗೊಂಡು ಪರವಶರಾದರು. ಜಿತೇಂದ್ರಿಯನಾದ ಯೋಗಿಯ ಬಳಿಗೆ ಇಂದ್ರಿಯ ವಿಷಯಗಳು ಸುಳಿಯದಿರುವಂತೆ ಅವರು ಅವನ ಮೇಲೆ ಬೀಳುವ ಆಲೋಚನೆಯನ್ನು ಕೂಡ ಮಾಡಲಾರದೆ ಹೋದರು.

೧೯. ಮಯನ ಮಾಯೆಯಿಂದ ಉತ್ಪನ್ನವಾದ ನೀರಿನ ಮಡು, ಬೆಂಕಿ, ಆನೆ, ಹಾವು, ಸಿಂಹ, ಹುಲಿ ಮತ್ತು ಚಿರತೆಗಳು ರಾಕ್ಷಸರ ಸೈನ್ಯವನ್ನೂ ದೇವಗಣಗಳನ್ನೂ ಬಾಧಿಸುತ್ತಿದ್ದುವು. ಅವನ ತಪೋಮಹಿಮೆಯಿಂದ ಇವರು ಭ್ರಾಂತರಾದರು. ಸಮುದ್ರಮಧ್ಯದಲ್ಲಿ ಸಿಕ್ಕಿಕೊಂಡವರಂತೆ ಜೀವವುಳಿದರೆ ಸಾಕೆಂದು ಇವರು ಚಿಂತಿಸುತ್ತಿದ್ದರು.

೨೦. ಗಣಾಧಿಪತಿಗಳು ಅಜ್ಜಿಬಜ್ಜಿಯಾದರು. ಅಸುರರು ಸಿಂಹನಾದ ಮಾಡುತ್ತಿದ್ದರು. ಬಳಿಕ ದೇವತೆಗಳ ಮುಂದಾಳುಗಳು ತಮ್ಮವರನ್ನು ರಕ್ಷಿಸುವುದಕ್ಕಾಗಿ ಆಯುಧಗಳನ್ನು ಹಿಡಿದುಕೊಂಡು ಶತ್ರುಬಲವನ್ನು ಪ್ರವೇಶಿಸಿದರು.

ಯಮೋ ಗದಾಸ್ತ್ರೋ ವರುಣಶ್ಚ ಭಾಸ್ಕರ
 ಸ್ತಥಾ ಕುಮಾರೋಽಮರಕೋಟಿಸಂಯುತಃ ।
ಸ್ವಯಂ ಚ ಶಕ್ರಃ ಸಿತನಾಗವಾಹನಃ
 ಕುಲೀಶಪಾಣಿಃ ಸುರಲೋಕಪುಂಗವಃ ॥೭೦॥

ಸ ಚೋಡುನಾಥಃ ಸಸುತೋ ದಿವಾಕರಃ
 ಸ ಸಾಂತಕಸ್ತ್ರ್ಯಕ್ಷಪತಿರ್ಮಹಾದ್ಯುತಿಃ ।
ಏತೇ ರಿಪೂಣಾಂ ಪ್ರಬಲಾಭಿರಕ್ಷಿತಂ
 ತದಾ ಬಲಂ ಸಂವಿವಿಶುರ್ಮದೋದ್ಧತಾಃ ॥೭೧॥

ಯಥಾ ವನಂ ದರ್ಪಿತಕುಂಜರಾಧಿಪೈ
 ರ್ಯಥಾ ನಭಃ ಸಾಂಬುಧರಂ ಸಮೀರಣೈಃ ।
ಯಥಾ ಚ ಸಿಂಹೈರ್ವಿಜನೇಷು ಗೋಕುಲಂ
 ತಥಾ ಬಲಂ ತತ್ತ್ರಿದಶೈರಭಿದ್ರುತಂ ॥೭೩॥

ಕೃತಪ್ರಹಾರಾತುರದೀನದಾನವಂ
 ತತಸ್ತ್ವಭಜ್ಯಂತ ಬಲಂ ಹಿ ಪಾರ್ಷದಾಃ ।

---

೭೧-೭೨. ಗದಾಧಾರಿಯಾದ ಯಮ, ವರಣ, ಸೂರ್ಯ, ಕೋಟಿದೇವತೆಗಳೊಡಗೂಡಿದ ಕುಮಾರಸ್ವಾಮಿ, ಐರಾವತವಾಹನನೂ, ವಜ್ರಹಸ್ತನೂ, ಸುರಶ್ರೇಷ್ಠನೂ ಆದ ಸಾಕ್ಷಾದ್ದೇವೇಂದ್ರ, ಬುಧಸಹಿತನಾದ ಚಂದ್ರ, ಸೂರ್ಯ, ಮಹಾತೇಜಸ್ವಿಯೂ, ಮೃತ್ಯುಸಮೇತನೂ ಆದ ಈಶಾನ ಇವರೆಲ್ಲರೂ ಮದೋದ್ಧತರಾಗಿ ಪ್ರಬಲರಾದ ವೀರರು ರಕ್ಷಿಸುತ್ತಿದ್ದ ಶತ್ರುಸೈನ್ಯವನ್ನು ಹೊಕ್ಕರು.

೭೩. ಮದಹತ್ತಿದ ಸಲಗಗಳು ಕಾಡನ್ನೂ, ಗಾಳಿಯು ಆಕಾಶವನ್ನೆಲ್ಲ ದಟ್ಟವಾಗಿ ಮುಸುಕಿದ ಮೋಡಗಳ ಗುಂಪನ್ನೂ, ಸಿಂಹಗಳು ವಿಜನವಾದ ಪ್ರದೇಶದಲ್ಲಿ ಹಸುಗಳ ಹಿಂಡನ್ನೂ ಧ್ವಂಸಮಾಡಿ ಚದುರಿಸುವಂತೆ ದೇವತೆಗಳು ದೈತ್ಯಬಲವನ್ನು ಚಲ್ಲಾಪಿಲ್ಲಿಯಾಗಿ ಮಾಡಿದರು.

೭೪. ಗ್ರಹ ನಕ್ಷತ್ರಗಳ ಅಧಿಪತಿಯೂ, ತೇಜೋನಿಧಿಯೂ ಆದ ಸೂರ್ಯನು ಮನುಷ್ಯರ ಕಣ್ಣಿಗೆ ಕವಿಯುವ ಕಗ್ಗತ್ತಲೆಯನ್ನು ತೊಲಗಿಸುವಂತೆಯೂ, ಚಂದ್ರನು

ಸ್ವತೇಜೋರ್ಭಿಶ್ಶಾಂ ಜ್ಯೋತಿರಿವೋಷ್ಣವಾರ್ಕ್ಷ ಹರಿ
ರ್ಯಥಾ ತಮೋ ಘೋರತರಂ ನರಾಣಾಂ ||೭೪||

ನಿಶಾಂತಯಾಮಾಸ ಯಥಾ ಸದೈವ ।
ನಿಶಾಕರಃ ಸಂಚಿತಶಾರ್ವರಂ ತಮಃ ।
ತತೋಽಪಕೃಷ್ಟೇ ಚ ತಮಃಪ್ರಭಾವೇ
ಅಸ್ತ್ರಪ್ರಭಾವೇ ಚ ವಿವರ್ಧಮಾನೇ ||೭೫||

ದಿಗ್ಲೋಕಪಾಲೈರ್ಗಣನಾಯಕೈಶ್ಚ
ಕೃತೋ ಮಹಾನ್ ಸಿಂಹರವೋ ಮುಹೂರ್ತಂ ।
ಸಂಖ್ಯೇ ವಿಭಗ್ನಾ ವಿಕರಾ ವಿಪಾದಾ
ಛಿನ್ನೋತ್ತಮಾಂಗಾಃ ಶರಪೂರಿತಾಂಗಾಃ ||೭೬||

ದೇವೇತರಾ ದೇವವರೈರ್ವಿಭಿನ್ನಾಃ
ಸೀದಂತಿ ಪಂಕೇಷು ಯಥಾ ಗಜೇಂದ್ರಾಃ ।
ವಜ್ರೇಣ ಭೀಮೇನ ಚ ವಜ್ರಪಾಣಿಃ
ಶಕ್ತ್ಯಾ ಚ ಶಕ್ತ್ಯಾ ಚ ಮಯೂರಕೇತುಃ ||೭೭||

---

ರಾತ್ರಿಯಲ್ಲಿ ಕವಿದ ಕತ್ತಲೆಯನ್ನು ಅಡಗಿಸುವಂತೆಯೂ ಈಶ್ವರನ ಪ್ರಮಥಗಣಗಳು ದಾನವರನ್ನು ಪ್ರಹರಿಸಿ, ದೀನರನ್ನಾಗಿ ಮಾಡಿ ಅವರ ಸೈನ್ಯವನ್ನು ಭಂಗಪಡಿಸಿದುವು.

೭೫. ಬಳಿಕ ತಮೋಗುಣ ಪ್ರಚುರರಾದ ದೈತ್ಯರ ಪ್ರಭಾವವು ಕುಗ್ಗಿತು. ದೇವತೆಗಳ ಅಸ್ತ್ರಮಹಿಮೆಯು ಹೆಚ್ಚಿತು. ದಿಕ್ಪಾಲಕರೂ, ಲೋಕಪಾಲಕರೂ, ಗಣನಾಯಕರೂ ಮುಹೂರ್ತಕಾಲ ಮಹತ್ತಾದ ಸಿಂಹನಾದವನ್ನು ಮಾಡಿದರು.

೭೬. ದೇವತೆಗಳು ದಾನವರೊಡನೆ ಘೋರಯುದ್ಧವನ್ನು ನಡೆಸಿದರು. ಅವರನ್ನು ಇರಿದರು. ಬಳಿಕ ಅಸುರರು ಭಗ್ನರಾದರು. ಅವರ ಕೈಕಾಲುಗಳೂ, ತಲೆಗಳೂ ಕತ್ತರಿಸಿಹೋದುವು. ಮೈಮೇಲೆಲ್ಲಾ ಬಾಣಗಳು ನಾಟಿಕೊಂಡುವು. ಕೆಸರಿನಲ್ಲಿ ಆನೆಗಳು ಹೂತುಹೋಗುವಂತೆ ಅವರು ನಷ್ಟರಾದರು.

೭೭-೭೯. ದೇವೇಂದ್ರನು ಭಯಂಕರವಾದ ವಜ್ರಾಯುಧದಿಂದಲೂ, ಷಣ್ಮುಖನು ಶಕ್ತಿಯುತವಾದ ಶಕ್ತ್ಯಾಯುಧದಿಂದಲೂ, ಯಮನು ಉಗ್ರವಾದ ಯಮ

**ದಂಡೇನ ಚೋಗ್ರೇಣ ಚ ಧರ್ಮರಾಜಃ**
**ಪಾಶೇನ ಚೋಗ್ರೇಣ ಚ ವಾರಿಗೋಪ್ತಾ ।**
**ಶೂಲೇನ ಕಾಲೇನ ಚ ಯಕ್ಷರಾಜೋ**
**ವೀರ್ಯೇಣ ತೇಜಸ್ವಿತಯಾ ಸುಕೇಶಃ ॥೭೮॥**

**ಗಣೇಶ್ವರಾಸ್ತೇ ಸುರಸನ್ನಿಕಾಶಾಃ**
**ಪೂರ್ಣಾಹುತೀಸಿಕ್ತಶಿಖಿಪ್ರಕಾಶಾಃ ।**
**ಉತ್ಪಾದಯಂತೇ ದನುಪುತ್ರವೃಂದಾ**
**ಯಥೈವ ಇಂದ್ರಾಶನಯಃ ಪತಂತ್ಯಃ ॥೭೯॥**

**ಮಯಸ್ತು ದೇವಾನ್ ಪರಿರಕ್ಷಿತಾರ**
**ಮುಮಾತ್ಮಜಂ ದೇವವರಂ ಕುಮಾರಂ ।**
**ಶರೇಣ ಭಿತ್ವಾ ಸ ಹಿ ತಾರಕಾಸುತಂ**
**ಸ ತಾರಕಾಖ್ಯಾಸುರಮಾಬಭಾಷೇ ॥೮೦॥**

**ಕೃತ್ವಾ ಪ್ರಹಾರಂ ಪ್ರವಿಶಾಮಿ ವೀರಂ**
**ಪುರಂ ಹಿ ದೈತ್ಯೇಂದ್ರಬಲೇನ ಯುಕ್ತಃ ।**
**ವಿಶ್ರಾಮಮೂರ್ಜಸ್ಕರಮಪ್ಯವಾಪ್ಯ**
**ಪುನಃ ಕರಿಷ್ಯಾಮಿ ರಣಂ ಪ್ರಪನ್ನೈಃ ॥೮೧॥**

---

ದಂಡದಿಂದಲೂ, ವರುಣನು ಕ್ರೂರವಾದ ಪಾಶದಿಂದಲೂ, ಕುಬೇರನು ಮೃತ್ಯುಪ್ರದವಾದ ಶೂಲದಿಂದಲೂ, ಸುಕೇಶನು ವೀರ್ಯ ತೇಜಸ್ಸುಗಳಿಂದಲೂ ಪ್ರಹರಿಸಿದರು. ದೇವಸದೃಶರಾದ ಗಣಾಧಿಪತಿಗಳೂ ಸಹ ಪೂರ್ಣಾಹುತಿಯಿಂದ ಉದ್ದೀಪ್ತನಾದ ಅಗ್ನಿಯಂತೆ ದೈತ್ಯಗಣವನ್ನು ನಾಶಮಾಡಿದರು. ಅವರ ಪ್ರಹಾರಗಳು ವಜ್ರಾಯುಧದ ಪ್ರಹಾರವನ್ನು ಹೋಲುತ್ತಿದ್ದುವು.

೮೦. ಮಯನಾದರೋ ದೇವತೆಗಳನ್ನು ರಕ್ಷಿಸುತ್ತಲಿರುವ ಪಾರ್ವತೀಪುತ್ರನಾದ ಕುಮಾರಸ್ವಾಮಿಯನ್ನು ಬಾಣದಿಂದ ಇರಿದನು. ತಾರಕಾಸುರನ ಮಗನಾದ ತಾರಕಾಖ್ಯನನ್ನು ಕುರಿತು ಇಂತೆಂದನು.

೮೧. " ಶತ್ರುವನ್ನು ಪ್ರಹರಿಸಿ, ದೈತ್ಯವೀರರ ಸೇನೆಯೊಡಗೂಡಿ ಶೂರರಿಂದ ತುಂಬಿದ ನಮ್ಮ ನಗರವನ್ನು ಪ್ರವೇಶಿಸುವೆನು. ವಿಶ್ರಾಂತಿಯನ್ನು ತೆಗೆದುಕೊಂಡು ಶಕ್ತಿಯುತನಾಗಿ ಪುನಃ ಪ್ರತಿಭಟಿಸಿದವರ ಸಂಗಡ ಹೋರಾಡುವೆನು.

ವಯಂ ಹಿ ಶಸ್ತ್ರಕ್ಷತವಿಕ್ಷತಾಂಗಾ
  ವಿಶೀರ್ಣಶಸ್ತ್ರಧ್ವಜವರ್ಮವಾಹಾಃ ।
ಜಯೈಷಿಣಸ್ತೇ ಜಯಕಾಶಿನಶ್ಚ
  ಗಣೇಶ್ವರಾ ಲೋಕವರಾಧಿಪಾಶ್ಚ ॥೮೨॥

ಮಯಸ್ಯ ಶ್ರುತ್ವಾ ದಿವಿ ತಾರಕಾಖ್ಯೋ
  ವಚೋಽಭಿಕಾಂಕ್ಷನ್ ಕ್ಷತಜೋಪಮಾಕ್ಷಃ ।
ವಿವೇಶ ತೂರ್ಣಂ ತ್ರಿಪುರಂ ದಿತೇಃ ಸುತೈಃ
  ಸುತೈರದಿತ್ಯಾ ಯುಧಿ ಬದ್ಧಹರ್ಷೈಃ ॥೮೩॥

ತತಃ ಸಶಂಖಾನಕಭೇರಿಭೀಮಂ
  ಸಸಿಂಹನಾದಂ ಹರಸೈನ್ಯಮಾಬಭೌ ।
ಮಯಾನುಗಂ ಘೋರಗಭೀರಗಹ್ವರಂ
  ಯಥಾ ಹಿಮಾದ್ರಿರ್ಗಜಸಿಂಹನಾದಿತಂ ॥೮೪॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ತ್ರಿಪುರದಾಹೇ ಪ್ರಹಾರಕೃತಂ
ನಾಮ ಪಂಚತ್ರಿಂಶದಧಿಕಶತತಮೋಽಧ್ಯಾಯಃ

---

೮೨. ನಮ್ಮ ಮೈಯೆಲ್ಲ ಶಸ್ತ್ರಗಳಿಂದ ಗಾಯವಾಗಿದೆ. ಆಯುಧಗಳೂ, ಧ್ವಜಗಳೂ, ಕವಚಗಳೂ, ಕುದುರೆಗಳೂ, ತುಂಡುತುಂಡಾಗಿವೆ. ಆ ಗಣೇಶ್ವರರೂ ಲೋಕಪಾಲಕರೂ ಜಯಾಭಿಲಾಷಿಗಳಾಗಿ ಜಯಮತ್ತರಾಗಿದ್ದಾರೆ."

೮೩-೮೪. ಅಂತರಿಕ್ಷದಲ್ಲಿದ್ದ ತಾರಕಾಖ್ಯನು ಮಯನ ಮಾತನ್ನು ಕೇಳಿ, ಕೋಪದಿಂದ ಕಣ್ಣು ರಕ್ತದಂತೆ ಕೆಂಪೇರಲು, ದೈತ್ಯರೊಡನೆ ಬೇಗನೆ ತ್ರಿಪುರವನ್ನು ಹೊಕ್ಕನು. ದೇವತೆಗಳು ಸಂತೋಷದಿಂದ ತುಂಬಿದರು. ಈಶ್ವರನ ಸೈನ್ಯವು ಶಂಖ, ತಮಟೆ, ಭೇರಿ ಇವುಗಳನ್ನು ಬಾರಿಸಿ ಸಿಂಹನಾದ ಮಾಡುತ್ತ ಮೆರೆಯಿತು. ಮಯನನ್ನು ಅನುಸರಿಸಿ ಬಂದ ಸೈನ್ಯವು ಆನೆ ಸಿಂಹಗಳ ಆರ್ಭಟದಿಂದ ತುಂಬಿದ ಹಿಮಾಲಯ ಪರ್ವತವನ್ನು ಹೋಲುತ್ತಿತ್ತು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಪರಾಜಿತರಾದ ದೈತ್ಯರ ಪುರಪ್ರವೇಶವನ್ನು ವರ್ಣಿಸಿದೆ.

ಈಶ್ವರನ ಆಜ್ಞೆಯಂತೆ ತ್ರಿಪುರರೊಡನೆ ಯುದ್ಧಮಾಡುವುದಕ್ಕಾಗಿ ದೇವಸೈನ್ಯ ಸಹಿತನಾಗಿ ಇಂದ್ರನು ಹೊರಟನು. ಪ್ರಮಥಗಣಗಳ ಸಿಂಹನಾದವನ್ನು ಕೇಳಿ ದಾನವರು ಯುದ್ಧಸನ್ನದ್ಧರಾಗಿ ಬಂದರು. ಇಬ್ಬರಿಗೂ ಘೋರಯುದ್ಧವಾಯಿತು. ಉಭಯಪಕ್ಷದವರೂ ಬೇಕಾದಷ್ಟು ಶೌರ್ಯವನ್ನು ಪ್ರಕಟಿಸಿದರು. ಕೊನೆಗೆ ದೈತ್ಯರು ಪರಾಜಿತರಾಗಿ ತ್ರಿಪುರದುರ್ಗವನ್ನು ಹೊಕ್ಕರು. ದೇವಸೈನ್ಯವು ಸಂತೋಷದಲ್ಲಿ ಮುಳುಗಿತು.

ಶ್ರೀಮತ್ಸ್ಯಮಹಾಪುರಾಣದಲ್ಲಿ ತ್ರಿಪುರದಹನ ಪ್ರಕರಣದಲ್ಲಿ ಪ್ರಹಾರಕೃತವೆಂಬ
ನೂರಮೂವತ್ತೈದನೆಯ ಅಧ್ಯಾಯವು ಮುಗಿದುದು.



# ಅಥ ಷಟ್ತ್ರಿಂಶದಧಿಕಶತತಮೋಽಧ್ಯಾಯಃ

॥ ಸೂತ ಉವಾಚ ॥

ಮಯಃ ಪ್ರಹಾರಂ ಕೃತ್ವಾ ತು ಮಾಯಾವೀ ದಾನವರ್ಷಭಃ ।
ವಿವೇಶ ತೂರ್ಣಂ ತ್ರಿಪುರಮಭ್ರೋ ನೀಲಮಿವಾಂಬರಂ ॥ ೧ ॥

ಸ ದೀರ್ಘಮುಷ್ಣಂ ನಿಶ್ವಸ್ಯ ದಾನವಾನ್ ವೀಕ್ಷ್ಯ ಮಧ್ಯಗಾನ್ ।
ದಧ್ಯೌ ಲೋಕಕ್ಷಯೇ ಪ್ರಾಪ್ತೇ ಕಾಲಂ ಕಾಲ ಇವಾಪರಃ ॥ ೨ ॥

ಇಂದ್ರೋಽಪಿ ಬಿಭ್ಯತೇ ಯಸ್ಯ ಸ್ಥಿತೋ ಯುದ್ಧೇಷ್ವಗ್ರತಃ ।
ಸ ಚಾಪಿ ನಿಧನಂ ಪ್ರಾಪ್ತೋ ವಿದ್ಯುನ್ಮಾಲೀ ಮಹಾಯಶಾಃ ॥ ೩ ॥

ದುರ್ಗಂ ವೈ ತ್ರಿಪುರಸ್ಯಾಸ್ಯ ನ ಸಮಂ ವಿದ್ಯತೇ ಪುರಂ ।
ತಸ್ಯಾಪ್ಯೇಷೋಽನಯಃ ಪ್ರಾಪ್ತೋ ನ ದುರ್ಗಂ ಕಾರಣಂ ಕ್ವಚಿತ್ ॥ ೪ ॥

---

೧. ಸೂತಪೌರಾಣಿಕನು ಹೇಳಿದನು.—ಮಾಯಾವಿಯೂ, ದಾನವ ಶ್ರೇಷ್ಠನೂ ಆದ ಮಯನು ಶತ್ರುಸೈನ್ಯಕ್ಕೆ ಪ್ರಹಾರವನ್ನಿತ್ತು, ಮೋಡವು ನೀಲಾಕಾಶವನ್ನು ಪ್ರವೇಶಿಸುವಂತೆ ಬೇಗನೆ ತ್ರಿಪುರವನ್ನು ಹೊಕ್ಕನು.

೨. ಅವನು ಬಿಸಿಯಾದ ನಿಟ್ಟುಸಿರನ್ನು ಬಿಟ್ಟು, ಸಭಾಮಧ್ಯದಲ್ಲಿದ್ದ ದಾನವರನ್ನು ನೋಡಿ ಚಿಂತಾಗತನಾದನು. ಅವನನ್ನು ನೋಡಿದರೆ ಪ್ರಳಯ ಕಾಲದಲ್ಲಿ ಧ್ಯಾನಪರನಾಗಿರುವ ಯಮನೋ ಎನ್ನುವಂತಿತ್ತು.

೩. "ಯುದ್ಧಾಭಿಲಾಷೆಯಿಂದ ಮುಂದೆ ನಿಂತು ಇಂದ್ರನೂ ಸಹ ಯಾರಿಗೆ ಹೆದರುತಿದ್ದನೋ ಅಂತಹ ಮಹಾಯಶಸ್ವಿಯಾದ ವಿದ್ಯುನ್ಮಾಲಿಯೂ ಮೃತನಾದನು.

೪. ಈ ತ್ರಿಪುರಕ್ಕೆ ಸಮನಾಗಿ ದುರ್ಗಮವಾದ ಬೇರೆ ಪಟ್ಟಣವಿಲ್ಲ. ಇದಕ್ಕೂ ಕೂಡ ಇಂತಹ ದುರ್ಗತಿ ಬಂದಿದೆ. ಆದುದರಿಂದ ರಕ್ಷಣೆಗೆ ದುರ್ಗವು ಎಂದಿಗೂ ಕಾರಣವಾಗದು.

ಕಾಲಸ್ಯೈವ ವಶೇ ಸರ್ವಂ ದುರ್ಗಂ ದುರ್ಗತರಂ ಚ ಯತ್ ।
ಕಾಲೇ ಕ್ರುದ್ಧೇ ಕಥಂ ಕಾಲಾತ್ತ್ರಾಣಂ ನೋಽದ್ಯ ಭವಿಷ್ಯತಿ ॥ ೫ ॥

ಲೋಕೇಷು ತ್ರಿಷು ಯತ್ಕಿಂಚಿದ್ಬಲಂ ವೈ ಸರ್ವಜಂತುಷು ।
ಕಾಲಸ್ಯ ತದ್ವಶಂ ಸರ್ವಮಿತಿ ಪೈತಾಮಹೋ ವಿಧಿಃ ॥ ೬ ॥

ಅಸ್ಮಿನ್ ಕಃ ಪ್ರಭವೇದ್ಯೋಗೋ ಹ್ಯಸಂಧಾರ್ಯೇಽಮಿತಾತ್ಮನಿ ।
ಲಂಘನೇ ಕಃ ಸಮರ್ಥಃ ಸ್ಯಾದೃತೇ ದೇವಂ ಮಹೇಶ್ವರಂ ॥ ೭ ॥

ಬಿಭೇಮಿ ನೇಂದ್ರಾದ್ಧಿ ಯಮಾದ್ವರುಣಾನ್ನ ಚ ವಿತ್ತಪಾತ್ ।
ಸ್ವಾಮೀ ಚೈಷಾಂ ತು ದೇವಾನಾಂ ದುರ್ಜಯಃ ಸ ಮಹೇಶ್ವರಃ ॥ ೮ ॥

ಐಶ್ವರ್ಯಸ್ಯ ಫಲಂ ಯತ್ತತ್ಪ್ರಭುತ್ವಸ್ಯ ಚ ಯತ್ಫಲಂ ।
ತದದ್ಯ ದರ್ಶಯಿಷ್ಯಾಮಿ ಯಾವದ್ವೀರಾಃ ಸಮಂತತಃ ॥ ೯ ॥

---

೫. ದುರ್ಗವೋ ಅಥವಾ ಅದಕ್ಕಿಂತ ಭದ್ರವಾದ ಮತ್ತೊಂದೆಡೆಯೋ ಯಾವುದೇ ಆಗಲಿ, ಎಲ್ಲವೂ ಕಾಲದ ಅಧೀನದಲ್ಲಿರುವುದು. ಅಂತಹ ಕಾಲವೇ ನಮ್ಮ ಮೇಲೆ ಕೋಪಗೊಂಡಿರುವಾಗ ನಮಗೆ ರಕ್ಷಣೆಯೆಂತು?

೬. ಮೂರು ಲೋಕದ ಪ್ರಾಣಿಗಳಲ್ಲೆಲ್ಲ ಬಲವೇನುಂಟೋ ಅದು ಕಾಲದ ಅಧೀನವೆಂದು ಬ್ರಹ್ಮನು ಕಟ್ಟಳೆಮಾಡಿರುವನು.

೭. ಅತ್ಯಂತ ಬಲಿಷ್ಠವಾಗಿ ಸ್ವತಂತ್ರವೆನಿಸಿರುವ ಈ ಕಾಲವನ್ನು ವಶಪಡಿಸಿಕೊಳ್ಳಲು ಉಪಾಯವಾವುದು? ಇದನ್ನು ಮೀರಲು ಮಹೇಶ್ವರನನ್ನುಳಿದು ಮತ್ತಾರಾದರೂ ಸಮರ್ಥರುಂಟೇ?

೮. ಇಂದ್ರ, ಯಮ, ವರುಣ, ಕುಬೇರ ಇವರಾರಿಗೂ ನಾನು ಹೆದರುವುದಿಲ್ಲ. ಈ ದೇವದೇವತೆಗಳಿಗೆಲ್ಲ ಮಹೇಶ್ವರನು ಅಧಿಪತಿ. ಅವನನ್ನು ಜಯಿಸುವುದು ಅಸಾಧ್ಯ.

೯. ನನ್ನ ಸುತ್ತಲೂ ಇರುವ ಓ ವೀರರೇ, ಐಶ್ವರ್ಯ, ಪ್ರಭುತ್ವ, ಇವೆರಡರಿಂದಲೂ ಆಗಬೇಕಾದ ಪ್ರಯೋಜನವೇನೆಂಬುದನ್ನು ಈಗ ತೋರಿಸುವೆನು ನೋಡಿರಿ.

ವಾಪೀಮಮೃತತೋಯೇನ ಪೂರ್ಣಾಂ ಸ್ರಕ್ಷ್ಯಾಮಿ ಶಾಮಹಂ ।
ಜೀವಿಷ್ಯಂತಿ ತದಾ ದೈತ್ಯಾಃ ಸಂಜೀವನವರೌಷಧೈಃ ॥೧೦॥

ಇತಿ ಸಂಚಿಂತ್ಯ ಬಲವಾನ್ ಮಯೋ ಮಾಯಾವಿನಾಂ ವರಃ ।
ಮಾಯಯಾ ಸಸೃಜೇ ವಾಪೀಂ ರಂಭಾಮಿವ ಪಿತಾಮಹಃ ॥೧೧॥

ದ್ವಿಯೋಜನಾಯತಾಂ ದೀರ್ಘಾಂ ಪೂರ್ಣಯೋಜನವಿಸ್ತೃತಾಂ ।
ಆರೋಹಸಂಕ್ರಮವತೀಂ ಚಿತ್ರರೂಪಾಂ ಕಥಾಮಿವ ॥೧೨॥

ಇಂದೋಃ ಕಿರಣಕಲ್ಪೇನ ಮೃಷ್ಟೇನಾಮೃತಗಂಧಿನಾ ।
ಪೂರ್ಣಾಂ ಪರಮತೋಯೇನ ಗುಣಪೂರ್ಣಾಮಿವಾಂಗನಾಂ ॥೧೩॥

ಉತ್ಪಲೈಃ ಕುಮುದೈಃ ಪದ್ಮೈರ್ವೃತಾಂ ಕಾದಂಬಕೈಸ್ತಥಾ ।
ಚಂದ್ರಭಾಸ್ಕರವರ್ಣಾಭೈರ್ಭೀಮೈರಾವರಣೈರ್ವೃತಾಂ ॥೧೪॥

---

೧೦. ಅಮೃತಜಲದಿಂದಲೂ, ಸಂಜೀವನಾದಿ ದಿವ್ಯ ಮೂಲಿಕೆಗಳಿಂದಲೂ ಪೂರ್ಣವಾದ ಬಾವಿಯೊಂದನ್ನು ನಿರ್ಮಿಸುವೆನು. ಅದರಲ್ಲಿ ಮುಳುಗಿದ ಮಾತ್ರದಿಂದ ದೈತ್ಯರು ಜೀವಿಸುವರು.

೧೧. ಹೀಗೆ ಯೋಚನೆ ಮಾಡಿ ಮಾಯಾವಿಗಳಲ್ಲಿ ಅಗ್ರೇಸರನೂ ಬಲ ಶಾಲಿಯೂ ಆದ ಮಯನು ತನ್ನ ಮಾಯಾಶಕ್ತಿಯಿಂದ, ಬ್ರಹ್ಮನು ರಂಭೆಯನ್ನು ಸೃಷ್ಟಿಸಿದಂತೆ ಒಂದು ಬಾವಿಯನ್ನು ನಿರ್ಮಿಸಿದನು.

೧೨. ಅದು ಎರಡು ಯೋಜನ ಉದ್ದವೂ, ಒಂದು ಯೋಜನ ಅಗಲವೂ ಇತ್ತು. ಅದಕ್ಕೆ ಹತ್ತಿ ಇಳಿಯಲು ಮೆಟ್ಟಲುಗಳಿದ್ದುವು. ವಿಚಿತ್ರವಾದ ಕಥೆಯಂತೆ ಅದು ವಿಸ್ಮಯವನ್ನುಂಟುಮಾಡುತ್ತಿತ್ತು.

೧೩. ಆ ಕೊಳವು ಚಂದ್ರನ ಕಿರಣದಂತೆ ನಿರ್ಮಲವಾಗಿ, ಅಮೃತಗಂಧ ದಿಂದ ಕೂಡಿ ಮಧುರವಾಗಿ, ದಿವ್ಯೋದಕದಿಂದ ಪೂರ್ಣವಾಗಿ, ಸುಗುಣಭರಿತೆ ಯಾದ ಅಂಗನೆಯಂತೆ ಮನೋಹರವಾಗಿತ್ತು.

೧೪. ಕರಿನೈದಿಲೆ, ಬಿಳಿನೈದಿಲೆ ಮತ್ತು ತಾವರೆ ಹೂಗಳಿಂದಲೂ, ಹಂಸ ಪಕ್ಷಿಗಳಿಂದಲೂ ಅದು ಶೋಭಿಸುತ್ತಿತ್ತು. ಅದರ ಸುತ್ತಲೂ ಭಯಂಕರವಾದ ಆವರ ಣಗಳನ್ನು ಕಟ್ಟಿದ್ದರು. ಅವು ಸೂರ್ಯಚಂದ್ರರ ಬಣ್ಣವನ್ನು ಹೋಲುತ್ತಿದ್ದುವು.

ಖಗೈರ್ಮಧುರರಾವೈಶ್ಚ ಚಾರುಚಾಮೀಕರಪ್ರಭೈಃ ।
ಕಾಮೇಷುಭಿರಿವಾಕೀರ್ಣಾಂ ದೀಪ್ಯತೇ ರಮಣೀಮಿವ ॥೧೫॥

ತಾಂ ವಾಪೀಂ ಸೃಜ್ಯ ಸ ಮಯೋ ಗಂಗಾಮಿವ ಮಹೇಶ್ವರಃ ।
ತಸ್ಯಾಂ ಪ್ರಕ್ಷಾಲಯಾಮಾಸ ವಿದ್ಯುನ್ಮಾಲಿನಮಾದಿತಃ ॥೧೬॥

ಸ ವಾಪ್ಯಾಂ ಮಜ್ಜಿತೋ ದೈತ್ಯೋ ದೇವಶತ್ರುರ್ಮಹಾಬಲಃ ।
ಉತ್ತಸ್ಥಾವಿಂಧನೈರಿದ್ಧಃ ಸದ್ಯೋ ಹುತ ಇವಾನಲಃ ॥೧೭॥

ಮಯಸ್ಯ ಚಾಂಜಲಿಂ ಕೃತ್ವಾ ತಾರಕಾಖ್ಯೋಽಭಿವಾದಿತಃ ।
ವಿದ್ಯುನ್ಮಾಲೀತಿ ವಚನಂ ಮಯಮುತ್ಥಾಯ ಚಾಬ್ರವೀತ್ ॥೧೮॥

ಕ್ವ ನಂದೀ ಸಹ ರುದ್ರೇಣ ವೃತಃ ಪ್ರಮಥಜಂಬುಕೈಃ ।
ಯುದ್ಧ್ಯಾಮೋಽರೀನ್ವಿನಿಷ್ಪೀಡ್ಯ ದಯಾ ದೇಹೇಷು ಕಾ ಹಿ ನಃ ॥೧೯॥

---

೧೫. ಮಧುರರವದಿಂದಲೂ, ಸುವರ್ಣಕಾಂತಿಯಿಂದಲೂ ಬೆಳಗುತ್ತ ಪಕ್ಷಿಗಳಿಗೆ ಆವಾಸವೆನಿಸಿ, ಮನ್ಮಥಬಾಣಗಳಿಂದ ವ್ಯಾಪ್ತಳಾದ ರಮಣಿಯಂತೆ ಆ ಜಲಾಶಯವು ಪ್ರಕಾಶಿಸುತ್ತಿತ್ತು.

೧೬. ಈಶ್ವರನು ಗಂಗೆಯನ್ನು ಸೃಷ್ಟಿಸಿದಂತೆ, ಮಯನು ಆ ಬಾವಿಯನ್ನು ನಿರ್ಮಿಸಿ ಆದರಲ್ಲಿ ಮೊದಲು ವಿದ್ಯುನ್ಮಾಲಿಯ ದೇಹವನ್ನು ತೊಳೆದನು.

೧೭. ದೇವತೆಗಳ ಶತ್ರುವೂ ಮಹಾಬಲಿಷ್ಠನೂ ಆದ ವಿದ್ಯುನ್ಮಾಲಿಯ ಕಳೇಬರವನ್ನು ಬಾವಿಯ ನೀರಿನಲ್ಲಿ ಅದ್ದಿದ ಮಾತ್ರದಿಂದಲೇ, ಕಟ್ಟಿಗೆಗಳನ್ನು ಹಾಕಿ ಆಗತಾನೆ ಹೋಮಮಾಡಿದ ಅಗ್ನಿಯಂತೆ, ಅವನು ಜ್ವಲಿಸುತ್ತ ಮೇಲಕ್ಕೆ ಎದ್ದನು.

೧೮. ಅವನು ಮಯನಿಗೆ ಕೈಮುಗಿದು, ವಿದ್ಯುನ್ಮಾಲಿಯೆಂದು ಸ್ವನಾಮೋಚ್ಚಾರಣೆಯಿಂದ ತಾರಕಾಖ್ಯನಿಗೆ ನಮಸ್ಕಾರಮಾಡಿದನು. ಬಳಿಕ ಎದ್ದುನಿಂತು ಮಯನಿಗೆ ಹೀಗೆ ಹೇಳಿದನು.

೧೯. "ನರಿಗಳಂತಿರುವ ಪ್ರಮಥಗಣಗಳು ಸುತ್ತಲೂ ನೆರೆದಿದ್ದರಲ್ಲಾ ! ಅವರೆತ್ತ ಹೋದರು ? ಈಶ್ವರನೊಡಗೂಡಿದ ನಂದಿಯೆಲ್ಲಿರುವನು ? ಶತ್ರುಗಳನ್ನು ಮರ್ದನಮಾಡಿ ಯುದ್ಧಮಾಡೋಣ. ದೇಹಗಳಲ್ಲಿ ನಮಗೆ ಪ್ರೀತಿಯೆಂದರೇನು ?

ಅನ್ಯಾಸ್ಯೈವ ಚ ರುದ್ರಸ್ಯ ಭವಾಮಃ ಪ್ರಭವಿಷ್ಣವಃ ।
ತೈರ್ವಾ ವಿನಿಹತಾ ಯುದ್ಧೇ ಭವಿಷ್ಯಾಮೋ ಯಮಾಶನಾಃ ॥೨೦॥

ವಿದ್ಯುನ್ಮಾಲೇರ್ನಿಶಮ್ಯೈತನ್ಮಯೋ ವಚನಮೂರ್ಜಿತಂ ।
ತಂ ಪರಿಷ್ವಜ್ಯ ಸಾದ್ರಾಕ್ಷ ಇದಮಾಹ ಮಹಾಸುರಃ ॥೨೧॥

ವಿದ್ಯುನ್ಮಾಲಿನ್ನ ಮೇ ರಾಜ್ಯಮಭಿಪ್ರೇತಂ ನ ಜೀವಿತಂ ।
ತ್ವಯಾ ವಿನಾ ಮಹಾಬಾಹೋ ಕಿಮನ್ಯೇನ ಮಹಾಸುರ ॥೨೨॥

ಮಹಾಮೃತಮಯೀ ವಾಪೀ ಹ್ಯೇಷಾ ಮಾಯಾಭಿರೀಶ್ವರ ।
ಸ್ವಷ್ಟಾ ದಾನವದೈತ್ಯಾನಾಂ ಹಿತಾನಾಂ ಜೀವವರ್ಧಿನೀ ॥೨೩॥

ದಿಷ್ಟ್ಯಾ ತ್ವಾಂ ದೈತ್ಯ ಪಶ್ಯಾಮಿ ಯಮಲೋಕಾದಿಹಾಗತಂ ।
ದುರ್ಗತಾವನಯಗ್ರಸ್ತಂ ಭೋಕ್ಷ್ಯಾಮೋಽದ್ಯ ಮಹಾನಿಧಿಂ ॥೨೪॥

---

೨೦. ರುದ್ರನ ಸೇವೆಮಾಡಿ ಇನ್ನೂ ಶಕ್ತಿವಂತರಾಗೋಣ; ಅಥವಾ ಯುದ್ಧದಲ್ಲಿ ಅವರಿಂದ ಹತರಾಗಿ ಯಮನಿಗೆ ತುತ್ತಾಗೋಣ."

೨೧. ಮಹಾಸುರನಾದ ಮಯನು ವಿದ್ಯುನ್ಮಾಲಿಯ ಪೌರುಷ ವಚನವನ್ನು ಕೇಳಿ ಅವನನ್ನು ತಬ್ಬಿಕೊಂಡನು. ಕಣ್ಣಿನಲ್ಲಿ ನೀರುಸುರಿಸುತ್ತ ಈ ಮಾತನ್ನಾಡಿದನು.

೨೨. ಎಲೈ ವಿದ್ಯುನ್ಮಾಲಿಯೇ, ನನಗೆ ರಾಜ್ಯವಾಗಲಿ ಜೀವಿತವಾಗಲಿ ಇಷ್ಟವಿಲ್ಲ. ಓ ಮಹಾಬಾಹೂ, ಮಹಾಸುರಾ, ನೀನಿಲ್ಲದಿದ್ದಮೇಲೆ ಮತ್ತಾವುದರಿಂದ ತಾನೆ ಏನು ಪ್ರಯೋಜನ?

೨೩. ಪ್ರಭೂ, ದಿವ್ಯವಾದ, ಅಮೃತಮಯವಾದ ಬಾವಿಯಿದು. ಹತರಾದ ದೈತ್ಯದಾನವರನ್ನು ಬದುಕಿಸುವುದಕ್ಕಾಗಿ ಮಾಯಾಬಲದಿಂದ ಇದನ್ನು ನಿರ್ಮಿಸಿದೆನು.

೨೪. ಓ ವಿದ್ಯುನ್ಮಾಲೀ, ಯಮಲೋಕದಿಂದ ಮರಳಿ ಬಂದ ನಿನ್ನನ್ನು ನಾನು ನೋಡಿದೆನಲ್ಲಾ! ಇದು ಅದೃಷ್ಟವಿಶೇಷ. ನಾವು ಕಷ್ಟದಲ್ಲಿದ್ದಾಗ ಅವಿನಯಶೀಲರಾದ ದೇವತೆಗಳು ನಮ್ಮಿಂದ ಆಕ್ರಮಿಸಿಕೊಂಡಿದ್ದ ಮಹಾನಿಧಿಯನ್ನು ಈಗ ನಾವು ಅನುಭವಿಸೋಣ.

ದೃಷ್ಟ್ವಾ ದೃಷ್ಟ್ವಾ ಚ ತಾಂ ವಾಪೀಂ ಮಾಯಯಾ ಮಯನಿರ್ಮಿತಾಂ।
ಹೃಷ್ಟಾನನಾಕ್ಷಾ ದೈತ್ಯೇಂದ್ರಾ ಇದಂ ವಚನಮಬ್ರುವನ್ ॥೨೫॥

ದಾನವಾ ಯುಧ್ಯತೇದಾನೀಂ ಪ್ರಮಥೈಃ ಸಹ ನಿರ್ಭಯಾಃ।
ಮಯೇನ ನಿರ್ಮಿತಾ ವಾಪೀ ಹತಾನ್ ಸಂಜೀವಯಿಷ್ಯತಿ ॥೨೬॥

ತತಃ ಕ್ಷುಬ್ಧಾಂಬುಧಿನಿಭಾ ಭೇರೀ ಸಾ ತು ಭಯಂಕರೀ।
ವಾದ್ಯಮಾನಾ ನನಾದೋಚ್ಚೈ ರೌರವೀತಿ ಪುನಃ ಪುನಃ ॥೨೭॥

ಶ್ರುತ್ವಾ ಭೇರೀರವಂ ಘೋರಂ ಮೇಘಾರಂಭಿತಸನ್ನಿಭಂ।
ನ್ಯಪತನ್ನಸುರಾಸ್ತೂರ್ಣಂ ತ್ರಿಪುರಾದ್ಯುದ್ಧಲಾಲಸಾಃ ॥೨೮॥

ಲೋಹರಾಜತಸೌವರ್ಣೈಃ ಕಟಕೈರ್ಮಣಿರಾಜಿತೈಃ।
ಆಮುಕ್ತೈಃ ಕುಂಡಲೈರ್ಹಾರೈರ್ಮಕುಟೈರಪಿ ಚೋತ್ಕಟೈಃ ॥೨೯॥

---

೨೫. ಮಯನ ಮಾಯೆಯಿಂದ ನಿರ್ಮಿತವಾದ ಆ ಬಾವಿಯನ್ನು ನೋಡಿ ನೋಡಿ, ದೈತ್ಯಪ್ರಮುಖರ ಮುಖದಲ್ಲಿಯೂ ಕಣ್ಣುಗಳಲ್ಲಿಯೂ ಸಂತೋಷವು ಉಕ್ಕುತ್ತಿತ್ತು. ಆಗ ಅವರು ಇಂತೆಂದರು.

೨೬. "ಎಲೈ ದಾನವರೇ, ಈಗ ನಿರ್ಭಯವಾಗಿ ಪ್ರಮಥರೊಡನೆ ಯುದ್ಧ ಮಾಡಿರಿ. ಮಯನು ಅಮೃತಮಯವಾದ ಭಾವಿಯನ್ನು ನಿರ್ಮಿಸಿದ್ದಾನೆ. ಅದು ಸತ್ತವರನ್ನೆಲ್ಲ ಬದುಕಿಸುವುದು."

೨೭. ಬಳಿಕ ದೈತ್ಯರು ಭಯಂಕರವಾಗಿ ನಗಾರಿಯನ್ನು ಬಾರಿಸಿದರು. ಅದು ಅಲ್ಲೋಲ ಕಲ್ಲೋಲವಾದ ಮಹಾಸಾಗರದಂತೆ ಧ್ವನಿಮಾಡಿತು.

೨೮. ಗುಡುಗಿನಂತೆ ಭಯಂಕರವಾದ ಭೇರೀರವವನ್ನು ಕೇಳಿ, ಅಸುರರು ಯುದ್ಧಾಭಿಲಾಷಿಗಳಾಗಿ ತ್ರಿಪುರದಿಂದ ಬೇಗನೆ ಹೊರಟರು.

೨೯. ಅವರು ಕಬ್ಬಿಣ, ಬೆಳ್ಳಿ, ಚಿನ್ನ ಮತ್ತು ರತ್ನದ ಬಳೆಗಳಿಂದಲೂ, ಜೋಲಾಡುತ್ತಿರುವ ಹಾರ ಕುಂಡಲಗಳಿಂದಲೂ, ಅನರ್ಘವಾದ ಕಿರೀಟಗಳಿಂದಲೂ ಅಲಂಕೃತರಾಗಿದ್ದರು.

ಧೂಮಾಯಿತಾ ಹ್ಯವಿರಮಾ ಜ್ವಲಂತ ಇವ ಪಾವಕಾಃ ।
ಆಯುಧಾನಿ ಸಮಾದಾಯ ಕಾಶಿನೋ ದೃಢವಿಕ್ರಮಾಃ ॥೩೦॥

ನೃತ್ಯಮಾನಾ ಇವ ನಟಾ ಗರ್ಜಂತ ಇವ ತೋಯದಾಃ ।
ಕರೋಚ್ಛ್ರಯಾ ಇವ ಗಜಾಃ ಸಿಂಹಾ ಇವ ಚ ನಿರ್ಭಯಾಃ ॥೩೧॥

ಹ್ರದಾ ಇವ ಚ ಗಂಭೀರಾಃ ಸೂರ್ಯಾ ಇವ ಪ್ರತಾಪಿತಾಃ ।
ದ್ರುಮಾ ಇವ ಚ ದೈತ್ಯೇಂದ್ರಾಸ್ತ್ರಾಸಯಂತೋ ಬಲಂ ಮಹತ್ ॥೩೨॥

ಪ್ರಮಥಾ ಅಪಿ ಸೋತ್ಸಾಹಾ ಗರುಡೋತ್ಪಾತಪಾತಿನಃ
ಯುಯುತ್ಸವೋಽಭಿಧಾವಂತಿ ದಾನವಾನ್ ದಾನವಾರಯಃ ॥೩೩॥

ನಂದೀಶ್ವರೇಣ ಪ್ರಮಥಾಸ್ತಾರಕಾಖ್ಯೇಣ ದಾನವಾಃ ।
ಚಕ್ರುಃ ಸಂಹತ್ಯ ಸಂಗ್ರಾಮಂ ಚೋದ್ಯಮಾನಾ ಬಲೇನ ಚ ॥೩೪॥

ತೇಽಸಿಭಿಶ್ಚಂದ್ರಸಂಕಾಶೈಃ ಶೂಲೈಶ್ಚಾನಲಪಿಂಗಲೈಃ ।
ಬಾಣೈಶ್ಚ ದೃಢನಿರ್ಮುಕ್ತೈರಭಿಜಘ್ನುಃ ಪರಸ್ಪರಂ ॥೩೫॥

---

೩೦-೩೨. ದಟ್ಟಿಗಳನ್ನು ಬಿಗಿದು ಆಯುಧಗಳನ್ನು ಕೈಯಲ್ಲಿ ಹಿಡಿದಿರುವ ಮಹಾಪರಾಕ್ರಮಶಾಲಿಗಳಾದ ಅಸುರರು ಎಡೆಬಿಟದೆ ಹೊಗೆ ಸುತ್ತಿಕೊಂಡು ಉರಿಯುವ ಬೆಂಕಿಯಂತಿದ್ದರು. ನರ್ತಿಸುತ್ತಿರುವ ನಟರಂತೆಯೂ, ಗರ್ಜಿಸುತ್ತಿರುವ ಮೇಘಗಳಂತೆಯೂ, ಸೊಂಡಲನ್ನೆತ್ತಿದ ಆನೆಗಳಂತೆಯೂ, ಭಯರಹಿತವಾದ ಸಿಂಹಗಳಂತೆಯೂ, ಗಂಭೀರವಾದ ಮಡುಗಳಂತೆಯೂ, ಪ್ರತಾಪಶಾಲಿಗಳಾದ ದ್ವಾದಶಾದಿತ್ಯರಂತೆಯೂ, ಎತ್ತರವಾದ ಮರಗಳಂತೆಯೂ ಪ್ರಕಾಶಿಸುತ್ತ ಅವರು ಆ ದೊಡ್ಡ ಸೈನ್ಯವನ್ನು ಭಯಪಡಿಸುತ್ತಿದ್ದರು.

೩೩. ದಾನವಶತ್ರುಗಳಾದ ಪ್ರಮಥರೂ ಸಹ ಉತ್ಸಾಹದಿಂದ ಗರುಡನಂತೆ ಹಾರುತ್ತ, ಯುದ್ಧಾಭಿಲಾಷೆಯಿಂದ ದಾನವರ ಮೇಲೆ ನಡೆದರು.

೩೪. ನಂದೀಶ್ವರನು ಪ್ರಮಥಬಲಕ್ಕೂ, ತಾರಕಾಖ್ಯನು ದಾನವಸೈನ್ಯಕ್ಕೂ ನಾಯಕರಾಗಿದ್ದರು. ಎರಡುಕಡೆಯ ವೀರರೂ ಹುರುಪಿನಿಂದ ಕೈಕೈಗೂಡಿಸಿ ಹೋರಾಡಿದರು.

೩೫. ಅವರು ಅರ್ಧಚಂದ್ರಾಕಾರದ ಕತ್ತಿಗಳಿಂದಲೂ, ಅಗ್ನಿಯಂತೆ ಪಿಂಗಲ ವರ್ಣದ ಶೂಲಗಳಿಂದಲೂ ಒಬ್ಬರನ್ನೊಬ್ಬರು ಹೊಡೆದರು.

ಶರಾಣಾಂ ಸೃಜ್ಯಮಾನಾನಾಮಸೀನಾಂ ಚ ನಿಪಾತ್ಯತಾಂ ।
ರೂಪಾಣ್ಯಾಸನ್ ಮಹೋಲ್ಕಾನಾಂ ಪತಂತೀನಾಮಿವಾಂಬರಾತ್ ॥೩೬॥

ಶಕ್ತಿಭಿರ್ಭಿನ್ನಹೃದಯಾ ನಿರ್ದಯಾ ಹತಪಾತಿತಾಃ ।
ನಿರಯೇಷ್ವಿವ ನಿರ್ಮಗ್ನಾಃ ಕೂಜಂತೇ ಪ್ರಮಥಾಸುರಾಃ ॥೩೭॥

ಹೇಮಕುಂಡಲಯುಕ್ತಾನಿ ಕಿರೀಟೋತ್ಕಟವಂತಿ ಚ ।
ಶಿರಾಂಸ್ಯುರ್ವ್ಯಾಂ ಪತಂತಿ ಸ್ಮ ಗಿರಿಕೂಟನಿಭಾನಿ ಚ ॥೩೮॥

ಪರಶ್ವಧೈಃ ಪಟ್ಟಿಸೈಶ್ಚ ಖಡ್ಗೈಶ್ಚ ಪರಿಘೈಸ್ತಥಾ ।
ಛಿನ್ನಾಃ ಕರಿವರಾಕಾರಾ ಭುಜಾಃ ಪೇತುರ್ಧರಾತಲೇ ॥೩೯॥

ಗರ್ಜಂತಿ ಸಹಸಾ ಹೃಷ್ಟಾಃ ಪ್ರಮಥಾ ಭೀಮಗರ್ಜನಾಃ ।
ಸಾಧಯಂತ್ಯಪರೇ ಸಿದ್ಧಾ ಯುದ್ಧಗಾಂಧರ್ವಮದ್ಭುತಂ ॥೪೦॥

---

೩೬. ವೀರಭಟರು ಪ್ರಯೋಗಿಸುವ ಬಾಣಗಳೂ, ಬೀಸುವ ಕತ್ತಿಗಳೂ, ಆಕಾಶದಿಂದ ಬೀಳುವ ಉಲ್ಕಾಪಾತಗಳಂತೆ ಕಾಣುತ್ತಿದ್ದುವು.

೩೭. ಶಕ್ತ್ಯಾಯುಧಗಳಿಂದ ಎದೆಗಳು ಸೀಳಿಹೋಗಲು, ದಯಾರಹಿತರಾದ ಶತ್ರುಭಟರ ಪ್ರಹಾರದಿಂದ ಕೆಳಕ್ಕೆ ಬಿದ್ದು, ಪ್ರಮಥರೂ ಅಸುರರೂ ನರಕದಲ್ಲಿ ಬಿದ್ದವರಂತೆ ಕೂಗುತ್ತಿದ್ದರು.

೩೮. ಸುವರ್ಣಕುಂಡಲಗಳಿಂದ ಅಲಂಕೃತವಾಗಿ, ಕಿರೀಟಗಳಿಂದ ಪ್ರಕಾಶಿಸುವ ತಲೆಗಳು ಪರ್ವತಶಿಖರಗಳಂತೆ ನೆಲದ ಮೇಲೆ ಉರುಳುತ್ತಿದ್ದುವು.

೩೯. ಕೊಡಲಿ, ಪಟ್ಟಿಸ, ಕತ್ತಿ ಮತ್ತು ಪರಿಘಗಳಿಂದ ಕತ್ತರಿಸಿಹೋಗಿ ಆನೆಯ ಸೊಂಡಿಲುಗಳಂತೆ ದೀರ್ಘವಾದ ಬಾಹುಗಳು ಭೂಮಿಯ ಮೇಲೆ ಬಿದ್ದುವು.

೪೦. ಪ್ರಮಥರು ಭಯಂಕರವಾಗಿ ಘರ್ಜನೆಮಾಡುತ್ತ ಥಟ್ಟನೆ ಸಂತೋಷದಿಂದ ಸಿಂಹನಾದ ಮಾಡಿದರು. ಇನ್ನೂ ಉಳಿದ ಸಿದ್ಧರು ಅದ್ಭುತವಾದ ಯುದ್ಧಗೀತವನ್ನು ಹಾಡಿದರು.

**ಬಲವಾನ್ ಭಾಸಿ ಪ್ರಮಥ ದರ್ಪಿತೋ ಭಾಸಿ ದಾನವ ।**
**ಇತಿ ಚೋಚ್ಚಾರಯನ್ ವಾಚಂ ವಾರಣಾ ರಣಧೂರ್ಗತಾಃ ॥೪೧॥**

**ಪರಿಘೈರಾಹತಾಃ ಕೇಚಿದ್ದಾನವೈಃ ಶಂಕರಾನುಗಾಃ ।**
**ವಮಂತೇ ರುಧಿರಂ ವಕ್ತ್ರೈಃ ಸ್ವರ್ಣಧಾತುಮಿವಾಚಲಾಃ ॥೪೨॥**

**ಪ್ರಮಥೈರಪಿ ನಾರಾಚೈರಸುರಾಃ ಸುರಶತ್ರವಃ ।**
**ದ್ರುಮೈಶ್ಚ ಗಿರಿಶೃಂಗೈಶ್ಚ ಗಾಢಮೇವಾಹವೇ ಹತಾಃ ॥೪೩॥**

**ಸೂದಿತಾನಥ ತಾನ್ ದೈತ್ಯಾನನ್ಯೇ ದಾನವಪುಂಗವಾಃ ।**
**ಉತ್ಕ್ಷಿಪ್ಯ ಚಿಕ್ಷಿಪುರ್ವಾಪ್ಯಾಂ ಮಯದಾನವಚೋದಿತಾಃ ॥೪೪॥**

**ತೇ ಚಾಪಿ ಭಾಸ್ವರೈರ್ದೇವೈಃ ಸ್ವರ್ಗಲೋಕ ಇವಾಮರಾಃ ।**
**ಉತ್ತಸ್ಥುರ್ವಾಪೀಮಾಸಾದ್ಯ ಸದ್ರೂಪಾಭರಣಾಂಬರಾಃ ॥೪೫॥**

---

"ಓ ಪ್ರಮಥಾ, ನೀನು ಬಲವಂತನೆಂದು ತೋರುತ್ತದೆ" ಎಂದೂ, "ಎಲೈ ದಾನವನೇ, ನೀನು ಕೊಬ್ಬಿದಂತೆ ಕಾಣುತ್ತೀಯೆ" ಎಂದೂ ಗಜಸಮಾನರಾದ ವೀರರು ರಣಾಂಗಣದಲ್ಲಿ ಯುದ್ಧಮಾಡುತ್ತ ಒಬ್ಬರನ್ನೊಬ್ಬರು ಹೇಳಿದರು.

೪೨. ಈಶ್ವರನ ಪ್ರಮಥಗಣಗಳಲ್ಲಿ ಕೆಲವರು ಪರಿಘಗಳಿಂದ ಆಹತರಾಗಿ ಬೆಟ್ಟಗಳು ಹೊಂಬಣ್ಣದ ಧಾತುರಸವನ್ನು ಸುರಿಸುವಂತೆ ಬಾಯಿಂದ ರಕ್ತವನ್ನು ಕಾರಿದರು.

೪೩. ದೇವತೆಗಳ ಶತ್ರುಗಳಾದ ದಾನವರನ್ನು ಪ್ರಮಥರು ಬಾಣಗಳಿಂದಲೂ, ಮರಗಳಿಂದಲೂ, ಗಿರಿಶಿಖರಗಳಿಂದಲೂ ಬಲವಾಗಿ ಹೊಡೆದರು.

೪೪. ಮಯಾಸುರನ ಸೂಚನೆಯಂತೆ ದಾನವಶ್ರೇಷ್ಠರು ಮೃತರಾದ ದೈತ್ಯರನ್ನು ಎತ್ತಿಕೊಂಡುಹೋಗಿ ಅಮೃತದ ಬಾವಿಯಲ್ಲಿ ಹಾಕಿದರು.

೪೫. ಅವರೂ ಸಹ ಸ್ವರ್ಗಲೋಕದಲ್ಲಿನ ದೇವತೆಗಳಂತೆ ಒಳ್ಳೆಯ ರೂಪ, ವಸ್ತ್ರ, ಆಭರಣ ಇವುಗಳಿಂದ ಪ್ರಕಾಶಿಸುತ್ತ ಬಾವಿಯಿಂದೆದ್ದು ಬಂದರು.

ಅಥೈಕೇ ದಾನವಾಃ ಪ್ರಾಪ್ಯ ವಾಪೀಪ್ರಕ್ಷೇಪಣಾದಸೂನ್ ।
ಆಸ್ಫೋಟ್ಯ ಸಿಂಹನಾದಂ ಚ ಕೃತ್ವಾಧಾವಂಸ್ತಥಾಸುರಾಃ ॥೪೬॥

ದಾನವಾಃ ಪ್ರಮಥಾನೇತಾನ್ ಪ್ರಸರ್ಪತ ಕಿಮಾಸಥ ।
ಹತಾನಪಿ ಹಿ ವೋ ವಾಪೀ ಪುನರಜ್ಜೀವಯಿಷ್ಯತಿ ॥೪೭॥

ಏವಂ ಶ್ರುತ್ವಾ ಶಂಕುಕರ್ಣೋ ವಚೋಽಗ್ರ್ಯಗ್ರಹಸನ್ನಿಭಃ ।
ದ್ರುತಮೇತ್ಯ ದೇವೇಶಮಿದಂ ವಚನಮಬ್ರವೀತ್ ॥೪೮॥

ಸೂದಿತಾಃ ಸೂದಿತಾ ದೇವ ಪ್ರಮಥೈರಸುರಾ ಹ್ಯಮೀ ।
ಉತ್ತಿಷ್ಠಂತಿ ಪುನರ್ಭೀಮಾಃ ಸಸ್ಯಾ ಇವ ಜಲೋಕ್ಷಿತಾಃ ॥೪೯॥

ಅಸ್ಮಿನ್ ಕಿಲ ಪುರೇ ವಾಪೀ ಪೂರ್ಣಾಮೃತರಸಾಂಭಸಾ ।
ನಿಹತಾ ನಿಹತಾ ಯತ್ರ ಕ್ಷಿಪ್ತಾ ಜೀವಂತಿ ದಾನವಾಃ ॥೫೦॥

---

೪೬. ಮತ್ತೆ ಕೆಲವರು ದಾನವರು ಬಾವಿಯಲ್ಲಿ ತಮ್ಮ ಮೃತದೇಹವನ್ನು ಹಾಕಿದ ಕಾರಣ ಜೀವವಂತರಾಗಿ, ತೋಳುಗಳನ್ನು ತಟ್ಟುತ್ತ ಸಿಂಹನಾದ ಮಾಡುತ್ತ ಆ ದೇವತೆಗಳ ಕಡೆಗೆ ಓಡಿದರು.

೪೭. ಓ ದೈತ್ಯರೇ, ಈ ಪ್ರಮಥರನ್ನೋಡಿಸಿರಿ. ಏಕೆ ಕುಳಿತಿರುವಿರಿ ? ನೀವು ಹತರಾದರೂ ನಿಮ್ಮನ್ನು ಅಮೃತದ ಬಾವಿಯು ಬದುಕಿಸುವುದು.

೪೮. ಸೂರ್ಯನಂತೆ ತೇಜಸ್ವಿಯಾದ ಶಂಕುಕರ್ಣನು ಈ ಮಾತನ್ನು ಕೇಳಿ, ಬೇಗನೆ ಹೋಗಿ ಪರಮೇಶ್ವರನಿಗೆ ಇಂತು ಬಿನ್ನವಿಸಿದನು.

೪೯. "ದೇವಾ, ಪ್ರಮಥರು ಈ ಅಸುರರನ್ನು ಕೊಂದು ಕೊಂದು ಹಾಕುತ್ತಾರೆ. ಆದರೂ ಭಯಂಕರರೂಪರಾದ ಅವರು ನೀರು ಹಾಕಿದ ಸಸ್ಯಗಳಂತೆ ಮತ್ತೆ ಬದುಕಿ ಬರುತ್ತಾರೆ.

೫೦. ಈ ಪಟ್ಟಣದಲ್ಲಿ ಅಮೃತರಸದಿಂದ ತುಂಬಿದ ಒಂದು ಬಾವಿಯಿದೆಯಂತೆ. ಮೃತರಾದ ದಾನವರನ್ನು ಅದರಲ್ಲಿ ಹಾಕಿದರೆ ಅವರು ಬದುಕಿ ಎದ್ದು ಬರುತ್ತಾರಂತೆ."

ಇತಿ ವ್ಯಜ್ಞಾಪಯದ್ದೇವಂ ಶಂಕುಕರ್ಣೋ ಮಹೇಶ್ವರಂ ।
ಅಭವನ್ ದಾನವಬಲ ಉತ್ಪಾತಾ ವೈ ಸುದಾರುಣಾಃ ॥೫೧॥

ತಾರಕಾಖ್ಯಃ ಸುಭೀಮಾಕ್ಷೋ ದಾರಿತಾಸ್ಯೋ ಹರಿರ್ಯಥಾ ।
ಅಭ್ಯಧಾವತ್ಸುಸಂಕ್ರುದ್ಧೋ ಮಹಾದೇವರಥಂ ಪ್ರತಿ ॥೫೨॥

ತ್ರಿಪುರೇ ತು ಮಹಾನ್ ಘೋರೋ ಭೇರೀಶಂಖರವೋ ಬಭೌ ।
ದಾನವಾ ನಿಃಸೃತಾ ದೃಷ್ಟ್ವಾ ದೇವದೇವರಥೇ ಸುರಂ ॥೫೩॥

ಭೂಕಂಪಶ್ಚಾಭವತ್ತತ್ರ ಶತಾಂಗೋ ಭೂಗತೋಽಭವತ್ ।
ದೃಷ್ಟ್ವಾ ಕ್ಷೋಭಮಗಾದ್ರುದ್ರಃ ಸ್ವಯಂಭೂಶ್ಚ ಪಿತಾಮಹಃ ॥೫೪॥

ತಾಭ್ಯಾಂ ದೇವವರಿಷ್ಠಾಭ್ಯಾಮನ್ವಿತಃ ಸ ರಥೋತ್ತಮಃ ।
ಅನಾಯತನಮಾಸಾದ್ಯ ಸೀದತೇ ಗುಣವಾನಿವ ॥೫೫॥

---

೫೧. ಶಂಕುಕರ್ಣನು ಪೂಜ್ಯನಾದ ಮಹೇಶ್ವರನಲ್ಲಿ ಹೀಗೆ ಅರಿಕೆ ಮಾಡಿದನು. ಆಗ ದಾನವಸೈನ್ಯದಲ್ಲಿ ಭಯಂಕರವಾದ ಅಪಶಕುನಗಳಾದುವು.

೫೨. ಭಯಂಕರವಾದ ಕಣ್ಣುಳ್ಳ ತಾರಕಾಖ್ಯನು ಬಾಯಿ ಸೀಳಿದ ಸಿಂಹದಂತೆ ಬಹಳ ಕೋಪಿಷ್ಠನಾಗಿ ಮಹಾದೇವನ ರಥದ ಕಡೆಗೆ ಓಡಿದನು.

೫೩. ತ್ರಿಪುರನಗರದಲ್ಲಿ ಭಯಂಕರವಾದ ಭೇರಿ ಮತ್ತು ಶಂಖಗಳ ಧ್ವನಿಯಾಯಿತು. ಮಹಾದೇವನ ರಥದಲ್ಲಿ ಬ್ರಹ್ಮಾದಿ ದೇವವರ್ಗವನ್ನು ಕಂಡು ದಾನವರು ಅವರ ಮೇಲೆ ಬೀಳಲು ಹೊರಟರು.

೫೪. ಆ ಸಮಯದಲ್ಲಿ ನೆಲವು ನಡುಗಿತು. ರಥವು ನೆಲದಲ್ಲಿ ಹೂತುಕೊಂಡಿತು. ದೈತ್ಯರನ್ನು ಕಂಡು ರುದ್ರನೂ, ಬ್ರಹ್ಮನೂ ಕ್ಷುಬ್ಧರಾದರು.

೫೫. ದೇವತೆಗಳಲ್ಲಿ ಶ್ರೇಷ್ಠರಾದ ಬ್ರಹ್ಮ ಮತ್ತು ಈಶ್ವರ ಈ ಇಬ್ಬರೂ ಕುಳಿತಿದ್ದ ಆ ಉತ್ತಮವಾದ ರಥವು, ಆಶ್ರಯ ದೊರೆಯದ ಗುಣವಂತನಂತೆ ಕುಸಿದು ಬಿದ್ದಿತು.

ಧಾತುಕ್ಷಯೇ ದೇಹ ಇವ ಗ್ರೀಷ್ಮೇ ಚಾಲ್ಪಮಿವೋದಕಂ ।
ಶೈಥಿಲ್ಯಂ ಯಾತಿ ಸ ರಥಃ ಸ್ನೇಹೋ ವಿಪ್ರಕೃತೋ ಯಥಾ ॥೫೬॥

ರಥಾದುತ್ಪತ್ಯಾತ್ಮಭೂರ್ವೈ ಸೀದಂತಂ ತು ರಥೋತ್ತಮಂ ।
ಉಜ್ಜಹಾರ ಮಹಾಪ್ರಾಣೋ ರಥಂ ತ್ರೈಲೋಕ್ಯರೂಪಿಣಂ ॥೫೭॥

ತದಾ ಶರಾದ್ವಿನಿಷ್ಪತ್ಯ ಪೀತವಾಸಾ ಜನಾರ್ದನಃ ।
ವೃಷರೂಪಂ ಮಹತ್ಕೃತ್ವಾ ರಥಂ ಜಗ್ರಾಹ ದುರ್ಧರಂ ॥೫೮॥

ವಿಷಾಣಾಭ್ಯಾಂ ಚ ತ್ರೈಲೋಕ್ಯಂ ರಥಮೇವ ಮಹಾರಥಃ ।
ಪ್ರಗೃಹ್ಯೋದ್ವಹತೇ ವಿಷ್ಣುಃ ಕುಲಂ ಕುಲವಹೋ ಯಥಾ ॥೫೯॥

ತಾರಕಾಖ್ಯೋಽಪಿ ದೈತ್ಯೇಂದ್ರೋ ಗಿರೀಂದ್ರ ಇವ ಪಕ್ಷವಾನ್ ।
ಅಭ್ಯದ್ರವತ್ತದಾ ದೇವಂ ಬ್ರಹ್ಮಾಣಂ ಹತವಾಂಶ್ಚ ಸಃ ॥೬೦॥

---

೫೬. ಧಾತುವು ಕ್ಷಯಿಸಿದಾಗ ದೇಹದಂತೆಯೂ, ಗ್ರೀಷ್ಮಋತುವಿನಲ್ಲಿ ನೀರು ಬತ್ತಿದ ಕೊಳದಂತೆಯೂ, ಅಪಕಾರಮಾಡಿದವನ ಸ್ನೇಹದಂತೆಯೂ ಆ ರಥವು ಶೈಥಿಲ್ಯವನ್ನು ಹೊಂದಿತು.

೫೭. ಮಹಾಪ್ರಾಣನಾದ ಬ್ರಹ್ಮನು ರಥದಿಂದ ದುಮುಕಿ, ತ್ರೈಲೋಕ್ಯ ರೂಪವಾದ ಆ ದಿವ್ಯರಥವು ಕುಸಿದುಬೀಳುವುದನ್ನು ಕಂಡು ಮೇಲಕ್ಕೆತ್ತಿದನು.

೫೮. ಆಗ ಪೀತಾಂಬರಧಾರಿಯಾದ ಜನಾರ್ದನನು ಬಾಣದಿಂದಿಳಿದು, ದೊಡ್ಡಎತ್ತಿನ ರೂಪವನ್ನು ಧರಿಸಿ, ಹೊರಲಸಾಧ್ಯವಾದ ಆ ರಥವನ್ನು ಹಿಡಿದು ಕೊಂಡನು.

೫೯. ಮಹಾರಥನಾದ ವಿಷ್ಣುವು ತ್ರೈಲೋಕ್ಯಮಯವಾದ ಆ ತೇರನ್ನು, ಗುಣವಂತನಾದ ಪುತ್ರನು ತನ್ನ ವಂಶವನ್ನುದ್ಧರಿಸುವಂತೆ, ಕೊಂಬುಗಳಿಂದ ಎತ್ತಿ ಹಿಡಿದನು.

೬೦. ರೆಕ್ಕೆಯಿಂದ ಕೂಡಿದ ಮಹಾಗಿರಿಯಂತೆ ದೈತ್ಯರಾಜನಾದ ತಾರ ಕಾಖ್ಯನು ಮಹಾವೇಗದಿಂದ ಬ್ರಹ್ಮದೇವನ ಕಡೆಗೆ ಓಡಿ ಹೋಗಿ ಅವನನ್ನು ಹೊಡೆದನು.

ಸ ತಾರಕಾಖ್ಯಾಭಿಹತಃ ಪ್ರತೋದಂ ನ್ಯಸ್ಯ ಕೂಬರೇ ।
ವಿಜಜ್ವಾಲ ಮುಹುರ್ಬ್ರಹ್ಮಾ ಶ್ವಾಸಂ ವಕ್ತ್ರಾತ್ಸಮುದ್ಗಿರನ್ ॥೬೧॥

ತತ್ರ ದೈತ್ಯೈರ್ಮಹಾನಾದೋ ದಾನವೈರಪಿ ಭೈರವಃ ।
ತಾರಕಾಖ್ಯಸ್ಯ ಪೂಜಾರ್ಥಂ ಕೃತೋ ಜಲಧರೋಪಮಃ ॥೬೨॥

ರಥಚರಣಕರೋಽಥ ಮಹಾಮೃಧೇ
ವೃಷಭವಪುರ್ವೃಷಭೇಂದ್ರಪೂಜಿತಃ ।
ದಿತಿತನಯಬಲಂ ವಿಮರ್ದ್ಯ ಸರ್ವಂ
ತ್ರಿಪುರಪುರಂ ಪ್ರವಿವೇಶ ಕೇಶವಃ ॥೬೩॥

ಸಜಲಜಲದರಾಜಿತಾಂ ಸಮಸ್ತಾಂ
ಕುಮುದವರೋತ್ಪಲಫುಲ್ಲಪಂಕಜಾಢ್ಯಾಂ ।
ಸುರಗುರುರಪಿಬತ್ಪಯೋಽಮೃತಂ ತ
ದ್ರವಿರಿವ ಸಂಚಿತಶಾರ್ವರಂ ತಮೋಽಂಧಂ ॥೬೪॥

---

೬೧. ತಾರಕಾಖ್ಯನು ಪ್ರಹರಿಸಲು ಬ್ರಹ್ಮನು ಚಾವಟಿಯನ್ನು ನೊಗದ ಮೇಲಿರಿಸಿ, ಬಾಯಿಯಿಂದ ಅಡಿಗಡಿಗೆ ಮೇಲುಸಿರು ಬಿಡುತ್ತ ಕೋಪದಿಂದ ಕಿಡಿ ಕಿಡಿಯಾದನು.

೬೨. ತಾರಕಾಖ್ಯನ ಯುದ್ಧಕೌಶಲದ ಗೌರವಕ್ಕಾಗಿ ದೈತ್ಯದಾನವರು ಭಯಂಕರವಾಗಿ ಮೋಡದಂತೆ ಅಬ್ಬರಿಸಿ ಸಿಂಹನಾದಮಾಡಿದರು.

೬೩. ಬಳಿಕ ಆ ಮಹಾಯುದ್ಧದಲ್ಲಿ ವೃಷಭರೂಪಧಾರಿಯಾದ ಮಹಾ ವಿಷ್ಣುವು ನಂದೀಕೇಶ್ವರನಿಂದ ಸತ್ಕೃತನಾಗಿ, ದಾನವಸೈನ್ಯವನ್ನೆಲ್ಲ ಪುಡಿಪುಡಿ ಮಾಡಿ ತ್ರಿಪುರನಗರವನ್ನು ಪ್ರವೇಶಿಸಿದನು.

೬೪-೬೫. ನೀರು ತುಂಬಿದ ಮೋಡಗಳಿಂದ ಶೋಭಿಸುತ್ತ ಬಿಳಿನೈದಿಲೆ, ಕರಿನೈದಿಲೆ, ಅರಳಿದ ತಾವರೆ ಇವುಗಳಿಂದ ಪೂರ್ಣವಾಗಿರುವ ಆ ಕೊಳವನ್ನು ಹೊಕ್ಕು, ದೇವಗುರುವಾದ ವಿಷ್ಣುವು ಅದರಲ್ಲಿದ್ದ ಅಮೃತರಸವನ್ನು ಸೂರ್ಯನು ರಾತ್ರಿಯ ಕತ್ತಲೆಯನ್ನು ಕುಡಿಯುವಂತೆ ಕುಡಿದುಬಿಟ್ಟನು. ಬಳಿಕ ಪೀತಾಂಬರ

ವಾಪೀಂ ಪೀತ್ವಾಽಸುರೇಂದ್ರಾಣಾಂ ಪೀತವಾಸಾ ಜನಾರ್ದನಃ ।
ನರ್ದಮಾನೋ ಮಹಾಬಾಹುಃ ಪ್ರವಿವೇಶ ಶರಂ ತತಃ ॥೬೫॥

ತತೋಽಸುರಾ ಭೀಮಗಣೇಶ್ವರೈರ್ಹತಾಃ
ಪ್ರಹಾರಸಂವರ್ಧಿತಶೋಣಿತಾಪಗಾಃ ।
ಪರಾಙ್ಮುಖಾ ಭೀಮಮುಖೈಃ ಕೃತಾ ರಣೇ
ಯಥಾ ಮೃಗಾಃ ಕೇಸರಿಣಾ ಮಹಾವನೇ ॥೬೬॥

ಸ ತಾರಕಾಖ್ಯಸ್ತಡಿಮಾಲಿರೇವ ಚ
ಮಯೇನ ಸಾರ್ಧಂ ಪ್ರಮಥೈರಭಿದ್ರುತಾಃ ।
ಪುರಂ ಪರಾವೃತ್ಯ ನು ತೇ ಶರಾರ್ದಿತಾ
ಯಥಾ ಶರೀರಂ ಪವನಾದಯೋ ಗತಾಃ ॥೬೭॥

ಗಣೇಶ್ವರ್ಯಾಭ್ಯುದ್ಯತದರ್ಪಕಾಶಿನೋ
ಮಹೇಂದ್ರನಂದೀಶ್ವರಷಣ್ಮುಖಾ ಯುಧಿ ।
ವಿನೇದುರುಚ್ಚೈರ್ಜಹಸುಶ್ಚ ದುರ್ಮದಾ
ಜಯೇಮ ಚಂದ್ರಾದಿದಿಗೀಶ್ವರೈಃ ಸಹ ॥೬೮॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ತ್ರಿಪುರದಾಹೇ
ಷಟ್ತ್ರಿಂಶದಧಿಕಶತತಮೋಽಧ್ಯಾಯಃ

---

ಧಾರಿಯೂ, ಮಹಾಶೂರನೂ ಆದ ಆ ಕೇಶವನು ಉತ್ಸಾಹಧ್ವನಿಮಾಡುತ್ತ ಮತ್ತೆ ಈಶ್ವರನ ಬಾಣವನ್ನು ಪ್ರವೇಶಿಸಿದನು.

೬೬. ತರುವಾಯ ಭಯಂಕರಾಕಾರರಾದ ಗಣೇಶ್ವರರ ಪ್ರಹಾರದಿಂದ ದೈತ್ಯರ ಸೈನ್ಯದಲ್ಲಿ ರಕ್ತದ ಕೋಡಿ ಹರಿಯಿತು. ಮಹಾವನದಲ್ಲಿ ಮೃಗಗಳು ಸಿಂಹದಿಂದ ಪರಾಜಿತಗಳಾಗುವಂತೆ ಅಸುರರು ದೇವತೆಗಳೊಡನೆ ಕಾದಾಡಿ ಸೋತು ಹೋದರು.

೬೭. ತಾರಕಾಖ್ಯ, ವಿದ್ಯುನ್ಮಾಲಿ, ಮಯ ಇವರು ಪ್ರಮಥಗಣಗಳಿಗೆ ಸೋತುಬಾಣದ ಪೆಟ್ಟಿನಿಂದ ನೊಂದು, ಬಿಟ್ಟುಹೋಗಿದ್ದ ಪ್ರಾಣಗಳು ಶರೀರವನ್ನು ಸೇರಿಕೊಳ್ಳುವಂತೆ, ಮರಳಿ ಪಟ್ಟಣವನ್ನು ಹೊಕ್ಕರು.

೬೮. ಜಯಮತ್ತರಾದ ದೇವೇಂದ್ರ, ನಂದೀಶ್ವರ, ಷಣ್ಮುಖ ಇದರು ದರ್ಪದಿಂದ ಮೆರೆದರು. "ಚಂದ್ರ ಮತ್ತು ದಿಕ್ಪಾಲಕರ ಸಹಾಯದಿಂದ ಎಲ್ಲರನ್ನೂ ಜಯಿಸಬಲ್ಲೆವು" ಎಂದು ಗಟ್ಟಿಯಾಗಿ ಸಿಂಹನಾದಮಾಡಿ ನಕ್ಕರು.

## ಅಧ್ಯಾಯ ೧೩೬

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ದೈತ್ಯರ ಸೋಲನ್ನು ವರ್ಣಿಸಿದೆ.

ಮಯನು ತನ್ನ ನಗರಕ್ಕೆ ಹಿಂದಿರುಗಿ ಹೋಗಿ ವಿದ್ಯುನ್ಮಾಲಿಯ ಮರಣಕ್ಕಾಗಿ ಬಹಳ ದುಃಖಿಸಿದನು. ತರುವಾಯ ತನ್ನ ಮಾಯಾಬಲದಿಂದ ಅಮೃತರಸಪೂರ್ಣವಾದ ಒಂದು ಬಾವಿಯನ್ನು ನಿರ್ಮಾಣಮಾಡಿದನು. ಸತ್ತವರನ್ನು ಬದುಕಿಸಬಲ್ಲ ಶಕ್ತಿ ಅದಕ್ಕಿದ್ದಿತು. ವಿದ್ಯುನ್ಮಾಲಿಯ ದೇಹವನ್ನು ಅದರಲ್ಲಿ ಅದ್ದಲು, ಅವನು ನಿದ್ದೆಯಿಂದ ಎಚ್ಚೆತ್ತವನಂತೆ ಎದ್ದನು. ಅನಂತರ ದೈತ್ಯರು ಉತ್ಸಾಹಗೊಂಡು ಸಿಂಹನಾದಮಾಡುತ್ತ ದೇವತೆಗಳ ಮೇಲೆ ಏರಿ ಬಂದರು. ಇಬ್ಬರಿಗೂ ಘೋರ ಯುದ್ಧವು ನಡೆಯಿತು. ದಾನವರ ಕೈ ಮೇಲಾಗಿತ್ತು. ಶಂಕುಕರ್ಣನೆಂಬ ಗಣೇಶ್ವರನು ಅದರ ರಹಸ್ಯವನ್ನು ಪರಮೇಶ್ವರನಿಗೆ ತಿಳಿಸಿದನು. ಆಗ ತ್ರಿಪುರದಲ್ಲಿ ಭಯಂಕರವಾದ ಉತ್ಪಾತಗಳಾದುವು. ಈಶ್ವರನೂ ತೇರನ್ನೇರಿ ಯುದ್ಧಕ್ಕೆ ನಡೆದನು. ಅವನ ಬಾಣದಲ್ಲಿ ಅಡಗಿದ್ದ ವಿಷ್ಣುವು ವೃಷಭರೂಪವನ್ನು ತಾಳಿ ಮಯನಿರ್ಮಿತವಾದ ಆ ಬಾವಿಯಲ್ಲಿದ್ದ ಅಮೃತವೆಲ್ಲವನ್ನೂ ಕುಡಿದುಬಿಟ್ಟನು. ಆ ತಂತ್ರದಿಂದ ದೈತ್ಯರಿಗೆ ಸೋಲೂ, ದೇವತೆಗಳಿಗೆ ಜಯವೂ ಆದುವು.

ಶ್ರೀಮತ್ಸ್ಯಮಹಾಪುರಾಣದಲ್ಲಿ ತ್ರಿಪುರದಹನ ಪ್ರಕರಣದಲ್ಲಿ
ನೂರಮೂವತ್ತಾರನೆಯ ಅಧ್ಯಾಯವು ಮುಗಿದುದು.



## ಅಥ ಸಪ್ತತ್ರಿಂಶದಧಿಕಶತತಮೋಽಧ್ಯಾಯಃ

॥ ಸೂತ ಉವಾಚ ॥

ಪ್ರಮಥೈಃ ಸಮರೇ ಭಿನ್ನಾಸ್ತ್ರೈಪುರಾಸ್ತೇ ಸುರಾರಯಃ ।
ಪುರಂ ಪ್ರವಿವಿಶುರ್ಭೀತಾಃ ಪ್ರಮಥೈರ್ಭಗ್ನಗೋಪುರಂ ॥ ೧ ॥

ಶೀರ್ಣದಂಷ್ಟ್ರಾ ಯಥಾ ನಾಗಾ ಭಗ್ನಶೃಂಗಾ ಯಥಾ ವೃಷಾಃ ।
ಯಥಾ ವಿಪಕ್ಷಾಃ ಶಕುನಾ ನದ್ಯಃ ಕ್ಷೀಣೋದಕಾ ಯಥಾ ॥ ೨ ॥

ಮೃತಪ್ರಾಯಾಸ್ತಥಾ ದೈತ್ಯಾ ದೈವತೈರ್ವಿಕೃತಾನನಾಃ ।
ಬಭೂವುಸ್ತೇ ವಿಮನಸಃ ಕಥಂ ಕಾರ್ಯಂ ಭವೇದಿತಿ ॥ ೩ ॥

ಅಥ ತಾನ್ ಮ್ಲಾನಮನಸಸ್ತದಾ ತಾಮರಸಾನನಃ ।
ಉವಾಚ ದೈತ್ಯೋ ದೈತ್ಯಾನಾಂ ಪರಮಾಧಿಪತಿರ್ಮಯಃ ॥ ೪ ॥

---

೧. ಸೂತಪೌರಾಣಿಕನು ಹೇಳಿದನು.—ದೇವತೆಗಳ ಶತ್ರುಗಳಾದ ತ್ರಿಪುರಾಸುರರು ಪ್ರಮಥಗಣಗಳೊಡನೆ ಯುದ್ಧಮಾಡಿ ಸೋತರು. ಬಳಿಕ ಹೆದರಿಕೆಯಿಂದ ತಮ್ಮ ಪಟ್ಟಣವನ್ನು ಹೊಕ್ಕರು. ಅದರ ಗೋಪುರಗಳನ್ನು ಆಗಲೇ ಶಿವಗಣಗಳು ಮುರಿದು ಹಾಕಿದ್ದುವು.

೨-೩. ಹಲ್ಲು ಕಿತ್ತ ಹಾವುಗಳಂತೆಯೂ, ಕೊಂಬು ಮುರಿದ ಎತ್ತುಗಳಂತೆಯೂ, ರೆಕ್ಕೆಯಿಲ್ಲದ ಪಕ್ಷಿಗಳಂತೆಯೂ, ನೀರು ಬತ್ತಿದ ನದಿಗಳಂತೆಯೂ ದೈತ್ಯರು ಮೃತಪ್ರಾಯರಾಗಿದ್ದರು. ದೇವತೆಗಳ ಸಾಹಸದಿಂದ ಅವರ ಮುಖಗಳು ವಿಕಾರವಾಗಿದ್ದುವು. "ನಮ್ಮ ಕಾರ್ಯವು ಆಗುವುದು ಹೇಗೆ" ಎಂದು ಅವರು ದುಃಖಿತರಾದರು.

೪. ದೈತ್ಯರ ಪರಮಗುರುವಾದ ಮಯನು, ತಾವರೆಯಂತೆ ಮುಖವು ಅರಳಿರಲು, ದೀನಮನಸ್ಕರಾದ ತನ್ನವರನ್ನು ಕುರಿತು ಇಂತೆಂದನು.

ಕೃತ್ವಾ ಯುದ್ಧಾನಿ ಘೋರಾಣಿ ಪ್ರಮಥೈಃ ಸಹ ಸಾಮರೈಃ ।
ತೋಷಯಿತ್ವಾ ತಥಾ ಯುದ್ಧೇ ಪ್ರಮಥಾನಮರೈಃ ಸಹ ॥ ೫ ॥

ಯೂಯಂ ಯತ್ರಾಥವಂ ದೈತ್ಯಾಃ ಪಶ್ಚಾಚ್ಚ ಬಲಪೀಡಿತಾಃ ।
ಪ್ರವಿಷ್ಟಾ ನಗರಂ ತ್ರಾಸಾತ್ಪ್ರಮಥೈರ್ಭೃಶಮರ್ದಿತಾಃ ॥ ೬ ॥

ಅಪ್ರಿಯಂ ಕ್ರಿಯತೇ ವ್ಯಕ್ತಂ ದೇವೈರ್ನಾಸ್ತ್ಯತ್ರ ಸಂಶಯಃ ।
ಯತ್ರ ನಾಮ ಮಹಾಭಾಗಾಃ ಪ್ರವಿಶಂತಿ ಗಿರೇರ್ವನಂ ॥ ೭ ॥

ಅಹೋ ಹಿ ಕಾಲಸ್ಯ ಬಲಮಹೋ ಕಾಲೋ ಹಿ ದುರ್ಜಯಃ ।
ಯತ್ರೇದೃಶಸ್ಯ ದುರ್ಗಸ್ಯ ಉಪರೋಧೋಽಯಮಾಗತಃ ॥ ೮ ॥

ಮಯೇ ವಿವದಮಾನೇ ತು ನರ್ದಮಾನ ಇವಾಂಬುದೇ ।
ಬಭೂವುರ್ನಿಷ್ಪ್ರಭಾ ದೈತ್ಯಾ'ಗ್ರಹಾ ಇಂದೂದಯೇ ಯಥಾ ॥ ೯ ॥

---

೫-೬. "ಓ ದೈತ್ಯರೇ, ಪ್ರಮಥರೊಡನೆಯೂ ದೇವತೆಗಳೊಡನೆಯೂ ನೀವು ಮೊದಲು ಘೋರವಾದ ಯುದ್ಧವನ್ನು ಮಾಡಿ ಅವರನ್ನು ನಿಮ್ಮ ಶೌರ್ಯದಿಂದ ಮೆಟ್ಟಿದಿರಿ. ತರುವಾಯ ಅವರ ಬಲದಿಂದ ಪೀಡಿತರಾಗಿ ಹೆದರಿಕೊಂಡು ಈಗ ನಗರವನ್ನು ಪ್ರವೇಶಿಸಿರುವಿರಿ.

೭. ದೇವತೆಗಳು ನಮಗೆ ಅಪ್ರಿಯವನ್ನು ಮಾಡುತ್ತಾರೆ. ಅದರಲ್ಲಿ ಸಂಶಯವಿಲ್ಲ. ಮಹಾಶೂರರಾದ ದೈತ್ಯರು ಬೆಟ್ಟವನ್ನೂ ಕಾಡನ್ನೂ ಸೇರುತ್ತಿರುವರು.

೮. ಆಶ್ಚರ್ಯ! ಕಾಲಕ್ಕೆ ಎಷ್ಟು ಬಲವಿರುವುದು! ಅದನ್ನು ಜಯಿಸುವುದು ಅಸಾಧ್ಯ. ಇಂತಹ ಪ್ರಬಲವಾದ ದುರ್ಗಕ್ಕೆ ಈ ಬಗೆಯ ಉಪದ್ರವವು ಬಂದಿದೆಯಲ್ಲಾ!"

೯. ಹೀಗೆ ಮಯನು ಗುಡುಗುತ್ತಿರುವ ಮೋಡದಂತೆ ಮಾತನಾಡುತ್ತಿರಲು, ಚಂದ್ರೋದಯದ ಸಮಯದಲ್ಲಿನ ಗ್ರಹಗಳಂತೆ ದೈತ್ಯರು ಕಾಂತಿಹೀನರಾದರು.

ವಾಪೀಪಾಲಾಸ್ತತೋಽಭ್ಯೇತ್ಯ ನಭಃಕಾಲ ಇವಾಂಬುದಾಃ ।
ಮಯಮಾಹುರ್ಯಮಪ್ರಖ್ಯಂ ಸಾಂಜಲಿಪ್ರಗ್ರಹಾಃ ಸ್ಥಿತಾಃ ॥೧೦॥

ಯಾ ಸಾಽಮೃತರಸಾ ಗೂಢಾ ವಾಪೀ ವೈ ನಿರ್ಮಿತಾ ತ್ವಯಾ ।
ಸಮಾಕುಲೋತ್ಪಲವನಾ ಸಮೀನಕುಲಪಂಕಜಾ ॥೧೧॥

ಪೀತಾ ಸಾ ವೃಷರೂಪೇಣ ಕೇನಚಿದ್ದೈತ್ಯನಾಯಕ ।
ವಾಪೀ ಸಾ ಸಾಂಪ್ರತಂ ದೃಷ್ಟ್ವಾ ಮೃತಸಂಜ್ಞಾ ಇವಾಂಗನಾ ॥೧೨॥

ವಾಪೀಪಾಲವಚಃ ಶ್ರುತ್ವಾ ಮಯೋಽಸೌ ದಾನವಪ್ರಭುಃ ।
ಕಷ್ಟಮಿತ್ಯಸಕೃತ್ಪ್ರೋಚ್ಯ ದಿತಿಜಾನಿದಮಬ್ರವೀತ್ ॥೧೩॥

ಮಯಾ ಮಾಯಾಬಲಕೃತಾ ವಾಪೀ ಪೀತಾ ತ್ವಿಯಂ ಯದಿ ।
ವಿನಷ್ಟಾಃ ಸ್ಮ ನ ಸಂದೇಹಸ್ತ್ರಿಪುರಂ ದಾನವಾ ಗತಂ ॥೧೪॥

---

೧೦. ಬಾವಿಯ ಕಾವಲುಗಾರರು ಮಳೆಗಾಲದ ಮೋಡಗಳಂತೆ ಗುಂಪಾಗಿ ಬಂದು, ಕೈಮುಗಿದು ನಿಂತುಕೊಂಡು ಯಮಸದೃಶನಾದ ಮಯನಿಗೆ ಹೇಳಿದರು.

೧೧-೧೨. "ದೈತ್ಯಾಧೀಶ್ವರನಾದ ಎಲೈ ಮಯನೇ, ನೈದಿಲೆ, ತಾವರೆ, ಮೀನು ಇವುಗಳಿಂದ ತುಂಬಿ ಶೋಭಿಸುತ್ತ ಸತ್ತವರನ್ನು ಬದುಕಿಸಬಲ್ಲ ಬಾವಿಯನ್ನು ನೀನು ನಿರ್ಮಿಸಿದೆಯಲ್ಲವೆ? ಅದರ ಅಮೃತರಸವನ್ನು ಎತ್ತಿನ ರೂಪದಿಂದ ಬಂದು ಯಾರೋ ಕುಡಿದುಬಿಟ್ಟರು. ಈಗ ಅದು ಸತ್ತ ಹೆಂಗಸಿನಂತೆ ಸತ್ವಹೀನವಾಗಿ ಕಾಣುತ್ತಿದೆ."

೧೩. ಬಾವಿಯ ಕಾವಲಿನವರ ಮಾತನ್ನು ದಾನವಪ್ರಭುವಾದ ಮಯನು ಕೇಳಿದನು. "ಕಷ್ಟ! ಕಷ್ಟ" ಎಂದು ಹೇಳುತ್ತ ಅವರಿಗಿಂತೆಂದನು.

೧೪. "ಮಾಯಾಬಲದಿಂದ ನಾನು ನಿರ್ಮಿಸಿದ್ದ ಈ ಬಾವಿಯ ಅಮೃತವನ್ನು ಕುಡಿದುಬಿಟ್ಟದ್ದರೆ ನಾವೆಲ್ಲರೂ ಕೆಟ್ಟೆವು. ಸಂದೇಹವಿಲ್ಲ. ಇನ್ನು ತ್ರಿಪುರವೂ ಹೋಯಿತು ; ದಾನವರೂ ಹೋದರು.

ನಿಹತಾನ್ನಿಹತಾರ್ ದೈತ್ಯಾನಾಜೀವಯತಿ ದೈವತ್ಯೈಃ ।
ಪೀತಾ ವಾ ಯದಿ ವಾ ವಾಪೀ ಪೀತಾ ವೈ ಪೀತವಾಸಸಾ ॥೧೫॥

ಕೋಽನ್ಯೋ ಮನ್ಮಾಯಯಾ ಗುಪ್ತಾಂ ವಾಪೀಮಮೃತತೋಯಿನೀಂ ।
ಪಾಸ್ಯತೇ ವಿಷ್ಣುಮಜಿತಂ ವರ್ಜಯಿತ್ವಾ ಗದಾಧರಂ ॥೧೬॥

ಸುಗುಹ್ಯಮಪಿ ದೈತ್ಯಾನಾಂ ನಾಸ್ತ್ಯಸ್ಯಾವಿದಿತಂ ಭುವಿ ।
ಯತ್ರ ಮದ್ವರಕೌಶಲ್ಯಂ ವಿಜ್ಞಾತಂ ನ ವೃತಂ ಬುಧೈಃ ॥೧೭॥

ಸಮೋಽಯಂ ರುಚಿರೋ ದೇಶೋ ನಿರ್ದ್ರುಮೋ ವಿಗತಾಚಲಃ ।
ತೇ ವಯಂ ವಿರಥಾಸ್ತಸ್ಮಾದ್ಬಾಂಧಂತೇಽಸ್ಮಾನ್ ಗಣಾಃ ಸುರಾಃ ॥೧೮॥

ತೇ ಯೂಯಂ ಯದಿ ಮನ್ಯಧ್ವಂ ಸಾಗರೋಪರ್ಯಧಿಷ್ಠಿತಾಃ ।
ಪ್ರಮಥಾನಾಂ ಮಹಾವೇಗಂ ಸಹಾಮಃ ಶ್ವಸನೋಪಮಂ ॥೧೯॥

---

೧೫. ದೇವತೆಗಳು ಕೊಂದು ಕೊಂದು ಬಿಸಾಡುತ್ತಿದ್ದ ದೈತ್ಯರನ್ನು ಆ ಕೊಳವು ಬದುಕಿಸುತ್ತಿತ್ತು. ಅಂತಹುದನ್ನು ಕುಡಿದು ಬರಿದುಮಾಡಿದ್ದರೆ ಅದು ವಿಷ್ಣುವಿನ ಕೆಲಸವೇ ಆಗಿರಬೇಕು.

೧೬. ಅಜೇಯನೂ, ಗದಾಧರನೂ ಆದ ವಿಷ್ಣುವನ್ನು ಬಿಟ್ಟರೆ ಅಮೃತರಸ ಪೂರ್ಣವಾಗಿ ನನ್ನ ಮಾಯೆಯ ಬಲದಿಂದ ರಕ್ಷಿತವಾದ ಆ ಬಾವಿಯನ್ನು ಮತ್ತಾವನು ಕುಡಿಯಬಲ್ಲನು ?

೧೭. ದೈತ್ಯರಿಗೆ ಕೂಡ ತಿಳಿಯದಂತೆ ರಹಸ್ಯವಾಗಿಟ್ಟಿದ್ದರೂ ಇವನಿಗೆ ಗೊತ್ತಾಯಿತಲ್ಲಾ ! ಇವನು ಕಾಣದ ವಿಷಯವು ಲೋಕದಲ್ಲಿ ಯಾವುದೂ ಇಲ್ಲ. ನಾನು ಪಡೆದಿದ್ದ ವರದ ಕೌಶಲವು ಇವನಿಗೆ ತಿಳಿದುಬಿಟ್ಟಿತು. ಇಂತಹುದನ್ನು ದೇವತೆಗಳು ಕೂಡ ಕೇಳಿಕೊಂಡಿರಲಿಲ್ಲ.

೧೮. ಈ ಪ್ರದೇಶವು ನೋಡುವುದಕ್ಕೆ ಸುಂದರವಾಗಿಯೂ ಮಟ್ಟವಾಗಿಯೂ ಇದೆ. ಇಲ್ಲಿ ಮರಗಳಾಗಲಿ ಬೆಟ್ಟಗಳಾಗಲಿ ಇಲ್ಲ. ನಮಗಂತೂ ರಥಗಳೇ ಇಲ್ಲ. ಆದುದರಿಂದ ನಮ್ಮನ್ನು ಪ್ರಮಥಗಣಗಳೂ ದೇವತೆಗಳೂ ಬಾಧಿಸುತ್ತಾರೆ.

೧೯. ನೀವೆಲ್ಲರೂ ಒಪ್ಪುವುದಾದರೆ ನಾವು ಸಾಗರದ ಮೇಲ್ಗಡೆಯಿದ್ದುಕೊಂಡು ಪ್ರಮಥರ ವಾಯುಸಮಾನವಾದ ವೇಗವನ್ನು ಎದುರಿಸಿ ತಡೆಯಬಹುದು.

**ಏತೇಷಾಂ ಚ ಸಮಾರಂಭಾಸ್ತ್ರಸ್ಮಿನ್ ಸಾಗರಸಂಪ್ಲವೇ ।**
**ನಿರುತ್ಸಾಹಾ ಭವಿಷ್ಯಂತಿ ದುರ್ಗೇ ಮಾರ್ಗಂ ವಿನಾ ಸುರಾಃ ॥೨೦॥**

**ಯುಧ್ಯತಾಂ ನಿಘ್ನತಾಂ ಶತ್ರೂನ್ ಭೀತಾನಾಂ ಚ ದ್ರವಿಷ್ಯತಾಂ ।**
**ಸಾಗರೋಽಂಬರಸಂಕಾಶಃ ಶರಣಂ ನೋ ಭವಿಷ್ಯತಿ ॥೨೧॥**

**ಇತ್ಯುಕ್ತ್ವಾ ಸ ಮಯೋ ದೈತ್ಯೋ ದೈತ್ಯಾನಾಮಧಿಪಸ್ತದಾ ।**
**ತ್ರಿಪುರೇಣ ಯಯೌ ತೂರ್ಣಂ ಸಾಗರಂ ಸಿಂಧುಬಾಂಧವಂ ॥೨೨॥**

**ಸಾಗರೇ ಜಲಗಂಭೀರ ಉತ್ಪಪಾತ ಪುರಂ ವರಂ ।**
**ಅವತಸ್ಥುಃ ಪುರಾಣ್ಯೇವ ಗೋಪುರಾಭರಣಾನಿ ಚ ॥೨೩॥**

**ಅಪಕ್ರಾಂತೇ ತು ತ್ರಿಪುರೇ ತ್ರಿಪುರಾರಿಸ್ತ್ರಿಲೋಚನಃ ।**
**ಪಿತಾಮಹಮುವಾಚೇದಂ ವೇದವಾದವಿಶಾರದಂ ॥೨೪॥**

---

೨೦. ಸಾಗರದ ಜಲರಾಶಿಯಲ್ಲಿ ಇವರ ಪ್ರಯತ್ನಗಳು ಭಗ್ನವಾಗುವುವು. ನಮ್ಮ ದುರ್ಗವನ್ನು ಪ್ರವೇಶಿಸುವುದಕ್ಕೆ ದಾರಿಯನ್ನೇ ಕಾಣದೆ ದೇವತೆಗಳು ನಿರುತ್ಸಾಹರಾಗುವರು.

೨೧. ನಾವು ಯುದ್ಧಮಾಡಬಹುದು; ಶತ್ರುಗಳನ್ನು ಪ್ರಹರಿಸಬಹುದು. ಒಂದು ವೇಳೆ ಹೆದರಿಕೆಯಾದರೆ ಓಡಬಹುದು. ಸಾಗರವು ಆಕಾಶದಷ್ಟು ವಿಸ್ತಾರವಾಗಿದೆ. ಅದರಲ್ಲಿ ನಾವು ಮರೆಹೊಗಬಹುದು."

೨೨. ದೈತ್ಯರ ಅಧಿಪತಿಯಾದ ಆ ಮಯನು ಹೀಗೆ ಹೇಳಿ, ತ್ರಿಪುರದುರ್ಗಸಮೇತನಾಗಿ ನದಿಗಳಿಗೆ ಆಶ್ರಯಭೂತವಾದ ಸಾಗರಕ್ಕೆ ಬೇಗನೆ ಹೋದನು.

೨೩. ತ್ರಿಪುರವು ಆಳವಾದ ಸಾಗರದಲ್ಲಿ ಇಳಿಯಿತು. ಆದರೂ ಅದರಲ್ಲಿ ರಚಿತವಾಗಿದ್ದ ನಗರಗಳೂ, ಗೋಪುರಗಳೂ, ಅವುಗಳ ಅಲಂಕಾರಗಳೂ ಮೊದಲಿನಂತೆಯೇ ಇದ್ದುವು.

೨೪. ಹೀಗೆ ತ್ರಿಪುರವು ಕಣ್ಣಿಗೆ ಕಾಣಿಸದೆ ಹೊರಟುಹೋದಮೇಲೆ ಪರಮೇಶ್ವರನು ವೇದಗಳ ತತ್ವವನ್ನರಿತ ಬ್ರಹ್ಮನೊಡನೆ ಇಂತೆಂದನು.

ಪಿತಾಮಹ ದೃಢಂ ಭೀತಾ ಭಗರ್ವ ದಾನವಾ ಹಿ ನಃ ।
ವಿಪುಲಂ ಸಾಗರಂ ತೇ ತು ದಾನವಾಃ ಸಮುಪಾಶ್ರಿತಾಃ ॥೨೫॥

ಯತ ಏವ ಹಿ ತೇ ಯಾತಾಸ್ತ್ರಿಪುರೇಣ ತು ದಾನರ್ವಾ ।
ತತ ಏವ ರಥಂ ತೂರ್ಣಂ ಪ್ರಾಪಯಸ್ವ ಪಿತಾಮಹ ॥೨೬॥

ಸಿಂಹನಾದಂ ತತಃ ಕೃತ್ವಾ ದೇವಾ ದೇವರಥಂ ಚ ತಂ ।
ಪರಿವಾರ್ಯ ಯಯುರ್ಹೃಷ್ಟಾಃ ಸಾಯುಧಾಃ ಪಶ್ಚಿಮೋದಧಿಂ ॥೨೭॥

ತತೋಽಮರಾಮರಗುರುಂ ಪರಿವಾರ್ಯ ಭವಂ ಹರಂ ।
ನರ್ದಯಂತೋ ಯಯುಸ್ತೂರ್ಣಂ ಸಾಗರಂ ದಾನವಾಲಯಂ ॥೨೮॥

ಅಥ ಚಾರುಪತಾಕಭೂಷಿತಂ
ಪಟಹಾಡಂಬರಶಂಖನಾದಿತಂ ।
ತ್ರಿಪುರಮಭಿಸಮೀಕ್ಷ್ಯ ದೇವತಾ
ವಿವಿಧಬಲಾ ನನದುರ್ಯಥಾ ಘನಾಃ ॥೨೯॥

---

೨೫. "ಪೂಜ್ಯನಾದ ಎಲೈ ಬ್ರಹ್ಮನೇ, ದಾನವರು ನಮಗೆ ಬಹಳ ಹೆದರಿಕೊಂಡಿರುವರು. ಅವರು ವಿಸ್ತಾರವಾದ ಸಾಗರವನ್ನು ಆಶ್ರಯಿಸಿಕೊಂಡಿದ್ದಾರೆ.

೨೬. ಓ ಪಿತಾಮಹಾ, ತ್ರಿಪುರಸಮೇತರಾಗಿ ದೈತ್ಯರು ಯಾವ ಕಡೆಗೆ ಹೋಗಿರುವರೋ ಆ ಕಡೆಗೆ ಬೇಗನೆ ರಥವನ್ನು ನಡೆಸು."

೨೭. ಬಳಿಕ ದೇವತೆಗಳು ಸಿಂಹನಾದವನ್ನು ಮಾಡಿ, ಸಂತೋಷದಿಂದ ಆಯುಧಗಳನ್ನು ಹಿಡಿದುಕೊಂಡು, ಆ ಮಹಾದೇವನ ರಥವನ್ನು ಸುತ್ತುಗಟ್ಟಿ ಪಶ್ಚಿಮಸಮುದ್ರಕ್ಕೆ ಹೋದರು.

೨೮. ತರುವಾಯ ದೇವತೆಗಳು ಪಾಪಹಾರಕನೂ ಶಾಶ್ವತನೂ ಆದ ಮಹಾದೇವನನ್ನು ಅನುಸರಿಸುತ್ತ, ಸಂತೋಷದ ಧ್ವನಿಯನ್ನು ಮಾಡುತ್ತ ದಾನವರ ನೆಲೆಯೆನಿಸಿದ್ದ ಸಾಗರಕ್ಕೆ ಬೇಗನೆ ಹೋಗಿ ಸೇರಿದರು.

೨೯. ಬಗೆಬಗೆಯ ಶಕ್ತಿಸಾಹಸಗಳಿಂದ ಕೂಡಿದ ದೇವತೆಗಳು ಸುಂದರವಾದ ಪತಾಕೆಗಳಿಂದಲಂಕೃತವಾಗಿ ತಮಟೆಗಳೂ ಶಂಖಗಳೂ ಧ್ವನಿಮಾಡುತ್ತಿರುವ ತ್ರಿಪುರನಗರವನ್ನು ನೋಡಿ ಮೋಡಗಳಂತೆ ಅಬ್ಬರಿಸಿದರು.

**ಅಸುರವರಪುರೇಽಪಿ ದಾರುಣೋ**
**ಜಲಧರರಾವಮೃದಂಗಗಹ್ವರಃ ।**
**ದನುತನಯನಿನಾದಮಿಶ್ರಿತಃ**
**ಪ್ರತಿನಿಧಿಸಂಕ್ಷುಭಿತಾರ್ಣವೋಪಮಃ ॥೩೦॥**

**ಅಥ ಭುವನಪತಿರ್ಗತಿಃ ಸುರಾಣಾ**
**ಮರಿಮೃಗಯಾಮುದದಾತ್ಸುಲಬ್ಧಬುದ್ಧಿಃ ।**
**ತ್ರಿದಶಗಣಪತಿರ್ಹ್ಯುವಾಚ ಶಕ್ರಂ**
**ತ್ರಿಪುರಗತಂ ಸಹಸಾ ನಿರೀಕ್ಷ್ಯ ಶತ್ರುಂ ॥೩೧॥**

**ತ್ರಿದಶಗಣಪತೇ ನಿಶಾಮಯೈತತ್**
**ತ್ರಿಪುರನಿಕೇತನಂ ದಾನವಾಃ ಪ್ರವಿಷ್ಟಾಃ ।**
**ಯಮವರುಣಕುಬೇರಷಣ್ಮುಖೈಸ್ತತ್**
**ಸಹಗಣಪೈರಪಿ ಹನ್ಮಿ ದೇವದೇವ ॥೩೨॥**

---

೩೦. ದೈತ್ಯರಾಜನಾದ ಮಯನ ಪಟ್ಟಣದಲ್ಲಿಯೂ ಕೂಡ ಗುಡುಗಿನಂತೆ ಗಂಭೀರವಾಗಿ ಮೃದಂಗಗಳು ಧ್ವನಿಮಾಡುತ್ತಿದ್ದುವು. ದೈತ್ಯರ ಅರ್ಭಟವೂ ಅದರೊಡನೆ ಸೇರಿಕೊಂಡಿತ್ತು. ಇದನ್ನು ನೋಡಿದರೆ ತನಗೆ ಸದೃಶನಾದ ಮತ್ತೊಬ್ಬನನ್ನು ಕಂಡು ಸಮುದ್ರವು ಕ್ಷುಬ್ಧವಾಗಿ ಅಬ್ಬರಿಸುತ್ತದೆಯೋ ಎನ್ನುವಂತಿತ್ತು.

೩೧. ಪ್ರಪಂಚಗಳ ಅಧಿಪತಿಯೂ, ದೇವತೆಗಳ ರಕ್ಷಕನೂ, ಸರ್ವಜ್ಞನೂ, ಪ್ರಮಥಾಧೀಶ್ವರನೂ, ಆದ ಮಹಾದೇವನು ಶತ್ರುಗಳ ಬೇಟೆಯನ್ನು ಕೈಗೊಂಡನು. ಅವರು ತ್ರಿಪುರದುರ್ಗದಲ್ಲಿರುವುದನ್ನು ಥಟ್ಟನೆ ಕಂಡು ಅವನು ಇಂದ್ರನಿಗೆ ಇಂತು ಹೇಳಿದನು.

೩೨. "ಎಲೈ ದೇವೇಂದ್ರನೇ, ಕೇಳು. ದಾನವರು ತ್ರಿಪುರನಗರವನ್ನು ಹೊಕ್ಕರು. ಯಮ, ವರುಣ, ಕುಬೇರ ಷಣ್ಮುಖ, ಗಣಾಧಿಪತಿಗಳು ಇವರೊಡಗೂಡಿ ಅವರನ್ನು ಇಷ್ಟರಲ್ಲಿಯೇ ಸಂಹರಿಸುವೆನು.

ವಿಹಿತಪರಬಲಾಭಿಘಾತಭೂತಂ
  ವ್ರಜ ಜಲಧೇಸ್ತು ಯತಃ ಪುರಾಣಿ ತಸ್ಥುಃ ।
ಸ ರಥವರಗತೋ ಭವಃ ಸಮುದ್ರೇ
  ಹ್ಯುದಧಿಮಗಾತ್ತ್ರಿಪುರಂ ಪುನರ್ನಿಹಂತುಂ ॥೩೩॥

ಇತಿ ಪರಿಗಣಯಂತೋ ದಿತೇಃ ಸುತಾ
  ಹ್ಯವತಸ್ಥುರ್ಲವಣಾರ್ಣವೋಪರಿಷ್ಟಾತ್ ।
ಅಭಿಭವತ್ತ್ರಿಪುರಂ ಸದಾನವೇಂದ್ರಂ
  ಶರವರ್ಷೈರ್ಮುಸಲೈಶ್ಚ ವಜ್ರಮಿಶ್ರೈಃ ॥೩೪॥

ಅಹಮಪಿ ರಥವರ್ಯಮಾಸ್ಥಿತಃ
  ಸುರವರವರ್ಯ ಭವೇಯ ಪೃಷ್ಠತಃ ।
ಅಸುರವರವಧಾರ್ಥಮುದ್ಯತಾನಾಂ
  ಪ್ರತಿವಿದಧಾಮಿ ಸುಖಾಯ ತೇಽನಘ ॥೩೫॥

---

೩೩. ಶತ್ರುಸೈನ್ಯದ ಆಕ್ರಮಣಕ್ಕೆ ಅಡ್ಡಿಯಾಗಿರುವ ಸಮುದ್ರದ ತಲವನ್ನು ತ್ರಿಪುರಾಸುರರು ಪ್ರವೇಶಿಸಿದ್ದಾರೆ. ನೀನೂ ಅಲ್ಲಿಗೆ ಹೋಗು.'' ಹೀಗೆ ಹೇಳಿ ಆ ದಿವ್ಯರಥದಲ್ಲಿ ಕುಳಿತಿದ್ದ ಮಹಾಶೂರನಾದ ಈಶ್ವರನು ತ್ರಿಪುರಹನನಕ್ಕಾಗಿ ಸಮುದ್ರದೊಳಗೆ ಹೊಕ್ಕನು.

೩೪. ಈ ಸಂಗತಿಯನ್ನು ಅರಿತ ದೈತ್ಯರು ಲವಣ ಸಮುದ್ರದ ಮೇಲ್ಗಡೆ ಬಂದು ನಿಂತರು. ಪರಮೇಶ್ವರನು ಬಾಣಗಳ ಮಳೆಗರೆದು ಮುಸಲಗಳಿಂದಲೂ ವಜ್ರಾಯುಧಗಳಿಂದಲೂ ದಾನವರಾಜ ಸಹಿತವಾಗಿ ತ್ರಿಪುರವನ್ನು ಪೀಡಿಸುತ್ತಿದ್ದನು.

೩೫-೩೬. "ದೇವರಾಜಾ, ದಿವ್ಯವಾದ ರಥದಲ್ಲಿ ಕುಳಿತು ನಾನೂ ನಿನ್ನ ಹಿಂದೆಯೇ ಬರುವೆನು. ಎಲೈ ಪಾಪರಹಿತನೇ, ಈ ದೈತ್ಯರನ್ನು ಸಂಹರಿಸುವ ಕಾರ್ಯ ದಲ್ಲಿ ಯಾರು ಯಾರು ತೊಡಗಿರುವರೋ ಅವರೆಲ್ಲರಿಗೂ ಸಹಾಯಕನಾಗಿರುವೆನು. ನಿನಗೆ ಮಂಗಳವಾಗಲಿ" ಎಂದು ಮಹಾದೇವನು ಉತ್ತೇಜನವನ್ನು ಕೊಡಲು ಇಂದ್ರನು ಕಾರ್ಯೋನ್ಮುಖನಾದನು. ತ್ರಿಪುರಾಸುರರನ್ನು ಅವರ ನಗರಸಹಿತವಾಗಿ

**ಇತಿ ಭವವಚನಪ್ರಚೋದಿತೋ**
**ದಶಶತನಯನವಪುಃ ಸಮುದ್ಯತಃ ।**
**ತ್ರಿಪುರಪುರಜಿಘಾಂಸಯಾ ಹರಃ**
**ಪ್ರವಿಕಸಿತಾಂಬುಜಲೋಚನೋ ಯಯೌ** ॥೩೬॥

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ತ್ರಿಪುರಾಕ್ರಮಣಂ ನಾಮ ಸಪ್ತತ್ರಿಂಶದಧಿಕಶತತಮೋಽಧ್ಯಾಯಃ**

---

ಧ್ವಂಸಮಾಡಬೇಕೆಂದು ಪರಮೇಶ್ವರನು ಸಂಕಲ್ಪಿಸಿ ಮುಂದೆ ನಡೆದನು. ಧೈರ್ಯೋತ್ಸಾಹಗಳಿಂದ ಅವನ ಕಣ್ಣುಗಳು ಅರಳಿದುವು.

## ಅಧ್ಯಾಯದ ಸಾರಾಂಶ

ತ್ರಿಪುರಾಸುರರ ಆಕ್ರಮಣವೃತ್ತಾಂತವನ್ನು ಈ ಅಧ್ಯಾಯವು ತಿಳಿಸುತ್ತದೆ.

ದೈತ್ಯರು ಪರಾಜಿತರಾಗಿ ಮತ್ತೆ ತ್ರಿಪುರವನ್ನು ಹೊಕ್ಕರು. ಅವರ ಅಧಿಪತಿಯಾದ ಮಯನು ಅವರನ್ನು ಸಂತೈಸಿದನು. ಆ ವೇಳೆಗೆ ದೂತರು ಬಂದು ಎತ್ತಿನ ರೂಪದಿಂದ ಯಾರೋ ಬಂದು ಅಮೃತವನ್ನೆಲ್ಲ ಕುಡಿದು ಬಿಟ್ಟರೆಂದೂ, ಮೃತಸಂಜೀವನಿ ಕೊಳವು ಬರಿದಾಯಿತೆಂದೂ ಹೇಳಿದರು. "ಅದು ವಿಷ್ಣುವಿನ ಕೆಲಸವೇ ಆಗಿರಬೇಕು ; ಮತ್ತಾರಿಗೂ ಸಾಧ್ಯವಿಲ್ಲ" ಎಂದು ಮಯನು ನಿಶ್ಚಯಿಸಿ, ದಿಕ್ಕುತೋರದೆ ತನ್ನ ನಗರದೊಡನೆ ಸಮುದ್ರವನ್ನು ಹೊಕ್ಕನು.

ಪರಮೇಶ್ವರನಿಗೆ ಈ ಸಂಗತಿ ತಿಳಿಯಿತು. ತನ್ನ ತೇರನ್ನು ಅಲ್ಲಿಗೆ ಬಿಡುವಂತೆ ಸಾರಥಿಗೆ ಅಪ್ಪಣೆಯಿತ್ತನು "ಮುಂದೆ ಹೋಗಿ ದೈತ್ಯರೊಡನೆ ನೀನು ಹೋರಾಡುತ್ತಿರು. ನಾನು ನಿನ್ನ ಹಿಂದೆಯೇ ಇರುವೆನು" ಎಂದು ದೇವೇಂದ್ರನಿಗೆ ಧೈರ್ಯವಿತ್ತು ಕಳುಹಿಸಿ ತಾನು ಉತ್ಸಾಹದಿಂದ ಅತ್ತ ತೆರಳಿದನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ತ್ರಿಪುರಾಕ್ರಮಣವೆಂಬ ನೂರಮೂವತ್ತೇಳನೆಯ ಅಧ್ಯಾಯವು ಮುಗಿದುದು.

*

## ಅಥಾಷ್ಟತ್ರಿಂಶದಧಿಕಶತತಮೋಽಧ್ಯಾಯಃ

॥ ಸೂತ ಉವಾಚ ॥

ಮಘವಾ ತು ನಿಹಂತುಂ ತಾನಸುರಾನಮರೇಶ್ವರಃ ।
ಲೋಕಪಾಲಾ ಯುಯುಃ ಸರ್ವೇ ಗಣಪಾಲಾಶ್ಚ ಸರ್ವಶಃ ॥ ೧ ॥

ಈಶ್ವರಾಃ ಮೋದಿತಾಃ ಸರ್ವ ಉತ್ಪೇತುಶ್ಚಾಂಬರೇ ತದಾ ।
ಖಗತಾಸ್ತು ವಿರೇಜುಸ್ತೇ ಪಕ್ಷವಂತ ಇವಾಚಲಾಃ ॥ ೨ ॥

ಪ್ರಯಯುಸ್ತತ್ಪುರಂ ಹಂತುಂ ಶರೀರಮಿವ ವ್ಯಾಧಯಃ ।
ಶಂಖಾಡಂಬರನಿರ್ಘೋಷೈಃ ಪಣವಾ ಪಟಹಾನಪಿ ।
ನಾದಯಂತಃ ಪುರೋ ದೇವಾ ದೃಷ್ಟ್ವಾಸ್ತ್ರಿಪುರವಾಸಿಭಿಃ ॥ ೩ ॥

ಹರಃ ಪ್ರಾಪ್ತ ಇತೀವೋಕ್ತ್ವಾ ಬಲಿನಸ್ತೇ ಮಹಾಸುರಾಃ ।
ಆಜಗ್ಮುಃ ಪರಮಂ ಕ್ಷೋಭಮುತ್ಕಯೇಷ್ವಿವ ಸಾಗರಾಃ ॥ ೪ ॥

---

೧. ಸೂತಪೌರಾಣಿಕನು ಹೇಳಿದನು.—ಅಸುರರನ್ನು ಸಂಹರಿಸುವುದಕ್ಕಾಗಿ ಅಮರೇಶ್ವರನಾದ ಇಂದ್ರನೂ, ಲೋಕಪಾಲಕರೂ, ಗಣಾಧಿಪತಿಗಳೂ ಎಲ್ಲರೂ ಹೋದರು.

೨. ಕಾರ್ಯಸಮರ್ಥರಾದ ಅವರೆಲ್ಲರೂ ಸಂತೋಷದಿಂದ ಆಕಾಶಕ್ಕೆ ಹಾರಿದರು. ಅವರು ರೆಕ್ಕೆಗಳಿಂದ ಕೂಡಿದ ಬೆಟ್ಟಗಳಂತೆ ಗಗನದಲ್ಲಿ ಪ್ರಕಾಶಿಸಿದರು.

೩. ವ್ಯಾಧಿಗಳು ಶರೀರವನ್ನು ಹಿಂಸಿಸುವಂತೆ ತ್ರಿಪುರವನ್ನು ಧ್ವಂಸ ಮಾಡಲು ಅವರು ಹೊರಟರು. ಶಂಖ, ಮದ್ದಳೆ, ತಮಟೆ ಮುಂತಾದುವುಗಳನ್ನು ಬಾರಿಸುತ್ತಾ ಸಿಂಹನಾದ ಮಾಡುತ್ತಿದ್ದರು. ತ್ರಿಪುರವಾಸಿಗಳು ಅವರನ್ನು ಕಂಡರು.

೪. ಈಶ್ವರನು ಬಂದನೆಂದು ಹೇಳುತ್ತ ಬಲಿಷ್ಠರಾದ ಆ ಮಹಾಸುರರು ಪ್ರಳಯಕಾಲದಲ್ಲಿನ ಮಹಾಸಾಗರಗಳಂತೆ ಬಹಳ ಕ್ಷುಬ್ಧರಾದರು.

ಸುರತೂರ್ಯರವಂ ಶ್ರುತ್ವಾ ದಾನವಾ ಭೀಮದರ್ಶನಾಃ ।
ವಿನೇದುರ್ವಾದಯಂತಶ್ಚ ನಾನಾವಾದ್ಯಾನ್ಯನೇಕಶಃ ॥ ೫ ॥

ಭೂಯೋದೀರಿತವೀರ್ಯಾಸ್ತೇ ಪರಸ್ಪರಕೃತಾಗಸಃ ।
ಪೂರ್ವದೇವಾಶ್ಚ ದೇವಾಶ್ಚ ಸೂದಯಂತಃ ಪರಸ್ಪರಂ ॥ ೬ ॥

ಆಕ್ರೋಶೇಽಪಿ ಸಮಪ್ರಖ್ಯೇ ತೇಷಾಂ ದೇಹನಿಕೃಂತನಂ ।
ಪ್ರವೃತ್ತಂ ಯುದ್ಧಮತುಲಂ ಪ್ರಹಾರಕೃತನಿಃಸ್ವನಂ ॥ ೭ ॥

ನಿಷ್ಪತಂತ ಇವಾದಿತ್ಯಾಃ ಪ್ರಜ್ವಲಂತ ಇವಾಗ್ನಯಃ ।
ಶ್ವಸಂತ ಇವ ನಾಗೇಂದ್ರಾ ಭ್ರಮಂತ ಇವ ಪಕ್ಷಿಣಃ ।
ಗಿರೀಂದ್ರಾ ಇವ ಕಂಪಂತೋ ಗರ್ಜಂತ ಇವ ತೋಯದಾಃ ॥ ೮ ॥

ಜೃಂಭಂತ ಇವ ಶಾರ್ದೂಲಾಃ ಪ್ರವಾಂತ ಇವ ವಾಯವಃ ।
ಪ್ರವೃದ್ಧೋರ್ಮಿತರಂಗೌಘಾಃ ಕ್ಷುಭ್ಯಂತ ಇವ ಸಾಗರಾಃ ॥ ೯ ॥

---

೫. ದೇವತೆಗಳ ವಾದ್ಯ ಧ್ವನಿಗಳನ್ನು ಕೇಳಿ ಭಯಂಕರರಾದ ದಾನವರು ಉತ್ಸಾಹದಿಂದ ಕೂಗಿದರು. ಬಗೆಬಗೆಯ ವಾದ್ಯಗಳನ್ನು ಬಾರಿಸಿದರು.

೬. ಅಡಿಗಡಿಗೆ ತಮ್ಮ ಪೌರಷವನ್ನು ಕೊಚ್ಚಿಕೊಳ್ಳುತ್ತ, ಒಬ್ಬರ ಮೇಲೊಬ್ಬರು ತಪ್ಪು ಹೊರಿಸುತ್ತ ದೇವತೆಗಳೂ ದಾನವರೂ ಒಬ್ಬರನ್ನೊಬ್ಬರು ಕೊಲ್ಲುತ್ತಿದ್ದರು.

೭. ಅವರಿಬ್ಬರಲ್ಲೂ ಕೋಪವು ಸಮಾನವಾಗಿ ಕಾಣುತ್ತಿತ್ತು. ಒಬ್ಬರ ದೇಹವನ್ನು ಮತ್ತೊಬ್ಬರು ಕತ್ತರಿಸುವರು ; ಪ್ರಹರಿಸಿ ಅಬ್ಬರಿಸುವರು ; ಹೀಗೆ ತುಮುಲ ಯುದ್ಧವು ನಡೆಯಿತು.

೮-೧೦. ವೇಗದಿಂದ ಬೀಳುವ ಸೂರ್ಯರಂತೆ, ಉರಿಯುತ್ತಿರುವ ಬೆಂಕಿಗಳಂತೆ, ನಿಟ್ಟುಸಿರುಬಿಡುವ ಮದದಾನೆಗಳಂತೆ, ಚಕ್ರಾಕಾರವಾಗಿ ತಿರುಗುವ ಪಕ್ಷಿಗಳಂತೆ, ನಡುಗುವ ಬೆಟ್ಟಗಳಂತೆ, ಗರ್ಜಿಸುವ ಮೋಡಗಳಂತೆ, ಬಾಯ್ದೆರೆಯುವ ಹುಲಿಗಳಂತೆ, ಬೀಸುವ ಗಾಳಿಗಳಂತೆ, ದೊಡ್ಡ ದೊಡ್ಡ ಅಲೆಗಳೆದ್ದು ಅಲ್ಲೋಲ

ಪ್ರಮಥಾಶ್ಚ ಮಹಾಶೂರಾ ದಾನವಾಶ್ಚ ಮಹಾಬಲಾಃ ।
ಯುಯುಧುರ್ನಿಶ್ಚಲಾ ಭೂತ್ವಾ ವಜ್ರಾ ಇವ ಮಹಾಚಲೈಃ ॥೧೦॥

ಕಾರ್ಮುಕಾನಾಂ ವಿಕೃಷ್ಟಾನಾಂ ಬಭೂವುರ್ದಾರುಣಾ ರವಾಃ ।
ಕಾಲಾನುಗಾನಾಂ ಮೇಘಾನಾಂ ಯಥಾ ವಿಯತಿ ವಾಯುನಾ ॥೧೧॥

ಆಹುಶ್ಚ ಯುದ್ಧೇ ಮಾ ಭೈಷೀಃ ಕ್ವ ಯಾಸ್ಯಸಿ ಮೃತೋ ಹ್ಯಸಿ ।
ಪ್ರಹರಾಶು ಸ್ಥಿತೋಽಸ್ಮ್ಯತ್ರ ಏಹಿ ದರ್ಶಯ ಪೌರುಷಂ ॥೧೨॥

ಗೃಹಾಣ ಛಿಂದಿ ಭಿಂದೀತಿ ಖಾದ ಮಾರಯ ದಾರಯ ।
ಇತ್ಯನ್ಯೋನ್ಯಮನೂಚ್ಚಾರ್ಯ ಪ್ರಯಯುರ್ಯಮಸಾದನಂ ॥೧೩॥

ಖಡ್ಗಾಪವರ್ಜಿತಾಃ ಕೇಚಿತ್ಕೇಚಿಚ್ಛಿನ್ನಾಃ ಪರಶ್ವಧೈಃ ।
ಕೇಚಿನ್ಮುದ್ಗರಚೂರ್ಣಾಶ್ಚ ಕೇಚಿದ್ಬಾಹುಭಿರಾಹತಾಃ ॥೧೪॥

---

ಕಲ್ಲೋಲವಾಗುತ್ತಿರುವ ಸಾಗರಗಳಂತೆ ಮಹಾಶೂರರಾದ ಪ್ರಮಥರೂ ಮಹಾಬಲರಾದ ದಾನವರೂ ನಿಶ್ಚಲರಾಗಿ ಹೋರಾಡಿದರು. ಆ ಯುದ್ಧವು ವಜ್ರಾಯುಧಗಳಿಗೂ ಮಹಾಗಿರಿಗಳಿಗೂ ನಡೆಯುವ ಯುದ್ಧವನ್ನು ಹೋಲುತ್ತಿತ್ತು.

೧೧. ಗಾಳಿಯು ಹೊತ್ತುಕೊಂಡು ಬಂದ ಕಾರ್ಮೋಡಗಳು ಗಗನದಲ್ಲಿ ಗರ್ಜಿಸುವಂತೆ ಯೋಧರು ಎಳೆಯುವ ಬಿಲ್ಲುಗಳು ಭಯಂಕರವಾದ ಧ್ವನಿಯನ್ನು ಮಾಡುತ್ತಿದ್ದುವು.

೧೨-೧೩. ಹೆದರಬೇಡ; ಎಲ್ಲಿ ಹೋಗುವೆ? ನೀನು ಸತ್ತೆ; ಬೇಗ ಹೊಡೆ; ಇಲ್ಲೇ ನಿಂತಿದ್ದೇನೆ ಬಾ; ಪೌರುಷವನ್ನು ತೋರಿಸು; ಹಿಡಿದುಕೋ; ಕತ್ತರಿಸು; ಇರಿ; ತಿನ್ನು, ಕೊಲ್ಲು, ಸೀಳು ಹೀಗೆ ಯುದ್ಧದಲ್ಲಿ ಒಬ್ಬರಿಗೊಬ್ಬರು ಹೇಳುತ್ತ ಯಮಪುರಿಯನ್ನು ಸೇರುತ್ತಿದ್ದರು.

೧೪. ಕೆಲವರನ್ನು ಕತ್ತಿಯಿಂದ ಹೊಡೆದರು; ಕೆಲವರನ್ನು ಕೊಡಲಿಗಳಿಂದ ಕತ್ತರಿಸಿದರು. ಇನ್ನು ಕೆಲವರನ್ನು ಮುದ್ಗರದಿಂದ ಪುಡಿಮಾಡಿದರು. ಮತ್ತೆ ಕೆಲವರನ್ನು ಬಾಹುಗಳಿಂದ ಪ್ರಹರಿಸಿದರು.

ಪಟ್ಟಿಶೈಃ ಸೂದಿತಾಃ ಕೇಚಿತ್ಕೇಚಿಚ್ಛೂಲವಿದಾರಿತಾಃ ।
ದಾನವಾಃ ಶರಪುಷ್ಪಾಭಾಃ ಸವನಾ ಇವ ಪರ್ವತಾಃ ।
ನಿಪತಂತ್ಯರ್ಣವಜಲೇ ಭೀಮನಕ್ರತಿಮಿಂಗಿಲೇ ॥೧೫॥

ವ್ಯಸುಭಿಃ ಶರವಿದ್ಧಾಂಗೈಃ ಪತಮಾನೈಃ ಸುರೇತರೈಃ ।
ಸಂಬಭೂವಾರ್ಣವೇ ಶಬ್ದಃ ಸಜಲಾಂಬುದನಿಸ್ಸ್ವನಃ ॥೧೬॥

ತೇನ ಶಬ್ದೇನ ಮಕರಾ ನಕ್ರಾಸ್ತಿಮಿತಿಮಿಂಗಿಲಾಃ ।
ಮತ್ತಾ ಲೋಹಿತಗಂಧೇನ ಕ್ಷೋಭಯಂತೋ ಮಹಾರ್ಣವಂ ॥೧೭॥

ಪರಸ್ಪರೇಣ ಕಲಹಂ ಕುರ್ವಾಣಾ ಭೀಮಮೂರ್ತಯಃ ।
ಭ್ರಮಂತೇ ಭಕ್ಷಯಂತಶ್ಚ ದಾನವಾನಾಂ ಚ ಲೋಹಿತಂ ॥೧೮॥

ಸರಥಾನ್ ಸಾಯುಧಾನ್ ಸಾಶ್ವಾನ್ ಸವಸ್ತ್ರಾಭರಣಾವೃತಾನ್ ।
ಜಗ್ರಸುಸ್ತಿಮಯೋ ದೈತ್ಯಾನ್ ದ್ರಾವಯಂತೋ ಜಲೇಚರಾನ್ ॥೧೯॥

---

೧೫. ಪಟ್ಟಿಸಗಳಿಂದ ಕೆಲವರನ್ನು ಕೊಂದರು. ಶೂಲಗಳಿಂದ ಹಲವರನ್ನು ಸೀಳಿದರು. ಬಾಣಗಳೆಂಬ ಪುಷ್ಪಗಳು ಪ್ರಕಾಶಿಸುತ್ತಿರಲು ದಾನವರು ವನಸಹಿತ ವಾದ ಪರ್ವತಗಳನ್ನು ಹೋಲುತ್ತ, ಭಯಂಕರವಾದ ಮೊಸಳೆಗಳೂ ತಿಮಿಂಗಿಲ ಗಳೂ ತುಂಬಿರುವ ಸಾಗರದಲ್ಲಿ ಬೀಳುತ್ತಿದ್ದರು.

೧೬. ಮೈಯಲ್ಲೆಲ್ಲ ಬಾಣಗಳು ನಾಟಿಕೊಂಡಿರಲು ಅಸುರರು ಪ್ರಾಣ ಬಿಟ್ಟು ಸಮುದ್ರದಲ್ಲಿ ಬೀಳುತ್ತಿದ್ದರು. ಆಗ ಮುಂಗಾರಿನ ಮೋಡಗಳ ಗುಡುಗಿ ನಂತೆ ಶಬ್ದವಾಗುತ್ತಿತ್ತು.

೧೭. ಮೊಸಳೆಗಳು, ತಿಮಿಗಳು, ತಿಮಿಂಗಿಲಗಳು ಆ ಶಬ್ದವನ್ನು ಕೇಳಿದುವು. ರಕ್ತದ ವಾಸನೆಯಿಂದ ಅವುಗಳಿಗೆ ಮದ ಹತ್ತಲು ಆ ಮಹಾಸಾಗರವನ್ನು ಅವು ಕಲಕಿ ಬಗ್ಗಡಮಾಡಿದವು.

೧೮. ಭಯಂಕರಾಕಾರವುಳ್ಳ ಆ ಜಲಜಂತುಗಳು ಒಂದರೊಡನೊಂದು ಜಗಳವಾಡುತ್ತಾ, ದಾನವರ ರಕ್ತವನ್ನು ಪಾನಮಾಡುತ್ತಾ ತಿರುಗುತ್ತಿದ್ದುವು.

೧೯. ತಿಮಿಗಳೆಂಬ ದೊಡ್ಡ ಜಲಚರಗಳು ಮಿಕ್ಕ ಜಲಜಂತುಗಳನ್ನು ಓಡಿಸಿದುವು. ರಥವನ್ನೇರಿದ, ಆಯುಧವನ್ನು ಹಿಡಿದ, ಕುದುರೆಯನ್ನು ಹತ್ತಿದ, ವಸ್ತ್ರಾಭರಣಗಳನ್ನು ಧರಿಸಿದ ದೈತ್ಯರನ್ನು ಅವು ನುಂಗಿದುವು.

ಮೃಧಂ ಯಥಾಸುರಾಣಾಂ ಚ ಪ್ರಮಥಾನಾಂ ಪ್ರವರ್ತತೇ ।
ಅಂಬರೇಽಂಭಸಿ ತಥಾ ಯುದ್ಧಂ ಚಕ್ರುರ್ಜಲೇಚರಾಃ ॥೨೦॥

ಯಥಾ ಭ್ರಮಂತಿ ಪ್ರಮಥಾಃ ಸದೈತ್ಯಾ
ಸ್ತಥಾ ಭ್ರಮಂತೇ ತಿಮಯಃ ಸನಕ್ರಾಃ ।
ಯಥೈವ ಛಿಂದಂತಿ ಪರಸ್ಪರಂ ತು
ತಥೈವ ಕ್ರಂದಂತಿ ವಿಭಿನ್ನದೇಹಾಃ ॥೨೧॥

ವ್ರಣಾನನೈರಂಗರಸಂ ಸ್ರವದ್ಭಿಃ
ಸುರಾಸುರೈರ್ನಕ್ರತಿಮಿಂಗಿಲೈಶ್ಚ ।
ಕೃತೋ ಮುಹೂರ್ತೇನ ಸಮುದ್ರದೇಶಃ
ಸರಕ್ತತೋಯಃ ಸಮುದೀರ್ಣತೋಯಃ ॥೨೨॥

ಪೂರ್ವಂ ಮಹಾಂಭೋಧರಪರ್ವತಾಭಂ
ದ್ವಾರಂ ಮಹಾಂತಂ ತ್ರಿಪುರಸ್ಯ ಶಕ್ರಃ ।
ನಿಪೀಡ್ಯ ತಸ್ಥೌ ಮಹತಾ ಬಲೇನ
ಯುಕ್ತೋಽಮರಾಣಾಂ ಮಹತಾ ಬಲೇನ ॥೨೩॥

---

೨೦. ಅಸುರರಿಗೂ ಪ್ರಮಥರಿಗೂ ಆಕಾಶದಲ್ಲಿ ಯುದ್ಧವು ನಡೆದಂತೆಯೇ ಸಾಗರದ ನೀರಿನಲ್ಲಿ ಜಲಜಂತುಗಳಿಗೆ ಯುದ್ಧವು ನಡೆಯುತ್ತಿತ್ತು.

೨೧. ಪ್ರಮಥರೂ ದೈತ್ಯರೂ ಅಲೆದಾಡುವಂತೆಯೇ ತಿಮಿಗಳೂ ಮೊಸಳೆಗಳೂ ಅಲೆದಾಡುತ್ತಿವೆ. ಅವರು ಒಬ್ಬರನ್ನೊಬ್ಬರು ಕತ್ತರಿಸುವಂತೆ ಅವುಗಳೂ ಸಹ ಒಂದರ ದೇಹವನ್ನೊಂದು ಕಡಿದು ಕತ್ತರಿಸಿ ಕೂಗಿಕೊಳ್ಳುತ್ತವೆ.

೨೨. ಸುರಾಸುರರ ಮತ್ತು ಮೊಸಳೆ ತಿಮಿಂಗಿಲಗಳ ಮುಖಗಳು ಗಾಯವಾಗಿದ್ದುವು. ದೇಹದಿಂದ ರಕ್ತವು ಹರಿಯುತ್ತಿತ್ತು. ಸ್ವಲ್ಪ ಹೊತ್ತಿನಲ್ಲೆ ಸಮುದ್ರದ ನೀರು ರಕ್ತಮಯವಾಯಿತು. ಅಷ್ಟೇ ಅಲ್ಲ; ರಕ್ತವು ಸೇರಿದುದರಿಂದ ನೀರಿನ ಪ್ರಮಾಣವು ಹೆಚ್ಚಾಯಿತು.

೨೩. ದೇವೇಂದ್ರನು ದೇವತೆಗಳ ದೊಡ್ಡ ಸೈನ್ಯದೊಡಗೂಡಿ ಹಿರಿಮೋಡಗಳು ಕುಳಿತಿರುವ ಪರ್ವತಕ್ಕೆ ಸಮಾನವಾದ ತ್ರಿಪುರದುರ್ಗದ ಪೂರ್ವದಿಕ್ಕಿನ ಬಾಗಿಲನ್ನು ಮಹಾರಭಸದಿಂದ ಮುತ್ತಿದನು.

ತಥೋತ್ತರಂ ಸೋಽಂತರಜೋ ಹರಸ್ಯ
ಬಾಲಾರ್ಕಜಾಂಬೂನದತುಲ್ಯವರ್ಣಃ ।
ಸ್ಕಂದಃ ಪುರದ್ವಾರಮಥಾರುರೋಹ
ವೃದ್ಧೋಽಸ್ತಶೃಂಗಂ ಪ್ರಪತನ್ನಿವಾರ್ಕಃ ॥ ೨೪॥

ಯಮಶ್ಚ ವಿತ್ತಾಧಿಪತಿಶ್ಚ ದೇವೋ
ದಂಡಾನ್ವಿತಃ ಪಾಶವರಾಯುಧಶ್ಚ ।
ದೇವಾರಿಣಸ್ತಸ್ಯ ಪುರಸ್ಯ ದ್ವಾರಂ
ತಾಭ್ಯಾಂ ತು ತತ್ಪಶ್ಚಿಮತೋ ನಿರುದ್ಧಂ ॥ ೨೫॥

ದಕ್ಷಾರಿರುದ್ರಸ್ತಪನಾಯುತಾಭಃ
ಸ ಭಾಸ್ವತಾ ದೇವರಥೇನ ದೇವಃ ।
ತದ್ದಕ್ಷಿಣದ್ವಾರಮುರೇಃ ಪುರಸ್ಯ
ರುದ್ಧ್ವಾವತಸ್ಥೌ ಭಗವಾಂಸ್ತ್ರಿನೇತ್ರಃ । ೨೬

೨೪. ಬಾಲ ಎಳೆಯ ಸೂರ್ಯನಂತೆ ತೇಜಸ್ವಿಯೂ, ಸುವರ್ಣದಂತೆ ಮೈಬಣ್ಣದವನೂ ಆದ ಈಶ್ವರಪುತ್ರನಾದ ಕುಮಾರಸ್ವಾಮಿಯು ಸಂಜೆಯ ಸೂರ್ಯನು ಅಸ್ತಗಿರಿಯ ಶಿಖರವನ್ನೇರುವಂತೆ ಪುರದ ಉತ್ತರ ದ್ವಾರವನ್ನೇರಿದನು

೨೫. ಯಮನು ದಂಡಾಯುಧವನ್ನೂ, ಕುಬೇರನು ಪಾಶಾಯುಧವನ್ನೂ ಹಿಡಿದು ದೇವಶತ್ರುವಾದ ದೈತ್ಯನ ತ್ರಿಪುರದುರ್ಗದ ಪಶ್ಚಿಮದಿಕ್ಕಿನ ಬಾಗಿಲಿಗೆ ಮುತ್ತಿಗೆ ಹಾಕಿದರು.

೨೬. ದಕ್ಷಬ್ರಹ್ಮನ ಶತ್ರುವೂ, ಕೋಟಿಸೂರ್ಯ ಪ್ರಕಾಶನೂ, ಲೋಕಪೂಜ್ಯನೂ ಆದ ಪರಮೇಶ್ವರನು ಕಾಂತಿಯುಕ್ತವಾದ ದೇವರಥವನ್ನೇರಿ ಶತ್ರುನಗರದ ದಕ್ಷಿಣದಿಕ್ಕಿನ ಹೆಬ್ಬಾಗಿಲಿಗೆ ಮುತ್ತಿಗೆ ಹಾಕಿದನು.

ತುಂಗಾನಿ ವೇಶ್ಮಾನಿ ಸಗೋಪುರಾಣಿ
ಸ್ವರ್ಣಾನಿ ಕೈಲಾಸಶಶಿಪ್ರಭಾಣಿ ।
ಪ್ರಹ್ಲಾದರೂಪಾಃ ಪ್ರಮಥಾವರುದ್ಧಾ
ಜ್ಯೋತೀಂಷಿ ಮೇಘಾ ಇವ ಚಾಶ್ಮವರ್ಷಾಃ ॥೨೭॥

ಉತ್ಪಾಟ್ಯ ಚೋತ್ಪಾಟ್ಯ ಗೃಹಾಣಿ ತೇಷಾಂ
ಸಶೈಲವಾಲಾಸನವೇದಿಕಾನಿ ।
ಪ್ರಕ್ಷಿಪ್ಯ ಪ್ರಕ್ಷಿಪ್ಯ ಸಮುದ್ರಮಧ್ಯೇ ।
ಕಾಲಾಂಬುದಾಭಾಃ ಪ್ರಮಥಾ ವಿನೇದುಃ ॥೨೮॥

ರತ್ನಾನಿ ಚಾಶೇಷವನ್ಯೈರ್ಯುತಾನಿ
ಸಾಶೋಕಖಂಡಾನಿ ಸಕೋಕಿಲಾನಿ ।
ಗೃಹಾಣಿ ಹೇ ನಾಥ ಪಿತಃ ಸುತೇತಿ
ಭ್ರಾತೇತಿ ಕಾಂತೇತಿ ಪ್ರಿಯೇತಿ ಚಾಪಿ ।
ಉತ್ಪಾಟ್ಯಮಾನೇಷು ಗೃಹೇಷು ನಾರ್ಯ
ಸ್ತ್ವನಾರ್ಯಶಬ್ದಾನ್ವಿವಿಧಾನ್ ಪ್ರಚಕ್ರುಃ ॥೨೯॥

೨೭. ಕೈಲಾಸಪರ್ವತದಂತೆಯೂ ಚಂದ್ರನಂತೆಯೂ ಕಾಂತಿಯನ್ನು ಬೀರುತ್ತ, ಗೋಪುರಗಳಿಂದ ಕೂಡಿ ಸುವರ್ಣಮಯವಾಗಿ ಪ್ರಕಾಶಿಸುವ ಅಷ್ಟೆತ್ತರ ಎತ್ತರವಾದ ಉಪ್ಪರಿಗೆ ಮನೆಗಳನ್ನು ಸಂತೋಷದಲ್ಲಿ ಮುಳುಗಿ ತೇಲಾಡುವ ಪ್ರಮಥಗಣಗಳು ಮೇಘಗಳು, ಗ್ರಹಗಳನ್ನು ಆವರಿಸುವಂತೆ ಮುತ್ತಿ ಕಲ್ಲಿನ ಮಳೆಯನ್ನು ಕರೆದರು.

೨೮. ಗಿರಿಪಙ್ಕ್ತಿಗಳಿಂದಲೂ, ಆಸನಗಳಿಂದಲೂ, ವೇದಿಕೆಗಳಿಂದಲೂ ಕೂಡಿದ ಅವರ ಮನೆಗಳನ್ನು ಕಿತ್ತು ಕಿತ್ತು, ಸಮುದ್ರಮಧ್ಯದಲ್ಲಿ ಎಸೆದೆಸೆದು ಪ್ರಮಥರು ಪ್ರಳಯಕಾಲದ ಮೋಡಗಳಂತೆ ಗರ್ಜಿಸಿದರು.

೨೯. ಅವರು ಕಿತ್ತು ಎಸೆದ ಮನೆಗಳು ಕೆಂಪು ಬಣ್ಣದವು. ಎಲ್ಲ ಬಗೆಯ ತೋಟಗಳಿಂದಲೂ ರಮ್ಯವಾಗಿದ್ದುವು. ಅವುಗಳನ್ನುರುಳಿಸಿದಾಗ ನಾಥಾ, ಅಪ್ಪಾ, ಕಾಂತಾ, ಪ್ರಿಯಾ ಇತ್ಯಾದಿಯಾಗಿ ಬಗೆಬಗೆಯ ದೀನಸ್ವರಗಳಿಂದ ಹೆಂಗಸರು ಗೋಳಾಡಿದರು.

ಕಲತ್ರಪುತ್ರಕ್ಷಯಪ್ರಾಣನಾಶೇ
ತಸ್ಮಿನ್ ಪುರೇ ಯುದ್ಧಮತಿಪ್ರವೃತ್ತೇ ।
ಮಹಾಸುರಾಃ ಸಾಗರತುಲ್ಯವೇಗಾ
ಗಣೇಶ್ವರಾಃ ಕೋಪವೃತಾಃ ಪ್ರತೀಯುಃ ||೩೦||

ಪರಶ್ವಧೈಸ್ತತ್ರ ಶಿಲೋಪಮೈಶ್ಚ
ತ್ರಿಶೂಲವಜ್ರೋತ್ತಮಕಂಪನೈಶ್ಚ ।
ಶರೀರಸದ್ಮಕ್ಷಪಣಂ ಸುಘೋರಂ
ಯುದ್ಧಂ ಪ್ರವೃತ್ತಂ ದೃಢವೈರಬದ್ಧಂ ||೩೧||

ಅನ್ಯೋನ್ಯಮುದ್ದಿಶ್ಯ ವಿಮರ್ದತಾಂ ಚ
ಪ್ರಧಾವತಾಂ ಚೈವ ವಿನಿಘ್ನತಾಂ ಚ
ಶಬ್ದೋ ಬಭೂವಾಮರದಾನವಾನಾಂ
ಯುಗಾಂತಕಾಲೇಷ್ವಿವ ಸಾಗರಾಣಾಂ ||೩೨||

---

೩೦. ಆ ಪುರದಲ್ಲಿ ಯುದ್ಧವು ಅತಿ ಪ್ರಬಲವಾಗಲು ಮಹಾಸುರರ ಪತ್ನೀ ಪುತ್ರರು ಮೃತರಾದರು. ಕೆಲವರ ಪ್ರಾಣಗಳೂ ಹೋದುವು. ಅವರ ರಭಸವು ಸಾಗರದ ರಭಸಕ್ಕೆ ಸಮಾನಾಗಿತ್ತು. ಆ ಗಣಾಧಿಪತಿಗಳು ಕುಪಿತರಾಗಿ ಅವರನ್ನು ಎದುರಿಸಿದರು.

೩೧. ಕಲ್ಲಿನಂತಹ ಕೊಡಲಿಗಳಿಂದಲೂ ತ್ರಿಶೂಲ, ವಜ್ರ ಮತ್ತು ಕಂಪನಗಳಿಂದಲೂ ಹೊಡೆದು ಕೊಲ್ಲುತ್ತಿದ್ದರು. ಮನೆಗಳನ್ನು ಉರುಳಿಸುತ್ತಿದ್ದರು. ಹೀಗೆ ಬದ್ಧವೈರದಿಂದ ಭಯಂಕರವಾದ ಯುದ್ಧವು ನಡೆಯುತ್ತಿತ್ತು.

೩೨. ದೇವತೆಗಳೂ ದೈತ್ಯರೂ ಒಬ್ಬರನ್ನೊಬ್ಬರು ಗುರಿಯಿಟ್ಟು ಬಲವಾಗಿ ನೂಕುವರು; ಪ್ರಹರಿಸುವರು; ಓಡುವರು. ಅವರ ಆರ್ಭಟವು ಪ್ರಳಯಕಾಲದ ಸಾಗರಗಳ ಅಬ್ಬರವನ್ನು ಹೋಲುತ್ತಿತ್ತು.

ವ್ರಣೈರಜಸ್ರಂ ಕ್ಷತಜಂ ವಮಂತಃ
  ಕೋಪೋಪರಕ್ತಾ ಬಹುಧಾ ನದಂತಃ ।
ಗಣೇಶ್ವರಾಸ್ತೇಽಸುರಪುಂಗವಾಶ್ಚ
  ಯುದ್ಧ್ಯಂತಿ ಶಬ್ದಂ ಚ ಮಹತ್ಸ್ವನಂತೇ ॥೩೩॥

ಮಾರ್ಗಾಃ ಪುರೇ ಲೋಹಿತಕರ್ದಮಾಲಾಃ
  ಸ್ವರ್ಣೇಷ್ಟಕಾಃ ಸ್ಫಾಟಿಕಭಿತ್ತಿಚಿತ್ರಾಃ ।
ಕೃತಾ ಮುಹೂರ್ತೇನ ಸುಖೇನ ಗಂತುಂ
  ಛಿನ್ನೋತ್ತಮಾಂಗಾಂಘ್ರಿಕರಾಃ ಕರಾಲಾಃ ॥೩೪॥

ಕೋಪಾವೃತಾಕ್ಷಃ ಸ ತು ತಾರಕಾಖ್ಯಃ
  ಸಂಖ್ಯೇ ಸವೃಕ್ಷಃ ಸಗಿರೀಂದ್ರನೀಲಃ ।
ತಸ್ಮಿನ್ ಕ್ಷಣೇ ದ್ವಾರವರಂ ರರಕ್ಷ
  ರುದ್ಧಂ ಭವೇನಾದ್ಭುತವಿಕ್ರಮೇಣ ॥೩೫॥

---

೩೩. ಗಾಯಗಳಿಂದ ಎಡೆಬಿಡದೆ ರಕ್ತವು ಸುರಿಯುತ್ತಿರಲು ಗಣೇಶ್ವರರೂ, ದೈತ್ಯಶ್ರೇಷ್ಠರೂ ಕೋಪದಿಂದ ಕೆಂಪೇರಿ ಬಹುವಾಗಿ ಸಿಂಹನಾದಮಾಡುತ್ತ ಹೋರಾಡಿದರು. ಅವರು ಬಹಳ ಗಟ್ಟಿಯಾಗಿ ಕೂಗುತ್ತಿದ್ದರು.

೩೪. ಪಟ್ಟಣದಲ್ಲಿ ರಸ್ತೆಗಳು ರಕ್ತದ ಕೆಸರಿನಿಂದ ತುಂಬಿದುವು. ಅವರೆ ಸ್ವಲ್ಪ ಹೊತ್ತಿನೊಳಗಾಗಿ ಚಿನ್ನದ ಇಟ್ಟಿಗೆಗಳೂ, ಸ್ಫಟಿಕಮಣಿಯ ಗೋಡೆಗಳೂ ಬಿದ್ದುದರಿಂದ ಕೆಸರು ಹೋಗಿ ಪ್ರಯಾಣಕ್ಕೆ ಅನುಕೂಲವಾದುವು. ಕೈಕಾಲುಗಳೂ, ತಲೆಗಳೂ ಕತ್ತರಿಸಿ ಬಿದ್ದು ನೋಡುವುದಕ್ಕೆ ಭಯಂಕರವಾಗಿ ಕಾಣುತ್ತಿದ್ದುವು.

೩೫. ಆ ಕ್ಷಣದಲ್ಲಿ ದೊಡ್ಡ ಬೆಟ್ಟದಂತೆ ನೀಲವರ್ಣದವನಾದ ತಾರಕಾಖ್ಯನು ಕಣ್ಣುಗಳಲ್ಲಿ ಕೋಪವುಕ್ಕುತ್ತಿರಲು, ಮರವನ್ನು ಕಿತ್ತುಕೊಂಡು ಯುದ್ಧಕ್ಕೆ ಬಂದು ಮಹಾವೀರನಾದ ಪರಮೇಶ್ವರನು ಮುತ್ತಿಗೆ ಹಾಕಿದ್ದ ಹೆಬ್ಬಾಗಿಲನ್ನು ರಕ್ಷಿಸಿದನು.

ಸ ತತ್ರ ಪ್ರಾಕಾರಗತಾಂಶ್ಚ ಭೂತಾ
 ನ್ನಾಗಾನ್ ಸುರಾನ್ ಭೂತಪತೀಂಶ್ಚ ತದ್ವತ್ ।
ಪ್ರಹಾರಿಣಸ್ಸನ್ಪ್ರಿಯದರ್ಪಯುಕ್ತಃ
 ಪುರಾದ್ವಿನಿಷ್ಕ್ರಮ್ಯ ನನಾಶ ಘೋರಂ ||೩೬||

ತತಃ ಸ ದೈತ್ಯೋತ್ತಮಪರ್ವತಾಭೋ
 ಯಥಾಂಜಸಾ ನಾಗ ಇವಾಭಿಮತ್ತಃ ।
ನಿವಾರಿತೋ ರುದ್ರರಥಂ ಜಿಘೃಕ್ಷು
 ರ್ಯಥಾರ್ಣವಃ ಸರ್ಪತಿ ಚಾತಿವೇಲಃ ||೩೭||

ಶೇಷಃ ಸುಧನ್ವಾ ಗಿರಿಶಶ್ಚ ದೇವ
 ಶ್ಚತುರ್ಮುಖೋ ಯಃ ಸತ್ರಿಲೋಚನಶ್ಚ ।
ತೇ ತಾರಕಾಖ್ಯಾಭಿಗತಾ ಗತಾಜೌ
 ಕ್ಷೋಭಂ ಯಥಾ ವಾಯುವಶಾತ್ಸಮುದ್ರಾಃ ||೩೮||

---

೩೬. ದರ್ಪಯುಕ್ತನಾದ ಅವನು ಪಟ್ಟಣದಿಂದ ಹೊರಕ್ಕೆ ಬಂದು ಕೋಟೆಯ ಮೇಲಿದ್ದ ಭೂತಗಳು, ನಾಗಗಳು, ಸುರರು, ಭೂತಪತಿಗಳು ಇವರೆಲ್ಲರನ್ನೂ ಬಹಳ ಭಯಂಕರವಾಗಿ ಸಂಹರಿಸಿದನು.

೩೭. ಪರ್ವತದಂತೆ ಬಲಿಷ್ಠನಾದ ಆ ದೈತ್ಯರಾಜನು ಶತ್ರುವು ಅಡ್ಡಿಪಡಿಸಲು, ಕೊಬ್ಬಿದ ಆನೆಯಂತೆ ಈಶ್ವರನ ರಥವನ್ನು ಹಿಡಿಯಬೇಕೆಂದು ಉಕ್ಕೇರಿದ ಸಮುದ್ರದಂತೆ ವೇಗದಿಂದ ಮುಂದೆ ನುಗ್ಗಿದನು.

೩೮. ಆದಿಶೇಷ, ಸುಧನ್ವ, ಪೂಜ್ಯನಾದ ಪರಮೇಶ್ವರ ಅವನೊಡಗೂಡಿದ ಚತುರ್ಮುಖಬ್ರಹ್ಮ ಇವರೆಲ್ಲರೂ ಯುದ್ಧದಲ್ಲಿ ತಾರಕಾಖ್ಯನನ್ನು ಎದುರಿಸಿ ವಾಯುವಿನಿಂದ ಸಮುದ್ರವು ಕ್ಷುಬ್ಧವಾಗುವಂತೆ ಕಳವಳವನ್ನು ಹೊಂದಿದರು.

ಶೇಷೋ ಗಿರೀಶಃ ಸಪಿತಾಮಹೇಶ
ಶ್ಚೋತ್ಸುಕ್ಯಭ್ಯವಮಾಣಃ ಸ ರಥೇಽಂಬರಸ್ಥಃ ।
ಬಿಭೇದ ಸಂಧೀಷು ಬಲಾಭಿಪನ್ನಃ
ಕೂಜನ್ನಿನಾದಾಂಶ್ಚ ಕರೋತಿ ಘೋರಾನ್ ||೩೯||

ಏಕಂ ತು ಋಗ್ವೇದತುರಂಗಮಸ್ಯ
ಪೃಷ್ಠೇ ಪದಂ ನ್ಯಸ್ಯ ವೃಷಸ್ಯ ಚೈಕಂ ।
ತಸ್ಥೌ ಭವಃ ಸೋದ್ಯತಬಾಣಚಾಪಃ
ಪುರಸ್ಯ ತತ್ಸಂಗಮಮೀಕ್ಷಮಾಣಃ ||೪೦||

ತದಾ ಭವಪದನ್ಯಾಸಾದ್ಧಯಸ್ಯ ವೃಷಭಸ್ಯ ಚ ।
ಪೇತುಃ ಸ್ತನಾಶ್ಚ ದಂತಾಶ್ಚ ಪೀಡಿತಾಭ್ಯಾಂ ತ್ರಿಶೂಲಿನಾ ||೪೧||

ತತಃ ಪ್ರಭೃತಿ ಚಾಶ್ವಾನಾಂ ಸ್ತನಾ ದಂತಾ ಗವಾಂ ತಥಾ ।
ಗೂಢಾಃ ಸಮಭವಂಸ್ತೇನ ಚಾದೃಶ್ಯತ್ವಮುಪಾಗತಾಃ ||೪೨||

---

೩೯. ಆದಿಶೇಷ, ಪರಮೇಶ್ವರ, ಬ್ರಹ್ಮ ಇವರು ಉದ್ವೇಗದಿಂದ ಆಕಾಶದಲ್ಲಿ ರಥಾರೂಢರಾಗಿ, ತಮ್ಮ ಬಲವನ್ನೆಲ್ಲ ಪ್ರಯೋಗಿಸಿ ದೈತ್ಯನ ಸಂಧಿಗಳನ್ನು ಬಾಣಗಳಿಂದಿರಿದರು. ಉತ್ಸಾಹದಿಂದ ಧ್ವನಿಮಾಡಿದರು.

೪೦. ಈಶ್ವರನು ಋಗ್ವೇದಮಯವಾದ ಕುದುರೆಯ ಬೆನ್ನಿನ ಮೇಲೆ ಒಂದು ಕಾಲನ್ನೂ, ತನ್ನ ವಾಹನವಾದ ನಂದಿಯ ಮೇಲೆ ಮತ್ತೊಂದು ಕಾಲನ್ನೂ ಇರಿಸಿ, ಬಿಲ್ಲುಬಾಣಗಳನ್ನು ಸಿದ್ಧಪಡಿಸಿಕೊಂಡು ತಾರಕಾಕ್ಷನ ಪುರವನ್ನೇ ಎದುರುನೋಡುತ್ತಿದ್ದನು.

೪೧. ಆಗ ಈಶ್ವರನು ಕಾಲುಗಳನ್ನೂರಿದುದರಿಂದ ಆ ಹೊರೆಯನ್ನು ತಾಳಲಾರದೆ ಕುದುರೆಯ ಮತ್ತು ನಂದೀಶ್ವರನ ಸ್ತನಗಳೂ ಹಲ್ಲುಗಳೂ ಕಳಚಿಬಿದ್ದುವು.

೪೨. ಅಲ್ಲಿಂದ ಮುಂದೆ ಕುದುರೆಗಳ ಸ್ತನಗಳೂ, ದನಗಳ ಹಲ್ಲುಗಳೂ ಗೂಢವಾದುವು ಮತ್ತು ಯಾರಿಗೂ ಗೋಚರವಾಗದಂತಾದುವು.

**ತಾರಕಾಖ್ಯಸ್ತು ಭೀಮಾಕ್ಷೋ ರೋಷಾದ್ರಕ್ತಾನನೇಕ್ಷಣಃ ।**
**ರುದ್ರಾಂತಿಕೇ ಸುಸಂಕ್ರುದ್ಧೋ ನಂದಿನಂ ಕುಲನಂದಿನಂ ॥೪೩॥**

**ಪರಶ್ವಧೇನ ತೀಕ್ಷ್ಣೇನ ನಂದಿನಂ ದಾನವೇಶ್ವರಃ ।**
**ತಕ್ಷಯಾಮಾಸ ವೈ ತಕ್ಷಾ ಚಂದನಂ ಸರಸಂ ಯಥಾ ॥೪೪॥**

**ಪರಶ್ವಧಹತಃ ಶೂರಃ ಶೈಲಾದಿಃ ಶರಭೋ ಯಥಾ ।**
**ದುದ್ರಾವ ಖಡ್ಗಂ ನಿಷ್ಕೃಷ್ಯ ತಾರಕಾಖ್ಯಜಿಘಾಂಸಯಾ ॥೪೫॥**

**ಸ ತೇನ ಸಿತಧಾರೇಣ ತಾರಕಾಕ್ಷಂ ಗಣೇಶ್ವರಃ ।**
**ಯಜ್ಞೋಪವೀತಮಾರ್ಗೇಣ ಚಿಚ್ಛೇದ ಚ ನನಾದ ಚ ॥೪೬॥**

**ತತಃ ಸಿಂಹರವೋ ಘೋರಃ ಶಂಖಶಬ್ದಶ್ಚ ಭೈರವಃ ।**
**ಗಣೇಶ್ವರೈಃ ಕೃತಸ್ತತ್ರ ತಾರಕಾಖ್ಯೇ ನಿಷೂದಿತೇ ॥೪೭॥**

---

೪೩. ಕೋಪದಿಂದ ಕಣ್ಣುಗಳು ಭಯಂಕರವಾಗಿ ಕೆಂಪೇರಿರಲು, ತಾರಕಾಖ್ಯನು ಈಶ್ವರನ ಬಳಿಗೆ ಬಂದು ಕುಲವರ್ಧಕನಾದ ನಂದಿಯನ್ನು ಕಂಡನು.

೪೪. ಬಡಗಿಯು ರಸಯುಕ್ತವಾದ ಶ್ರೀಗಂಧವನ್ನು ಕೆತ್ತುವಂತೆ ದಾನವೇಶ್ವರನು ನಂದೀಶ್ವರನನ್ನು ಹರಿತವಾದ ಕೊಡಲಿಯಿಂದ ಕೊಚ್ಚಿದನು.

೪೫. ತಾರಕಾಖ್ಯನು ಕೊಡಲಿಯಿಂದ ಹೊಡೆಯಲು, ಶೂರನಾದ ನಂದೀಶ್ವರನು ಕತ್ತಿಯನ್ನು ಹಿಡಿದುಕೊಂಡು ಆ ಅಸುರನನ್ನು ಕೊಲ್ಲಬೇಕೆಂದು ಶರಭದಂತೆ ಓಡಿದನು.

೪೬. ಆ ಗಣೇಶ್ವರನು ಮಸೆದು ಅಲಗು ಬೆಳ್ಳಗಿರುವ ಕತ್ತಿಯಿಂದ ಯಜ್ಞೋಪವೀತದ ಮಾರ್ಗವಾಗಿ ಎಂದರೆ ಎಡಗಡೆಯ ಹೆಗಲಿನಿಂದ ಹಿಡಿದು ಬಲಗಡೆಯ ಪಕ್ಕೆಯವರೆಗೆ ಅವನನ್ನು ಕತ್ತರಿಸಿ ಜಯಧ್ವನಿಮಾಡಿದನು.

೪೭. ತಾರಕಾಖ್ಯನು ಹತನಾಗಲು ಗಣೇಶ್ವರನು ಭಯಂಕರವಾದ ಸಿಂಹನಾದವನ್ನೂ ಭೀಕರವಾದ ಶಂಖಧ್ವನಿಯನ್ನೂ ಮಾಡಿದನು.

ಪ್ರಮಥಾರಸಿತಂ ಶ್ರುತ್ವಾ ವಾದಿತ್ರಸ್ವನಮೇವ ಚ ।
ಮಯಶ್ಚ ಸ್ವಸ್ವಪಾರ್ಶ್ವಸ್ಥಂ ವಿದ್ಯುನ್ಮಾಲಿನಮಬ್ರವೀತ್ ॥೪೮॥
ಬಹುವದನವತಾಂ ಕಿಮೇಷ ಶಬ್ದೋ
ನದತಾಂ ಶ್ರೂಯತೇ ಭಿನ್ನಸಾಗರಾಭಃ ।
ವದ ವಚನಂ ತಡಿಮಾಲಿ ಕಿಮೇತತ್
ಗಣಪಾಲಾ ಯುಯುಧುರ್ಯಯುರ್ಗಜೇಂದ್ರಾಃ ॥೪೯॥
ಇತಿ ಮಯವಚನಾಂಕುಶಾರ್ದಿತಸ್ತಂ
ತಡಿಮಾಲೀ ರವಿರಿವಾಂಶುಮಾಲೀ ।
ರಣಶಿರಸಿ ಸಮಾಗತಾಸುರಾಂಸ್ತಾ
ನಿಜಗಾದೇದಮರಿಂದಮೋಽತಿಹರ್ಷಾತ್ ॥೫೦॥
ಯಮವರುಣಮಹೇಂದ್ರರುದ್ರವೀರ್ಯ
ಸ್ತವ ಯಶಸೋ ನಿಧಿರ್ಧೀರತಾರಕಾಖ್ಯಃ ।
ಸಕಲಸಮರಶೀರ್ಷಪರ್ವತೇಂದ್ರೋ
ಯುದ್ಧ್ವಾ ಯಸ್ತಪತಿ ಹಿ ತಾರಕೋ ಗಣೇಂದ್ರೈಃ ॥೫೧॥

---

೪೮. ಪ್ರಮಥಗಣಗಳ ಆರ್ಭಟವನ್ನೂ, ಜಯಸೂಚಕವಾದ ವಾದ್ಯಧ್ವನಿಯನ್ನೂ ಕೇಳಿ ಮಯನು ತನ್ನ ಸಮೀಪದಲ್ಲಿದ್ದ ವಿದ್ಯುನ್ಮಾಲಿಗೆ ಹೇಳಿದನು.

೪೯. "ಹಲವು ಮುಖಗಳುಳ್ಳ ಗಣೇಶ್ವರರು ಇದೇನು ಹೀಗೆ ಶಬ್ದಮಾಡುತ್ತಾರೆ? ಸಾಗರದ ಘೋಷವನ್ನು ಮೀರಿಸುವಂತಹ ಆರ್ಭಟವು ಕೇಳಿಸುತ್ತದೆ. ಓ, ವಿದ್ಯುನ್ಮಾಲೀ, ಮಾತನಾಡು. ಇದೇನು? ಗಣಪಾಲಕರು ಯುದ್ಧಮಾಡಿದರೇ? ಅಥವಾ ಆನೆಗಳು ಘರ್ಜನೆಮಾಡುತ್ತ ನಡೆದುವೆ?"

೫೦. ಸೂರ್ಯನಂತೆ ಪ್ರಕಾಶಯುಕ್ತನಾದ ವಿದ್ಯುನ್ಮಾಲಿಗೆ ಮಯನ ಮಾತನ್ನು ಕೇಳಿ ಅಂಕುಶದಿಂದ ಇರಿದಂತಾಯಿತು. ಅರಿನಾಶಕನಾದ ಅವನು ಯುದ್ಧಮುಖಕ್ಕೆ ಬಂದಿದ್ದ ಆ ಅಸುರರನ್ನು ನೋಡಿ ಹರ್ಷದಿಂದಿಂತು ಹೇಳಿದನು.

೫೧. "ಧೀರನಾದ ತಾರಕಾಖ್ಯನು ಯಮ, ವರುಣ, ಮಹೇಂದ್ರ, ರುದ್ರ ಇವರಂತೆ ಪ್ರರಾಕ್ರಮಶಾಲಿ. ಎಲೈ ಮಯನೇ, ನಿನ್ನ ಯಶಸ್ಸಿಗೆ ಅವನು ಆಧಾರಭೂತ. ಎಲ್ಲ ಯುದ್ಧಗಳಲ್ಲಿಯೂ ಮುಂದೆ ಮಹಾಗಿರಿಯಂತೆ ನಿಲ್ಲುತ್ತಿದ್ದನು. ಗಣೇಂದ್ರರೊಡನೆ ಯುದ್ಧಮಾಡಿ ತನ್ನ ತೇಜಸ್ಸನ್ನು ತೋರ್ಪಡಿಸಿಕೊಂಡಿದ್ದಾನೆ."

ಮೃದಿತಮುಪನಿಶಮ್ಯ ತಾರಕಾಖ್ಯಂ
ರವಿದೀಪ್ತಾನಲಭೀಷಣಾಯತಾಕ್ಷಂ ।
ಹೃಷಿತಸಕಲನೇತ್ರಲೋಮಸತ್ವಾಃ
ಪ್ರಮಥಾಸ್ತ್ರೋಯಮುಚೋ ಯಥಾ ನದಂತಿ ॥೫೨॥

ಇತಿ ಸುಹೃದೋ ವಚನಂ ನಿಶಮ್ಯ ತತ್ತ್ವಂ
ತಡಿಮಾಲೇಃ ಸ ಮಯಸ್ಸುವರ್ಣಮಾಲೀ ।
ರಣಶಿರಸ್ಯಸಿತಾಂಜನಾಚಲಾಭೋ
ಜಗದೇ ವಾಕ್ಯಮಿದಂ ನವೇಂದುಮಾಲಿಂ ॥೫೩॥

ವಿದ್ಯುನ್ಮಾಲಿನ್ನ ನಃ ಕಾಲಃ ಸಾಧಿತುಂ ಹ್ಯವಹೇಲಯಾ ।
ಕರೋಮಿ ವಿಕ್ರಮೇಣೈತತ್ಪುರಂ ವ್ಯಸನವರ್ಜಿತಂ ॥೫೪॥

ವಿದ್ಯುನ್ಮಾಲೀ ತತಃ ಕ್ರುದ್ಧೋ ಮಯಶ್ಚ ತ್ರಿಪುರೇಶ್ವರಃ ।
ಗಣಾಞ್ಜಘ್ನುಸ್ತು ದ್ರಾಘಿಷ್ಠಾಃ ಸಹಿತಾಸ್ತೈರ್ಮಹಾಸುರೈಃ ॥೫೫॥

---

೫೨. ಸೂರ್ಯನಂತೆಯೂ ಅಗ್ನಿಯಂತೆಯೂ ಜ್ವಲಿಸುವ, ವಿಸ್ತಾರವಾದ ಕಣ್ಣುಗಳಿಂದ ಕೂಡಿದ ತಾರಕಾಖ್ಯನು ಮೃತನಾದುದನ್ನು ಕೇಳಿ ಪ್ರಮಥಗಣಗಳು ಮೋಡಗಳಂತೆ ಜಯಧ್ವನಿಯನ್ನು ಮಾಡಿದರು. ಸಂತೋಷದಿಂದ ಅವರ ಕಣ್ಣುಗಳು ಅರಳಿದುವು. ಮೈ ಮೇಲೆ ರೋಮಾಂಚವೆದ್ದಿತು.

೫೩. ಬಂಗಾರದ ಹಾರದಿಂದ ಶೋಭಿಸುತ್ತಿದ್ದ ಮಯನು ತನ್ನ ಸ್ನೇಹಿತನ ಅರ್ಥಗರ್ಭಿತವಾದ ಮಾತನ್ನು ಕೇಳಿ ಅಂಜನಾಚಲದಂತೆ ನೀಲವರ್ಣದಿಂದ ಪ್ರಕಾಶಿಸುತ್ತ ವಿದ್ಯುನ್ಮಾಲಿಯನ್ನು ಕುರಿತು ಯುದ್ಧಮುಖದಲ್ಲಿಂತು ಹೇಳಿದನು.

೫೪. ಓ, ವಿದ್ಯುನ್ಮಾಲೀ, ಔದಾಸೀನ್ಯದಿಂದಿರುವುದಕ್ಕೆ ಇದು ಕಾಲವಲ್ಲ. ನನ್ನ ಪರಾಕ್ರಮದಿಂದ ಈ ಪಟ್ಟಣದ ಕಷ್ಟವನ್ನು ನಾನು ಹೋಗಲಾಡಿಸುತ್ತೇನೆ.

೫೫. ಬಳಿಕ ವಿದ್ಯುನ್ಮಾಲಿಯೂ, ತ್ರಿಪುರೇಶ್ವರನಾದ ಮಯನೂ ಕ್ರುದ್ಧರಾಗಿ ಮಹಾಸುರರೊಡಗೂಡಿ ಪ್ರಮಥಗಣಗಳನ್ನು ವಿಶೇಷವಾಗಿ ಕೊಂದರು.

ಯೇನ ಯೇನ ತತೋ ವಿದ್ಯುನ್ಮಾಲೀ ಯಾತಿ ಮಯಶ್ಚ ಸಃ ।
ತೇನ ತೇನ ಪುರಂ ಶೂನ್ಯಂ ಪ್ರಮಥೈಃ ಪ್ರಹೃತೈಃ ಕೃತಂ ॥೫೬॥

ಅಥ ಯಮವರುಣಮೃದಂಗಘೋಷೈಃ
ಪಣವಡಿಂಡಿಮಜ್ಯಾಸ್ವನಪ್ರಘೋಷೈಃ ।
ಸಕರತಲಪುಟೈಶ್ಚ ಸಿಂಹನಾದೈ
ರ್ಭವಮಭಿಪೂಜ್ಯ ಸುರಾವತಸ್ಥುಃ ॥೫೭॥

ಸಂಪೂಜ್ಯಮಾನೋ ದಿತಿಜೈರ್ಮಹಾತ್ಮಭಿಃ
ಸಹಸ್ರರಶ್ಮಿಪ್ರತಿಮೋ ಮಯೋ ಬಭೌ ।
ಅಭಿಷ್ಟುತಃ ಸತ್ಯರತೈಸ್ತಪೋಧನೈ
ರ್ಯಥಾಸ್ತಶೃಂಗಾಭಿಗತೋ ದಿವಾಕರಃ ॥೫೮॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ತ್ರಿಪುರದಾಹೇ
ತಾರಕಾಖ್ಯವಧೋ ನಾಮಾಷ್ಟತ್ರಿಂಶದಧಿಕಶತತಮೋಽಧ್ಯಾಯಃ

---

೫೬. ಬಳಿಕ ವಿದ್ಯುನ್ಮಾಲಿಯೂ ಮಯನೂ ತ್ರಿಪುರನಗರದಲ್ಲಿ ಯಾವ ಯಾವ ಕಡೆ ಹೋದರೋ ಅಲ್ಲೆಲ್ಲ ಪ್ರಮಥರನ್ನು ಓಡಿಸಿ ಸೆರೆಹಿಡಿದರು.

೫೭. ಆಮೇಲೆ ತಮ್ಮ ಕಡೆಯವರಿಗೆ ಉತ್ಸಾಹವನ್ನು ಹುಟ್ಟಿಸುವುದಕ್ಕಾಗಿ ಯಮ ವರುಣರು ಮೃದಂಗಗಳನ್ನು ಬಾರಿಸಿದರು. ಪಣವ, ಡಿಂಡಿಮ ಮೊದಲಾದ ವಾದ್ಯಗಳು ಭೋರ್ಗರೆದುವು. ಧನುಷ್ಟಂಕಾರವು ಅತಿಶಯವಾಯಿತು. ದೇವತೆಗಳು ಕೈಮುಗಿದುಕೊಂಡು ಸಿಂಹನಾದ ಮಾಡುತ್ತ ಈಶ್ವರನನ್ನು ಪೂಜಿಸಿದರು.

೫೮. ಸತ್ಯನಿಷ್ಠರಾದ ತಪೋಧನರಿಂದ ವಿಶೇಷವಾದ ಸ್ತೋತ್ರವನ್ನು ಕೈಗೊಳ್ಳುತ್ತ, ಅಸ್ತಪರ್ವತದ ಶಿಖರದ ಕಡೆಗೆ ಹೋಗುವ ಸೂರ್ಯನಂತೆ ಮಹಾತೇಜಸ್ವಿಗಳಾದ ದೈತ್ಯರಿಂದ ಗೌರವಿಸಲ್ಪಡುತ್ತ ಮಯನು ಸೂರ್ಯನಿಗೆ ಸಮಾನನಾಗಿ ಪ್ರಕಾಶಿಸಿದನು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ತಾರಕಾಖ್ಯನ ವಧವನ್ನು ವರ್ಣಿಸಿದೆ.

ಈಶ್ವರನ ಆಜ್ಞೆಯಂತೆ ಇಂದ್ರಾದಿದೇವತೆಗಳು ತ್ರಿಪುರಹನನಕ್ಕಾಗಿ ಹೊರಟು ಆ ಪಟ್ಟಣದ ಹೆಬ್ಬಾಗಿಲುಗಳನ್ನು ಮುತ್ತಿದರು. ಇವರ ಸಿಂಹನಾದಗಳನ್ನು ಕೇಳಿ, ದೈತ್ಯರು ಹೊರಗೆ ಬಂದು ಬಹಳ ಭಯಂಕರವಾಗಿ ಯುದ್ಧಮಾಡಿದರು. ರಕ್ತದ ಕೋಡಿ ಹರಿದು ರಸ್ತೆಯೆಲ್ಲ ಕೆಸರಾಯಿತು. ದೈತ್ಯದಾನವರು ಅಸಂಖ್ಯಾತರಾಗಿ ಮಡಿದರು. ನಂದಿಕೇಶ್ವರನು ತೀಕ್ಷ್ಣವಾದ ಖಡ್ಗದಿಂದ ತಾರಕಾಖ್ಯನನ್ನು ಸಂಹರಿಸಿದನು. ಮಯನೂ ವಿದ್ಯುನ್ಮಾಲಿಯೂ ಬಹಳ ಕುಪಿತರಾಗಿ, ಗಣಾಧಿಪತಿಗಳ ಮೇಲೆ ನುಗ್ಗಿ ಸಿಕ್ಕಿ ಸಿಕ್ಕಿದವರನ್ನು ಕೊಂದರು. ಇತ್ತ ದೇವತೆಗಳು ಈಶ್ವರನನ್ನೂ ಅತ್ತ ದೈತ್ಯರು ಮಯನನ್ನೂ ಶ್ಲಾಘಿಸುತ್ತಿದ್ದರು.

ಶ್ರೀಮತ್ಸ್ಯಮಹಾಪುರಾಣದಲ್ಲಿ ತ್ರಿಪುರದಹನ ಪ್ರಕರಣದಲ್ಲಿ ತಾರಕಾಖ್ಯವಧವೆಂಬ ನೂರಮೂವತ್ತೆಂಟನೆಯ ಅಧ್ಯಾಯವು ಮುಗಿದುದು.



## ಅಥ ಏಕೋನಚತ್ವಾರಿಂಶದಧಿಕಶತತಮೋಽಧ್ಯಾಯಃ

॥ ಸೂತ ಉವಾಚ ॥

ತಾರಕಾಖ್ಯೇ ಹತೇ ಯುದ್ಧೇ ಉತ್ಸಾರ್ಯ ಪ್ರಮಥಾನ್ ಮಯಃ ।
ಉವಾಚ ದಾನವಾನ್ ಭೂಯೋ ಭೂಯಃ ಸ ತು ಭಯಾವೃತಾನ್ ॥ ೧ ॥

ಭೋಽಸುರೇಂದ್ರಾಧುನಾ ಸರ್ವೇ ನಿಬೋಧಧ್ವಂ ಪ್ರಭಾಷಿತಂ ।
ಯತ್ಕರ್ತವ್ಯಂ ಮಯಾ ಚೈವ ಯುಷ್ಮಾಭಿಶ್ಚ ಮಹಾಬಲೈಃ ॥ ೨ ॥

ಪುಷ್ಯಂ ಸಮೇಷ್ಯತೇ ಕಾಲೇ ಚಂದ್ರಶ್ಚಂದ್ರನಿಭಾನನಾಃ ।
ಯದೈಕಂ ತ್ರಿಪುರಂ ಸರ್ವಂ ಕ್ಷಣಮೇಕಂ ಭವಿಷ್ಯತಿ ॥ ೩ ॥

ಕೂಜಧ್ವಂ ನಿರ್ಭಯಾಃ ಕಾಲೇ ಕೋಕಿಲಾಶಂಸಿತೇನ ಚ ।
ಸ ಕಾಲಃ ಪುಷ್ಯಯೋಗಸ್ಯ ಪುರಸ್ಯ ಚ ಮಯಾ ಕೃತಃ ॥ ೪ ॥

---

೧. ಸೂತಪೌರಾಣಿಕನು ಹೇಳಿದನು.—ಯುದ್ಧದಲ್ಲಿ ತಾರಕಾಖ್ಯನು ಹತನಾಗಲು ಮಯನು ಪ್ರಮಥರನ್ನು ಓಡಿಸಿ ಭಯದಿಂದ ನಡುನಡುಗುತ್ತಿದ್ದ ದಾನವರಿಗೆ ಮತ್ತೆ ಹೀಗೆ ಹೇಳಿದನು.

೨. ಎಲೈ ದಾನವೋತ್ತಮರೇ, ಈಗ ನಾನೂ ಮಹಾಬಲರಾದ ನೀವೂ ಮಾಡಬೇಕಾದುದೇನೆಂದು ಹೇಳುವೆನು ಕೇಳಿ.

೩. ಚಂದ್ರನಂತೆ ಮುಖವುಳ್ಳ ಎಲೈ ದೈತ್ಯರೇ, ಚಂದ್ರನು ಈ ಹೊತ್ತಿನಲ್ಲಿ ಪುಷ್ಯನಕ್ಷತ್ರವನ್ನು ಸೇರುವನು. ಆಗ ಮೂರು ನಗರಗಳೂ ಒಂದು ಕ್ಷಣಕಾಲ ಒಟ್ಟಿಗೆ ಕೂಡುವುವು.

೪. ಕೋಗಿಲೆಗಳು ಧ್ವನಿಮಾಡುವಾಗ ಅದರೊಡನೆ ನೀವೂ ನಿರ್ಭಯವಾಗಿ ಕೂಗಿರಿ. ಚಂದ್ರನು ಪುಷ್ಯ ನಕ್ಷತ್ರವನ್ನು ಸೇರುವುದಕ್ಕೂ ತ್ರಿಪುರಗಳು ಒಟ್ಟುಗೂಡುವುದಕ್ಕೂ ಅದೇ ಕಾಲವೆಂದು ನಾನು ಮೊದಲೇ ಏರ್ಪಡಿಸಿದ್ದೇನೆ.

**ಕಾಲೇ ತಸ್ಮಿನ್ ಪುರೇ ಯಸ್ತು ಸಂಭಾವಯತಿ ಸಂಹತಿಂ ।**
**ಸ ಏನಂ ಕಾರಯೇಚ್ಚೂರ್ಣಂ ಬಲಿನೈಕೇಷುಣಾ ಸುರಃ ॥ ೫ ॥**

**ಯೋ ವಃ ಪ್ರಾಣೋ ಬಲಂ ಯಚ್ಚ ಯಾ ಚ ವೋ ವೈರಿತಾಽಸುರಾಃ ।**
**ತತ್ಕೃತ್ವಾ ಹೃದಯೇ ಚೈವ ಪಾಲಯಧ್ವಮಿದಂ ಪುರಂ ॥ ೬ ॥**

**ಮಹೇಶ್ವರರಥಂ ಹ್ಯೇಕಂ ಸರ್ವಪ್ರಾಣೇನ ಭೀಷಣಂ ।**
**ವಿಮುಖೀಕುರುತಾತ್ಮಾರ್ಥಂ ಯಥಾ ನೋತ್ಸೃಜತೇ ಶರಂ ॥ ೭ ॥**

**ತತ ಏವಂ ಕೃತೇಽಸ್ಮಾಭಿಸ್ತ್ರಿಪುರಸ್ಯಾಪಿ ರಕ್ಷಣೇ ।**
**ಪ್ರತೀಕ್ಷಿಷ್ಯಂತಿ ವಿವಶಾಃ ಪುಷ್ಯಯೋಗಂ ದಿವೌಕಸಃ ॥ ೮ ॥**

**ನಿಶಮ್ಯ ತನ್ಮಯಸ್ಯೈವಂ ದಾನವಾಸ್ತ್ರಿಪುರಾಲಯಾಃ ।**
**ಮುಹುಃ ಸಿಂಹರುತಂ ಕೃತ್ವಾ ಮಯಮೂಚುರ್ಯಮೋಪಮಾಃ ॥ ೯ ॥**

---

೫. ಆ ವೇಳೆಯಲ್ಲಿ ಪಟ್ಟಣಗಳು ಒಟ್ಟುಗೂಡಿದುದನ್ನು ಯಾವನು ತಿಳಿಯುತ್ತಾನೋ ಆ ಸುರಶ್ರೇಷ್ಠನು ಬಲಯುಕ್ತವಾದ ಒಂದೇ ಬಾಣದಿಂದ ಈ ಪಟ್ಟಣವನ್ನು ಪುಡಿಮಾಡಬಲ್ಲನು.

೬. ಎಲೈ ಅಸುರರೇ, ಈ ನಗರವೇ ನಿಮ್ಮ ಪ್ರಾಣ; ಇದೇ ನಿಮ್ಮ ಬಲ. ಈ ಸಂಗತಿಯನ್ನೂ, ದೇವತೆಗಳಿಗೆ ನಿಮ್ಮ ಮೇಲಿನ ದ್ವೇಷವೆಂತಹುದೆಂಬುದನ್ನೂ ಮನಸ್ಸಿನಲ್ಲಿಟ್ಟು ಈ ನಗರವನ್ನು ರಕ್ಷಿಸಿರಿ.

೭. ನಿಮೆಲ್ಲರ ಪ್ರಾಣಗಳನ್ನಾದರೂ ಬಿಟ್ಟು, ಭಯಂಕರನಾದ ಆ ಮಹೇಶ್ವರನ ರಥವೊಂದನ್ನು ಹಿಮ್ಮೆಟ್ಟಿಸಿರಿ. ಹಾಗಾದರೆ ಮಾತ್ರವೇ ಆತನು ನಮ್ಮ ಮೇಲೆ ಬಾಣವನ್ನು ಬಿಡಲಾರನು.

೮. ತ್ರಿಪುರವನ್ನು ರಕ್ಷಿಸುವುದಕ್ಕಾಗಿ ನಾವು ಹೀಗೆ ಪ್ರಯತ್ನಮಾಡಿದರೆ ಪುಷ್ಯನಕ್ಷತ್ರಕ್ಕೋಸ್ಕರ ಪ್ರತೀಕ್ಷಿಸುವ ದೇವತೆಗಳ ಉದ್ದೇಶವು ವ್ಯರ್ಥವಾಗುವುದು.

೯. ತ್ರಿಪುರದಲ್ಲಿ ವಾಸಿಸುವ ಯಮಸದೃಶರಾದ ದಾನವರು ಮಯನ ಈ ಮಾತನ್ನು ಕೇಳಿ ಅಡಿಗಡಿಗೆ ಸಿಂಹನಾದ ಮಾಡುತ್ತ ಅವನೊಡನೆ ಇಂತೆಂದರು.

ಪ್ರಯತ್ನೇನ ವಯಂ ಸರ್ವೇ ಕುರ್ಮಸ್ತವ ಪ್ರಭಾಷಿತಂ ।
ತಥಾ ಕುರ್ಮೋ ಯಥಾ ರುದ್ರೋ ನ ಮೋಕ್ಷ್ಯತಿ ಪುರೇ ಶರಂ ॥೧೦॥

ಅದ್ಯ ಯಾಸ್ಯಾಮ ಸಂಗ್ರಾಮೇ ತದ್ರುದ್ರಸ್ಯ ಜಿಘಾಂಸವಃ ।
ಕಥಯಂತೀ ದಿತೇಃ ಪುತ್ರಾ ಹೃಷ್ಟಾ ಭಿನ್ನತನೂರುಹಾಃ ॥೧೧॥

ಕಲ್ಪಂ ಸ್ಥಾಸ್ಯತಿ ವಾ ಸ್ವಸ್ಥಂ ತ್ರಿಪುರಂ ಶಾಶ್ವತಂ ಧ್ರುವಂ ।
ಅದಾನವಂ ವಾ ಭವಿತಾ ನಾರಾಯಣಪದತ್ರಯಂ ॥೧೨॥

ವಯಂ ನ ಧರ್ಮಂ ಹಾಸ್ಯಾಮೋ ಯಸ್ಮಿನ್ ಮೋಕ್ಷ್ಯಸಿ ನೋ ಭವಾನ್ ।
ಅದೈವತಮದೈತ್ಯಂ ವಾ ಲೋಕಂ ದ್ರಕ್ಷ್ಯಂತಿ ಮಾನವಾಃ ॥೧೩॥

ಇತಿ ಸಂಮಂತ್ರ್ಯ ಹೃಷ್ಟಾಸ್ತೇ ಪುರಾಂತರ್ವಿಬುಧಾರಯಃ ।
ಪ್ರದೋಷೇ ಮುದಿತಾ ಭೂತ್ವಾ ಚೇರುರ್ಮನ್ಮಥಚಾರತಾಂ ॥೧೪॥

---

೧೦. "ನಾವೆಲ್ಲರೂ ಪ್ರಯತ್ನಪಟ್ಟು ನಿನ್ನ ಮಾತನ್ನು ನಡೆಸುವೆವು. ಈಶ್ವರನು ನಿಮ್ಮ ಪಟ್ಟಣದ ಮೇಲೆ ಬಾಣವನ್ನು ಬಿಡದಂತೆ ಮಾಡುವೆವು.

೧೧. ಆ ರುದ್ರನ ಸಕಲಪರಿವಾರ ವರ್ಗವನ್ನು ಸಂಹರಿಸಬೇಕೆಂದು ಈಗ ಯುದ್ಧಕ್ಕೆ ಹೋಗೋಣ" ಹೀಗೆ ಹೇಳಿ ದೈತ್ಯರು ಸಂತೋಷದಿಂದ ರೋಮಾಂಚಿತರಾಗಿ ಮತ್ತೆ ನುಡಿದರು.

೧೨-೧೩. "ದಾನವರು ಪ್ರಳಯಕಾಲದವರೆಗೂ ನೆಲಸುವರು. ತ್ರಿಪುರವು ನೆಮ್ಮದಿಯಾಗಿ ಶಾಶ್ವತವಾಗಿರುವುದು. ಇದು ನಿಶ್ಚಯ. ಇಲ್ಲದಿದ್ದರೆ ತ್ರಿವಿಕ್ರಮರೂಪಧಾರಿಯಾದ ನಾರಾಯಣನ ಮೂರು ಹೆಜ್ಜೆಗಳ ರೂಪವಾದ ಈ ಭೂಮಂಡಲವು ದಾನವಶೂನ್ಯವಾಗಿ ಆದೀತು. ನೀನು ಪ್ರೇರಿಸಿದ ಧರ್ಮಮಾರ್ಗವನ್ನು ಬಿಟ್ಟು ನಾವು ಕದಲುವುದಿಲ್ಲ. ಲೋಕದಲ್ಲಿ ದಾನವರೋ ಅಥವಾ ದೇವತೆಗಳೋ ನಿಶ್ಶೇಷವಾಗಿ ಹತರಾಗುವರು. ಅದನ್ನು ಮನುಷ್ಯರೆಲ್ಲ ನೋಡುವರು."

೧೪. ತ್ರಿಪುರದಲ್ಲಿ ಆ ದೈತ್ಯರು ಹೀಗೆ ಆಲೋಚನೆಮಾಡಿ ಸಂತೋಷಪಟ್ಟು, ಸಂಧ್ಯಾಕಾಲದಲ್ಲಿ ಮನ್ಮಥವಶರಾಗಿ ಕ್ರೀಡಾಪರರಾದರು.

ಮುಹುರ್ಮುರ್ಹುರುತ್ಕ್ರೋದಯೋ ಭ್ರಾಂತ ಉದಯಾಗ್ರಂ ಮಹಾಮಣಿಃ ।
ತಮಾಂಸ್ಯುತ್ಸಾರ್ಯ ಭಗವಾಂಶ್ಚಂದ್ರೋ ಜೃಂಭತಿ ಸೋಂಬರೇ ॥೧೫॥

ಕುಮುದಾಲಂಕೃತೇ ಹಂಸೋ ಯಥಾ ಸರಸಿ ವಿಸ್ತೃತೇ ।
ಸಿಂಹೋ ಯಥಾ ಚೋಪವಿಷ್ಟೋ ವೈದೂರ್ಯಶಿಖರೇ ಮಹಾನ್ ॥೧೬॥

ವಿಷ್ಣೋರ್ಯಥಾ ಚ ವಿಸ್ತೀರ್ಣೇ ಹಾರಶ್ಚೋರಸಿ ಸಂಸ್ಥಿತಃ ।
ತಥಾವಗಾಢೇ ನಭಸಿ ಚಂದ್ರೋಽತ್ರಿನಯನೋದ್ಭವಃ ।
ಭ್ರಾಜತೇ ಭ್ರಾಜಯಂಲ್ಲೋಕಾನ್ ಸೃಜಞ್ಜ್ಯೋತ್ಸ್ನಾರಸಂ ಬಲಾತ್ ॥

ಶೀತಾಂಶಾವುದಿತೇ ಚಂದ್ರೇ ಜ್ಯೋತ್ಸ್ನಾಪೂರ್ಣೇ ಪುರೇಽಸುರಾಃ ।
ಪ್ರದೋಷೇ ಲಲಿತಂ ಚಕ್ರುರ್ಗೃಹಮಾತ್ಮಾನಮೇವ ಚ ॥೧೮॥

---

೧೫. ಅಲ್ಲಲ್ಲಿ ಅಲೆದಾಡಿ, ಉದಯಪರ್ವತವನ್ನು ಬಿಟ್ಟು ಮೇಲೆ ಏರಿಬಂದು, ಮಹಾರತ್ನದಂತಿರುವ ಪೂಜ್ಯನಾದ ಚಂದ್ರನು ಕತ್ತಲೆಯನ್ನು ಹೋಗಲಾಡಿಸಿ ಆಕಾಶದಲ್ಲಿ ಮೆರೆಯುತ್ತಿದ್ದನು.

೧೬-೧೭. ನೈದಿಲೆಗಳಿಂದ ಅಲಂಕೃತವಾಗಿ ವಿಸ್ತಾರವಾದ ಸರೋವರದಲ್ಲಿ ವಿಹರಿಸುವ ಹಂಸದಂತೆಯೂ, ವೈಡೂರ್ಯ ಪರ್ವತದ ಶಿಖರದಲ್ಲಿ ಕುಳಿತಿರುವ ಮಹಾ ಸಿಂಹದಂತೆಯೂ, ವಿಷ್ಣುವಿನ ವಿಶಾಲವಾದ ಎದೆಯಲ್ಲಿ ಪ್ರಕಾಶಿಸುವ ಹಾರ ದಂತೆಯೂ ಗಂಭೀರವಾದ ಗಗನತಲದಲ್ಲಿ ಅತ್ರಿನಯನೋದ್ಭವನಾದ ಚಂದ್ರನು ವಿರಾಜಿಸುತ್ತಿದ್ದನು. ಅವನು ದಿವ್ಯವಾದ ಬೆಳದಿಂಗಳನ್ನು ಚೆಲ್ಲಿ ತಾನೂ ಪ್ರಕಾಶಿ ಸುತ್ತ ಲೋಕಗಳನ್ನು ಬೆಳಗುವನು.

೧೮. ಬೆಳದಿಂಗಳಿಂದ ಪೂರ್ಣನಾಗಿ ಅಮೃತಕರನೆನಿಸಿದ ಚಂದ್ರನು ಉದಿ ಷಲು, ಪ್ರದೋಷ ಸಮಯದಲ್ಲಿ ತ್ರಿಪುರವಾಸಿಗಳಾದ ಅಸುರರು ತಮ್ಮ ಗೃಹವನ್ನೂ ತಮ್ಮನ್ನೂ ಅಲಂಕರಿಸಿಕೊಂಡರು.

ರಥ್ಯಾಸು ರಾಜಮಾರ್ಗೇಷು ಪ್ರಾಸಾದೇಷು ಗೃಹೇಷು ಚ ।
ದೀಪಾಶ್ಚಂಪಕಪುಷ್ಪಾಭಾ ನಾಲ್ಪಸ್ನೇಹಪ್ರದೀಪಿತಾಃ ॥೧೯॥

ತದಾ ಮಠೇಷು ತೇ ದೀಪಾಃ ಸ್ನೇಹಪೂರ್ಣಾಃ ಪ್ರದೀಪಿತಾಃ ।
ಗೃಹಾಣಿ ವಸುಮಂತ್ಯೇಷಾಂ ಸರ್ವರತ್ನಮಯಾನಿ ಚ ।
ಜ್ವಲಂತೋऽದೀಪಯರ್ನ್ ದೀಪ್ತಾಶ್ಚಂದ್ರೋದಯ ಇವ ಗ್ರಹಾಃ ॥೨೦॥

ಚಂದ್ರಾಂಶುಭಿರ್ಭಾಸಮಾನಮಂತರ್ದೀಪ್ತೈಃ ಸುದೀಪಿತಂ ।
ಉಪದ್ರವೈಃ ಕುಲಮಿವ ಪೀಯತೇ ತ್ರಿಪುರೇ ತಮಃ ॥೨೧॥

ತಸ್ಮಿನ್ ಪುರೇ ವೈ ತರುಣಪ್ರದೋಷೇ
 ಚಂದ್ರಾಟ್ಟಹಾಸೇ ತರುಣಪ್ರದೋಷೇ ।
ರತ್ಯರ್ಥಿನೋ ವೈ ದನುಜಾ ಗೃಹೇಷು
 ಸಹಾಂಗನಾಭಿಃ ಸುಚಿರಂ ವಿರೇಮುಃ ॥೨೨॥

---

೧೯. ರಸ್ತೆಗಳಲ್ಲೂ, ರಾಜಮಾರ್ಗಗಳಲ್ಲೂ, ಉಪ್ಪರಿಗೆಗಳಲ್ಲೂ, ಮನೆಗಳಲ್ಲೂ, ಎಣ್ಣೆ ತುಂಬಿದ ದೀಪಗಳಲ್ಲಿ ಸಂಪಿಗೆ ಹೂಗಳಂತೆ ಬೆಳಕಿನ ಕುಡಿಗಳು ಬೆಳಗುತ್ತಿದ್ದುವು.

೨೦. ಆಗ ಮಠಗಳಲ್ಲಿ ಎಣ್ಣೆಯಿಂದ ತುಂಬಿದ ದೀಪಗಳನ್ನು ಹಚ್ಚಿದರು. ಐಶ್ವರ್ಯಪೂರ್ಣಗಳಾಗಿ ಸರ್ವರತ್ನಮಯಗಳೆನಿಸಿದ ಅಸುರರ ಮನೆಗಳಲ್ಲಿ ಆ ದೀಪಗಳು, ಚಂದ್ರೋದಯದಲ್ಲಿ ಗ್ರಹಗಳಂತೆ ತಾವೂ ಬೆಳಗಿ ಪ್ರಕಾಶವನ್ನು ಬೀರಿದುವು.

೨೧. ಚಂದ್ರನ ಕಿರಣಗಳು ಪ್ರಕಾಶಿಸುತ್ತಿದ್ದುದರಿಂದಲೂ, ಮನೆಯೊಳಗಿನ ದೀಪಗಳು ಉರಿಯುತ್ತಿದ್ದುದರಿಂದಲೂ ತ್ರಿಪುರನಗರದ ಒಳಗೂ ಹೊರಗೂ ಇದ್ದ ಕತ್ತಲೆಯು, ಉಪದ್ರವಗಳಿಂದ ಕುಲದ ಗೌರವವು ನಷ್ಟವಾಗುವಂತೆ ಅದೃಶ್ಯವಾಯಿತು.

೨೨. ತರುಣ ತರುಣಿಯರಿಗೆ ಮದನವಿಕಾರವನ್ನು ಹುಟ್ಟಿಸುವ ಆ ಪ್ರದೋಷದ ಸಮಯವು ಚಂದ್ರನ ಬೆಳದಿಂಗಳಿನಿಂದ ಮನೋಹರವಾಗಿರಲು, ದಾನವರು ಕಾಮಪರವಶರಾಗಿ ತಮ್ಮ ತಮ್ಮ ಮನೆಗಳಲ್ಲಿ ಅಂಗನೆಯರೊಡನೆ ಬಹಳ ಹೊತ್ತು ಕ್ರೀಡಿಸಿದರು.

**ವಿನೋದಿತಾ ಯೇ ತು ವೃಷಧ್ವಜಸ್ಯ ।**
**ಪಂಚೇಷವಸ್ತೇ ಮಕರಧ್ವಜೇನ ।**
**ತತ್ರಾಸುರೇಷ್ವಾಸುರಪುಂಗವೇಷು**
**ಸ್ವಾಂಗಾಂಗನಾಃ ಸ್ವೇದಯುತಾ ಬಭೂವುಃ ॥೨೩॥**

**ಕಲಪ್ರಲಾಪೇಷು ಚ ದಾನವೀನಾಂ**
**ವೀಣಾಪ್ರಲಾಪೇಷು ಚ ಮೂರ್ಛಿತೇಷು ।**
**ಮತ್ತಪ್ರಲಾಪೇಷು ಚ ಕೋಕಿಲಾನಾಂ**
**ಸಚಾಪಬಾಣೋ ಮದನೋ ಮಮಂಥ ॥೨೪॥**

**ತಮಾಂಸಿ ನೈಶಾನಿ ದ್ರುತಂ ನಿಹತ್ಯ**
**ಜ್ಯೋತ್ಸ್ನಾವಿತಾನೇನ ಜಗದ್ವಿಕೀರ್ಯ ।**
**ಖೇ ರೋಹಿಣೀಂ ತಾಂ ಚ ಪ್ರಿಯಾಂ ಸಮೇತ್ಯ**
**ಚಂದ್ರಃ ಪ್ರಭಾಭಿಃ ಕುರುತೇಽಧಿರಾಜ್ಯಂ ॥೨೫॥**

---

೨೩. ಮನ್ಮಥನು ಈಶ್ವರನನ್ನು ಉದ್ದೇಶಿಸಿ ಬಿಟ್ಟ ಐದು ಬಾಣಗಳು ವ್ಯರ್ಥವಾದುವಷ್ಟೆ. ಅದೇ ಬಾಣಗಳನ್ನು ಈಗ ಅಸುರರ ಮತ್ತು ಅವರ ಪ್ರಮುಖರ ಮೇಲೆ ಅವನು ಪ್ರಯೋಗಿಸಲು, ಅವರು ವಶರಾಗಿ ತಮ್ಮ ಅಂಗನೆಯರೊಡನೆ ಕ್ರೀಡಿಸಿ ಸ್ವೇದಾದಿ ವಿಕಾರಗಳಿಗೆ ಗುರಿಯಾದರು.

೨೪. ದಾನವ ಸ್ತ್ರೀಯರು ಅವ್ಯಕ್ತಮಧುರವಾಗಿ ಮಾತನಾಡಿದಾಗ, ವೀಣೆಗಳಲ್ಲಿ ಮೂರ್ಛನಾಸ್ಥಾನಗಳನ್ನು ಬಾಜಿಸಿದಾಗ, ಮತ್ತು ಕೋಗಿಲೆಗಳು ಮದದಿಂದ ಕೂಗಿದಾಗ ಮನ್ಮಥನು ಬಿಲ್ಲುಬಾಣಗಳನ್ನು ಹಿಡಿದು ಅಸುರರ ಮನಸ್ಸನ್ನು ಕಡೆಯುತ್ತಿದ್ದನು.

೨೫. ರಾತ್ರಿಯ ಕತ್ತಲೆಯನ್ನು ತೊಲಗಿಸಿ, ಬೆಳದಿಂಗಳನ್ನು ಜಗತ್ತಿನಲ್ಲೆಲ್ಲ ಹರಡಿ, ಅಂತರಿಕ್ಷದಲ್ಲಿ ತನ್ನ ಪ್ರಿಯೆಯಾದ ರೋಹಿಣಿಯೊಡಗೂಡಿ, ಚಂದ್ರನು ತನ್ನ ಪ್ರಕಾಶದಿಂದ ಅಧಿರಾಜಪದವಿಯನ್ನು ನಡೆಸುತ್ತಿದ್ದನು.

ಸ್ಥಿತ್ವೈವ ಕಾಂತಸ್ಯ ತು ಪಾದಮೂಲೇ
ಕಾಚಿದ್ವರಸ್ತ್ರೀ ಸ್ವಕಪೋಲಮೂಲೇ ।
ವಿಶೇಷಕಂ ಚಾರುತರಂ ಕರೋತಿ
ತೇನಾನನಂ ಸ್ವಂ ಸಮಲಂಕರೋತಿ ॥೨೬॥

ದೃಷ್ಟ್ವಾನನಂ ಮಂಡಲದರ್ಪಣಸ್ಥಂ
ಮಹಾಪ್ರಭಾ ಮೇ ಮುಖಜೇತಿ ಜಪ್ತ್ವಾ ।
ಸ್ಮೃತ್ವಾ ವರಾಂಗೀ ರಮಣೇರಿತಾನಿ
ತೇನೈವ ಭಾವೇನ ರತೀಮವಾಪ ॥೨೭॥

ರೋಮಾಂಚಿತೈರ್ಗಾತ್ರವರೈರ್ಯುವತ್ಯೋ
ರತಾನುರಾಗಾದ್ರಮಣೇಷು ಚಾನ್ಯಾಃ
ಸ್ವಯಂ ದ್ರುತಂ ಯಾಂತಿ ಮದಾಭಿಭೂತಾಃ
ಕ್ಷಪಾ ಯಥಾ ಚಾರ್ಕದಿನಾವಸಾನೇ ॥೨೮॥

---

೨೬. ಉತ್ತಮಸ್ತ್ರೀಯೊಬ್ಬಳು ಪತಿಯ ಪಾದಮೂಲದಲ್ಲಿ ನಿಂತು ಅವನ ಪಾದಧೂಳಿಯಿಂದ ತನ್ನ ಕೆನ್ನೆಯ ಮೇಲೆ ಸುಂದರವಾದ ತಿಲಕವನ್ನು ರಚಿಸಿ ಕೊಂಡಳು. ಅದರಿಂದ ಅವಳ ಮುಖವೂ ಅಲಂಕೃತವಾಯಿತು.

೨೭. ಗುಂಡುಕನ್ನಡಿಯಲ್ಲಿ ತನ್ನ ಮುಖವನ್ನು ನೋಡಿಕೊಂಡು "ನನ್ನ ಮುಖದಲ್ಲಿ ಎಷ್ಟೊಂದು ಕಾಂತಿಯಿದೆ! ಎನ್ನುತ್ತ ರಮಣಿಯೊಬ್ಬಳು ತನ್ನ ರಮಣನು ಹೇಳಿದ ಇದೇ ಮಾತನ್ನು ನೆನೆಸಿಕೊಂಡು ಆ ಭಾವದಿಂದಲೇ ಆನಂದವನ್ನು ಹೊಂದಿದಳು.

೨೮. ಯುವತಿಯರಲ್ಲಿ ಕೆಲವರಿಗೆ ತಮ್ಮ ಪ್ರಿಯರ ಅನುರಾಗದಿಂದ ಮೈಯೆಲ್ಲ ರೋಮಾಂಚಿತವಾಯಿತು. ಇನ್ನು ಕೆಲವರು ಹಗಲು ಕಳೆದಕೂಡಲೇ ರಾತ್ರಿಯು ಓಡಿಬರುವಂತೆ, ಮದವಶದಿಂದ ತಾವೇ ಪ್ರಿಯರ ಬಳಿಗೆ ಬೇಗಬೇಗನೆ ನಡೆದರು.

ಪೇಪೀಯತೇ ಚಾತಿರಸಾನುವಿದ್ಧಾ
ವಿಮಾರ್ಗಿತಾನ್ಯಾ ಚ ಪ್ರಿಯಂ ಪ್ರಸನ್ನಾ ।
ಕಾಚಿತ್ಪ್ರಿಯಸ್ಯಾತಿಚಿರಾತ್ಪ್ರಸನ್ನಾ
ಆಸೀತ್ಪ್ರಲಾಪೇಷು ಚ ಸಂಪ್ರಸನ್ನಾ ॥೨೯॥

ಗೋಶೀರ್ಷಯುಕ್ತೈರ್ಹರಿಚಂದನೈಶ್ಚ
ಪಂಕಾಂಕಿತಾಕ್ಷೀ ಚ ವರಾಸುರೀಣಾಂ ।
ಮನೋಜ್ಞರೂಪಾ ರುಚಿರಾ ಬಭೂವುಃ
ಪೂರ್ಣಾಮೃತಸ್ಯೇವ ಸುವರ್ಣಕುಂಭಾಃ ॥೩೦॥

ಕ್ಷತಾಧರೋಷ್ಠಾ ದ್ಯುತದೋಷರಕ್ತಾ
ಲಲಂತಿ ದೈತ್ಯಾ ದಯಿತಾಸು ರಕ್ತಾಃ ।
ತಂತ್ರೀಪ್ರಲಾಪಾಸ್ತ್ರಿಪುರೇಷು ರಕ್ತಾಃ
ಸ್ತ್ರೀಣಾಂ ಪ್ರಲಾಪೇಷು ಪುನರ್ವಿರಕ್ತಾಃ ॥೩೦॥

---

೨೯. ಪ್ರಿಯಳೊಬ್ಬಳನ್ನು ಪ್ರಿಯನು ರಸಾನುಭವದಿಂದ ಕುಡಿದುಬಿಡುವಷ್ಟು ಮಟ್ಟಿಗೆ ಪ್ರೀತಿಸಿದನು. ವಲ್ಲಭನು ಹುಡುಕಿ ತನ್ನನ್ನು ಕಂಡುಹಿಡಿದ ಮೇಲೆ ಮತ್ತೊಬ್ಬಳು ಪ್ರಸನ್ನಳಾದಳು. ಇನ್ನೊಬ್ಬಳು ಬಹಳ ಹೊತ್ತಾದ ಬಳಿಕ ತನ್ನ ಪ್ರಿಯನಿಗೆ ಅನುರಾಗವನ್ನು ತೋರಿದಳು. ಬೇರೊಬ್ಬಳು ಬಹಳ ಮಾತನಾಡಿಸಿದ ಮೇಲೆ ಪೂರ್ಣವಾಗಿ ಶಾಂತಳಾದಳು.

೩೦. ದೈತ್ಯನಾರಿಯರಲ್ಲಿ ಬಲು ಚೆಲುವೆಯಾದವಳೊಬ್ಬಳು ಬಿಳಿಯ ಗಂಧವನ್ನೂ ಶ್ರೀಗಂಧವನ್ನೂ ಅರೆದು ಲೇಪಿಸಿಕೊಂಡಿದ್ದಳು. ಕಣ್ಣಿಗೆ ಕಾಡಿಗೆಯನ್ನು ಹಚ್ಚಿಕೊಂಡಿದ್ದಳು. ಆ ಸುಂದರಿಯರು ಅಮೃತಪೂರ್ಣವಾದ ಸುವರ್ಣಕುಂಭಗಳಂತೆ ಸೌಂದರ್ಯದಿಂದ ಪ್ರಕಾಶಿಸಿದರು.

೩೧. ತುಟಿಗಳು ಗಾಯವಡೆದಿರಲು, ದೋಷವಾವುದೂ ಇಲ್ಲವಾದುದರಿಂದ ಅನುರಾಗವು ಬೇರೂರಿರಲು ದೈತ್ಯರು ತಮ್ಮ ಪ್ರಿಯೆಯರಲ್ಲಿ ಪ್ರೀತಿಯಿಂದ ಕ್ರೀಡಿಸುವರು. ವೀಣಾದಿ ವಾದ್ಯಧ್ವನಿಗಳು ಪ್ರೇಮವನ್ನು ಹುಟ್ಟಿಸುತ್ತಿದ್ದುವು. ಸ್ತ್ರೀಯರು ದುಃಖಧ್ವನಿಮಾಡುವುದೆಂದರೆ ದಾನವರಿಗೆ ಸೈರಿಸುವುದಕ್ಕಾಗುತ್ತಿರಲಿಲ್ಲ.

ಕ್ವಚಿತ್ಪ್ರವೃತ್ತಂ ಮಧುರಾಭಿಗಾನಂ
ಕಾಮಸ್ಯ ಬಾಣೈಃ ಸುಕೃತಂ ನಿಧಾನಂ
ಆಪಾನಭೂಮೀಷು ಸುಖಪ್ರಮೇಯಂ
ಗೇಯಂ ಪ್ರವೃತ್ತಂ ತ್ವಥ ಸಾಧಯಂತಿ ||೩೨||

ಗೇಯಂ ಪ್ರವೃತ್ತಂ ತ್ವಥ ಶೋಧಯಂತಿ
ಕೇಚಿತ್ಪ್ರಿಯಾಂ ತತ್ರ ಚ ಸಾಧಯಂತಿ ।
ಕೇಚಿತ್ಪ್ರಿಯಾಂ ಸಂಪ್ರತಿಬೋಧಯಂತಿ
ಸಂಬುಧ್ಯ ಸಂಬುಧ್ಯ ಚ ರಾಮಯಂತಿ ||೩೩||

ಚೂತಪ್ರಸೂನಪ್ರಭವಃ ಸುಗಂಧಃ
ಸೂರ್ಯೇ ಗತೇ ವೈ ತ್ರಿಪುರೇ ಬಭೂವ ।
ಸಮರ್ಮರೋ ನೂಪುರಮೇಖಲಾನಾಂ
ಶಬ್ದಶ್ಚ ಸಂಬಾಧತಿ ಕೋಕಿಲಾನಾಂ ||೩೪||

---

೩೨. ಒಂದು ಕಡೆ ಮನ್ಮಥನ ಬಾಣಗಳಿಂದ ಪ್ರೇರಿತರಾದ ದೈತ್ಯರು ಮಧುರವಾದ ಗಾನದಲ್ಲಿ ತೊಡಗಿದರು. ಸುಕೃತಿಗಳಿಗೆ ಮಾತ್ರ ಲಭ್ಯವಾಗುವಂತಹ ಭಾಗ್ಯವು ಅದು. ಹೀಗೆಯೇ ಪಾನಗೃಹಗಳಲ್ಲಿಯೂ ಕೂಡ ಇಂಪಾದ ಸಂಗೀತವು ನಡೆಯುತ್ತಿತ್ತು. ಅವರು ಅನುಭವಿಸುತ್ತಿದ್ದ ಸುಖವನ್ನು ಅದು ಸೂಚಿಸುತ್ತಿತ್ತು.

೩೩. ಹೀಗೆ ಸಂಗೀತವು ನಡೆಯುತ್ತಿರಲು ಪಾನಮತ್ತರಾದ ಕೆಲವರು ದಾನವರು ತಮ್ಮ ತಮ್ಮ ಪ್ರಿಯೆಯರನ್ನು ಹುಡುಕುತ್ತ ಅವರ ಬಳಿಯನ್ನು ಸೇರಿದರು. ಕೆಲವರು ಅವರನ್ನೆಚ್ಚರಗೊಳಿಸುತ್ತ ಗೊಳಿಸುತ್ತ ಅವರನ್ನು ಆನಂದಪಡಿಸಿದರು.

೩೪. ಸೂರ್ಯನು ಮುಳುಗಲು ಮಾವಿನ ಹೂಗಳ ಪರಿಮಳವು ತ್ರಿಪುರದಲ್ಲಿ ಎತ್ತೆತ್ತಲೂ ವ್ಯಾಪಿಸಿತು. ಕಾಲಂದಿಗೆಗಳ ಮತ್ತು ಡಾಬುಗಳ ಧ್ವನಿಯು ಕೋಗಿಲೆಗಳ ಮೃದುನಾದದೊಡನೆ ಬೆರೆಯುತ್ತಿತ್ತು.

ಪ್ರಿಯಾವಗೂಢಾ ದಯಿತೋಪಗೂಢಾ
   ಕಾಚಿತ್ಪ್ರರೂಢಾಂಗರುಹಾಪಿ ನಾರೀ ।
ಸುಚಾರುಶಷ್ಪಾಂಕುರಪಲ್ಲವಾನಾಂ
   ನವಾಂಬುಸಿಕ್ತಾ ಇವ ಭೂಮಿರಾಸೀತ್ ॥೩೫॥

ಶಶಾಂಕಪಾದೈರುಪಶೋಭಿತೇಷು
   ಪ್ರಾಸಾದವರ್ಯೇಷು ವರಾಂಗನಾನಾಂ ।
ಮಾಧುರ್ಯಭೂತಾಭರಣಾ ಮಹಾಂತಃ
   ಸ್ವನಾ ಬಭೂವುರ್ಮದನೇಷುತುಲ್ಯಾಃ ॥೩೬॥

ಪಾನೇನ ಖಿನ್ನಾ ದಯಿತಾತಿವೇಲಂ
   ಕಪೋಲಮಾಘ್ರಾಸಿ ಚ ಕಿಂ ಮಮೇದಂ ।
ಆರೋಹ ಮೇ ಶ್ರೋಣಿಮಿಮಾಂ ವಿಶಾಲಾಂ
   ಪೀನೋನ್ನತಾಂ ಕಾಂಚನಮೇಖಲಾಢ್ಯಾಂ ॥೩೭॥

---

೩೫. ಪ್ರಿಯನು ಏಕಾಂತದಲ್ಲಿ ಗಾಢಾಲಿಂಗನವನ್ನು ಮಾಡಲು ಒಬ್ಬ ಸುಂದರಿಯ ದೇಹವು ರೋಮಾಂಚಿತವಾಯಿತು. ಎಳೆಯ ಗರಿಕೆಯ ಮೊಳಕೆಗಳಿಂದ ಕಂಗೊಳಿಸುತ್ತ, ಮೊದಮೊದಲ ಮಳೆಯ ಹನಿಯಿಂದ ತೊಯ್ದ ಭೂಮಿಯನ್ನವಳು ಹೋಲುತ್ತಿದ್ದಳು.

೩೬. ಚಂದ್ರನ ಕಿರಣಗಳಿಂದ ಉಪ್ಪರಿಗೆಗಳು ಪ್ರಕಾಶಿಸುತ್ತಿದ್ದುವು. ನಾರೀಮಣಿಯರ ಆಭರಣಗಳು ಮಧುರಧ್ವನಿಯನ್ನು ಮಾಡುತ್ತಿದ್ದುವು. ಅವು ಮನ್ಮಥನ ಬಾಣಗಳಂತೆ ಉದ್ದೀಪಕಗಳಾಗಿದ್ದುವು.

೩೭. ಮಧುಪಾನದಿಂದ ಬಹಳ ಬಳಲಿದ ರಮಣಿಯು ಪ್ರಿಯನನ್ನು ಕುರಿತು ಹೀಗೆ ಹೇಳಿದಳು. ನನ್ನ ಕೆನ್ನೆಯನ್ನು ನೀನು ಆಘ್ರಾಣಮಾಡಬೇಕೆಂದಿರುವೆಯೋ ? ಹಾಗಾದರೆ ದಪ್ಪವಾಗಿಯೂ ಉನ್ನತವಾಗಿಯೂ ಚಿನ್ನದ ಡಾಬಿನಿಂದ ಅಲಂಕೃತವಾಗಿಯೂ ಇರುವ ನನ್ನ ಈ ವಿಶಾಲವಾದ ಜಘನದ ಮೇಲೆ ಹತ್ತಿ ನಿಂತುಕೋ.''

ರಥ್ಯಾಸು ಚಂದ್ರೋದಯಭಾಸಿತಾಸು
ಸುರೇಂದ್ರಮಾರ್ಗೇಷು ಚ ವಿಸ್ತೃತೇಷು
ದೈತ್ಯಾಂಗನಾ ಯೂಥಗತಾ ವಿಭಾಂತಿ
ತಾರಾ ಯಥಾ ಚಂದ್ರಮಸೋ ದಿವಾಂತೇ ||೩೮||

ಅಟ್ಟಾಟ್ಟಹಾಸೇಷು ಚ ಚಾಮರೇಷು
ಪ್ರೇಂಖಾಸು ಚಾನ್ಯಾ ಮದಲೋಲಭಾವಾತ್ ।
ಸಂದೋಲಯಂತೇ ಕಲಸಂಪ್ರಹಾಸಾಃ
ಪ್ರೊವಾಚ ಕಾಂಚೀಗುಣಸೂಕ್ಷ್ಮನಾದಾ ||೩೯||

ಅವಮ್ಲಾನಮಾಲಾನ್ವಿತಸುಂದರೀಣಾಂ
ಪರ್ಯಾಯ ವಿಷೋಽಸ್ತಿ ಚ ಹರ್ಷಿತಾನಾಂ ।
ಶ್ರೂಯಂತಿ ವಾಚಃ ಕಲಧೌತಕಲ್ಪಾಃ
ವಾಪೀಷು ಚಾನ್ಯೇ ಕಲಿಹಂಸಶಬ್ದಾಃ ||೪೦||

---

೩೮. ಬೆಳದಿಂಗಳಿಂದ ಬೆಳಗುತ್ತಿರುವ ಬೀದಿಗಳಲ್ಲೂ, ವಿಸ್ತಾರವಾದ ರಾಜಮಾರ್ಗಗಳಲ್ಲಿಯೂ ದೈತ್ಯಾಂಗನೆಯರು ರಾತ್ರಿಯ ಪ್ರಾರಂಭದಲ್ಲಿ ಚಂದ್ರನ ಸಹಿತವಾಗಿ ನಕ್ಷತ್ರಗಳು ಪ್ರಕಾಶಿಸುವಂತೆ ಪ್ರಕಾಶಿಸುತ್ತಿದ್ದರು.

೩೯. ಬೆಳ್ಳಗಿರುವ ಚಾಮರಗಳು ಬೀಸುತ್ತಿರಲು, ಮದವಶದಿಂದ ಇನ್ನು ಕೆಲವು ಸುಂದರಿಯರು ಅವ್ಯಕ್ತಮಧುರವಾಗಿ ನಗುತ್ತ ಉಯ್ಯಾಲೆಗಳಲ್ಲಿ ತೂಗಾಡುತ್ತಿದ್ದರು. ಅವರ ಡಾಬು ಇಂಪಾಗಿ ಮೆಲ್ಲಗೆ ಧ್ವನಿಮಾಡುತ್ತಿತ್ತು.

೪೦. ಇನ್ನು ಬಾಡದ ಹೂಮಾಲೆಗಳನ್ನು ಮುಡಿದು ಸಂತೋಷದಿಂದಿರುವ ಸುಂದರಿಯರ ಸರದಿ. ಅವರ ಮಧುರವಾದ ಮಾತು ಕೇಳಬರುತ್ತಿದೆ. ಅದರೊಡನೆಯೇ ಬಾವಿಗಳಲ್ಲಿ ಕಲಹಂಸಗಳೂ ಕೂಗುತ್ತಿವೆ.

ಕಾಂಚೀಕಲಾಪಾಶ್ಚ ಸಹಾಂಗಹಾರಾಃ
  ಪ್ರೇಷ್ಯಾಃ ಸದಾ ಹಾಸ್ಯಕೃತಸ್ಯ ಬಾಲಾಃ ।
ದೃಶ್ಯಂತ ಏತೇ ಹ್ಯಸುರಾಂಗನಾನಾಂ
  ಪ್ರಿಯಾಲಯಾ ಮನ್ಮಥಮಾರ್ಗಣಾನಾಂ ॥೪೧॥

ಚಿತ್ರಾಂಬರಶ್ಚೋದ್ಧೃತಕೇಶಪಾಶಃ
  ಸಂದೋಲ್ಯಮಾನಃ ಶುಶುಭೇಽಸುರೀಣಾಂ ।
ಸುಚಾರುವೇಶಾಭರಣೈರುಪೇತ
  ಸ್ತಾರಾಗಣೈರ್ಜ್ಯೋತಿರಿವಾಸ್ಯಚಂದ್ರಃ ॥೪೨॥

ಸಂದೋಲನಾದುಚ್ಛ್ವಸಿತೈಶ್ಛಿನ್ನಸೂತ್ರೈಃ
  ಕಾಂಚೀಭ್ರಷ್ಟೈರ್ಮಣಿಭಿರ್ವಿಪ್ರಕೀರ್ಣೈಃ ।
ದೋಲಾಭೂಮಿಸ್ತೈರ್ವಿಚಿತ್ರಾ ವಿಭಾತಿ
  ಚಂದ್ರಸ್ಯ ಪಾರ್ಶ್ವೋಪಗತೇವ ಚಿತ್ರಾ ॥೪೩॥

---

೪೧. ಡಾಬುಗಳನ್ನು ತೊಟ್ಟು, ಮೈ ಬಳುಕುತ್ತಿರಲು, ಎಡೆಬಿಡದೆ ಮುಗುಳ್ನಗೆ ನಗುತ್ತ ಈ ಅಸುರಬಾಲೆಯರು ಮನ್ಮಥ ಬಾಣಗಳ ತೌರುಮನೆಯಂತೆ ಕಂಗೊಳಿಸುತ್ತಿರುವರು.

೪೨. ಉಯ್ಯಾಲೆಯಾಡುತ್ತಿರುವಾಗ ಕೂದಲು ಕೆದರಿರಲು, ಜರತಾರಿಯ ಸೀರೆ ಕವಿದಿರಲು, ಸುಂದರವಾದ ರೂಪದಿಂದಲೂ ಆಭರಣಗಳಿಂದಲೂ ಕೂಡಿದ ಅಸುರಾಂಗನೆಯರ ಚಂದ್ರಸದೃಶವಾದ ಮುಖವು ನಕ್ಷತ್ರಗಳೊಡಗೂಡಿದ ಚಂದ್ರನಂತೆ ಪ್ರಕಾಶವಾಗುತ್ತಿತ್ತು.

೪೩. ಉಯ್ಯಾಲೆಯಾಟದಲ್ಲಿ ಉಚ್ಛ್ವಾಸದಿಂದ ಮೈಯುಬ್ಬಿ ದಾರವು ಕಿತ್ತುಹೋಗಲು, ಡಾಬಿನ ಮಣಿಗಳೆಲ್ಲವೂ ಕೆಳಗೆ ಕೆದರಿಬಿದ್ದುವು. ಅವುಗಳಿಂದ ಕೂಡಿದ ಆ ಸ್ಥಳವು ಚಂದ್ರನ ಸಮೀಪದಲ್ಲಿರುವ ಚಿತ್ತಾ ನಕ್ಷತ್ರವನ್ನು ಹೋಲುತ್ತಿತ್ತು.

ಸಚಂದ್ರಿಕೇ ಸೋಽಪವನೇ ಪ್ರದೋಷೇ
ರುತೇಷು ವೃಂದೇಷು ಚ ಕೋಕಿಲಾನಾಂ ।
ಚರನ್ವ್ಯಯಂ ಪ್ರಾಪ್ಯ ಪುರೇಽಸುರಾಣಾಂ
ಪ್ರಕ್ಷೀಣಬಾಣೋ ಮದನಶ್ಚಚಾರ ॥೪೪॥

ಇತಿ ತತ್ರ ಪುರೇಽಮರದ್ವಿಷಾಣಾಂ
ಸಪದಿ ಹಿ ಪಶ್ಚಿಮಕೌಮುದೀ ತದಾಸೀತ್ ।
ರಣಶಿರಸಿ ಪರಾಭವಿಷ್ಯತಾಂ ವೈ
ಭವತುರಗೈಃ ಕೃತಸಂಕ್ಷಯಾ ಅರೀಣಾಂ ॥೪೫॥

ಚಂದ್ರೋಽಥ ಕುಂದಕುಮುದಾಕರಹಾರವರ್ಣೋ
ಜ್ಯೋತ್ಸ್ನಾವಿತಾನರಹಿತೋಽಭ್ರಸಮಾನವರ್ಣಃ ।
ವಿಚ್ಛಾಯತಾಂ ಹಿ ಸಮುಪೇತ್ಯ ನ ಭಾತಿ ತದ್ವತ್
ಭಾಗ್ಯಕ್ಷಯೇ ನರಪತಿಶ್ಚ ನರೋ ವಿವರ್ಣಃ ॥೪೬॥

---

೪೪. ಪ್ರದೋಷ ಸಮಯ ; ಉಪವನಗಳಲ್ಲಿ ಬೆಳದಿಂಗಳು ಕಂಗೊಳಿಸುತ್ತಿದೆ. ಕೋಗಿಲೆಗಳ ಹಿಂಡು ಕೂಗುತ್ತಿದೆ. ಇಂತಹ ಸಂದರ್ಭದಲ್ಲಿ ಮನ್ಮಥನು ಬತ್ತಳಿಕೆಯ ಬಾಣಗಳೆಲ್ಲ ತೀರಿಹೋಗಿ ದೈತ್ಯರ ನಗರದಲ್ಲಿ ತಿರುಗುತ್ತಿದ್ದನು.

೪೫. ಈ ರೀತಿಯಾಗಿ ದೇವತೆಗಳ ಶತ್ರುಗಳಾದ ಆ ರಾಕ್ಷಸರ ನಗರದಲ್ಲಿ ಬೆಳದಿಂಗಳ ಪ್ರಕಾಶವು ಮುಗಿಯತ್ತ ಬಂದಿತು. ಈಶ್ವರನ ಕುದುರೆಗಳಿಂದ ಅಸುರರು ಯುದ್ಧದಲ್ಲಿ ಸೋತು ಸ್ವಲ್ಪಹೊತ್ತಿನೊಳಗಾಗಿಯೇ ನಾಶವಾಗುವುದರಲ್ಲಿದ್ದರು.

೪೬. ಮೊಲ್ಲೆ, ನೈದಿಲೆ, ಮುತ್ತಿನ ಹಾರ ಇವುಗಳಂತೆ ಶುಭ್ರವಾಗಿ ಪ್ರಕಾಶಿಸುತ್ತಿದ್ದ ಚಂದ್ರನು ಬೆಳದಿಂಗಳೆಲ್ಲವನ್ನೂ ಕಳೆದುಕೊಂಡು, ಮೋಡಗಳ ಬಣ್ಣವನ್ನು ತಾಳಿ ಕಾಂತಿಹೀನನಾದನು. ಭಾಗ್ಯವು ಕ್ಷಯಿಸುವ ಹೊತ್ತು ಬಂದರೆ ನರಪಾಲಕನಾದರೂ ಕಳೆಗುಂದುವನು.

**ಚಂದ್ರಪ್ರಭಾಮರುಣಸಾರಥಿನಾಭಿಭೂಯ**
**ಸಂತಪ್ತಕಾಂಚನರಥಾಂಗಸಮಾನಬಿಂಬಃ ।**
**ಸ್ಥಿತ್ವೋದಯಾಗ್ರಮುಕುಟೇ ಮುಹುರೇಷ ಸೂರ್ಯೋ**
**ಭಾತ್ಯಂಬರೇ ತಿಮಿರತೋಯವಹಾಂ ತರಿಷ್ಯ ॥೪೭॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ತ್ರಿಪುರಕೌಮುದೀ ನಾಮೈಕೋನ ಚತ್ವಾರಿಂಶದಧಿಕಶತತಮೋಽಧ್ಯಾಯಃ**

---

೪೭. ಸಾರಥಿಯಾದ ಅರುಣನ ಮೂಲಕ ಚಂದ್ರನ ಕಾಂತಿಯನ್ನು ಓಡಿಸಿ, ಕೆಂಪಗೆ ಕಾದ ಚಿನ್ನದ ಚಕ್ರವನ್ನು ತನ್ನ ಬಿಂಬವು ಹೋಲುತ್ತಿರಲು, ಅಂಧಕಾರದ ನದಿಯನ್ನು ದಾಟಲೆಳಸಿ, ಇಗೋ ! ಸೂರ್ಯನು ಉದಯಪರ್ವತದ ಶಿಖರವನ್ನೇರಿ ಆಕಾಶದಲ್ಲಿ ಪ್ರಕಾಶಿಸುತ್ತಿರುವನು.

### ಅಧ್ಯಾಯದ ಸಾರಾಂಶ

ತಾರಕಾಖ್ಯನು ಯುದ್ಧದಲ್ಲಿ ಹತನಾದ ಮೇಲೆ ಮಯನು ದೈತ್ಯರನ್ನು ಕರೆದು ಅವರಿಗೆ ಧೈರ್ಯಹೇಳಿ, ಪ್ರಾಣಹೋದರೂ ಸರಿ ಪಟ್ಟಣವನ್ನು ಕಾಪಾಡಬೇಕು ಎಂದು ಆಜ್ಞಾಪಿಸಿದನು. ಅವರು ಅದಕ್ಕೊಪ್ಪಿದರು. ಸ್ವಲ್ಪ ಹೊತ್ತಿನೊಳಗಾಗಿ ಚಂದ್ರೋದಯವಾಯಿತು. ದೈತ್ಯರು ವಿಧವಿಧವಾಗಿ ಹರ್ಷದಿಂದ ಬೆಳದಿಂಗಳಲ್ಲಿ ವಿಹರಿಸಿದರು. ರಾತ್ರಿ ಕಳೆಯಿತು ; ಸೂರ್ಯನುದಿಸಿದನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ತ್ರಿಪುರಕೌಮುದಿಯೆಂಬ
ನೂರಮೂವತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

## ಅಥ ಚತ್ವಾರಿಂಶದಧಿಕಶತತಮೋಽಧ್ಯಾಯಃ

|| ಸೂತ ಉವಾಚ ||

ಉದಿತೇ ತು ಸಹಸ್ರಾಂಶೌ ಮೇರೌ ಭಾಸಾಕರೇ ರವೌ ।
ನನರ್ದ ಚ ಬಲಂ ಕೃತ್ಸ್ನಂ ಯುಗಾಂತ ಇವ ಸಾಗರಃ || ೧ ||

ಸಹಸ್ರನಯನೋ ದೇವಸ್ತತಃ ಶಕ್ರಃ ಪುರಂದರಃ ।
ಸವಿತ್ತದಃ ಸವರುಣಸ್ತ್ರಿಪುರಂ ಪ್ರಯಯೌ ಹರಃ || ೨ ||

ತೇ ನಾನಾವಿಧರೂಪಾಶ್ಚ ಪ್ರಮಥಾತಿಪ್ರಮಾಥಿನಃ ।
ಯಯುಃ ಸಿಂಹರವೈರ್ಘೋರೈರ್ವಾದಿತ್ರನಿನದೈರಪಿ || ೩ ||

ತತೋ ವಾದಿತವಾದಿತ್ರೈಶ್ಛತ್ರೈಃ ಸಹ ಧ್ವಜೈಃ ।
ಬಭೂವ ತದ್ಬಲಂ ದಿವ್ಯಂ ವನಂ ಪ್ರಚಲಿತಂ ಯಥಾ || ೪ ||

ತದಾ ಪತಂತಂ ಸಂಪ್ರೇಕ್ಷ್ಯ ರೌದ್ರಂ ರುದ್ರಬಲಂ ಮಹತ್ ।
ಸಂಕ್ಷೋಭೋ ದಾನವೇಂದ್ರಾಣಾಂ ಸಮುದ್ರಪ್ರತಿಮೋ ಬಭೌ || ೫ ||

---

೧. ಸೂತಪೌರಾಣಿಕನು ಹೇಳಿದನು. — ತೇಜೋನಿಧಿಯಾದ ಸೂರ್ಯನಾರಾಯಣನು ಉದಿಸಲು ಸೈನ್ಯವೆಲ್ಲವೂ ಪ್ರಳಯಕಾಲದ ಸಾಗರದಂತೆ ಅಬ್ಬರಿಸಿತು.

೨. ಬಳಿಕ ಸಹಸ್ರಾಕ್ಷನೆನಿಸಿದ ದೇವೇಂದ್ರ, ಕುಬೇರ, ವರುಣ ಇವರೊಡಗೂಡಿ ಈಶ್ವರನು ತ್ರಿಪುರಕ್ಕೆ ಹೋದನು.

೩. ಶತ್ರುಭೇದಕರಾದ ಪ್ರಮಥರು ನಾನಾರೂಪಧಾರಿಗಳಾಗಿ ಸಿಂಹನಾದವನ್ನೂ ವಾದ್ಯಧ್ವನಿಯನ್ನೂ ಮಾಡುತ್ತಾ ಹೊರಟರು.

೪. ಬಳಿಕ ವಾದ್ಯಗಳು ಘೋರ್ಗರೆಯುತ್ತಿರಲು, ಧ್ವಜಗಳಿಂದಲೂ ಕೊಡೆಗಳಿಂದಲೂ ಕೂಡಿದ ಆ ದೇವಸೈನ್ಯವು ಸಂಚರಿಸುತ್ತಿರುವ ವನವೋ ಎಂಬಂತಿತ್ತು.

೫. ಆಗ ಭಯಂಕರವಾದ ಆ ರುದ್ರನ ಸೈನ್ಯವನ್ನು ನೋಡಿ ದಾನವಪ್ರಮುಖರ ಮನಸ್ಸು ಸಮುದ್ರವು ಅಲ್ಲೋಲಕಲ್ಲೋಲವಾಗುವಂತೆ ಕ್ಷುಭ್ದವಾಯಿತು.

ತೇ ಚಾಸೀನ್ ಪಟ್ಟಿಶಾನ್ ಶಕ್ತೀಃ ಶೂಲದಂಡಪರಶ್ವಧಾನ್ ।
ಶರಾಸನಾನಿ ವಜ್ರಾಣಿ ಗುರೂಣಿ ಮುಸಲಾನಿ ಚ ॥ ೬ ॥

ಪ್ರಗೃಹ್ಯ ಕೋಪರಕ್ತಾಕ್ಷಾಃ ಸಪಕ್ಷಾ ಇವ ಪರ್ವತಾಃ ।
ನಿರ್ಜಗ್ಮುರ್ದಾನವಘಟಾ ಘನಾ ಇವ ಘನಾಗಮೇ ॥ ೭ ॥

ಸವಿದ್ಯುನ್ಮಾಲಿನಸ್ತೇ ವೈ ಸಮಯಾ ದಿತಿನಂದನಾಃ ।
ಮೋದಮಾನಾಃ ಸಮಾಸೇದುರ್ದೇವದೇವೈಃ ಸುರಾರಯಃ ॥ ೮ ॥

ಮರ್ತವ್ಯಕೃತಬುದ್ಧೀನಾಂ ಜಯೇ ಚಾನಿಶ್ಚಿತಾತ್ಮನಾಂ ।
ಅಬಲಾನಾಂ ಚಮೂರ್ಹ್ಯಾಸೀದಬಲಾವಯವಾ ಇವ ॥ ೯ ॥

ವಿಗರ್ಜಂತ ಇವಾಂಭೋದಾ ಅಂಭೋದಸದೃಶತ್ವಿಷಃ ।
ಪ್ರಯುಧ್ಯ ಯುದ್ಧಕುಶಲಾಃ ಪರಸ್ಪರಕೃತಾಗಸಃ ॥೧೦॥

---

೬-೭. ಆ ದಾನವಯೋಧರು ಕತ್ತಿ, ಪಟ್ಟಸ, ಶಕ್ತಿ, ಶೂಲ ದಂಡ, ಕೊಡಲಿ, ಬಿಲ್ಲು, ವಜ್ರಾಯುಧ, ದೊಡ್ಡ ಮುಸಲಾಯುಧ ಇವುಗಳನ್ನು ತೆಗೆದು ಕೊಂಡು, ಕೋಪದಿಂದ ಕಣ್ಣು ಕೆಂಪೇರಲು, ರೆಕ್ಕೆಯಿರುವ ಪರ್ವತಗಳಂತೆ ಮಳೆ ಗಾಲದ ಮೋಡಗಳ ರೀತಿಯಲ್ಲಿ ಹೊರಟರು.

೮. ವಿದ್ಯುನ್ಮಾಲಿ, ಮಯ ಮುಂತಾದವರೊಡಗೂಡಿ ದೇವಶತ್ರುಗಳಾದ ದೈತ್ಯರು ಸಂತೋಷಪಡುತ್ತಾ ಬಂದು ದೇವತೆಗಳೊಡನೆ ಸಂಧಿಸಿದರು.

೯. ದುರ್ಬಲರಾದ ದಾನವರಿಗೆ ಜಯವು ಸಿಕ್ಕುವುದೆಂಬ ನಂಬಿಕೆಯಿರಲಿಲ್ಲ. ಅವರು ಯುದ್ಧದಲ್ಲಿ ಮಡಿಯಬೇಕೆಂದು ಸಂಕಲ್ಪಮಾಡಿದ್ದರು. ಅವರ ಸೈನ್ಯವು ಹೆಂಗಸಿನ ಅವಯವಗಳಂತೆ ಶಕ್ತಿಹೀನವಾಗಿತ್ತು.

೧೦. ಮೋಡಗಳನ್ನು ಮೈಬಣ್ಣವು ಹೋಲುತ್ತಿರಲು, ಮೇಘಗಳಂತೆ ಗರ್ಜಿಸುತ್ತ, ಯುದ್ಧಕುಶಲರಾದ ದೈತ್ಯರು ಒಬ್ಬರಮೇಲೊಬ್ಬರು ತಪ್ಪು ಹೊರಿಸುತ್ತಾ ದೇವತೆಗಳೊಡನೆ ರಭಸದಿಂದ ಹೋರಾಡಿದರು.

ಧೂಮಾಯಂತೋ ಜ್ವಲದ್ಭಿಶ್ಚ ಆಯುಧೈಶ್ಚಂದ್ರವರ್ಚಸೈಃ ।
ಕೋಪಾದ್ವಾ ಯುದ್ಧಲುಬ್ಧಾಶ್ಚ ಕುಟ್ಟಯಂತೇ ಪರಸ್ಪರಂ ॥೧೧॥

ವಜ್ರಾಹತಾಃ ಪತಂತ್ಯನ್ಯೇ ಬಾಣೈರನ್ಯೇ ವಿದಾರಿತಾಃ ।
ಅನ್ಯೇ ವಿದಾರಿತಾಶ್ಚಕ್ರೈಃ ಪತಂತಿ ಹ್ಯುದಧೇರ್ಜಲೇ ॥೧೨॥

ಛಿನ್ನಸ್ರಗ್ದಾಮಹಾರಾಶ್ಚ ಪ್ರವ್ಯಸ್ತಾಂಬರಭೂಷಣಾಃ ।
ತಿಮಿನಕ್ರಗಣೇ ಚೈವ ಪತಂತಿ ಪ್ರಮಥಾಃ ಸುರಾಃ ॥೧೩॥

ಗದಾನಾಂ ಮುಸಲಾನಾಂ ಚ ತೋಮರಾಣಾಂ ಪರಶ್ವಧಾಂ ।
ವಜ್ರಶೂಲರ್ಷ್ಟಿಪಾತಾನಾಂ ಪಟ್ಟಿಶಾನಾಂ ಚ ಪರ್ವಶಃ ॥೧೪॥

ಗಿರಿಶೃಂಗೋಪಾಲಾನಾಂ ಚ ಪ್ರೇರಿತಾನಾಂ ಪ್ರಮನ್ಯುಭಿಃ ।
ಸಜವಾನಾಂ ದಾನವಾನಾಂ ಸಧೂಮಾನಾಂ ರವಿತ್ವಿಷಾಂ ।
ಆಯುಧಾನಾಂ ಮಹಾನೋಘಃ ಸಾಗರೌಘೇ ಪತತ್ಯಪಿ ॥೧೫॥

---

೧೧. ಚಂದ್ರನಂತೆ ಕಾಂತಿಯುಕ್ತವಾಗಿ ತೇಜೋವಿಶಿಷ್ಟಗಳಾದ ಆಯುಧಗಳನ್ನು ಹಿಡಿದು, ಕೋಪದಿಂದ ಹೊಗೆ ಯೇಳುತ್ತಿರಲು, ದೈತ್ಯದಾನವರು ಪರಸ್ಪರ ಹೊಡೆಯುತ್ತಿದ್ದರು.

೧೨. ವಜ್ರಾಯುಧದ ಪೆಟ್ಟಿನಿಂದ ಕೆಲವರು ಬಿದ್ದರು. ಮತ್ತೆ ಕೆಲವರನ್ನು ಶತ್ರುಗಳು ಬಾಣಗಳಿಂದ ಸಿಗಿದರು. ಉಳಿದವರನ್ನು ಚಕ್ರಗಳಿಂದ ಸೀಳಿ ಸಮುದ್ರದಲ್ಲಿ ಬೀಳಿಸಿದರು.

೧೩. ಪ್ರಮಥರ ಮತ್ತು ದೇವತೆಗಳ ಪುಷ್ಪಮಾಲೆಗಳೂ ಹಾರಗಳೂ ಕಿತ್ತು ಹೋದುವು. ವಸ್ತ್ರಭೂಷಣಗಳು ಸಡಿಲವಾದುವು. ತಿಮಿಂಗಿಲಗಳೂ, ಮೊಸಳೆಗಳೂ ತುಂಬಿದ ಮಡುವಿನಲ್ಲಿ ಅವರು ಬಿದ್ದರು.

೧೪-೧೫. ಅತಿಕೋಪಿಷ್ಠರಾದ ದಾನವರು ಗದೆ, ಮುಸಲ, ತೋಮರ, ಪರಶು, ವಜ್ರ, ಶೂಲ, ಖಡ್ಗ ಪಟ್ಟಿಶ, ಗಿರಿಶಿಖರ, ಇವೆಲ್ಲವನ್ನೂ ಶತ್ರುಗಳ ಮೇಲೆ ಮಹಾವೇಗದಿಂದ ಎಸೆಯುತ್ತಿದ್ದರು. ಸೂರ್ಯನಂತೆ ಜ್ವಲಿಸುತ್ತ ಆ ಆಯುಧಗಳು ಹೊಗೆಯುಗುಳುತ್ತಿದ್ದುವು. ಇವೆಲ್ಲವೂ ಸಾಗರದ ಜಲರಾಶಿಯಲ್ಲಿ ಬಿದ್ದುವು.

ಪ್ರವೃದ್ಧವೇಗೈಸ್ತೈಸ್ತತ್ರ ಸುರಾಸುರಕರೇರಿತೈಃ ।
ಆಯುಧೌಘೈಸ್ತು ನಕ್ರಾಣಾಂ ಕ್ರಿಯತೇ ಸಂಕ್ಷಯೋ ಮಹಾನ್ ॥೧೬॥

ಕ್ಷುದ್ರಾಣಾಂ ಗಜಯೋರ್ಯುದ್ಧೇ ಯಥಾ ಭವತಿ ಸಂಕ್ಷಯಃ ।
ದೇವಾಸುರಗಣೈಸ್ತದ್ವತ್ತಿಮಿನಕ್ರಕ್ಷಯೋಽಭವತ್ ॥೧೭॥

ವಿದ್ಯುನ್ಮಾಲೀ ಚ ವೇಗೇನ ವಿದ್ಯುನ್ಮಾಲೀ ಇವಾಂಬುದಃ ।
ವಿದ್ಯುನ್ಮಾಲಘನೋನ್ನಾದೋ ನಂದೀಶ್ವರಮಭಿದ್ರುತಃ ॥೧೮॥

ಸ ತಂ ತಮೋಽರಿವದನಂ ಪ್ರಣದನ್ವದತಾಂ ವರಃ ।
ಉವಾಚ ಯುಧಿ ಶೈಲಾದಿಂ ದಾನವೋಽಂಬುಧಿನಿಸ್ವನಃ ॥೧೯॥

ಯುದ್ಧಾಕಾಂಕ್ಷೀ ತು ಬಲವಾನ್ ವಿದ್ಯುನ್ಮಾಲ್ಯಹಮಾಗತಃ ।
ಯದಿ ತ್ವಿದಾನೀಂ ಮೇ ಜೀವನ್ ಮುಚ್ಯಸೇ ನಂದಿಕೇಶ್ವರ ॥೨೦॥

---

೧೬. ಸುರರೂ ಅಸುರರೂ ಪ್ರಯೋಗಿಸಿದ ವೇಗಶಾಲಿಗಳಾದ ಆಯುಧಗಳ ರಾಶಿಯಿಂದ ಸಾಗರದಲ್ಲಿದ್ದ ಮೊಸಳೆಗಳು ಹಿಂಡುಹಿಂಡಾಗಿ ಸತ್ತುವು.

೧೭. ಎರಡು ಆನೆಗಳ ಹೋರಾಟದಲ್ಲಿ ಸಿಕ್ಕಿಕೊಂಡು ಕ್ಷುದ್ರಪ್ರಾಣಿಗಳು ಸಾಯುವಂತೆ, ದೇವಾಸುರರ ಕಾಳಗದಲ್ಲಿ ತಿಮಿಂಗಿಲಗಳೂ ಮೊಸಳೆಗಳೂ ಮಡಿದುವು.

೧೮. ಮಿಂಚಿನ ಸಾಲಿನಿಂದ ಕಂಗೊಳಿಸುವ ಮೋಡದಂತೆ ಪ್ರಕಾಶಿಸುತ್ತ, ಆರ್ಭಟಿಸುತ್ತ ವಿದ್ಯುನ್ಮಾಲಿಯು ವೇಗದಿಂದ ನಂದೀಶ್ವರನ ಮೇಲೆ ನುಗ್ಗಿದನು.

೧೯. ಮಾತುಗಾರನಾದ ಆ ವಿದ್ಯುನ್ಮಾಲಿಯು ಸಮುದ್ರದಂತೆ ಅಬ್ಬರಿಸುತ್ತ ಸೂರ್ಯನಂತೆ ತೇಜಸ್ವಿಯಾದ ಮುಖವುಳ್ಳ ನಂದೀಶ್ವರನಿಗೆ ಹೀಗೆ ಹೇಳಿದನು.

೨೦. "ಎಲೈ ನಂದೀಶ್ವರಾ, ಯುದ್ಧಾಭಿಲಾಷೆಯಿಂದ ಬಂದಿರುವ ನಾನು ಬಲಿಷ್ಠನಾದ ವಿದ್ಯುನ್ಮಾಲಿ. ನನ್ನ ಕೈಯಿಂದ ನೀನು ಈಗ ಜೀವದೊಡನೆ ತಪ್ಪಿಸಿಕೊಂಡು ಹೋಗಬಲ್ಲೆಯಾ?"

ತಮೇವಂ ವಾದಿನಂ ದೈತ್ಯಂ ನಂದೀಶಸ್ತಪತಾಂ ವರಃ ।
ಉವಾಚ ಪ್ರಹಸಂಸ್ತತ್ರ ವಾಕ್ಯಾಲಂಕಾರಕೋವಿದಃ ॥೨೧॥

ದಾನವಾ ಧರ್ಮಕಾಮಾನಾಂ ನೈಷೋಽವಸರ ಇತ್ಯುತ ।
ಶಕ್ತೋಽ ಹಂತುಂ ಕಿಮಾತ್ಮಾನಂ ಜಾತಿದೋಷಾದ್ವಿಕತ್ಥಸೇ ॥೨೨॥

ಯದಿ ತಾವನ್ಮಯಾ ಪೂರ್ವಂ ಹತೋಽಸಿ ಪಶುವದ್ಯಥಾ ।
ಇದಾನೀಂ ವಾ ಕಥಂ ನಾಮ ನ ಹಿಂಸ್ಯೇ ಕ್ರತುದೂಷಣಂ ॥೨೩॥

ಸಾಗರಂ ತರತೇ ದೋರ್ಭ್ಯಾಂ ಪಾತಯೇದ್ಯೋ ದಿವಾಕರಂ ।
ಸೋಽಪಿ ಮಾಂ ಶಕ್ನುಯಾನ್ನೈವ ಚಕ್ಷುರ್ಭ್ಯಾಂ ಸಮವೀಕ್ಷಿತುಂ ॥೨೪॥

ಇತ್ಯೇವಂ ವಾದಿನಂ ತತ್ರ ನಂದಿನಂ ತನ್ನಿಭೋ ಬಲೇ ।
ಬಿಭೇದೈಕೇಷುಣಾ ದೈತ್ಯಃ ಕರೇಣಾರ್ಕ ಇವಾಂಬುದಂ ॥೨೫॥

---

೨೧. ವಿದ್ಯುನ್ಮಾಲಿ ಹೀಗೆ ಹೇಳಲು, ತೇಜಸ್ವಿಗಳಲ್ಲಿ ಅಗ್ರಗಣ್ಯನೂ, ಅಲಂಕಾರವಾಕ್ಯಚತುರನೂ ಆದ ನಂದೀಶ್ವರನು ಅವನನ್ನು ನೋಡಿ ನಕ್ಕು ಇಂತೆಂದನು.

೨೨. "ಓ ದೈತ್ಯಾ, ಅಧರ್ಮಮಯವಾದ ಅಭಿಲಾಷೆಗಳಿಗೆ ಇದು ಸಮಯ ವಲ್ಲ. ನಿನ್ನನ್ನು ನಾನು ಕೊಲ್ಲಬಲ್ಲೆನು. ಜಾತಿದೋಷದಿಂದೇಕೆ ಅತಿಯಾಗಿ ಹರಟುತ್ತೀಯೆ ?

೨೩. ಮೊದಲು ನಿನ್ನನ್ನು ನಾನು ಪಶುವನ್ನು ಕೊಂದಂತೆ ಕೊಂದು ಹಾಕಿದ್ದೆನು. ಯಜ್ಞಹಿಂಸಕನಾದ ನಿನ್ನನ್ನು ಈಗಲೂ ಸಹ ಹಾಗೆಯೇ ಕೊಲ್ಲಲಾಗದೇ ?

೨೪. ಯಾವಾತನು ಸಾಗರವನ್ನು ತೋಳಿನಿಂದಲೇ ಈಜಿ ದಾಟಬಲ್ಲನೋ, ಸೂರ್ಯನನ್ನು ಕೆಡಹಬಲ್ಲನೋ ಅಂತಹವನೂ ಕೂಡ ನನ್ನನ್ನು ಕಣ್ಣೆತ್ತಿನೋಡಲು ಶಕ್ತನಲ್ಲ."

೨೫. ನಂದೀಶ್ವರನು ಹೀಗೆ ಹೇಳಲು ಅವನಷ್ಟೇ ಬಲಶಾಲಿಯಾದ ದೈತ್ಯನು, ಸೂರ್ಯನು ಕಿರಣದಿಂದ ಮೇಘವನ್ನು ಭೇದಿಸುವಂತೆ ಒಂದು ಬಾಣದಿಂದ ಅವನನ್ನಿರಿದನು.

ವಕ್ಷಸಃ ಸಶರಸ್ತಸ್ಯ ಪಪೌ ರುಧಿರಮುತ್ತಮಂ ।
ಸೂರ್ಯಸ್ತ್ವಾತ್ಮಪ್ರಭಾವೇಣ ನದ್ಯರ್ಣವಜಲಂ ಯಥಾ ॥೨೬॥

ಸ ತೇನ ಸುಪ್ರಹಾರೇಣ ಪ್ರಥಮಂ ಚಾತಿರೋಷಿತಃ ।
ಹಸ್ತೇನ ವೃಕ್ಷಮುತ್ಪಾಟ್ಯ ಚಿಕ್ಷೇಪ ಗಜರಾಡಿವ ॥೨೭॥

ವಾಯುನುನ್ನಃ ಸ ಚ ತರುಃ ಶೀರ್ಣಪುಷ್ಪೋ ಮಹಾರವಃ ।
ವಿದ್ಯುನ್ಮಾಲಿಶರೈಶ್ಛಿನ್ನಃ ಪಪಾತ ಪತಗೇಶವತ್ ॥೨೮॥

ವೃಕ್ಷಮಾಲೋಕ್ಯ ತಂ ಛಿನ್ನಂ ದಾನವೇನ ವರೇಷುಭಿಃ ।
ರೋಷಮಾಹಾರಯತ್ತೀವ್ರಂ ನಂದೀಶ್ವರಃ ಸುವಿಗ್ರಹಃ ॥೨೯॥

ಸೋದ್ಯಮ್ಯ ಕರಮಾರಾವೇ ರವಿಶಕ್ರಕರಪ್ರಭಂ ।
ದುದ್ರಾವ ಹಂತುಂ ಸಕ್ರೂರಂ ಮಹಿಷಂ ಗಜರಾಡಿವ ॥೩೦॥

---

೨೬. ಸೂರ್ಯನು ತನ್ನ ಶಕ್ತಿಯಿಂದ ನದಿಗಳ ಮತ್ತು ಸಮುದ್ರಗಳ ನೀರನ್ನು ಕುಡಿಯುವಂತೆ ಆ ಬಾಣವು ಅವನ ಎದೆಯ ರಕ್ತವನ್ನು ಕುಡಿಯಿತು.

೨೭. ಆ ಪ್ರಬಲ ಪ್ರಹಾರದಿಂದ ನಂದಿಗೆ ಮೊದಲು ಬಹಳ ಕೋಪ ಬಂದಿತು. ಬಳಿಕ ಅವನು ಗಜರಾಜನಂತೆ ಕರದಿಂದ ಮರವನ್ನು ಕಿತ್ತು ದೈತ್ಯನ ಮೇಲೆ ಬಿಸುಟನು.

೨೮. ಆ ಮರವು ಗಾಳಿಯ ಹೊಡೆತಕ್ಕೆ ಸಿಕ್ಕಿ ಗಟ್ಟಿಯಾಗಿ ಶಬ್ದಮಾಡುತ್ತಾ ಹೋಯಿತು. ಅದರ ಹೂಗಳು ಉದುರಿದುವು. ವಿದ್ಯುನ್ಮಾಲಿಯ ಬಾಣಗಳಿಂದ ಅದು ತುಂಡು ತುಂಡಾಗಿ ಗರುಡನಂತೆ ಕೆಳಗೆ ಬಿದ್ದಿತು.

೨೯. ದಾನವನ ಬಾಣಗಳಿಂದ ಮರವು ಕತ್ತರಿಸಿ ಹೋದುದನ್ನು ಕಂಡು ಸುಂದರರೂಪನಾದ ನಂದೀಶ್ವರನಿಗೆ ಬಹಳ ಕೋಪ ಬಂದಿತು.

೩೦. ಅವನು ಸೂರ್ಯನ ಮತ್ತು ದೇವೇಂದ್ರನ ಕರಗಳಂತೇ ಜೋಯುಕ್ತವಾದ ತನ್ನ ಕೈಯನ್ನೆತ್ತಿ ಸಿಂಹನಾದ ಮಾಡುತ್ತ, ಆನೆಯು ಕೋಣನನ್ನು ಕೊಲ್ಲುವುದಕ್ಕೆ ಹೋಗುವಂತೆ ಕ್ರೂರನಾದ ದೈತ್ಯನನ್ನು ವಧಿಸಲು ಓಡಿದನು.

ತಮಾಪತಂತಂ ವೇಗೇನ ವೇಗವಾನ್ ಪ್ರಸಭಂ ಬಲಾತ್ ।
ವಿದ್ಯುನ್ಮಾಲೀ ಶರಶತೈಃ ಪೂರಯಾಮಾಸ ನಂದಿನಂ ॥೩೧॥

ಶರಕಂಟಕಿತಾಂಗೋ ವೈ ಶೈಲಾದಿಃ ಸೋಽಭವತ್ಪುನಃ ।
ಅರೇರ್ಗೃಹ್ಯ ರಥಂ ತಸ್ಯ ಮಹತಃ ಪ್ರಯಯೌ ಜವಾತ್ ॥೩೨॥

ವಿಲಂಬಿತಾಶ್ವೋ ವಿಶಿರೋ ಭ್ರಮಿತಶ್ಚ ರಣೇ ರಥಃ ।
ಪಪಾತ ಮುನಿಶಾಪೇನ ಸಾದಿತ್ಯೋಽರ್ಕರಥೋ ಯಥಾ ॥೩೩॥

ಅಂತರಾನ್ನಿರ್ಗತಶ್ಚೈವ ಮಾಯಯಾ ಸ ದಿತೇಃ ಸುತಃ ।
ಆಜಘಾನ ತದಾ ಶಕ್ತ್ಯಾ ಶೈಲಾದಿಂ ಸಮವಸ್ಥಿತಂ ॥೩೪॥

ತಾಮೇವ ತು ವಿನಿಷ್ಕೃಷ್ಯ ಶಕ್ತಿಂ ಶೋಣಿತಭೂಷಿತಾಂ ।
ವಿದ್ಯುನ್ಮಾಲಿಂ ಸಮುದ್ದಿಶ್ಯ ಚಿಕ್ಷೇಪ ಪ್ರಮಥಾಗ್ರಣೀಃ ॥೩೫॥

---

೩೧. ಥಟ್ಟನೆ ವೇಗದಿಂದ ಮೇಲೇರಿ ಬರುತ್ತಿರುವ ಆ ನಂದಿಯನ್ನು ನೋಡಿ ವಿದ್ಯುನ್ಮಾಲಿಯು ನೂರಾರು ಬಾಣಗಳಿಂದ ಅವನನ್ನು ಮುಚ್ಚಿದನು.

೩೨. ಮತ್ತೆ ನಂದೀಶ್ವರನ ದೇಹದಲ್ಲೆಲ್ಲ ಬಾಣಗಳು ನಾಟಿಕೊಂಡುವು. ಅವನು ಶತ್ರುವಿನ ರಥವನ್ನು ಎತ್ತಿಕೊಂಡು ಮಹಾವೇಗದಿಂದ ಓಡಿದನು.

೩೩. ಅವನು ರಥವನ್ನು ತಲೆಕೆಳಗಾಗಿ ಎತ್ತಿಹಿಡಿದು ಗರಗರನೆ ತಿರುಗಿಸಿದನು. ಕುದುರೆಗಳು ಜೋಲಾಡುತ್ತಿದ್ದುವು. ಮುನಿಶಾಪದಿಂದ ಸೂರ್ಯನ ರಥವು ಸೂರ್ಯನ ಸಮೇತವಾಗಿ ಬೀಳುವಂತೆ ವಿದ್ಯುನ್ಮಾಲಿ ಬಿದ್ದನು.

೩೪. ಆ ದೈತ್ಯನು ಮಾಯಾಬಲದಿಂದ ಮಧ್ಯಮಾರ್ಗದಲ್ಲಿಯೇ ಹೊರ ಹೊರಟು ಮುಂದೆ ನಿಂತಿರುವ ನಂದೀಶ್ವರನನ್ನು ಶಕ್ತ್ಯಾಯುಧದಿಂದ ಹೊಡೆದನು.

೩೫. ಪ್ರಮಥನಾಯಕನಾದ ನಂದಿಯು ರಕ್ತಮಯವಾಗಿದ್ದ ಅದೇ ಶಕ್ತಿಯನ್ನು ಕಿತ್ತುಕೊಂಡು ವಿದ್ಯುನ್ಮಾಲಿಗೆ ಗುರಿಯಿಟ್ಟು ಹೊಡೆದನು.

ತಯಾ ಭಿನ್ನತನುತ್ರಾಣೋ ವಿಭಿನ್ನಹೃದಯಸ್ತ್ವಪಿ ।
ವಿದ್ಯುನ್ಮಾಲ್ಯಪತದ್ಭೂಮೌ ವಜ್ರಾಹತ ಇವಾಚಲಃ ॥೩೬॥

ವಿದ್ಯುನ್ಮಾಲಿನಿ ನಿಹತೇ ಸಿದ್ಧಚಾರಣಕಿನ್ನರಾಃ ।
ಸಾಧು ಸಾಧ್ವಿತಿ ಚೋಕ್ತ್ವಾ ತೇ ಪೂಜಯಂತ ಉಮಾಪತಿಂ ॥೩೭॥

ನಂದಿನಾ ಸಾದಿತೇ ದೈತ್ಯೇ ವಿದ್ಯುನ್ಮಾಲೌ ಹತೇ ಮಯಃ ।
ದದಾಹ ಪ್ರಮಥಾನೀಕಂ ವನಮಗ್ನಿರಿವೋದ್ಧತಃ ॥೩೮॥

ಶೂಲನಿರ್ದಾರಿತೋರಸ್ಕಾ ಗದಾಚೂರ್ಣಿತಮಸ್ತಕಾಃ ।
ಇಷುಭಿರ್ಗಾಢವಿದ್ಧಾಶ್ಚ ಪತಂತಿ ಪ್ರಮಥಾರ್ಣವೇ ॥೩೯॥

ಅಥ ವಜ್ರಧರೋ ಯಮೋಽರ್ಥದಃ
ಸ ಚ ನಂದೀ ಸ ಚ ಷಣ್ಮುಖೋ ಗುಹಃ ।
ಮಯಮಸುರವೀರಸಂಪ್ರವೃತ್ತಂ
ವಿವಿಧೈಃ ಶಸ್ತ್ರವರೈರ್ಹತಾರಯಃ ॥೪೦॥

---

೩೬. ಆದರಿಂದ ವಿದ್ಯುನ್ಮಾಲಿಯ ಕವಚವು ಸೀಳಿತು. ಹೃದಯವು ಭಿನ್ನವಾಯಿತು. ವಜ್ರಾಯುಧದಿಂದ ಹತವಾದ ಬೆಟ್ಟದಂತೆ ಅವನು ಭೂಮಿಯ ಮೇಲೆ ಬಿದ್ದನು.

೩೭. ವಿದ್ಯುನ್ಮಾಲಿಯು ಹತನಾಗಲು ಸಿದ್ಧರೂ, ಚಾರಣರೂ, ಕಿನ್ನರರೂ ಸಾಧು ಸಾಧುವೆಂದು ಶ್ಲಾಘಿಸಿ ಈಶ್ವರನನ್ನು ಪೂಜಿಸಿದರು.

೩೮. ದೈತ್ಯಮುಖ್ಯನಾದ ವಿದ್ಯುನ್ಮಾಲಿಯನ್ನು ನಂದಿಯು ಸಂಹರಿಸಲು, ತೀವ್ರವಾದ ದಾವಾಗ್ನಿಯು ಕಾಡನ್ನು ಸುಡುವಂತೆ ಮಯನು ಪ್ರಮಥಸೈನ್ಯವನ್ನು ದಹಿಸಿದನು.

೩೯. ಶೂಲಗಳಿಂದ ಎದೆಗಳು ಸೀಳಿಹೋಗಲು, ಗದೆಗಳಿಂದ ತಲೆಗಳು ಪುಡಿಪುಡಿಯಾಗಲು, ಬಾಣಗಳು ಬಲವಾಗಿ ನಾಟಿಕೊಳ್ಳಲು ಪ್ರಮಥರು ಸಮುದ್ರದಲ್ಲಿ ಬೀಳುತ್ತಿದ್ದರು.

೪೦. ಬಳಿಕ ಶತ್ರುನಾಶಕನಾದ ಇಂದ್ರ, ಯಮ ಕುಬೇರ, ನಂದಿ, ಕುಮಾರಸ್ವಾಮಿ ಇವರೆಲ್ಲರೂ ಸೇರಿ ಅಸುರ ವೀರರೊಡಗೂಡಿ ಯುದ್ಧಕ್ಕೆ ಬಂದ ಮಯನನ್ನು ಉಗ್ರವಾದ ಶಸ್ತ್ರಗಳಿಂದ ಪ್ರಹರಿಸಿದರು.

ನಾಗಂ ತು ನಾಗಾಧಿಪತೇಃ ಶತಾಕ್ಷಂ
ಮಯೋ ವಿದಾರ್ಯೇಷುವರೇಣ ತೂರ್ಣಂ ।
ಯಮಂ ಚ ವಿತ್ತಾಧಿಪತಿಂ ಚ ವಿಧ್ವಾ
ರರಾಸ ಮತ್ತಾಂಬುದವತ್ತದಾನೀಂ ॥೪೧॥

ತತಃ ಶರೈಃ ಪ್ರಮಥಗಣೈಶ್ಚ ದಾನವಾ
ದೃಢಾಹತಾಶ್ಚೋತ್ತಮವೇಗವಿಕ್ರಮಾಃ ।
ಭೃಶಾನುವಿದ್ಧಾ ಸ್ತ್ರಿಪುರಂ ಪ್ರವೇಶಿತಾ
ಯಥಾಽಸುರಾಶ್ಚಕ್ರಧರೇಣ ಸಂಯುಗೇ ॥೪೨॥

ತತಸ್ತು ಶಂಖಾನಕಭೇರಿಮರ್ದಲಾಃ
ಸಸಿಂಹನಾದಾ ದನುಪುತ್ರಭಂಗದಾಃ ।
ಕಪರ್ದಿಸೈನ್ಯೇ ಪ್ರಬಭುಃ ಸಮಂತತೋ
ನಿಪಾತ್ಯಮಾನಾ ಯುಧಿ ವಜ್ರಸನ್ನಿಭಾಃ ॥೪೩॥

---

೪೧. ಆಗ ಮಯನು ದೇವೇಂದ್ರನ ಮಹಾಶಕ್ತಿಯುತವಾದ ಐರಾವತ ವೆಂಬ ಆನೆಯನ್ನು ತೀಕ್ಷ್ಣವಾದ ಬಾಣಗಳಿಂದ ಶೀಘ್ರವಾಗಿ ಸೀಳಿದನು. ಯಮ ಮತ್ತು ಕುಬೇರರನ್ನು ಇರಿದನು. ಮುಂಗಾರಿನ ಮೋಡದಂತೆ ಮೊಳಗಿದನು.

೪೨. ಅತಿಶಯವಾದ ವೇಗಸಾಮರ್ಥ್ಯಗಳಿಂದ ಕೂಡಿದ ದಾನವರು ಪ್ರಮಥವೀರರ ಬಾಣಗಳಿಂದ ತೀಕ್ಷ್ಣವಾಗಿ ಪ್ರಹರಿಸಲ್ಪಟ್ಟು, ವಿಷ್ಣುವಿನಿಂದ ಯುದ್ಧದಲ್ಲಿ ಪರಾಜಿತರಾದ ಅಸುರರಂತೆ ತ್ರಿಪುರವನ್ನು ಪ್ರವೇಶಿಸಿದರು.

೪೩. ತರುವಾಯ ಈಶ್ವರನ ಸೈನ್ಯದಲ್ಲಿ ಎಲ್ಲೆಲ್ಲಿಯೂ ಶಂಖ, ತಮಟೆ, ಭೇರಿ, ಮದ್ದಳೆ ಇವುಗಳನ್ನು ಬಾರಿಸಿ ಸಿಂಹನಾದ ಮಾಡಿದರು. ಅದು ದಾನವರಿಗೆ ಪರಾಭವವನ್ನುಂಟುಮಾಡುತ್ತಿದ್ದುದಲ್ಲದೆ ಸಿಡಿಲಿನಂತೆ ಕರ್ಣಕಠೋರವಾಗಿತ್ತು.

ಅಥ ದೈತ್ಯಪುರಾಭಾವೇ ಪುಷ್ಯಯೋಗೋ ಬಭೂವ ಹ ।
ಬಭೂವ ಚಾಪಿ ಸಂಯುಕ್ತಂ ತದ್ಯೋಗೇನ ಪುರತ್ರಯಂ ॥೪೪॥

ತತೋ ಬಾಣಂ ತ್ರಿಧಾ ದೇವಸ್ತ್ರಿದೈವತಮಯಂ ಹರಃ ।
ಮುಮೋಚ ತ್ರಿಪುರೇ ತೂರ್ಣಂ ತ್ರಿನೇತ್ರಸ್ತ್ರಿಪಥಾಧಿಪಃ ॥೪೫॥

ತೇನ ಮುಕ್ತೇನ ಬಾಣೇನ ಬಾಣಪುಷ್ಪಸಮಪ್ರಭಂ ।
ಆಕಾಶಂ ಸ್ವರ್ಣಸಂಕಾಶಂ ಕೃತಂ ಸೂರ್ಯೇಣ ರಂಜಿತಂ ॥೪೬॥

ಮುಕ್ತ್ವಾ ತ್ರಿದೈವತಮಯಂ ತ್ರಿಪುರೇ ತಂ ಶರೋತ್ತಮಂ ।
ಧಿಗ್ಧಿಙ್ಮಾಮಿತಿ ಚಕ್ರಂದ ಕಷ್ಟಂ ಕಷ್ಟಮಿತಿ ಬ್ರುವನ್ ॥೪೭॥

ವೈಧುರ್ಯಂ ದೈವತಂ ದೃಷ್ಟ್ವಾ ಶೈಲಾದಿರ್ಗಜವದ್ಗತಃ ।
ಕಿಮಿದಂ ತ್ವಿತಿ ಪಪ್ರಚ್ಛ ಶೂಲಪಾಣಿಂ ಮಹೇಶ್ವರಂ ॥೪೮॥

---

೪೪. ತ್ರಿಪುರನಗರದ ನಾಶವು ಸಮೀಪಿಸಲು ಚಂದ್ರನಿಗೆ ಪುಷ್ಯನಕ್ಷತ್ರದ ಯೋಗವು ಒದಗಿತು. ಅದರಿಂದ ಮೂರು ಪಟ್ಟಣಗಳೂ ಒಟ್ಟುಗೂಡಿದುವು.

೪೫. ಬಳಿಕ ಸ್ವರ್ಗಮರ್ತ್ಯಪಾತಾಳಗಳೆಂಬ ಮೂರು ಮಾರ್ಗಗಳಿಗೂ ಅಧಿಪತಿಯಾದ ಪರಮೇಶ್ವರನು ವಿಷ್ಣುಸೋಮಾಗ್ನಿಗಳೆಂಬ ಮೂವರು ದೇವತೆಗಳಿಂದ ಅಧಿಷ್ಠಿತವಾದ ಬಾಣವನ್ನು ಮೂರು ವಿಧವಾಗಿ ತ್ರಿಪುರದ ಮೇಲೆ ಪ್ರಯೋಗಿಸಿದನು.

೪೬. ಸೂರ್ಯನ ಪ್ರಕಾಶದಿಂದ ಬಾಣಪುಷ್ಪದಂತೆ ಶುಭ್ರವಾಗಿದ್ದ ಆಕಾಶವು ಈಶ್ವರನು ಪ್ರಯೋಗಿಸಿದ ಬಾಣದಿಂದ ಚಿನ್ನದ ಬಣ್ಣವನ್ನು ತಾಳಿತು.

೪೭. ತ್ರಿಪುರವನ್ನು ಗುರಿಯಿಟ್ಟು ತ್ರಿದೇವತಾತ್ಮಕವಾದ ಆ ಬಾಣವನ್ನು ಪ್ರಯೊಗಿಸಿದ ಮೇಲೆ ಈಶ್ವರನು " ಛೇ ! ಛೇ ! ನನಗೆ ಧಿಕ್ಕಾರವಿರಲಿ ! ಅಯ್ಯೋ ! ಕಷ್ಟ ಕಷ್ಟ ! " ಎಂದೆನುತ್ತ ಕೂಗಿದನು.

೪೮. ಶೂಲಪಾಣಿಯಾದ ಮಹೇಶ್ವರನು ಅಧೀರನಾದುದನ್ನು ನೋಡಿ ನಂದೀಶ್ವರನು ಆನೆಯಂತೆ ಮೆಲ್ಲಗೆ ಅವನ ಬಳಿಗೆ ಹೋಗಿ ಅದೇನೆಂದು ವಿಚಾರಿಸಿದನು.

**ತತಶ್ಶಶಾಂಕತಿಲಕಃ ಕಪರ್ದೀ ಪರಮಾರ್ತವತ್ ।**
**ಉವಾಚ ನಂದಿನಂ ಭಕ್ತಃ ಸ ಮಯೋಽದ್ಯ ವಿನಙ್ಕ್ಷ್ಯತಿ ॥೪೯॥**

**ಅಥ ನಂಧೀಶ್ವರಸ್ತೂರ್ಣಂ ಮನೋಮಾರುತವದ್ಬಲೀ ।**
**ಶರೇ ತ್ರಿಪುರಮಾಯಾತಿ ತ್ರಿಪುರಂ ಪ್ರವಿವೇಶ ಸಃ ॥೫೦॥**

**ಸ ಮಯಂ ಪ್ರೇಕ್ಷ್ಯ ಗಣಪಃ ಪ್ರಾಹ ಕಾಂಚನಸನ್ನಿಭಃ ।**
**ವಿನಾಶಸ್ತ್ರಿಪುರಸ್ಯಾಸ್ಯ ಪ್ರಾಪ್ತೋ ಮಯ ಸುದಾರುಣಃ ॥೫೧॥**

**ಶ್ರುತ್ವಾ ತನ್ನಂದಿವಚನಂ ದೃಢಭಕ್ತೋ ಮಹೇಶ್ವರೇ ।**
**ತೇನೈವ ಗೃಹಮುಖ್ಯೇನ ತ್ರಿಪುರಾದಪಸರ್ಪಿತಃ ॥೫೨॥**

**ಸೋಽಪೀಷುಃ ಪತ್ರಪುಟವದ್ದಗ್ಧ್ವಾ ತನ್ನಗರತ್ರಯಂ ।**
**ತ್ರಿಧಾ ಇವ ಹುತಾಶಶ್ಚ ಸೋಮೋ ನಾರಾಯಣಸ್ತಥಾ ॥೫೩॥**

---

೪೯. ಬಳಿಕ ಚಂದ್ರಶೇಖರನಾದ ಮಹೇಶ್ವರನು ಬಹಳ ಖಿನ್ನನಾಗಿ “ ನನ್ನ ಭಕ್ತನಾದ ಆ ಮಯನು ಈಗ ನಾಶವಾಗುವನು ” ಎಂದು ನಂದಿಗೆ ಹೇಳಿದನು.

೫೦. ಮಹೇಶ್ವರನು ಪ್ರಯೋಗಿಸಿದ ಬಾಣವು ತ್ರಿಪುರದ ಕಡೆಗೆ ಬರುತ್ತಿರಲು ಮಹಾಬಲಿಷ್ಠನಾದ ನಂದೀಶ್ವರನು ಮನೋವೇಗವನ್ನೂ ವಾಯುವೇಗವನ್ನೂ ತಳಿದು ಸ್ವಲ್ಪವೂ ತಡಮಾಡದೆ ಆ ನಗರವನ್ನು ಪ್ರವೇಶಿಸಿದನು.

೫೧. ಸುವರ್ಣಸದೃಶನಾದ ನಂದೀಶ್ವರನು ಮಯನನ್ನು ನೋಡಿ ಇಂತೆಂದನು “ ಓ ಮಯಾ, ಈ ತ್ರಿಪುರಕ್ಕೆ ಭಯಂಕರವಾದ ವಿನಾಶವೊದಗಿರುವುದು. ನಾನು ಹೇಳುತ್ತೇನೆ ಕೇಳು ಈ ಗೃಹದೊಡನೆಯೇ ನೀನು ಓಡಿಹೋಗು.”

೫೨. ಮಹೇಶ್ವರನ ದೃಢಭಕ್ತನಾದ ಮಯನು ನಂದಿಯ ಮಾತನ್ನು ಕೇಳಿ ಆ ಗೃಹದೊಡನೆಯೇ ತ್ರಿಪುರವನ್ನು ಬಿಟ್ಟೋಡಿದನು.

೫೩. ಆ ಬಾಣವೂ ಸಹ ಮೂರು ಪಟ್ಟಣವನ್ನು ಎಲೆಯ ದೊನ್ನೆಯನ್ನು ಸುಡುವಂತೆ ಸುಟ್ಟು ಅಗ್ನಿ, ಸೋಮ, ನಾರಾಯಣ ಎಂಬ ಮೂವರು ದೇವತೆಗಳ ತೇಜಸ್ಸಿನಲ್ಲಿ ಸೇರಿಹೋಯಿತು.

ಶರತೇಜಃಪರೀತಾನಿ ಪುರಾಣಿ ದ್ವಿಜಪುಂಗವಾಃ।
ದುಷ್ಪುತ್ರದೋಷಾದ್ದಹ್ಯಂತೇ ಕುಲಾನ್ಯೂರ್ಧ್ವಂ ಯಥಾ ತಥಾ ॥೫೪॥

ಮೇರುಕೈಲಾಸಕಲ್ಪಾನಿ ಮಂದರಾಗ್ರನಿಭಾನಿ ಚ।
ಸಕಪಾಟಗವಾಕ್ಷಾಣಿ ಬಲಿಭಿಃ ಶೋಭಿತಾನಿ ಚ ॥೫೫॥

ಸಪ್ರಾಸಾದಾನಿ ರಮ್ಯಾಣಿ ಕೂಟಾಗಾರೋತ್ಕಟಾನಿ ಚ।
ಸಜಲಾನಿ ಸಮಾಖ್ಯಾನಿ ಸಾವಲೋಕನಕಾನಿ ಚ ॥೫೬॥

ಬದ್ಧಧ್ವಜಪತಾಕಾನಿ ಸ್ವರ್ಣರೌಪ್ಯಮಯಾನಿ ಚ।
ಗೃಹಾಣಿ ತಸ್ಮಿಂಸ್ತ್ರಿಪುರೇ ದಾನವಾನಾಮುಪದ್ರವೇ।
ದಹ್ಯಂತೇ ದಹನಾಭಾನಿ ದಹನೇನ ಸಹಸ್ರಶಃ ॥೫೭॥

ಪ್ರಾಸಾದಾಗ್ರೇಷು ರಮ್ಯೇಷು ವನೇಷೂಪವನೇಷು ಚ।
ವಾತಾಯನಗತಾಶ್ಚಾನ್ಯಾಶ್ಚಾಕಾಶಸ್ಯ ತಲೇಷು ಚ ॥೫೮॥

---

೫೪. ಎಲೈ ಬ್ರಾಹ್ಮಣೋತ್ತಮರೇ, ಬಾಣದ ತೇಜಸ್ಸಿನಿಂದ ವ್ಯಾಪ್ತವಾದ ಆ ಪಟ್ಟಣಗಳು, ಕೆಟ್ಟ ಮಗನ ದೋಷದಿಂದ ಮುಂದೆ ಕುಲಗಳು ಕೆಡುವಂತೆ ಸುಟ್ಟುಹೋದುವು.

೫೫-೫೭. ಈಶ್ವರನ ಬಾಣದ ಅಗ್ನಿಯಿಂದ ತ್ರಿಪುರನಗರದಲ್ಲಿದ್ದ ಮನೆಗಳು ಸಾವಿರಗಟ್ಟಲೆಯಾಗಿ ಸುಟ್ಟುಹೋದುವು. ಅವು ಮೇರು, ಕೈಲಾಸ, ಮಂದರ ಮುಂತಾದ ಪರ್ವತಗಳಂತಿದ್ದುವು. ಬಾಗಿಲು ಕಿಟಕಿಗಳಿಂದ ಕೂಡಿ ರಂಗವಲ್ಲಿ ಯಿಂದ ಶೋಭಿಸುತ್ತಿದ್ದುವು. ಉಪ್ಪರಿಗೆಗಳಿಂದಲೂ, ಜಲಾಶಯುಗಳಿಂದಲೂ, ನೋಟನೋಡುವುದಕ್ಕೆ ಅನುಕೂಲವಾದ ಪ್ರದೇಶಗಳಿಂದಲೂ ಕೂಡಿ ಪ್ರಸಿದ್ಧ ವಾಗಿದ್ದುವು. ಧ್ವಜಗಳನ್ನೂ ಪತಾಕೆಗಳನ್ನೂ ಅವುಗಳ ಮೇಲೆ ಹಾರಿಸಿದ್ದರು. ಅವು ಚಿನ್ನಬೆಳ್ಳಿಗಳಿಂದ ನಿರ್ಮಿತವಾಗಿದ್ದುವು. ಇಂತಹ ಮನೆಗಳು ದಾನವರ ಉಪದ್ರವದಲ್ಲಿ ಹಾಳಾದುವು.

೫೮-೬೯. ಉಪ್ಪರಿಗೆಯ ಮೇಲೆ, ಸುಂದರವಾದ ವನಗಳಲ್ಲಿ, ಉಪವನಗಳಲ್ಲಿ, ಕಿಟಕಿಯ ಬಳಿಯಲ್ಲಿ, ಆಕಾಶತಲದಲ್ಲಿ ಕೆಲಕೆಲವು ಹೆಂಗಸರು ಕುಳಿತಿದ್ದರು. ಕೆಲವ

ರಮಣೈರುಪಗೂಢಾಶ್ಚ ರಮಂತ್ಯೋ ರಮಣೈಃ ಸಹ ।
ದಹ್ಯಂತೇ ದಾನವೇಂದ್ರಾಣಾಮಗ್ನಿನಾ ಹ್ಯಪಿ ತಾಃ ಸ್ತ್ರಿಯಃ ॥೫೯॥

ಕಾಚಿತ್ಪ್ರಿಯಂ ಪರಿತ್ಯಜ್ಯ ಅಶಕ್ತಾ ಗಂತುಮನ್ಯತಃ ।
ಪುರಃ ಪ್ರಿಯಸ್ಯ ಪಂಚತ್ವಂ ಗತಾಗ್ನಿವದನೇ ಕ್ಷಯಂ ॥೬೦॥

ಉವಾಚ ಶತಪತ್ರಾಕ್ಷೀ ಸಾಸ್ರಾಕ್ಷೀವ ಕೃತಾಂಜಲಿಃ ।
ಹವ್ಯವಾಹನ ಭಾರ್ಯಾಹಂ ಪರಸ್ಯ ಪರತಾಪನ ।
ಧರ್ಮಸಾಕ್ಷೀ ತ್ರಿಲೋಕಸ್ಯ ನ ಮಾಂ ಸ್ಪ್ರಷ್ಟುಮಿಹಾರ್ಹಸಿ ॥೬೧॥

ಶಾಯಿತಂ ಚ ಮಯಾ ದೇವ ಶಿವಯಾ ಚ ಶಿವಪ್ರಭ ।
ಪರೇಣ ಪ್ರೈಹಿ ಮುಕ್ತ್ವೇದಂ ಗೃಹಂ ಚ ದಯಿತಂ ಹಿ ಮೇ ॥೬೨॥

ಏಕಾ ಪುತ್ರಮುಪಾದಾಯ ಬಾಲಕಂ ದಾನವಾಂಗನಾ ।
ಹುತಾಶನಸಮೀಪಸ್ಥಾ ಇತ್ಯುವಾಚ ಹುತಾಶನಂ ॥೬೩॥

---

ರನ್ನು ಪ್ರಿಯರು ಆಲಿಂಗಿಸಿದ್ದರು. ಉಳಿದವರು ರಮಣರೊಡನೆ ಕ್ರೀಡಿಸುತ್ತಿದ್ದರು. ಇಂತಹ ದಾನವ ಸ್ತ್ರೀಯರೆಲ್ಲರೂ ಸುಟ್ಟುಹೋದರು.

೬೦. ಒಬ್ಬಳು ತನ್ನ ಪ್ರಿಯನನ್ನಗಲಿ ಬೇರೆಕಡೆಗೆ ಹೋಗಲಾರದೆ ಅವನ ಮುಂದೆಯೇ ಬೆಂಕಿಯ ಬಾಯಿಗೆ ಬಿದ್ದು ಮೃತಳಾದಳು.

೬೧. ತಾವರೆಯಂತೆ ಕಣ್ಣುಗಳುಳ್ಳ ಸುಂದರಿಯೊಬ್ಬಳು ಕಣ್ಣೀರು ತುಂಬಿ ಕೈಮುಗಿದುಕೊಂಡು ಹೇಳಿದಳು. "ಕಂಡವರನ್ನು ತಾಪಗೊಳಿಸುವ ಎಲೈ ಪಾವಕನೇ, ನಾನು ಪರಸ್ತ್ರೀ. ನೀನು ಮೂರು ಲೋಕದ ಧರ್ಮಕ್ಕೂ ಸಾಕ್ಷಿಯಾಗಿರುವೆ. ನನ್ನನ್ನು ನೀನು ಮುಟ್ಟುವುದು ಯುಕ್ತವಲ್ಲ.

೬೨. ಶುಭಕರವಾದ ಕಾಂತಿಯಿಂದ ಕೂಡಿದ ಅಗ್ನಿದೇವಾ, ಸುಮಂಗಲಿಯಾದ ನಾನು ಮಲಗಿದ್ದೇನೆ. ಈ ಮನೆಯನ್ನು ಬಿಟ್ಟು ಬೇರೆ ಕಡೆಗೆ ಹೋಗು. ಇದು ನನಗೆ ಪ್ರಿಯವಾದುದು."

೬೩. ದಾನವಾಂಗನೆಯೊಬ್ಬಳು ತನ್ನ ಮಗನನ್ನು ಕೈಯಲ್ಲೆತ್ತಿಕೊಂಡು ಅಗ್ನಿಯ ಬಳಿಯಲ್ಲಿ ನಿಂತು ಇಂತೆಂದಳು.

ಬಾಲೋಽಯಂ ದುಃಖಲಬ್ಧಶ್ಚ ಮಯಾ ಪಾವಕ ಪುತ್ರಕಃ ।
ನಾರ್ಹಸ್ಯೇನಮುಪಾದಾತುಂ ದಯಿತಂ ಷಣ್ಮುಖಪ್ರಿಯ ॥೬೪॥

ಕಾಶ್ಚಿತ್ಪ್ರಿಯರ್ಾ ಪರಿತ್ಯಜ್ಯ ಪೀಡಿತಾ ದಾನವಾಂಗನಾಃ ।
ನಿಪತಂತ್ಯರ್ಣವಜಲೇ ಸಿಂಜಮಾನವಿಭೂಷಣಾಃ ॥೬೫॥

ತಾತ ಪುತ್ರೇತಿ ಮಾತೇತಿ ಮಾತುಲೇತಿ ಚ ವಿಹ್ವಲಂ ।
ಚಕ್ರಂದುಸ್ತ್ರಿಪುರೇ ನಾರ್ಯಃ ಪಾವಕಜ್ವಾಲವೇಪಿತಾಃ ॥೬೬॥

ಯಥಾ ದಹತಿ ಶೈಲಾಗ್ನಿಃ ಸಾಂಬುಜಂ ಜಲಜಾಕರಂ ।
ತಥಾ ಸ್ತ್ರೀವಕ್ತ್ರಪದ್ಮಾನಿ ಚಾದಹತ್ತ್ರಿಪುರೇಽನಲಃ ॥೬೭॥

ತುಷಾರರಾಶಿಃ ಕಮಲಾಕರಾಣಾಂ
ಯಥಾ ದಹತ್ಯಂಬುಜಕಾನಿ ಶೀತೇ ।
ತಥೈವ ಸೋಽಗ್ನಿಸ್ತ್ರಿಪುರಾಂಗನಾನಾಂ
ದದಾಹ ವಕ್ತ್ರೇಕ್ಷಣಪಂಕಜಾನಿ ॥೬೮॥

---

೬೪. "ಷಣ್ಮುಖನಿಗೆ ಪ್ರಿಯನೆನಿಸಿದ ಎಲೈ ಅಗ್ನಿಯೇ, ನಾನು ಎಷ್ಟೋ ಕಷ್ಟಪಟ್ಟು ಈ ಮಗನನ್ನು ಪಡೆದಿದ್ದೇನೆ. ಇವನು ನನ್ನ ಪ್ರೀತಿಪಾತ್ರ. ಇವನನ್ನು ಕೊಂಡು ಹೋಗಬೇಡ."

೬೫. ಅಸುರಸ್ತ್ರೀಯರಲ್ಲಿ ಕೆಲವರು ಅಗ್ನಿಯಿಂದ ಪೀಡಿತರಾಗಿ ತಮ್ಮ ಪ್ರಿಯರನ್ನು ತೊರೆದು, ಒಡವೆಗಳು ಇಂಪಾಗಿ ಧ್ವನಿಮಾಡುತ್ತಿರಲು, ಸಮುದ್ರದ ನೀರಿನಲ್ಲಿ ಬಿದ್ದರು.

೬೬. ಬೆಂಕಿಯ ಉರಿಗೆ ನಡುಗುತ್ತ ತ್ರಿಪುರದಲ್ಲಿದ್ದ ಹೆಂಗಸರು "ಅಪ್ಪಾ, ಮಗೂ, ಅಮ್ಮಾ, ಮಾವಾ" ಎಂದು ದೈನ್ಯದಿಂದ ಗೋಳಿಡುತ್ತಿದ್ದರು.

೬೭. ಬೆಟ್ಟದಲ್ಲಿ ಹುಟ್ಟಿದ ಬೆಂಕಿಯು ತಾವರೆಗಳ ಸಹಿತವಾಗಿ ಕೊಳವನ್ನು ದಹಿಸುವಂತೆ ತ್ರಿಪುರದಲ್ಲಿ ಬಾಣದ ಅಗ್ನಿಯು ಸ್ತ್ರೀಯರ ಮುಖವೆಂಬ ಕಮಲಗಳನ್ನು ದಹಿಸಿತು.

೬೮. ಮಂಜಿನ ಸೋನೆಯು ಹಿಮಂತರ್ತುವಿನಲ್ಲಿ ಕೊಳಗಳಲ್ಲಿರುವ ತಾವರೆಗಳನ್ನು ನಾಶಮಾಡುವಂತೆ ಆ ಬೆಂಕಿಯು ತ್ರಿಪುರಾಂಗನೆಯರ ಮುಖ ಮತ್ತು ಕಣ್ಣುಗಳೆಂಬ ಕಮಲಗಳನ್ನು ಸುಟ್ಟಿತು.

ಶರಾಗ್ನಿ ಪಾತಾತ್ಸಮಭಿದ್ರುತಾನಾಂ
ತತ್ರಾಂಗನಾನಾಮತಿಕೋಮಲಾನಾಂ ।
ಬಭೂವ ಕಾಂಚೀಗುಣನೂಪುರಾಣಾ
ಮಾಕ್ರಂದಿತಾನಾಂ ಚ ರವೋಽತಿಮಿಶ್ರಃ ॥೧೯॥

ದಗ್ಧಾರ್ಧಚಂದ್ರಾಣಿ ಸವೇದಿಕಾನಿ
ವಿಶೀರ್ಣಹರ್ಮ್ಯಾಣಿ ಸತೋರಣಾನಿ ।
ದಗ್ಧಾನಿ ದಗ್ಧಾನಿ ಗೃಹಾಣಿ ತತ್ರ
ಪತಂತಿ ರಕ್ಷಾರ್ಥಮಿವಾರ್ಣವೌಘೇ ॥೨೦॥

ಗೃಹೈಃ ಪತದ್ಭಿರ್ಜ್ವಲನಾವಲೀಢೈ
ರಾಸೀತ್ಸಮುದ್ರೇ ಸಲಿಲಂ ಪ್ರತಪ್ತಂ ।
ಕುಪುತ್ರದೋಷೈಃ ಪ್ರಹತಾನುವಿದ್ಧಂ
ಯಥಾ ಕುಲಂ ಯಾತಿ ಧನಾನ್ವಿತಸ್ಯ ॥೨೧॥

---

೧೯. ಬಾಣದ ಬೆಂಕಿಯು ವ್ಯಾಪಿಸಲು ಅಲ್ಲಿದ್ದ ಅತಿಕೋಮಲೆಯರಾದ ತರುಣಿಯರು ಹೆದರಿ ಓಡಿದರು. ಅವರ ಡಾಬುಗಳ ಮತ್ತು ಕಾಲಂದಿಗೆಗಳ ಮೃದು ನಾದವೂ ಅವರ ರೋದನ ಧ್ವನಿಯೂ ಒಂದರೊಡನೊಂದು ಮಿಶ್ರವಾದುವು.

೨೦. ಅರ್ಧಚಂದ್ರಾಲಂಕಾರಗಳು ದಗ್ಧವಾದುವು. ವೇದಿಕೆಗಳಿಂದಲೂ ತೋರಣಗಳಿಂದಲೂ ಕೂಡಿದ ಉಪ್ಪರಿಗೆಗಳು ಉರುಳಿದುವು. ಮನೆಗಳು ಅಗ್ನಿಬಾಧೆ ಯಿಂದ ಪಾರಾಗುವುದಕ್ಕಾಗಿ ಸಮುದ್ರದಲ್ಲಿ ಬೀಳುತ್ತಿವೆಯೋ ಎನ್ನುವಂತೆ ತೋರಿದುವು.

೨೧. ಶ್ರೀಮಂತನ ವಂಶವು ಕೆಟ್ಟಮಕ್ಕಳ ದೋಷದಿಂದ ಕೋಟಲೆಗಳೊಳ ಗಾಗುವಂತೆ, ಬೆಂಕಿ ತಗುಲಿ ಉರಿಯುತ್ತ ಕುಸಿದು ಬೀಳುವ ಮನೆಗಳಿಂದ ಸಮುದ್ರದ ನೀರು ಬಲುಬಿಸಿಯಾಯಿತು.

ಗೃಹಪ್ರತಾಪೈಃ ಕ್ವಥಿತಂ ಸಮಂತಾ
 ತ್ತದಾರ್ಣವೇ ತೋಯಮುದೀರ್ಣವೇಗಂ ।
ವಿತ್ರಾಸಯಾಮಾಸ ತಿಮೀನ್ ಸನಕ್ರಾನ್
 ತಿಮಿಂಗಿಲಾಂಸ್ತತ್ಕ್ವಥಿತಾಂಸ್ತಥಾನ್ಯಾನ್ ॥೭೨॥

ಸಗೋಪುರೋ ಮಂದರಪಾದಕಲ್ಪಃ
 ಪ್ರಾಕಾರವರ್ಯಸ್ತ್ರಿಪುರೇ ಚ ಸೋಽಥ ।
ತೈರೇವ ಸಾರ್ಧಂ ಭವನೈಃ ಪಪಾತ
 ಶಬ್ದಂ ಮಹಾಂತಂ ಜನಯನ್ ಸಮುದ್ರೇ ॥೭೩॥

ಸಹಸ್ರಶೃಂಗೈರ್ಭವನೈರ್ಯದಾಸೀ
 ತ್ಸಹಸ್ರಶೃಂಗಃ ಸ ಇವಾಚಲೇಶಃ ।
ನಾಮಾವಶೇಷಂ ತ್ರಿಪುರಂ ಪ್ರಜಜ್ಞೇ
 ಹುತಾಶನಾಹಾರಬಲಿಪ್ರಯುಕ್ತಂ ॥೭೪॥

---

೭೨. ಮನೆಗಳ ಬೇಗೆಯಿಂದ ಸುತ್ತಮುತ್ತಲಿನ ಸಮುದ್ರದ ನೀರು ಕೊತ ಕೊತನೆ ಕುದಿಯಿತು. ತಿಮಿಗಳು, ಮೊಸಳೆಗಳು, ತಿಮಿಂಗಿಲಗಳು ಮತ್ತು ಇನ್ನೂ ಇತರ ಜಲಚರಗಳು ಅದರಿಂದ ಬೆಂದುವು. ಉಳಿದ ಪ್ರಾಣಿಗಳು ಹೆದರಿ ಓಡಿದುವು.

೭೩. ಮಂದರ ಪರ್ವತದ ತಪ್ಪಲಿಗೆ ಸಮಾನವಾದ ತ್ರಿಪುರನಗರದ ಶ್ರೇಷ್ಠವಾದ ಪ್ರಾಕಾರವು ಗೋಪುರಗಳೊಡನೆ ಆ ಮನೆಗಳ ಸಂಗಡಲೇ ಉರುಳಿಬಿದ್ದಿತು. ಆಗ ಸಮುದ್ರದಲ್ಲಿ ದೊಡ್ಡಶಬ್ದವು ಹುಟ್ಟಿತು.

೭೪. ಸಾವಿರಾರು ಗೋಪುರಗಳಿಂದ ಕಂಗೊಳಿಸುವ ಮನೆಗಳಿಂದ ತುಂಬಿ, ಸಾವಿರ ಶಿಖರಗಳುಳ್ಳ ಪರ್ವತದಂತೆ ವಿರಾಜಿಸುತ್ತಿದ್ದ ತ್ರಿಪುರವು ಈಶ್ವರನ ಬಾಣಾಗ್ನಿಗೆ ಆಹುತಿಯಾಗಿ ನಾಮಾವಶೇಷವಾಯಿತು.

ಪ್ರದಹ್ಯಮಾನೇನ ಪುರೇಣ ತೇನ
 ಜಗತ್ಸಪಾತಾಲದಿವಂ ಪ್ರತಪ್ತಂ ।
ದುಃಖಂ ಮಹತ್ಪ್ರಾಪ್ಯ ಜಲಾವಮಗ್ನಂ
 ಯಸ್ಮಿನ್ ಮಹಾನ್ ಸೌಧವರೋ ಮಯಸ್ಯ ॥೭೫॥

ತದ್ದೇವೇಶೋ ವಚಃ ಶ್ರುತ್ವಾ ಇಂದ್ರೋ ವಜ್ರಧರಸ್ತದಾ ।
ಶಶಾಪ ತದ್ಗೃಹಂ ಚಾಪಿ ಮಯಸ್ಯಾದಿತಿನಂದನಃ ॥೭೬॥

ಅಸೇವ್ಯಮಪ್ರತಿಷ್ಠಂ ಚ ಭಯೇನ ಚ ಸಮಾವೃತಂ ।
ಭವಿಷ್ಯತಿ ಮಯಗೃಹಂ ನಿತ್ಯಮೇವ ಯಥಾಽನಲಃ ॥೭೭॥

ಯಸ್ಯ ಯಸ್ಯ ತು ದೇಶಸ್ಯ ಭವಿಷ್ಯತಿ ಪರಾಭವಃ ।
ದ್ರಕ್ಷ್ಯಂತಿ ತ್ರಿಪುರಂ ಖಂಡಂ ತತ್ರೇದಂ ನಾಶಗಾ ಜನಾಃ ।
ತದೇತದದ್ಯಾಪಿ ಗೃಹಂ ಮಯಸ್ಯಾಮಯವರ್ಜಿತಂ ॥೭೮॥

---

೭೫. ತ್ರಿಪುರವು ಉರಿಯುತ್ತಿದ್ದುದರಿಂದ ಸ್ವರ್ಗಲೋಕ ಪಾತಾಳಲೋಕ ಸಹಿತವಾದ ಜಗತ್ತೆಲ್ಲವೂ ಬೆಂದಿತು; ಮಹಾದುಃಖಕ್ಕೀಡಾಗಿ ನೀರಿನಲ್ಲಿ ಮುಳುಗಿತು. ಮಯನ ದಿವ್ಯಭವನವು ನಿರ್ಮಿತವಾಗಿದ್ದುದು ಅಲ್ಲಿಯೇ ಅಲ್ಲವೇ?

೭೬. ದೇವಾಧೀಶನೂ, ವಜ್ರಧರನೂ, ಅದಿತಿಪುತ್ರನೂ ಆದ ಇಂದ್ರನು ಆ ಸಮಾಚಾರವನ್ನು ಕೇಳಿ ಮಯನ ಆ ಮನೆಗೂ ಸಹ ಶಾಪವಿತ್ತನು.

೭೭. "ಮಯನ ಗೃಹವು ಅಗ್ನಿಯಂತೆ ಸದಾ ಅಸೇವ್ಯವೂ, ಅಸ್ಥಿರವೂ, ಭಯಾಕುಲವೂ ಆಗುವುದು.

೭೮. ಯಾವ ಯಾವ ದೇಶಕ್ಕೆ ಪರಾಭವವು ಒದಗುವುದೋ ಆಯಾ ದೇಶಗಳಲ್ಲಿ ವಿನಾಶಕ್ಕೆ ತುತ್ತಾದ ಜನರು ತ್ರಿಪುರದ ಏಕದೇಶವನ್ನು ಅಲ್ಲಿ ಕಾಣುವರು." ಹೀಗೆ ಮಯನ ಆ ಗೃಹವು ಇಂದಿಗೂ ನಿರ್ಬಾಧವಾಗಿರುವುದು.

|| ಋಷಯ ಊಚುಃ ||

ಭಗವನ್ ಸ ಮಯೋ ಯೇನ ಗೃಹೇಣ ಪ್ರಪಲಾಯಿತಃ ।
ತಸ್ಯ ನೋ ಗತಿಮಾಖ್ಯಾಹಿ ಮಯಸ್ಯ ಚಮಸೋದ್ಭವ ||೭೯||

|| ಸೂತ ಉವಾಚ ||

ದೃಶ್ಯತೇ ದೃಶ್ಯತೇ ಯತ್ರ ಧ್ರುವಸ್ತತ್ರ ಮಯಾಸ್ಪದಂ ।
ದೇವದ್ವಿಟ್ ತು ಮಯಶ್ಚಾತಃ ಸ ತದಾ ಖಿನ್ನಮಾನಸಃ ।
ತತಶ್ಚ್ಯುತೋಽನ್ಯಲೋಕೇಽಸ್ಮಿಂಸ್ತ್ರಾಣಾರ್ಥಂ ವೈ ಚಕಾರ ಸಃ ||೮೦||

ತತ್ರಾಪಿ ದೇವತಾಃ ಸಂತಿ ಆಪ್ತೋರ್ಯಾಮಾಃ ಸುರೋತ್ತಮಾಃ ।
ತತ್ರಾಶಕ್ತಂ ತತೋ ಗಂತುಂ ತಂ ಚೈಕಂ ಪುರಮುತ್ತಮಂ ||೮೧||

ಶಿವಃ ಸೃಷ್ಟ್ವಾ ಗೃಹಂ ಪ್ರಾದಾನ್ಮಯಾಯೈವ ಗೃಹಾರ್ಥಿನೇ ।
ವಿರರಾಮ ಸಹಸ್ರಾಕ್ಷಃ ಪೂಜಯಾಮಾಸ ಚೇಶ್ವರಂ ।
ಪೂಜ್ಯಮಾನಂ ಚ ಭೂತೇಶಂ ಸರ್ವೇ ತುಷ್ಟುವುರೀಶ್ವರಂ ||೮೨||

---

೭೯. ಋಷಿಗಳು ಹೇಳಿದರು.—ಚಮಸಮಹಾಮುನಿಯ ಪುತ್ರನೂ, ಪೂಜ್ಯನೂ ಆದ ಎಲೈ ಸೂತಮಹರ್ಷಿಯೇ, ಮಯನ ಮತ್ತು ಅವನು ಯಾವ ಗೃಹದೊಡಗೂಡಿ ಪಲಾಯನ ಮಾಡಿದನೋ ಅದರ ಗತಿಯನ್ನು ನಮಗೆ ಹೇಳು.

೮೦. ಸೂತಪೌರಾಣಿಕನು ಹೇಳಿದನು.—ಧ್ರುವನು ಎಲ್ಲೆಲ್ಲಿ ಕಾಣ ಬರುವನೋ ಅಲ್ಲಲ್ಲಿ ಮಯನ ವಾಸಸ್ಥಾನವಿರುವುದು. ಮಯನು ದೇವತೆಗಳ ಶತ್ರು. ಆದರಿಂದ ಯಾವಾಗಲೂ ಖಿನ್ನಮನಸ್ಕನಾಗಿದ್ದನು. ಬಳಿಕ ಅಲ್ಲಿಂದ ಬೇರೆ ಲೋಕಕ್ಕೆ ಜಾರಿ ಬಿದ್ದು ರಕ್ಷಣೆಗಾಗಿ ಒಂದಾನೊಂದು ಗೃಹವನ್ನು ಏರ್ಪಡಿಸಿ ಕೊಂಡನು.

೮೧. ಅಲ್ಲಿಯೂ ಕೂಡ ದೇವತೆಗಳಿದ್ದಾರೆ. ಸುರಶ್ರೇಷ್ಠರಾದ ಆಪ್ತೋರ್ಯಾಮರೆಂಬುವರೇ ಅವರು. ಅತಿಶ್ರೇಷ್ಠವಾದ ಆ ಒಂದು ಪಟ್ಟಣಕ್ಕೆ ಹೋಗುವುದು ಅಸಾಧ್ಯ.

೮೨. ಈಶ್ವರನು ಗೃಹವನ್ನು ಸೃಷ್ಟಿಸಿ ಗೃಹಾರ್ಥಿಯಾದ ಮಯನಿಗೆ ಅದನ್ನು ಕೊಟ್ಟನು. ತರುವಾಯ ಇಂದ್ರನು ಮಯನಿಗೆ ಉಪದ್ರವವನ್ನು ಕೊಡದೆ ಸುಮ್ಮನಾದನು. ಮತ್ತು ಈಶ್ವರನನ್ನು ಪೂಜಿಸಿದನು. ಇಂದ್ರನಿಂದ ಸತ್ಕೃತನಾದ ಮಹಾದೇವನನ್ನು ಎಲ್ಲರೂ ಸ್ತುತಿಸಿದರು.

ಸಂಪೂಜ್ಯಮಾನಂ ತ್ರಿದಶೈಃ ಸಮೀಕ್ಷ್ಯ
ಗಣೈರ್ಗಣೇಶಾಧಿಪತಿಂ ತು ಮುಖ್ಯಂ ।
ಹರ್ಷಾದ್ಧ್ವವಲ್ಗುರ್ಜಹಸುಶ್ಚ ದೇವಾ
ಜಗುರ್ನನರ್ದುಸ್ತು ವಿಷಕ್ತಹಸ್ತಾಃ ॥೬೩॥

ಪಿತಾಮಹಂ ವಂದ್ಯ ತತೋ ಮಹೇಶಂ
ಪ್ರಗೃಹ್ಯ ಚಾಪಂ ಪ್ರವಿಸೃಜ್ಯ ಭೂತಾನ್ ।
ರಥಾಚ್ಚ ಸಂಪತ್ಯ ಹರೇಷುದಗ್ಧಂ
ಕ್ಷಿಪ್ತಂ ಪುರಂ ತನ್ಮಕರಾಲಯೇ ಚ ॥೬೪॥

ಯ ಇಮಂ ರುದ್ರವಿಜಯಂ ಪಠತೇ ವಿಜಯಾವಹಂ ।
ವಿಜಯಂ ತಸ್ಯ ಕೃತ್ಯೇಷು ದದಾತಿ ವೃಷಭಧ್ವಜಃ ॥೬೫॥

ಪಿತೄಣಾಂ ವಾಪಿ ಶ್ರಾದ್ಧೇಷು ಯ ಇಮಾಂ ಶ್ರಾವಯಿಷ್ಯತಿ ।
ಅನಂತಂ ತಸ್ಯ ಪುಣ್ಯಂ ಸ್ಯಾತ್ಸರ್ವಯಜ್ಞಫಲಪ್ರದಂ ॥೬೬॥

---

೬೩. ದೇವತೆಗಳಿಂದಲೂ ಪ್ರಮಥಗಣಗಳಿಂದಲೂ ಪೂಜೆಗೊಳ್ಳುತ್ತಿರುವ ದೇವಪ್ರಮುಖನಾದ ಮಹೇಶ್ವರನನ್ನು ನೋಡಿ ದೇವತೆಗಳು ಹರ್ಷದಿಂದ ಕುಣಿದರು; ನಕ್ಕರು; ಹಾಡಿದರು; ಕೈಮುಗಿದುಕೊಂಡು ಕೂಗಿದರು.

೬೪. ದೇವತೆಗಳು ಬ್ರಹ್ಮನನ್ನೂ ಮಹೇಶ್ವರನನ್ನೂ ವಂದಿಸಿದರು. ಆ ದೊಡ್ಡ ಬಿಲ್ಲನ್ನೆತ್ತಿಕೊಂಡರು. ಭೂತಗಳನ್ನು ಕಳುಹಿಸಿದರು. ರಥದಿಂದಿಳಿದರು. ಈಶ್ವರನ ಬಾಣದಿಂದ ಸುಟ್ಟು ಸಮುದ್ರದಲ್ಲಿ ಬಿದ್ದ ತ್ರಿಪುರವನ್ನು ನೋಡಿದರು.

೬೫. ಜಯಪ್ರದವಾದ ಈ ರುದ್ರವಿಜಯದ ಉಪಾಖ್ಯಾನವನ್ನು ಯಾವನು ಪಠಿಸುವನೋ, ಅವನ ಕಾರ್ಯಗಳಲ್ಲೆಲ್ಲಾ ಪರಮೇಶ್ವರನು ವಿಜಯವನ್ನು ಕರುಣಿಸುವನು.

೬೬. ಶ್ರಾದ್ಧಕಾಲಗಳಲ್ಲಿ ಪಿತೃಗಳನ್ನುದ್ದೇಶಿಸಿ ಇದನ್ನು ಪಾರಾಯಣ ಮಾಡಿದರೆ ಅನಂತವಾದ ಪುಣ್ಯವು ಲಭಿಸುವುದು. ಸಕಲಯಜ್ಞಗಳನ್ನೂ ಮಾಡಿದ ಫಲವು ಬರುವುದು.

**ಇದಂ ಸ್ವಸ್ತ್ಯಯನಂ ಪುಣ್ಯಮಿದಂ ಪುಂಸವನಂ ಮಹತ್ ।**
**ಇದಂ ಶ್ರುತ್ವಾ ಪಠಿತ್ವಾ ಚ ಯಾಂತಿ ರುದ್ರಸಲೋಕತಾಂ ॥೮೭॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ತ್ರಿಪುರೋಪಾಖ್ಯಾನೇ**
**ತ್ರಿಪುರದಾಹೋ ನಾಮ ಚತ್ವಾರಿಂಶದಧಿಕಶತತಮೋಽಧ್ಯಾಯಃ**

---

೮೭. ಈ ತ್ರಿಪುರದಹನದ ಉಪಾಖ್ಯಾನವು ಮಂಗಳಮಯವೂ, ಪುಣ್ಯಕರವೂ, ಪುತ್ರಪ್ರದವೂ, ಶ್ರೇಷ್ಠವೂ ಆದುದು. ಇದನ್ನು ಕೇಳಲಿ ಇಲ್ಲವೇ ಓದಲಿ ರುದ್ರಲೋಕವು ಪ್ರಾಪ್ತವಾಗುವುದು.

**ಅಧ್ಯಾಯದ ಸಾರಾಂಶ**

ಈ ಅಧ್ಯಾಯದಲ್ಲಿ ತ್ರಿಪುರದಹನವನ್ನು ವರ್ಣಿಸಿದೆ.

ಸೂರ್ಯೋದಯವಾದ ಮೇಲೆ ದೇವತೆಗಳಿಗೂ ದಾನವರಿಗೂ ಘೋರವಾದ ಯುದ್ಧವು ಪ್ರಾರಂಭವಾಯಿತು. ನಂದೀಶ್ವರನು ವಿದ್ಯುನ್ಮಾಲಿಯೊಡನೆ ತೀಕ್ಷ್ಣವಾಗಿ ಹೋರಾಡಿ ಅವನನ್ನು ಸಂಹರಿಸಿದನು. ದೇವತೆಗಳ ಸೈನ್ಯದಲ್ಲಿ ವಿಜಯ ಕೋಲಾಹಲವು ನಡೆಯಿತು. ಈ ವೇಳೆಗೆ ಪುಷ್ಯಯೋಗವೂ ಒದಗಿತು. ಈಶ್ವರನ ಸಂಕಲ್ಪದಂತೆ ತ್ರಿಪುರದಹನಕ್ಕೆ ಅದೇ ಕಾಲ. ಮೂರು ಪಟ್ಟಣಗಳೂ ಒಟ್ಟಿಗೆ ಸೇರಿದುವು. ಮಹಾದೇವನು ತ್ರಿದೇವತಾತ್ಮಕವಾದ ತನ್ನ ಬಾಣವನ್ನು ಪ್ರಯೋಗಿಸಿದನು. ತ್ರಿಪುರವು ಸುಟ್ಟು ಬೂದಿಯಾಗಿ ನಾಮಾವಶೇಷವಾಯಿತು. ಎಷ್ಟೋ ಜನ ದೈತ್ಯರೂ ದೈತ್ಯಾಂಗನೆಯರೂ ಅಗ್ನಿಯ ಪಾಲಾದರು. ಪರಮೇಶ್ವರನು ಮಹಾಭಕ್ತನಾದ ಮಯನನ್ನು ಮಾತ್ರ ಸಂಹರಿಸದೆ ಅವನಿಗಾಗಿ ಸುರಕ್ಷಿತವಾದ ಗೃಹವೊಂದನ್ನು ನಿರ್ಮಿಸಿಕೊಟ್ಟನು. ಈ ತ್ರಿಪುರೋಪಾಖ್ಯಾನವನ್ನು ಪಾರಾಯಣ ಮಾಡಿದರೆ ಅನಂತವಾದ ಪುಣ್ಯವು ಲಭಿಸುವುದು. ಈಶ್ವರನ. ಸಾಲೋಕ್ಯವು ದೊರೆಯುವುದು.

ಶ್ರೀಮತ್ಸ್ಯಮಹಾಪುರಾಣದಲ್ಲಿ ತ್ರಿಪುರದಹನಪ್ರಕರಣದಲ್ಲಿ ತ್ರಿಪುರದಾಹವೆಂಬ ನೂರನಲವತ್ತನೆಯ ಅಧ್ಯಾಯವು ಮುಗಿದುದು.

## ಅಥ ಏಕಚತ್ವಾರಿಂಶದಧಿಕಶತತಮೋಽಧ್ಯಾಯಃ

|| ಋಷಯ ಊಚುಃ ||

ಕಥಂ ಗಚ್ಛತ್ಯಮಾವಾಸ್ಯಾಂ ಮಾಸಿ ಮಾಸಿ ದಿವಂ ನೃಪಃ ।
ಐಲಃ ಪುರೂರವಾಃ ಸೂತ ತರ್ಪಯೇತ ಕಥಂ ಪಿತೄನ್ ।
ಏತದಿಚ್ಛಾಮಹೇ ಶ್ರೋತುಂ ಪ್ರಭಾವಂ ತಸ್ಯ ಧೀಮತಃ || ೧ ||

|| ಸೂತ ಉವಾಚ ||

ತಸ್ಯ ಚಾಹಂ ಪ್ರವಕ್ಷ್ಯಾಮಿ ಪ್ರಭಾವಂ ವಿಸ್ತರೇಣ ತು ।
ಐಲಸ್ಯ ದಿವಿ ಸಂಯೋಗಂ ಸೋಮೇನ ಸಹ ಧೀಮತಾ || ೨ ||

ಸೋಮಾಚ್ಚೈವಾಮೃತಪ್ರಾಪ್ತಿಃ ಪಿತೄಣಾಂ ತರ್ಪಣಂ ತಥಾ ।
ಸೌಮ್ಯಾ ಬರ್ಹಿಷದಃ ಕಾವ್ಯಾ ಅಗ್ನಿಷ್ವಾತ್ತಾಸ್ತಥೈವ ಚ || ೩ ||

---

೧. ಋಷಿಗಳು ಹೇಳಿದರು.—ಓ ಸೂತಾ, ಇಲಾಪುತ್ರನಾದ ಪುರೂರವ ರಾಜನು ಪ್ರತಿಯೊಂದು ತಿಂಗಳಲ್ಲಿಯೂ ಅಮಾವಾಸ್ಯೆಯ ದಿನ ಸ್ವರ್ಗಕ್ಕೆ ಹೋಗುವುದು ಹೇಗೆ? ಪಿತೃಗಳಿಗೆ ಅವನು ತೃಪ್ತಿಯನ್ನುಂಟುಮಾಡುವ ವಿಧಾನವೆಂತು? ಆ ಮೇಧಾವಿಯ ಪ್ರಭಾವವೇನು? ಇದೆಲ್ಲವನ್ನೂ ನಿನ್ನಿಂದ ಕೇಳಬೇಕೆಂದಿದ್ದೇವೆ.

೨. ಸೂತಪೌರಾಣಿಕನು ಹೇಳಿದನು.—ಪುರೂರವನ ಮಹಿಮೆಯನ್ನು ವಿಸ್ತಾರವಾಗಿ ಬಣ್ಣಿಸುವೆನು. ಅವನು ಸ್ವರ್ಗಕ್ಕೆ ಹೋಗಿ ಜ್ಞಾನನಿಧಿಯಾದ ಚಂದ್ರನೊಡನೆ ಸೇರುವುದು ಹೇಗೆಂಬುದನ್ನು ತಿಳಿಸುವೆನು.

೩. ಪಿತೃಗಳಿಗೆ ಚಂದ್ರನಿಂದಲೇ ಅಮೃತವು ಸಿಕ್ಕುವುದು. ಅವರಿಗೆ ತೃಪ್ತಿಯುಂಟಾಗುವುದೂ ಅವನಿಂದಲೇ. ಸೌಮ್ಯರು, ಬರ್ಹಿಷದರು, ಕಾವ್ಯರು ಮತ್ತು ಅಗ್ನಿಷ್ವಾತ್ತರೆಂದು ಅವರಲ್ಲಿ ಪ್ರಭೇದಗಳುಂಟು.

ಯದಾ ಚಂದ್ರಶ್ಚ ಸೂರ್ಯಶ್ಚ ನಕ್ಷತ್ರಾಣಾಂ ಸಮಾಗತೌ ।
ಅಮಾವಾಸ್ಯಾಂ ನಿವಸತ ಏಕಸ್ಮಿನ್ನಥ ಮಂಡಲೇ ॥ ೪ ॥

ತದಾ ಸ ಗಚ್ಛತಿ ದ್ರಷ್ಟುಂ ದಿವಾಕರನಿಶಾಕರೌ ।
ಅಮಾವಾಸ್ಯಾಮಮಾವಾಸ್ಯಾಂ ಮಾತಾಮಹಪಿತಾಮಹೌ ॥ ೫ ॥

ಅಭಿವಾದ್ಯ ತು ತೌ ತತ್ರ ಕಾಲಾಪೇಕ್ಷಃ ಸ ತಿಷ್ಠತಿ ।
ಪ್ರಚಸ್ಕಂದ ತತಃ ಸೋಮಮರ್ಚಯಿತ್ವಾ ಪರಿಶ್ರಮಾತ್ ॥ ೬ ॥

ಐಲಃ ಪುರೂರವಾ ವಿದ್ವಾನ್ ಮಾಸಿ ಶ್ರಾದ್ಧಚಿಕೀರ್ಷಯಾ ।
ತತಃ ಸ ದಿವಿ ಸೋಮಂ ವೈ ಹ್ಯುಪತಸ್ಥೇ ಪಿತೄನಪಿ ॥ ೭ ॥

---

೪-೫. ಚಂದ್ರಸೂರ್ಯರು ನಕ್ಷತ್ರಮಾರ್ಗದಲ್ಲಿ ಸಂಚರಿಸುತ್ತ ಅಮಾವಾಸ್ಯೆಯ ದಿನ ಒಂದೇ ಮಂಡಲದಲ್ಲಿ ಸೇರುವರು. ಆಗ ಆ ರಾಜನು ಅವರಿಬ್ಬರನ್ನೂ ನೋಡಲು ಹೋಗುವನು. ಒಂದೊಂದು ಅಮಾವಾಸ್ಯೆಯ ದಿನವೂ ಹೀಗೆಯೇ ಅವನು ತನ್ನ ಮಾತಾಮಹನಾದ ಸೂರ್ಯನನ್ನೂ, ಪಿತಾಮಹನಾದ ಚಂದ್ರನನ್ನೂ* ಸಂದರ್ಶಿಸುವನು.

೬. ಅವನು ಚಂದ್ರಸೂರ್ಯರಿಬ್ಬರಿಗೂ ನಮಸ್ಕರಿಸಿ ಪೂಜಾಕಾಲವನ್ನು ಇದಿರುನೋಡುತ್ತ ನಿಂತಿರುವನು. ಶ್ರಮವಹಿಸಿ ಚಂದ್ರನನ್ನು ಅರ್ಚಿಸುವನು. ಬಳಿಕ ಚಂದ್ರಮಂಡಲದಿಂದ ಅಮೃತವು ಸ್ರವಿಸುವುದು.

೭. ಶಾಸ್ತ್ರಜ್ಞನಾದ ಪುರೂರವನು ಸಮಯವನ್ನು ಕಾಯುತ್ತಿರುವುದು ಮಾಸಶ್ರಾದ್ಧವನ್ನು ಮಾಡಬೇಕೆಂಬ ಅಭಿಲಾಷೆಯಿಂದ. ಸಕಾಲವು ಬಂದ ಬಳಿಕ ಅಂತರಿಕ್ಷದಲ್ಲಿ ಅವನು ಚಂದ್ರನನ್ನೂ ಪಿತೃದೇವತೆಗಳನ್ನೂ ಅರ್ಚಿಸುವನು.

---

* ಪೂರೂರವನ ತಂದೆ ಬುಧ; ಅವನ ತಂದೆ ಚಂದ್ರ. ಆದುದರಿಂದ ಚಂದ್ರನು ಪೂರೂರವನಿಗೆ ಪಿತಾಮಹನಾದನು. ಹೀಗೆಯೇ ಅವನ ತಾಯಿ ಇಲಾದೇವಿ; ಅವಳ ತಂದೆ ವೈವಸ್ವತ, ಅವನ ತಂದೆ ಸೂರ್ಯ. ಆದುದರಿಂದ ಸೂರ್ಯನು ಮಾತುಃಪಿತಾಮಹನಾದನು. ಅವನನ್ನೇ ಇಲ್ಲಿ ಮಾತಾಮಹನೆಂದು ಹೇಳಿದೆ.

ದ್ವಿಲವಂ ಕುಹುಮಾತ್ರಂ ಚ ತಾವುಭೌ ತು ನಿಧಾಯ ಸಃ ।
ಸಿನೀವಾಲೀಪ್ರಮಾಣಾಲ್ಪಕುಹೂಮಾತ್ರಪ್ರತೋದಯೇ ॥ ೮ ॥

ಕುಹೂಮಾತ್ರಂ ಪಿತ್ರುದ್ದೇಶಂ ಜ್ಞಾತ್ವಾ ಕುಹೂಮುಪಾಸತೇ ।
ತಮುಪಾಸ್ಯ ತತಃ ಸೋಮಂ ಕಲಾಪೇಕ್ಷೀ ಪ್ರತೀಕ್ಷತೇ ॥ ೯ ॥

ಸ್ವಧಾಮೃತಂ ತು ಸೋಮಾದ್ವೈ ವಸಂಸ್ತೇಷಾಂ ಚ ತೃಪ್ತಯೇ ।
ದಶಭಿಃ ಪಂಚಭಿಶ್ಚೈವ ಸ್ವಧಾಮೃತಪರಿಸ್ರವೈಃ ।
ಕೃಷ್ಣಪಕ್ಷಭುಜಾಂ ಪ್ರೀತಿರ್ದುಹ್ಯತೇ ಪರಮಾಂಶುಭಿಃ ॥೧೦॥

ಸದ್ಯೋಽಭಿಕ್ಷರತಾ ತೇನ ಸೌಮ್ಯೇನ ಮಧುನಾ ಚ ಸಃ ।
ನಿವಾಪೇಷ್ವಥ ದತ್ತೇಷು ಪಿತ್ರ್ಯೇಣ ವಿಧಿನಾ ತು ವೈ ॥೧೧॥

---

೮-೯. ಅಮಾವಾಸ್ಯಾತಿಥಿಯು ಚಂದ್ರದರ್ಶನದಿಂದ ಕೂಡಿದ್ದರೆ ಸಿನೀವಾಲಿಯೆಂದೂ, ಕೂಡದಿದ್ದರೆ ಕುಹೂ ಎಂದೂ ಎರಡು ವಿಧವಾಗಿರುವುದು. ಪುರೂರವ ರಾಜನು ಪಿತೃತರ್ಪಣದ ಪ್ರಾರಂಭದಲ್ಲಿ ಚಂದ್ರಸೂರ್ಯರನ್ನು ಮನಸ್ಸಿನಲ್ಲಿ ಧ್ಯಾನ ಮಾಡಿ, ಎರಡು ಲವಗಳಷ್ಟು ಕಾಲಪರಿಮಾಣವುಳ್ಳ ಕುಹೂದೇವತೆಯನ್ನೂ ಶಾಸ್ತ್ರೋಕ್ತವಾದ ಪರಿಮಿತಿಯಿಂದ ಕೂಡಿದ ಸಿನೀವಾಲಿಯನ್ನೂ ಉಪಾಸನೆ ಮಾಡುತ್ತಾನೆ. ಬಳಿಕ ಚಂದ್ರನನ್ನು ಆರಾಧಿಸಿ, ಅವನ ಅಮೃತಕಲೆಗಳಿಗಾಗಿ ಪ್ರತೀಕ್ಷಿಸುತ್ತಾನೆ. ಅವುಗಳಿಂದ ಪಿತೃಗಳಿಗೆ ತೃಪ್ತಿಯನ್ನುಂಟುಮಾಡಬೇಕೆಂಬುದು ಅವನ ಉದ್ದೇಶ.

೧೦. ಪಿತೃಗಳಿಗೆ ತರ್ಪಣವನ್ನು ಕೊಡುವ ಸಲುವಾಗಿ ರಾಜನು ನಿರೀಕ್ಷಿಸುತ್ತಿರುವನಷ್ಟೆ! ಆ ವೇಳೆಗೆ ಚಂದ್ರಬಿಂಬದಿಂದ ಅಮೃತರೂಪವಾದ ಸ್ವಧಾನ್ನವು ಹದಿನೈದು ಭಾಗಗಳಾಗಿ ಸ್ರವಿಸುವುದು. ಆ ಅಮೃತಕಿರಣಗಳು ಪಿತೃಗಳಿಗೆ ತೃಪ್ತಿಯನ್ನು ಹುಟ್ಟಿಸುವುವು.

೧೧-೧೨. ಕೂಡಲೆ ಚಂದ್ರನಿಂದ ಸ್ರವಿಸುವ ಮಧುವಿನಿಂದ ಅವನು ಪೈತೃಕ ವಿಧಿಗೆ ಅನುಸಾರವಾಗಿ ತಿಲಾಂಜಲಿಯನ್ನು ಕೊಡುವನು. ಚಂದ್ರಸಂಬಂಧವಾದ

ಸ್ವಧಾಮೃತೇನ ಸೌಮ್ಯೇನ ತರ್ಪಯಾಮಾಸ ವೈ ಪಿತೄನ್ ।
ಸೌಮ್ಯಾ ಬರ್ಹಿಷದಃ ಕಾವ್ಯಾ ಅಗ್ನಿಷ್ವಾತ್ತಾಸ್ತಥೈವ ಚ ॥೧೨॥

ಋತುರಗ್ನಿಃ ಸ್ಮೃತೋ ವಿಪ್ರೈರ್ಋತುಂ ಸಂವತ್ಸರಂ ವಿದುಃ ।
ಜಜ್ಞಿರೇ ಋತವಸ್ತಸ್ಮಾದೃತುಭ್ಯೋ ಹ್ಯಾರ್ತವಾಭವನ್ ॥೧೩॥

ಪಿತರೋಽರ್ತವೋಽರ್ಧಮಾಸಾಶ್ಚ ವಿಜ್ಞೇಯಾ ಋತುಸೂನವಃ ।
ಪಿತಾಮಹಸ್ತು ಋತವೋ ಹ್ಯಮಾವಾಸ್ಯಾಬ್ದಸೂನವಃ ।
ಪ್ರಪಿತಾಮಹಾಃ ಸ್ಮೃತಾ ದೇವಾಃ ಪಂಚಾಬ್ದಾ ಬ್ರಹ್ಮಣಃ ಸುತಾಃ ॥೧೪॥

ಸೌಮ್ಯಾ ಬರ್ಹಿಷದಃ ಕಾವ್ಯಾ ಅಗ್ನಿಷ್ವಾತ್ತಾ ಇತಿ ತ್ರಿಧಾ ।
ಗೃಹಸ್ಥಾ ಯೇ ತು ಯಜ್ವಾನೋ ಹವಿರ್ಯಜ್ಞಾರ್ತ್ತವಾಶ್ಚ ಯೇ ।
ಸ್ಮೃತಾ ಬರ್ಹಿಷದಸ್ತೇ ವೈ ಪುರಾಣೇ ನಿಶ್ಚಯಂ ಗತಾಃ ॥೧೫॥

---

ಆ ಸ್ವಧಾಮೃತದಿಂದ ಸೌಮ್ಯರು, ಬರ್ಹಿಷದರು, ಕಾವ್ಯರು ಮತ್ತು ಅಗ್ನಿಷ್ವಾತ್ತರೆಂಬ ಪಿತೃಗಳೆಲ್ಲರೂ ಪ್ರೀತರಾಗುವರು.

೧೩. ಜ್ಞಾನಿಗಳು ಅಗ್ನಿಯನ್ನು ಋತುವೆಂದು ಕರೆಯುವರು. ಸಂವತ್ಸರಕ್ಕೂ ಋತುವೆಂದೇ ಹೆಸರು. ಸಂವತ್ಸರದಿಂದ ಋತುಗಳು ಹುಟ್ಟಿದುವು. ಋತುಗಳಿಂದ ಅರ್ಧಮಾಸಗಳು ಉತ್ಪನ್ನವಾದುವು.

೧೪, ಋತುಗಳಿಂದ ಉತ್ಪನ್ನವಾದ ಅರ್ಧಮಾಸಗಳು ಅಗ್ನಿರೂಪವಾದ ಪಿತೃಗಳೆಂದು ಅರಿಯಬೇಕು. ವರ್ಷದಿಂದ ಜನಿಸಿದ ಋತುಗಳೂ, ಮಾಸಗಳೂ ಪಿತಾಮಹರೆನಿಸುವುವು. ಬ್ರಹ್ಮನ ಪುತ್ರರಾಗಿ ಸಂವತ್ಸರ, ಪರಿವತ್ಸರ ಮೊದಲಾದ ಐದು ಬಗೆಯ ವರ್ಷಗಳಿಗೆ ಅಭಿಮಾನಿಗಳಾಗಿರುವ ದೇವತೆಗಳು ಪ್ರಪಿತಾಮಹರೆಂದು ಪ್ರಸಿದ್ಧರಾಗಿರುವರು.

೧೫. ಚಂದ್ರನ ಅಮೃತಕಲೆಗಳಿಂದ ತೃಪ್ತಿಯನ್ನು ಪಡೆಯುವ ಪಿತೃಗಳಲ್ಲಿ ಬರ್ಹಿಷದರು, ಕಾವ್ಯರು ಮತ್ತು ಅಗ್ನಿಷ್ವಾತ್ತರೆಂದು ಮೂರು ಗುಂಪುಗಳಿವೆ. ಗೃಹಸ್ಥರೂ ಆಹಿತಾಗ್ನಿಗಳೂ ಆಗಿ, ಯಾಗಗಳನ್ನೂ ದರ್ಶಪೌರ್ಣಮಾಸಸ್ಥಾಲೀಪಾಕಾದಿಗಳನ್ನೂ ನೆರವೇರಿಸುವವರು ಬರ್ಹಿಷದರೆಂದು ಪುರಾಣಗಳಲ್ಲಿ ನಿಶ್ಚಿತವಾಗಿದೆ.

ಗೃಹಮೇಧಿನಶ್ಚಾಯಜ್ವಾನೋ ಅಗ್ನಿಷ್ವಾತ್ತಾರ್ತವಾಃ ಸ್ಮೃತಾಃ ।
ಅಷ್ಟಕಾಪತಯಃ ಕಾವ್ಯಾಃ ಪಂಚಾಬ್ದಾಂಸ್ತು ನಿಬೋಧತ ॥೧೬॥

ತೇಷು ಸಂವತ್ಸರೋ ಹ್ಯಗ್ನಿಃ ಸೂರ್ಯಸ್ತು ಪರಿವತ್ಸರಃ ।
ಸೋಮಸ್ತ್ವಿಡ್ವತ್ಸರಶ್ಚೈವ ವಾಯುಶ್ಚೈವಾನುವತ್ಸರಃ ॥೧೭॥

ರುದ್ರಸ್ತು ವತ್ಸರಸ್ತೇಷಾಂ ಪಂಚಾಬ್ದಾ ಯೇ ಯುಗಾತ್ಮಕಾಃ ।
ಕಾಲೇನಾಧಿಷ್ಠಿತಸ್ತೇಷು ಚಂದ್ರಮಾಃ ಸ್ರವತೇ ಸುಧಾಂ ॥೧೮॥

ಏತೇ ಸ್ಮೃತಾ ದೇವಕೃತ್ಯಾಃ ಸೋಮಪಾಶ್ಚೋಷ್ಮಪಾಶ್ಚ ಯೇ ।
ತಾಂಸ್ತೇನ ತರ್ಪಯಾಮಾಸ ಯಾವದಾಸೀತ್ಪುರೂರವಾಃ ॥೧೯॥

ಯಸ್ಮಾತ್ಪ್ರಸೂಯತೇ ಸೋಮೋ ಮಾಸಿ ಮಾಸಿ ವಿಶೇಷತಃ ।
ತತಃ ಸ್ವಧಾಮೃತಂ ತದ್ವೈ ಪಿತೄಣಾಂ ಸೋಮಪಾಯಿನಾಂ ।
ಏತತ್ತದಮೃತಂ ಸೋಮಮವಾಪ ಮಧು ಚೈವ ಹಿ ॥೨೦॥

---

೧೬. ಗೃಹಸ್ಥರಾಗಿಯೇ ಇದ್ದುಕೊಂಡು ಯಾಗವನ್ನು ಮಾಡದಿರುವವರು ಅಗ್ನಿಷ್ವಾತ್ತರೆಂಬ ಪಿತೃಗಳು. ಮಾಘಾದಿಮಾಸಗಳ ಕೃಷ್ಣಪಕ್ಷದಲ್ಲಿ ಬರುವ ಅಷ್ಟಕಾ ಶ್ರಾದ್ಧದ ಅಭಿಮಾನಿಗಳಾದ ಪಿತೃಗಳಿಗೆ ಕಾವ್ಯರೆಂದು ಹೆಸರು. ಸಂವತ್ಸರ ಮೊದಲಾದ ಐದು ಬಗೆಯ ವರ್ಷಗಳ ಅಭಿಮಾನ ದೇವತೆಗಳನ್ನೂ ಇನ್ನು ಹೇಳುವೆನು ಕೇಳಿ.

೧೭-೧೮. ಅಗ್ನಿಯು ಸಂವತ್ಸರಕ್ಕೂ, ಸೂರ್ಯನು ಪರಿವತ್ಸರಕ್ಕೂ, ಸೋಮನು ಇಡ್ವತ್ಸರಕ್ಕೂ, ವಾಯುವು ಅನುವತ್ಸರಕ್ಕೂ, ರುದ್ರನು ವತ್ಸರಕ್ಕೂ ಅಧಿದೇವತೆಗಳು. ಈ ಐದು ವರ್ಷಗಳೂ ಯುಗಾತ್ಮಕವಾದುವು. ಚಂದ್ರನು ಆಯಾ ಕಾಲಗಳಲ್ಲಿ ಅವುಗಳಲ್ಲಿ ನೆಲಸಿ ಅಮೃತವನ್ನು ಸುರಿಸುತ್ತಾನೆ.

೧೯. ಪಿತೃಗಳು ಸೋಮಪರೆಂದೂ ಊಷ್ಮಪರೆಂದೂ ಪ್ರಸಿದ್ಧರಾಗಿರುವರಷ್ಟೆ! ಅವರಿಗೆ ದೇವಕೃತ್ಯರೆಂದೂ ಸಂಜ್ಞೆಯುಂಟು. ಪುರೂರವನು ಅವರೆಲ್ಲರನ್ನೂ ತಾನು ಬದುಕಿರುವಷ್ಟು ಕಾಲವೂ ಚಂದ್ರನ ಸುಧಾರಸದಿಂದ ತೃಪ್ತಿಪಡಿಸಿದನು.

೨೦. ಚಂದ್ರನು ಪ್ರತಿಯೊಂದು ತಿಂಗಳಲ್ಲಿಯೂ ಅಮೃತರಸವನ್ನು ವಿಶೇಷವಾಗಿ ಸುರಿಸುವನು. ಅದನ್ನು ಪಾನಮಾಡುವ ಕಾರಣದಿಂದಲೇ ಪಿತೃಗಳು ಸೋಮಪರು (ಚಂದ್ರನನ್ನು ಪಾನಮಾಡುವವರು) ಎನಿಸಿಕೊಂಡರು. ಈ ಸುಧಾರಸವೇ ಅಮೃತ, ಸೋಮ, ಮಧು ಮೊದಲಾದ ಬಗೆಬಗೆಯ ಹೆಸರುಗಳನ್ನು ಪಡೆದಿದೆ.

**ತತಃ ಪೀತಸುಧಂ ಸೋಮಂ ಸೂರ್ಯೋಽಸಾವೇಕರಶ್ಮಿನಾ ।**
**ಆಪ್ಯಾಯತೇ ಸುಷುಮ್ನೇನ ಸೋಮಂ ತು ಸೋಮಪಾಯಿನಂ ॥೨೧॥**

**ನಿಃಶೇಷಾ ವೈ ಕಲಾಃ ಪೂರ್ವಾ ಯುಗಪದ್ವ್ಯಾಪರ್ಯ ಪುರಾ ।**
**ಸುಷುಮ್ನಾಪ್ಯಾಯಮಾನಸ್ಯ ಭಾಗಂ ಭಾಗಮಹಃ ಕ್ರಮಾತ್ ॥೨೨॥**

**ಕಲಾಃ ಕ್ಷೀಯಂತಿ ಕೃಷ್ಣಾಸ್ತಾಃ ಶುಕ್ಲಾ ಹ್ಯಾಪ್ಯಾಯಯಂತಿ ಚ ।**
**ಏವಂ ಸಾ ಸೂರ್ಯವೀರ್ಯೇಣ ಚಂದ್ರಸ್ಯಾಪ್ಯಾಯಿತಾ ತನುಃ ॥೨೩॥**

**ಪೌರ್ಣಮಾಸ್ಯಾಂ ತು ದೃಶ್ಯೇತ ಶುಕ್ಲಃ ಸಂಪೂರ್ಣಮಂಡಲಃ ।**
**ಏವಮಾಪ್ಯಾಯಿತಃ ಸೋಮಃ ಶುಕ್ಲಪಕ್ಷೇಽಪ್ಯಹಃ ಕ್ರಮಾತ್ ।**
**ದೇವೈಃ ಪೀತಸುಧಂ ಸೋಮಂ ಪುರಾ ಪಶ್ಚಾತ್ಪಿಬೇದ್ರವಿಃ ॥೨೪॥**

**ಪೀತಂ ಪಂಚದಶಾಹಂ ತು ರಶ್ಮಿನೈಕೇನ ಭಾಸ್ಕರಃ ।**
**ಆಪ್ಯಾಯಯತ್ಸುಷುಮ್ನೇನ ಭಾಗಂ ಭಾಗಮಹಃಕ್ರಮಾತ್ ॥೨೫॥**

---

೨೧. ಪಿತೃಗಳು ಚಂದ್ರನಲ್ಲಿದ್ದ ಅಮೃತವನ್ನು ಪಾನಮಾಡಿದ ಮೇಲೆ ಸೂರ್ಯನು ಸುಷುಮ್ನವೆಂಬ ತನ್ನ ಒಂದು ಕಿರಣದ ಮೂಲಕ ಅವನನ್ನು ಮತ್ತೆ ಪುಷ್ಟಿಗೊಳಿಸುತ್ತಾನೆ.

೨೨. ಚಂದ್ರನ ಮೊದಲಿನ ಕಲೆಗಳೆಲ್ಲ ಸಂಪೂರ್ಣವಾಗಿ ಮುಗಿಯಲು ಸೂರ್ಯನು ತನ್ನ ಕಿರಣದ ಮೂಲಕ ಅವನಲ್ಲಿ ವ್ಯಾಪನೆಮಾಡುತ್ತಾನೆ. ಸುಷುಮ್ನ ಕಿರಣದಿಂದ ಚಂದ್ರನ ಅವಯವವು ದಿನದಿನಕ್ಕೂ ಬೆಳೆಯುವುದು.

೨೩. ಚಂದ್ರಬಿಂಬದಲ್ಲಿರುವ ಕೃಷ್ಣಕಲೆಗಳು ಸವೆಯುತ್ತವೆ; ಶುಕ್ಲಕಲೆಗಳು ಬೆಳೆಯುತ್ತವೆ. ಹೀಗೆ ಚಂದ್ರನ ದೇಹವು ಸೂರ್ಯನ ವೀರ್ಯದಿಂದ ಪುಷ್ಟವಾಗುತ್ತದೆ.

೨೪. ಚಂದ್ರನು ಹುಣ್ಣಿಮೆಯ ದಿನ ಶುಭ್ರವಾಗಿ ಪೂರ್ಣಮಂಡಲದಿಂದ ಪ್ರಕಾಶಿಸುವನು. ಹೀಗೆ ಶುಕ್ಲಪಕ್ಷದಲ್ಲಿ ದಿನಕ್ರಮದಿಂದ ಅವನು ಬೆಳೆಯುತ್ತಾನೆ. ಅವನಲ್ಲಿರುವ ಅಮೃತವನ್ನು ಮೊದಲು ದೇವತೆಗಳು ಕುಡಿಯುವರು. ಬಳಿಕ ಸೂರ್ಯನು ತನ್ನ ಕಿರಣದಿಂದ ಅವನನ್ನು ಪಾನಮಾಡುವನು ಎಂದರೆ ವ್ಯಾಪಿಸುವನು.

೨೫. ಹದಿನೈದು ದಿನಗಳ ಕಾಲ ದೇವತೆಗಳು ಅಮೃತರಸವನ್ನು ಕುಡಿದು ಚಂದ್ರನನ್ನು ನಿಸ್ಸಾರಮಾಡಿದ ಮೇಲೆ, ಸೂರ್ಯನು ತನ್ನ ಸುಷುಮ್ನಕಿರಣದಿಂದ ಒಂದೊಂದು ಭಾಗವನ್ನೂ ದಿನಕ್ರಮದಿಂದ ಪುಷ್ಟಿಗೊಳಿಸುತ್ತ ಬರುವನು.

ಸುಷುಮ್ನಾಪ್ಯಾಯಮಾನಸ್ಯ ಶುಕ್ಲಾ ವರ್ಧಂತಿ ವೈ ಕಲಾಃ ।
ತಸ್ಮಾದ್ಧ್ರಸಂತಿ ವೈ ಕೃಷ್ಣಾಃ ಶುಕ್ಲಾ ಹ್ಯಾಪ್ಯಾಯಯಂತಿ ಚ ॥೨೬॥

ಏವಮಾಪ್ಯಾಯತೇ ಸೋಮಃ ಕ್ಷೀಯತೇ ಚ ಪುನಃ ಪುನಃ ।
ಸಮೃದ್ಧಿರೇವಂ ಸೋಮಸ್ಯ ಪಕ್ಷಯೋಃ ಶುಕ್ಲಕೃಷ್ಣಯೋಃ ॥೨೭॥

ಇತ್ಯೇಷ ಪಿತೃಮಾನ್ ಸೋಮಃ ಸ್ಮೃತಸ್ತದ್ವತ್ಸುಧಾತ್ಮಕಃ ।
ಕಾಂತಃ ಪಂಚದಶೈಃ ಸಾರ್ಧಂ ಸುಧಾಮೃತಪರಿಸ್ರವೈಃ ॥೨೮॥

ಅತಃ ಪರಂ ಪ್ರವಕ್ಷ್ಯಾಮಿ ಪರ್ವಣಾಂ ಸಂಧಯಶ್ಚ ಯಾಃ ।
ಯಥಾ ಗ್ರಥ್ನಂತಿ ಪರ್ವಾಣಿ ಆವೃತ್ತಾದಿಕ್ಷುವೇಣುವತ್ ॥೨೯॥

ತಥಾಬ್ದಮಾಸಾಃ ಪಕ್ಷಾಶ್ಚ ಶುಕ್ಲಾಃ ಕೃಷ್ಣಾಸ್ತು ವೈ ಸ್ಮೃತಾಃ ।
ಪೌರ್ಣಮಾಸ್ಯಾಸ್ತು ಯೋ ಭೇದೋ ಗ್ರಂಥಯಃ ಸಂಧಯಸ್ತಥಾ ॥೩೦॥

---

೨೬. ಸುಷುಮ್ನರಶ್ಮಿಯಿಂದ ಚಂದ್ರನು ಪರಿಪುಷ್ಟನಾಗುವನು. ಅವನ ಶುಕ್ಲಕಲೆಗಳು ಬೆಳೆಯುತ್ತವೆ. ಕೃಷ್ಣಕಲೆಗಳು ಕ್ಷಯಿಸುತ್ತವೆ.

೨೭. ಈ ರೀತಿಯಾಗಿ ಚಂದ್ರನು ಬೆಳೆಯುತ್ತಾನೆ; ಮತ್ತೆ ಕುಗ್ಗುತ್ತಾನೆ. ಶುಕ್ಲಪಕ್ಷ ಕೃಷ್ಣಪಕ್ಷಗಳೆರಡರಲ್ಲಿಯೂ ಅವನ ಸಮೃದ್ಧಿ ಈ ತೆರನಾಗಿರುವುದು.

೨೮. ಚಂದ್ರನು ಹೀಗೆ ಪಿತೃಗಳಿಗೆ ತೃಪ್ತಿಯನ್ನು ಕೊಡತಕ್ಕವನೆಂದೂ, ಅಮೃತಮಯನೆಂದೂ ಪ್ರಸಿದ್ಧನಾಗಿದ್ದಾನೆ. ಅಮೃತಧಾರೆಗಳನ್ನು ಸುರಿಸುವ ಹದಿನೈದು ಕಲೆಗಳಿಂದ ಅವನು ಬಹು ಮನೋಹರನಾಗಿ ಪ್ರಕಾಶಿಸುವನು.

೨೯-೩೦. ಇನ್ನು ಮುಂದೆ ಪರ್ವಕಾಲಗಳನ್ನೂ ಅವುಗಳ ಸಂಧಿಗಳನ್ನೂ ಹೇಳುವೆನು ಕೇಳಿರಿ. ಕಬ್ಬಿನಲ್ಲಿಯೂ, ಬಿದಿರಿನಲ್ಲಿಯೂ ಅನುಕ್ರಮವಾಗಿ ಗಿಣ್ಣುಗಳು ಒಂದರೊಡನೊಂದು ಕೂಡಿರುವುವಷ್ಟೆ. ಹಾಗೆಯೇ ವರ್ಷದ ಅವಯವ ರೂಪಗಳಾದ ಮಾಸಗಳೂ, ಅರ್ಧಮಾಸಗಳೂ ಪರ್ವಸಂಧಿಗಳಿಂದ ಕೂಡಿವೆ. ಶುಕ್ಲಪಕ್ಷವೆಂದೂ ಕೃಷ್ಣಪಕ್ಷವೆಂದೂ ಅರ್ಧಮಾಸಗಳು ಎರಡು ವಿಧವಾಗಿವೆ. ಪೂರ್ಣಿಮಾ ಮತ್ತು ಅಮಾವಾಸ್ಯಾ ತಿಥಿಗಳು ಪರ್ವಗ್ರಂಥಿಗಳು ಅಥವಾ ಪರ್ವ ಸಂಧಿಗಳೆನಿಸುವುವು.

ಅರ್ಧಮಾಸಸ್ಯ ಪರ್ವಾಣಿ ದ್ವಿತೀಯಾಪ್ರಭೃತೀನಿ ಚ ।
ಅಗ್ನ್ಯಾಧಾನಕ್ರಿಯಾ ಯಸ್ಮಾನ್ನಿಯತೇ ಪರ್ವಸಂಧಿಷು ॥೩೦॥

ತಸ್ಮಾತ್ತು ಪರ್ವಣೋ ಹ್ಯಾದೌ ಪ್ರತಿಪತ್ಪರ್ವಸಂಧಿಷು ।
ಸಾಯಾಹ್ನೇ ಅನುಮತ್ಯಾಶ್ಚ ದ್ವೌ ಲವೌ ಕಾಲ ಉಚ್ಯತೇ ।
ಲವೌ ದ್ವಾವೇವ ರಾಕಾಯಾಃ ಕಾಲೋ ಜ್ಞೇಯೋಽಪರಾಹ್ಣಿಕಃ ॥೩೨॥

ಪ್ರತಿಪತ್ಕೃಷ್ಣಪಕ್ಷಸ್ಯ ಕಾಲೇಽತೀತೇಽಪರಾಹ್ಣಿಕೇ ।
ಸಾಯಾಹ್ನೇ ಪ್ರತಿಪನ್ನೇ ಚ ಸ ಕಾಲಃ ಪೌರ್ಣಮಾಸಿಕಃ ॥೩೩॥

ವ್ಯತೀಪಾತೇ ಸ್ಥಿತೇ ಸೂರ್ಯೇ ಲೇಖಾದೂರ್ಧ್ವಂ ಯುಗಾಂತರಂ ।
ಯುಗಾಂತರೋದಿತೇ ಚೈವ ಚಂದ್ರೇ ಲೇಖೋಪರಿ ಸ್ಥಿತೇ ॥೩೪॥

ಪೂರ್ಣಮಾಸವ್ಯತೀಪಾತೌ ಯದಾ ಪಶ್ಯೇತ್ಪರಸ್ಪರಂ ।
ತೌ ತು ವೈ ಪ್ರತಿಪದ್ಯಾವತ್ತಸ್ಮಿನ್ ಕಾಲೇ ವ್ಯವಸ್ಥಿತೌ ॥೩೫॥

---

೩೦ ದ್ವಿತೀಯೆ ಮೊದಲಾದ ತಿಥಿಗಳು ಅರ್ಧಮಾಸದ ಪರ್ವಗಳಾಗಿವೆ. ಅಗ್ನ್ಯಾಧಾನಕರ್ಮಗಳನ್ನು ಪರ್ವಸಂಧಿಗಳಲ್ಲಿ ನಡೆಸಬೇಕಾದುದರಿಂದ ಅವುಗಳಲ್ಲಿ ಮೊದಲನೆಯದಾದ ಪ್ರತಿಪತ್ತಿಥಿಯು ಈ ಕರ್ಮಕ್ಕೆ ಪ್ರಶಸ್ತವಾಗಿದೆ.

೩೨. ಪೂರ್ಣಿಮೆಯಲ್ಲಿ ಅನುಮತಿ, ರಾಕಾ ಎಂದು ಎರಡು ಒಳಪಂಗಡಗಳುಂಟು. ಹುಣ್ಣಿಮೆಯ ದಿನ ಸಾಯಂಕಾಲ ಎರಡು ಲವಗಳ ಕಾಲವು ಅನುಮತಿಯ ರೂಪದಿಂದಿರುವುದು. ಅಪರಾಹ್ಣದಲ್ಲಿ ಅದೇ ಎರಡು ಲವಗಳ ಕಾಲವು ರಾಕಾರೂಪವಾಗಿರುವುದು.

೩೩. ಕೃಷ್ಣಪಕ್ಷದ ಪಾಡ್ಯಮಿಯ ಅಪರಾಹ್ಣಕಾಲವು ಕಳೆದು ಸಾಯಾಹ್ನವು ಬಂದಾಗ, ಆ ಸಮಯವು ಪೌರ್ಣಮಾಸೇಷ್ಟಿಗೆ ಉಕ್ತವಾದ ಪರ್ವಕಾಲವೆಂದು ತಿಳಿಯಬೇಕು.

೩೪-೩೫. ಹುಣ್ಣಿಮೆಯ ದಿನ ಸೂರ್ಯನು ಕ್ರಾಂತಿವೃತ್ತದ ಸಂಪಾತಸ್ಥಾನದಲ್ಲಿಯೂ, ಚಂದ್ರನು ಅದಕ್ಕೆ ಆರು ರಾಶಿಗಳ ಅಂತರದಲ್ಲಿ ವಿಷುವದ್ವೃತ್ತದ ಸಂಧಿಸ್ಥಾನದಲ್ಲಿಯೂ ಇರುವರು. ಅವರಿಬ್ಬರೂ ಅಂದು ಪರಸ್ಪರ ಅಭಿಮುಖರಾಗಿ ಒಬ್ಬರನ್ನೊಬ್ಬರು ನೋಡುತ್ತಿರುವರು. ಕೃಷ್ಣಪಕ್ಷದ ಪ್ರತಿಪತ್ತಿನಿಂದ ಪ್ರಾರಂಭಿಸಿದ ಸಂಚಾರದಲ್ಲಿ ಅವರಿಬ್ಬರೂ ಪೂರ್ಣಿಮಿಯ ದಿನ ಮಾತ್ರ ಆ ರೀತಿಯಲ್ಲಿ ಇರುವರು.

ತತ್ಕಾಲಂ ಸೂರ್ಯಮುದ್ದಿಶ್ಯ ದೃಷ್ಟ್ವಾ ಸಂಖ್ಯಾತುಮರ್ಹಸಿ ।
ಸ ಚೈವ ಸತ್ಕ್ರಿಯಾಕಾಲಃ ಷಷ್ಠಃ ಕಾಲೋಽಭಿಧೀಯತೇ ||೩೬||

ಪೂರ್ಣೇಂದೋಃ ಪೂರ್ಣಪಕ್ಷೇ ತು ರಾತ್ರಿಸಂಧಿಶ್ಚ ಪೂರ್ಣಿಮಾ ।
ತಸ್ಮಾದಾಪ್ಯಾಯತೇ ನಕ್ತಂ ಪೌರ್ಣಮಾಸ್ಯಾಂ ನಿಶಾಕರಃ ||೩೭||

ಯದಾನ್ಯೋನ್ಯವತೀಂ ಪಾತೇ ಪೂರ್ಣಿಮಾಂ ಪ್ರೇಕ್ಷತೇ ದಿವಾ ।
ಚಂದ್ರಾದಿತ್ಯೋಽಪರಾಹ್ಣೇ ತು ಪೂರ್ಣತ್ವಾತ್ಪೂರ್ಣಿಮಾ ಸ್ಮೃತಾ ||೩೮||

ಯಸ್ಮಾತ್ತಾಮನುಮನ್ಯಂತೇ ಪಿತರೋ ದೈವತೈಃ ಸಹ ।
ತಸ್ಮಾದನುಮತಿರ್ನಾಮ ಪೂರ್ಣತ್ವಾತ್ಪೂರ್ಣಿಮಾ ಸ್ಮೃತಾ ||೩೯||

ಅತ್ಯರ್ಥಂ ರಾಜತೇ ಯಸ್ಮಾತ್ಪೌರ್ಣಮಾಸ್ಯಾಂ ನಿಶಾಕರಃ ।
ರಂಜನಾಚ್ಚೈವ ಚಂದ್ರಸ್ಯ ರಾಕೇತಿ ಕವಯೋ ವಿದುಃ ||೪೦||

---

೩೬. ಸೂರ್ಯನ ಗತಿಯನ್ನು ಗಮನಿಸಿ ಆ ಕಾಲವನ್ನು ನಿಷ್ಕರ್ಷೆಮಾಡಬೇಕು. ಸತ್ಕರ್ಮಗಳನ್ನು ಆಚರಿಸುವುದಕ್ಕೆ ಅದೇ ತಕ್ಕ ಕಾಲ. ಅದನ್ನು ಆರನೆಯ ಕಾಲವೆಂದೂ ಹೇಳುತ್ತಾರೆ.

೩೭. ಪೂರ್ಣಚಂದ್ರನಿಗೆ ಶುಕ್ಲಪಕ್ಷದಲ್ಲಿ ರಾತ್ರಿಯ ಸಂಧಿಕಾಲವು ಪೂರ್ಣಿಮಾ ತಿಥಿ. ಆದುದರಿಂದ ಅವನು ಹುಣ್ಣಿಮೆಯ ರಾತ್ರಿಯಲ್ಲಿ ಪರಿಪುಷ್ಟನಾಗಿ ಪ್ರಕಾಶಿಸುತ್ತಾನೆ.

೩೮. ಕ್ರಾಂತಿವೃತ್ತ ಮತ್ತು ವಿಷುವದ್ವೃತ್ತಗಳ ಸಂಪಾತದಲ್ಲಿದ್ದು, ಹಗಲು ಅಪರಾಹ್ಣ ಕಾಲದಲ್ಲಿ ಚಂದ್ರಸೂರ್ಯರು ಪರಸ್ಪರವಾಗಿ ಅವಲೋಕಿಸುತ್ತಾರೆ. ಚಂದ್ರನು ಪೂರ್ಣರೂಪದಿಂದಿರುವುದರಿಂದ ಆ ತಿಥಿಯನ್ನು ಪೂರ್ಣಿಮೆಯೆಂದು ಕರೆಯುವರು.

೩೯. ಅಮೃತಪಾನದ ಮೂಲಕ ಪಿತೃಗಳೂ ದೇವತೆಗಳೂ ಅನುಮತಿಸುವ ಕಾರಣ ಹುಣ್ಣಿಮೆಗೆ ಅನುಮತಿಯೆಂದೂ ಹೆಸರುಂಟು. ಚಂದ್ರನ ಎಲ್ಲಕಲೆಗಳೂ ಪೂರ್ಣವಾಗುವುದರಿಂದ ಪೂರ್ಣಿಮೆಯೆಂದೂ ಆ ದಿವಸಕ್ಕೆ ಪ್ರಖ್ಯಾತಿ ಬಂದಿದೆ.

೪೦. ಹುಣ್ಣಿಮೆಯಲ್ಲಿ ಚಂದ್ರನು ಅತಿಶಯವಾಗಿ ಪ್ರಕಾಶಿಸುತ್ತಾನೆ. ಅವನು ಆಗ ಜನರ ಮನಸ್ಸನ್ನು ರಂಜಿಸುವ ಕಾರಣ ಆ ದಿನವನ್ನು ರಾಕೆಯೆಂದು ಜ್ಞಾನಿಗಳು ಹೇಳುತ್ತಾರೆ.

**ಅಮಾ ವಸೇತಾಮೃಕ್ಷೇ ತು ಯದಾ ಚಂದ್ರದಿವಾಕರೌ ।**
**ಏಕಾ ಪಂಚದಶೀ ರಾತ್ರಿರಮಾವಾಸ್ಯಾ ತತಃ ಸ್ಮೃತಾ ॥೪೧॥**

**ಉದ್ದಿಶ್ಯ ತಾಮಮಾವಾಸ್ಯಾಂ ಯದಾ ದರ್ಶಂ ಸಮಾಗತೌ ।**
**ಅನ್ಯೋಽನ್ಯಂ ಚಂದ್ರಸೂರ್ಯೌ ತು ದರ್ಶನಾದ್ದರ್ಶ ಉಚ್ಯತೇ ॥೪೨॥**

**ದ್ವೌ ದ್ವೌ ಲವಾವಮಾವಾಸ್ಯಾಂ ಸ ಕಾಲಃ ಪರ್ವಸಂಧಿಷು ।**
**ದ್ವ್ಯಕ್ಷರಃ ಕುಹುಮಾತ್ರಶ್ಚ ಪರ್ವಕಾಲಸ್ತು ಸ ಸ್ಮೃತಃ ॥೪೩॥**

**ನಷ್ಟಚಂದ್ರಾ ತ್ವಮಾವಾಸ್ಯಾ ಮಧ್ಯಾಹ್ನಪ್ರಭೃತೀಹ ವೈ ।**
**ದಿವಾ ತದೂರ್ಧ್ವಂ ರಾತ್ರ್ಯಾಂ ತು ಸೂರ್ಯೇ ಪ್ರಾಪ್ತೇ ತು ಚಂದ್ರಮಾಃ ।**
**ಸೂರ್ಯೇಣ ಸಹಸೋದ್ಗಚ್ಛೇತ್ತತಃ ಪ್ರಾತಸ್ತನಾತ್ತು ವೈ ॥೪೪॥**

---

೪೧. ಕೃಷ್ಣಪಕ್ಷದ ಹದಿನೈದನೆಯ ದಿನ ರಾತ್ರಿ ಚಂದ್ರಸೂರ್ಯರು ಏಕ ನಕ್ಷತ್ರದಲ್ಲಿ ಅಮಾ ಎಂದರೆ ಒಟ್ಟಿಗೆ ವಾಸಮಾಡುವರು. ಆದಕಾರಣ ಆ ದಿವಸಕ್ಕೆ ಅಮಾವಾಸ್ಯೆಯೆಂಬ ಹೆಸರು ಬಂದಿದೆ.

೪೨. ಚಂದ್ರಸೂರ್ಯರು ತಮ್ಮ ತಮ್ಮ ವಿಭಾಗವನ್ನು ಬಿಟ್ಟು ಐಕ್ಯತೆಹೊಂದಿ, ಒಬ್ಬರ ದರ್ಶನವನ್ನೊಬ್ಬರು ಪಡೆಯುವುದರಿಂದ ಆ ದಿನವನ್ನು ದರ್ಶವೆಂದೂ ಸಹ ಕರೆಯುತ್ತಾರೆ.

೪೩. ಅಮಾವಾಸ್ಯೆಯ ದಿನದಲ್ಲೂ ಮಿಕ್ಕ ಸಂಧಿಕಾಲಗಳಲ್ಲಿಯೂ ಎರಡೆರಡು ಲವಪ್ರಮಾಣದ ಕಾಲವನ್ನು ಪರ್ವಕಾಲವೆಂದು ಭಾವಿಸಬೇಕು. ಕುಹು ಎಂಬ ಎರಡು ಅಕ್ಷರಗಳನ್ನು ಉಚ್ಚಾರಮಾಡುವಷ್ಟು ಕಾಲವೇ ಪರ್ವಕಾಲದ ಪರಿಮಿತಿಯಾಗಿರುವುದು.

೪೪. ಯಾವ ಅಮಾವಾಸ್ಯೆಯು ಮಧ್ಯಾಹ್ನದಿಂದ ಪ್ರಾರಂಭಿಸಿ ಆ ಅರ್ಧ ದಿವಸದಲ್ಲಿಯೂ ರಾತ್ರಿಯಲ್ಲಿಯೂ ಪ್ರವರ್ತಿಸುವುದೋ ಆ ಅಮಾವಾಸ್ಯೆಯು ನಷ್ಟ ಚಂದ್ರಾ ಎಂದರೆ ಚಂದ್ರದರ್ಶನವಿಲ್ಲದುದು ಎನಿಸಿಕೊಳ್ಳುವುದು. ಅದೇ ಕುಹೂ ಸಂಜ್ಞಕವಾದುದು. ಆಗ ಚಂದ್ರನು ಸೂರ್ಯಬಿಂಬದಲ್ಲಿ ಸೇರಿದ್ದು ಬೆಳಗಾಗುವ ವೇಳೆಗೆ ಅವನೊಡನೆಯೇ ಉದಿಸುವನು. ಸೂರ್ಯನು ಚಂದ್ರನೊಡನೆ ಎರಡು ಲವಗಳ ಕಾಲ ಸಮಾಗಮವನ್ನು ಹೊಂದಿ ಮಧ್ಯಾಹ್ನದಲ್ಲಿ ಅವನಿಂದ ಬೇರೆಯಾಗುವನು.

ಸಮಾಗಮ್ಯ ಲವೌ ದ್ವೌ ತು ಮಧ್ಯಾಹ್ನಾನ್ನಿಪತೇ ರವಿಃ ।
ಪ್ರತಿಪಚ್ಛುಕ್ಲಪಕ್ಷಸ್ಯ ಚಂದ್ರಮಾಃ ಸೂರ್ಯಮಂಡಲಾತ್ ॥೪೫॥
ನಿರ್ಮುಚ್ಯಮಾನಯೋರ್ಮಧ್ಯೇ ತಯೋರ್ಮಂಡಲಯೋಸ್ತು ವೈ ।
ಸ ತದಾಸ್ಯಾಹುತೇಃ ಕಾಲೋ ದರ್ಶಸ್ಯ ಚ ವಷಟ್ಕ್ರಿಯಾಃ ।
ಏತದೃತುಮುಖಂ ಜ್ಞೇಯಮಮಾವಾಸ್ಯಾಂ ತು ಪಾರ್ವಣಂ ॥೪೬॥
ದಿವಾ ಪರ್ವ ತ್ವಮಾವಾಸ್ಯಾಂ ಕ್ಷೀಣೇಂದೌ ಧವಲೇ ತು ವೈ ।
ತಸ್ಮಾದ್ದಿವಾ ತ್ವಮಾವಾಸ್ಯಾಂ ಗೃಹ್ಯತೇ ಯೋ ದಿವಾಕರಃ ॥೪೭॥
ಕುಹೇತಿ ಕೋಕಿಲೇನೋಕ್ತಂ ಯಸ್ಮಾತ್ಕಾಲಾತ್ಸಮಾಪ್ಯತೇ ।
ತತ್ಕಾಲಸಂಜ್ಞಿತಾ ಹ್ಯೇಷಾ ಅಮಾವಾಸ್ಯಾ ಕುಹೂಃ ಸ್ಮೃತಾ ॥೪೮॥
ಸಿನೀವಾಲೀಪ್ರಮಾಣಂ ತು ಕ್ಷೀಣಶೇಷೋ ನಿಶಾಕರಃ ।
ಅಮಾವಾಸ್ಯಾ ವಿಶತ್ಯರ್ಕಂ ಸಿನೀವಾಲೀ ತದಾ ಸ್ಮೃತಾ ॥೪೯॥

---

೪೫-೪೬. ಹೀಗೆ ಸೇರಿರುವ ಸೂರ್ಯಚಂದ್ರಬಿಂಬಗಳ ವಿಭಾಗವು ಶುಕ್ಲ ಪಕ್ಷದ ಪಾಡ್ಯಮಿಯ ದಿನ ಆಗುವುದು. ಆಗ ಚಂದ್ರಬಿಂಬವು ಸೂರ್ಯನಿಂದ ಪ್ರತ್ಯೇಕವಾಗುವುದು. ಆ ಪ್ರತಿಪತ್ತಿಥಿಯು ದರ್ಶದಲ್ಲಿ ಮಾಡಬೇಕಾದ ಇಷ್ಟಿಯಲ್ಲಿ ವಷಟ್ಕಾರವನ್ನು ಉಚ್ಚರಿಸಿ ಆಹುತಿಯನ್ನು ಹೋಮಮಾಡುವ ಕಾಲವಾಗಿರುವುದು. ಅಮಾವಾಸ್ಯೆಯ ಪರ್ವಕಾಲವನ್ನು ಋತುಗಳ ಆದಿಯೆಂದು ಭಾವಿಸಬೇಕು.

೪೭. ಒಂದುಕಲೆಯೂ ಕಾಣಿಸದಂತೆ ಚಂದ್ರನು ಕ್ಷೀಣನಾದರೆ ಅಮಾವಾಸ್ಯೆಯ ದಿನ ಪರ್ವಕಾಲವು ಹಗಲಿನಲ್ಲಿ ಆಗುವುದು. ಆದುದರಿಂದ ಆ ದಿನ ಸೂರ್ಯನು ಅಮಾವಾಸ್ಯಾ ತಿಥಿಯನ್ನು ಹಗಲಿನಲ್ಲಿ ಪ್ರವೇಶಿಸುವನು.

೪೮. ಕೋಗಿಲೆಯು ಕುಹೂ ಎಂದು ಕೂಗಿ ಮುಗಿಸುವುದಕ್ಕೆ ಎಷ್ಟು ಕಾಲವು ಹಿಡಿಯುತ್ತದೆಯೋ, ಅಷ್ಟೇ ಕಾಲದ ಪರಿಮಿತಿಯುಳ್ಳ ಪರ್ವಕಾಲದ ಸಂಬಂಧವಿರುವ ಕಾರಣ, ಅಮಾವಾಸ್ಯೆಯನ್ನೂ ಕೂಡ ಕುಹೂ ಎಂದೇ ಹೇಳುತ್ತಾರೆ.

೪೯. ಅಮಾವಾಸ್ಯೆಯ ದಿನ ಚಂದ್ರನ ಕಲೆಯ ದರ್ಶನವು ಆಗುವುದಾದರೆ, ಎಷ್ಟು ಹೊತ್ತು ಹಾಗೆ ಅದು ಕಾಣುತ್ತದೆಯೋ ಅಷ್ಟು ಕಾಲವನ್ನು ಸಿನೀವಾಲಿಯೆನ್ನುವರು. ಆ ಸಿನೀವಾಲಿಯ ಸಂಬಂಧವುಳ್ಳ ಅಮಾತಿಥಿಯ ಯೋಗವು ಸೂರ್ಯನಿಗೆ ಸಂಭವಿಸುವ ಕಾರಣ ಆ ತಿಥಿಯನ್ನು ಕೂಡ ಸಿನೀವಾಲಿಯೆಂದು ಕರೆಯುತ್ತಾರೆ.

**ಅನುಮತಿಶ್ಚ ರಾಕಾ ಚ ಸಿನೀವಾಲೀ ಕುಹೂಸ್ತಥಾ ।**
**ಏತಾಸಾಂ ದ್ವಿಲವಃ ಕಾಲಃ ಕುಹೂಮಾತ್ರಾ ಕುಹೂಃ ಸ್ಮೃತಾ ॥೫೦॥**

**ಇತ್ಯೇಷ ಪರ್ವಸಂಧೀನಾಂ ಕಾಲೋ ವೈ ದ್ವಿಲವಃ ಸ್ಮೃತಃ ।**
**ಪರ್ವಣಾಂ ತುಲ್ಯಕಾಲಸ್ತು ತುಲ್ಯಾಹುತಿವಷಟ್ಕ್ರಿಯಾಃ ॥೫೧॥**

**ಚಂದ್ರಸೂರ್ಯವ್ಯತೀಪಾತೇ ಸಮೇ ವೈ ಪೂರ್ಣಿಮೇ ಉಭೇ ।**
**ಪ್ರತಿಪತ್ಪ್ರತಿಪನ್ನಸ್ತು ಪರ್ವಕಾಲೋ ದ್ವಿಮಾತ್ರಕಃ ॥೫೨॥**

**ಕಾಲಃ ಕುಹೂಸಿನೀವಾಲ್ಯೋಃ ಸಮುದ್ಧೋ ದ್ವಿಲವಃ ಸ್ಮೃತಃ ।**
**ಅರ್ಕಾಗ್ನಿಮಂಡಲೇ ಸೋಮೇ ಪರ್ವಕಾಲಕಲಾಃ ಸ್ಮೃತಾಃ ॥೫೩॥**

**ಯಸ್ಮಾದಾಪೂರ್ಯತೇ ಸೋಮಃ ಪಂಚದಶ್ಯಾಂ ತು ಪೂರ್ಣಿಮಾ ।**
**ದಶಭಿಃ ಪಂಚಭಿಶ್ಚೈವ ಕಲಾಭಿರ್ದಿವಸಕ್ರಮಾತ್ ॥೫೪॥**

---

೫೦. ಅನುಮತಿ, ರಾಕಾ, ಸಿನೀವಾಲೀ, ಕುಹೂ ಎಂಬ ಪರ್ವಗಳ ಪರಿಮಿತಿಯು ಎರಡು ಲವಗಳ ಕಾಲ, ಕುಹೂ ಎಂದು ಉಚ್ಚರಿಸುವುದಕ್ಕೆ ಬೇಕಾಗುವ ಕಾಲದ ಪರಿಮಾಣವುಳ್ಳದಾದುದರಿಂದ ಕುಹೂ ಎಂಬ ಪದವು ಅನ್ವರ್ಥವಾಗಿದೆ.

೫೧. ಈ ರೀತಿಯಾಗಿ ಪರ್ವಸಂಧಿಗಳ ಸಂಧಿಕಾಲವು ಎರಡು ಲವಪ್ರಮಾಣವುಳ್ಳದು. ಎಲ್ಲ ಪರ್ವಗಳಲ್ಲಿಯೂ ಪುಣ್ಯಕಾಲವೂ, ಅದರಲ್ಲಿ ನಡೆಸಬೇಕಾದ ಕರ್ಮಗಳೂ ಸಮಾನವಾಗಿವೆ.

೫೨. ರಾಕಾ ಮತ್ತು ಅನುಮತೀ ಎಂಬ ಎರಡು ವಿಧವಾದ ಹುಣ್ಣಿಮೆಗಳೂ ಚಂದ್ರಸೂರ್ಯರಿಗೆ ವ್ಯತೀಪಾತಯೋಗವು ಸಂಭವಿಸಿದಾಗ ಬರುತ್ತವೆ. ಪೂರ್ಣಿಮೆ ಮತ್ತು ಅದರ ಮುಂದಿನ ಪ್ರತಿಪತ್ತಿಥಿ ಇವೆರಡರ ಪರ್ವಕಾಲದ ಪ್ರಮಾಣವೂ ಕೂಡ ಎರಡು ಲವಗಳ ಕಾಲವಾಗಿರುವುದು.

೫೩. ಕುಹೂ ಮತ್ತು ಸಿನೀವಾಲಿಗಳ ಯೋಗವು ಎರಡು ಲವಗಳ ಕಾಲವೆಂದು ತಿಳಿಯಬೇಕು. ತೇಜಃಕಲೆಗಳ ಪರಸ್ಪರ ಸಂಗಮದಿಂದ ಪರ್ವಕಾಲಗಳು ಆಗಿರುವ ಕಾರಣ ಸೂರ್ಯ ಮತ್ತು ಅಗ್ನಿಗಳ ತೇಜಸ್ಸಂಬಂಧವುಳ್ಳ ಚಂದ್ರನ ಕಲೆಗಳು ಪರ್ವಕಾಲದಲ್ಲಿ ಇದಕ್ಕೆ ಅನುಗುಣವಾಗಿರುವುವು.

೫೪-೫೫. ಚಂದ್ರನು ಶುಕ್ಲಪಕ್ಷದಲ್ಲಿ ಬೆಳೆಯುತ್ತ ಬೆಳೆಯುತ್ತ ಹದಿನೈದನೆಯ ದಿನದಲ್ಲಿ ಪೂರ್ಣನಾಗುವನು. ದಿವಸಕ್ಕೆ ಒಂದೊಂದರಂತೆ ಅವನಲ್ಲಿ ಹದಿನೈದು

ತಸ್ಮಾತ್ಪಂಚದಶೇ ಸೋಮೇ ಕಲಾ ವೈ ನಾಸ್ತಿ ಷೋಡಶೀ ।
ತಸ್ಮಾತ್ಸೋಮಸ್ಯ ವಿಪ್ರೋಕ್ತಃ ಪಂಚದಶ್ಯಾಂ ಮಯಾ ಕ್ಷಯಃ ॥೫೫॥

ಇತ್ಯೇತೇ ಪಿತರೋ ದೇವಾಃ ಸೋಮಪಾಃ ಸೋಮವರ್ಧನಾಃ ।
ಆರ್ತವಾ ಋತವೋಽಥಾಬ್ದಾ ದೇವಾಸ್ತಾನ್ ಭಾವಯಂತಿ ಹಿ ॥೫೬॥

ಅತಃ ಪರಂ ಪ್ರವಕ್ಷ್ಯಾಮಿ ಪಿತೄಞ್ಶ್ರಾದ್ಧಭುಜಶ್ಚ ಯೇ ।
ತೇಷಾಂ ಗತಿಂ ಚ ಸತ್ವಂ ಚ ಪ್ರಾಪ್ತಿಂ ಶ್ರಾದ್ಧಸ್ಯ ಚೈವ ಹಿ ॥೫೭॥

ನ ಮೃತಾನಾಂ ಗತಿಃ ಶಕ್ಯಾ ಜ್ಞಾತುಂ ವಾ ಪುನರಾಗತಿಃ ।
ತಪಸಾ ಹಿ ಪ್ರಸಿದ್ಧೇನ ಕಿಂ ಪುನರ್ಮಾಂಸಚಕ್ಷುಷಾ ॥೫೮॥

---

ಕಲೆಗಳು ತುಂಬುವುವು. ಈ ಹದಿನೈದು ಕಲೆಗಳು ವೃದ್ಧಿಕ್ಷಯಗಳಿಗೆ ಗುರಿಯಾಗ ತಕ್ಕುವೆಂದೂ, ಹದಿನಾರನೆಯದಲ್ಲವೆಂದೂ ತಿಳಿಯಬೇಕು. ಆದುದರಿಂದಲೇ ಚಂದ್ರನು ಹದಿನೈದನೆಯ ದಿನದಲ್ಲಿ ಎಂದರೆ ಅಮಾವಾಸ್ಯೆಯಲ್ಲಿ ಕ್ಷೀಣನಾಗುವನೆಂದು ನಾನು ಹೇಳಿದೆನು.

೫೬. ಪಿತೃದೇವತೆಗಳು ಹೀಗೆ ಚಂದ್ರನ ಕಲೆಗಳನ್ನು ಪಾನಮಾಡಿ ಆಪ್ಯಾಯನ ಹೊಂದುತ್ತಾರೆ. ಆರ್ತವರು, ಋತುಗಳು ಮತ್ತು ಪಂಚಾಬ್ದರೆಂಬ ಸಂಜ್ಞೆಯಿಂದ ಪಿತೃಗಳು ಪ್ರಸಿದ್ಧರಾಗಿರುವರು. ಅವರೆಲ್ಲರನ್ನೂ ದೇವತೆಗಳು ಗೌರವಿಸುತ್ತಾರೆ.

೫೭. ಇನ್ನು ಮುಂದೆ ಶ್ರಾದ್ಧಭೋಕ್ತೃಗಳೆನಿಸಿರುವ ಪಿತೃಗಳನ್ನೂ, ಅವರ ಗತಿಯನ್ನೂ, ಸತ್ವವನ್ನೂ, ಶ್ರಾದ್ಧದ ಫಲವನ್ನೂ ವಿವರಿಸಿ ಹೇಳುವೆನು.

೫೮. ಮೃತರಾದವರು ಯಾವ ಗತಿಗೆ ಹೋಗುತ್ತಾರೆ? ಅವರು ಮತ್ತೆ ಎಲ್ಲಿ ಹೇಗೆ ಹುಟ್ಟುತ್ತಾರೆ? ಎಂಬುದನ್ನು ಅತಿಶಯವಾದ ತಪಸ್ಸಿನಿಂದಲೂ ಸಹ ತಿಳಿಯುವುದಕ್ಕೆ ಸಾಧ್ಯವಿಲ್ಲ. ಹೀಗಿರುವಾಗ ಸಾಮಾನ್ಯಮನುಷ್ಯನ ಅರಿವಿಗೆ ಅದು ಬಂದೀತೆ?

ಅತ್ರ ದೇವಾನ್ ಪಿತ್ರ್ಯಾಂಶ್ಚೈತೇ ಪಿತರೋ ಲೌಕಿಕಾಃ ಸ್ಮೃತಾಃ ।
ತೇಷಾಂ ತೇ ಧರ್ಮಸಾಮರ್ಥ್ಯಾತ್ಸ್ಮೃತಾ ಸಾಯುಜ್ಯಸಾದ್ವಿಜೈಃ ॥೫೯॥

ಯದಿ ವಾಶ್ರಮಧರ್ಮೇಣ ಪ್ರಜ್ಞಾನೇಷು ವ್ಯವಸ್ಥಿತಾನ್ ।
ಅನ್ಯೇ ಚಾತ್ರ ಪ್ರಸೀದಂತಿ ಶ್ರದ್ಧಾಯುಕ್ತೇಷು ಕರ್ಮಸು ॥೬೦॥

ಬ್ರಹ್ಮಚರ್ಯೇಣ ತಪಸಾ ಯಜ್ಞೇನ ಪ್ರಜಯಾ ಭುವಿ ।
ಶ್ರಾದ್ಧೇನ ವಿದ್ಯಯಾ ಚೈವ ಚಾನ್ನದಾನೇನ ಸಪ್ತಧಾ ॥೬೧॥

ಕರ್ಮಸ್ವೇತೇಷು ಯೇ ಸಕ್ತಾ ವರ್ತಂತ್ಯಾದೇಹಪಾತನಾತ್ ।
ದೇವೈಸ್ತೇ ಪಿತೃಭಿಃ ಸಾರ್ಧಮೂಷ್ಮಪೈಃ ಸೋಮಪೈಸ್ತಥಾ ।
ಸ್ವರ್ಗತಾ ದಿವಿ ಮೋದಂತೇ ಪಿತೃಮಂತ ಉಪಾಸತೇ ॥೬೨॥

---

೫೯. ಲೌಕಿಕರಾದ ಪಿತೃಗಳು ದೇವತೆಗಳನ್ನೂ, ಪಿತೃಗಳನ್ನೂ ಆಶ್ರಯಿಸಿ ಕೊಂಡಿರುವರು. ಅವರು ತಮ್ಮ ಧರ್ಮಾನುಷ್ಠಾನದ ಸಾಮರ್ಥ್ಯದಿಂದ ಸದ್ಗತಿಯನ್ನು ಪಡೆಯುವರೆಂದು ಜ್ಞಾನಿಗಳು ಹೇಳುತ್ತಾರೆ.

೬೦. ಅಲ್ಲದೆ ಆಶ್ರಮಧರ್ಮಗಳನ್ನು ಪಾಲಿಸುತ್ತ, ಶಾಸ್ತ್ರಗಳಲ್ಲಿ ವಿಧಿಸಿದ ನಿಯಮಗಳನ್ನು ನೆರವೇರಿಸುತ್ತ ಕರ್ಮಗಳಲ್ಲಿ ಯಾರು ಶ್ರದ್ಧೆಯನ್ನು ತೋರಿಸುತ್ತಿರುವರೋ ಅಂತಹವರ ವಿಷಯದಲ್ಲಿ ಆ ಪಿತೃದೇವತೆಗಳು ಪ್ರಸನ್ನರಾಗುತ್ತಾರೆ.

೬೨. ಬ್ರಹ್ಮಚರ್ಯ, ತಪಸ್ಸು, ಯಜ್ಞ, ಸಂತಾನಲಾಭ, ಶ್ರಾದ್ಧ, ವಿದ್ಯಾರ್ಜನೆ, ಅನ್ನದಾನ ಈ ಏಳು ವಿಧಾವಾದ ಕರ್ಮಗಳಲ್ಲಿ ದೇಹವಿರುವವರೆಗೂ ಯಾರು ನಿರತರಾಗಿರುವರೋ ಅವರು ದೇವತೆಗಳೊಡನೆಯೂ ಊಷ್ಮಪರು, ಸೋಮಪರು ಎಂದು ಪ್ರಖ್ಯಾತರಾದ ಪಿತೃಗಳೊಡನೆಯೂ ಕೂಡಿ ಸ್ವರ್ಗಲೋಕದಲ್ಲಿ ಸಂತೋಷಪಡುವರು. ಪಿತೃದೇವತೆಗಳ ಅನುಗ್ರಹಸಂಪತ್ತಿಗೆ ಪಾತ್ರರಾಗಿ ಅವರನ್ನು ಉಪಾಸನೆ ಮಾಡುವರು. ಪುತ್ರಪೌತ್ರಾದಿ ಸಂತತಿವರ್ಗದಿಂದ ಕೂಡಿ ಅಕ್ಕರೆಯಿಂದ ಶ್ರಾದ್ಧವನ್ನು ಮಾಡಿದವರು ಈ ಬಗೆಯ ಉತ್ತಮವಾದ ಗತಿಯನ್ನು ಪಡೆಯುವರೆಂದು ಪ್ರಸಿದ್ಧಿಯಿದೆ.

ಪ್ರಜಾವತಾಂ ಪ್ರಸಿದ್ಧ್ಯೈಷಾ ಉಕ್ತಾ ಶ್ರಾದ್ಧಕೃತಾಂ ಚ ವೈ ।
ತೇಷಾಂ ನಿವಾಪೇ ದತ್ತಂ ಹಿ ತತ್ಕುಲೀನೈಸ್ತು ಬಾಂಧವೈಃ ॥೬೩॥

ಮಾಸಶ್ರಾದ್ಧಂ ಹಿ ಭುಂಜಾನಾಸ್ತೇಽಪ್ಯೇತೇ ಸೋಮಲೌಕಿಕಾಃ ।
ಏತೇ ಮನುಷ್ಯಾಃ ಪಿತರೋ ಮಾಸಶ್ರಾದ್ಧಭುಜಸ್ತು ವೈ ॥೬೪॥

ತೇಭ್ಯೋಽಪರೇ ತು ಯೇ ತ್ವನ್ಯೇ ಸಂಕೀರ್ಣಾಃ ಕರ್ಮಯೋಗಿಷು ।
ಭ್ರಷ್ಟಾಶ್ಚಾಶ್ರಮಧರ್ಮೇಷು ಸ್ವಧಾಸ್ವಾಹಾವಿವರ್ಜಿತಾಃ ॥೬೫॥

ಭಿನ್ನೇ ದೇಹೇ ದುರಾಪನ್ನಾಃ ಪ್ರೇತಭೂತಾ ಯಮಕ್ಷಯೇ ।
ಸ್ವಕರ್ಮಾಣ್ಯನುಶೋಚಂತೋ ಯಾತನಾಸ್ಥಾನಮಾಗತಾಃ ॥೬೬॥

ದೀರ್ಘಾಶ್ಚೈವಾತಿಶುಷ್ಕಾಶ್ಚ ಶ್ಮಶ್ರುಲಾಶ್ಚ ವಿವಾಸಸಃ ।
ಕ್ಷುತ್ಪಿಪಾಸಾಭಿಭೂತಾಸ್ತೇ ವಿದ್ರವಂತಿ ತ್ವಿತಸ್ತತಃ ॥೬೭॥

---

೬೩-೬೪. ತಮ್ಮ ವಂಶದಲ್ಲಿ ಹುಟ್ಟಿದವರೂ, ಬಂಧುಗಳೂ ಕೊಡುವ ತಿಲ ತರ್ಪಣವನ್ನೂ ಮಾಸಶ್ರಾದ್ಧದ ಹವಿಸ್ಸನ್ನೂ ಭುಂಜಿಸುತ್ತ ಈ ಪಿತೃಗಳು ಚಂದ್ರ ಲೋಕದಲ್ಲಿ ಇರುವರು. ಮಾಸಶ್ರಾದ್ಧಭೋಜಿಗಳಾದ ಇವರನ್ನು ಮನುಷ್ಯಪಿತೃ ಗಳೆಂದು ಕರೆಯುತ್ತಾರೆ.

೬೫. ಇವರಲ್ಲದೆ ಆಶ್ರಮಧರ್ಮಭ್ರಷ್ಟರೂ, ಹವ್ಯಕವ್ಯಕರ್ಮಭಾಗರಹಿತರೂ ಆಗಿ ಮೃತಪಟ್ಟು ಕರ್ಮವಶದಿಂದ ಬೇರೆ ಬೇರೆ ಜನ್ಮಗಳಲ್ಲಿ ತೊಳಲುತ್ತಿರುವ ಲೌಕಿಕಪಿತೃಗಳೂ (ಸಾಮಾನ್ಯ ಮನುಷ್ಯರು) ಎಷ್ಟೋ ಜನರಿದ್ದಾರೆ.

೬೬. ಅವರು ದೇಹಾವಸಾನದಲ್ಲಿ ಕಷ್ಟಕ್ಕೆ ಸಿಕ್ಕಿ, ಪ್ರೇತರೂಪವನ್ನು ತಾಳಿ, ಯಮಲೋಕದಲ್ಲಿ ಯಾತನೆಗಳನ್ನು ಅನುಭವಿಸುತ್ತ ತಮ್ಮ ಕರ್ಮಗಳಿಗಾಗಿ ಪಶ್ಚಾ ತ್ತಾಪ ಪಡುವರು.

೬೭. ಅವರು ಎತ್ತರವಾಗಿ, ಬಹು ಕೃಶರಾಗಿ ಬತ್ತಿಹೋಗಿರುವರು. ಅವರ ಮುಖದ ತುಂಬ ಗಡ್ಡಮೀಸೆಗಳು ಬೆಳೆದಿರುವುವು. ಮೈಗೆ ಬಟ್ಟೆಯಿಲ್ಲದೆ ಅವರು ಹಸಿವು ಬಾಯಾರಿಕೆಗಳಿಂದ ಪೀಡಿತರಾಗಿ ಅತ್ತಿತ್ತ ಓಡಾಡುವರು.

ಸರಿತ್ಸರಸ್ತಡಾಗಾನಿ ಪುಷ್ಕರಿಣ್ಯಶ್ಚ ಸರ್ವಶಃ ।
ಪರಾನ್ನಾನ್ಯಭಿಕಾಂಕ್ಷಂತಃ ಕಾಲ್ಯಮಾನಾ ಇತಸ್ತತಃ ॥೬೮॥

ಸ್ಥಾನೇಷು ಪಾತ್ಯಮಾನಾ ಯೇ ಯಾತನಾಸ್ಥೇಷು ತೇಷು ವೈ ।
ಶಾಲ್ಮಲ್ಯಾಂ ವೈತರಣ್ಯಾಂ ಚ ಕುಂಭೀಪಾಕೇಽರ್ಧವಾಲುಕೇ ॥೬೯॥

ಅಸಿಪತ್ರವನೇ ಚೈವ ಪಾತ್ಯಮಾನಾಃ ಸ್ವಕರ್ಮಭಿಃ ।
ತತ್ರಸ್ಥಾನಾಂ ತು ತೇಷಾಂ ವೈ ದುಃಖಿತಾನಾಮಶಾಯಿನಾಂ ॥೭೦॥

ತೇಷಾಂ ಲೋಕಾಂತರಸ್ಥಾನಾಂ ಬಾಂಧವೈರ್ನಾಮಗೋತ್ರತಃ ।
ಭೂಮಾವಸವ್ಯಂ ದರ್ಭೇಷು ದತ್ತಾಃ ಪಿಂಡಾಸ್ತ್ರಯಸ್ತು ವೈ ।
ಪ್ರಾಪ್ತಾಂಸ್ತು ತರ್ಪಯಂತ್ಯೇವ ಪ್ರೇತಸ್ಥಾನೇಷ್ವಧಿಷ್ಠಿತಾನ್ ॥೭೧॥

ಅಪ್ರಾಪ್ತಾ ಯಾತನಾಸ್ಥಾನಂ ಪ್ರಭ್ರಷ್ಟಾ ಯೇ ಚ ಪಂಚಧಾ ।
ಪಶ್ಚಾದ್ಯೇ ಸ್ಥಾವರಾಂತೇ ವೈ ಭೂತಾನೀಕೇ ಸ್ವಕರ್ಮಭಿಃ ॥೭೨॥

---

೬೮. ಅವರು ಹೊಳೆ, ಸರೋವರ, ಕೊಳ, ಪುಷ್ಕರಿಣಿ ಇವುಗಳ ಬಳಿಯಲ್ಲಿ ಅಲೆಯುವರು. ಪರಾನ್ನವನ್ನು ಬಯಸುತ್ತ ಇಲ್ಲಿಂದಲ್ಲಿಗೆ, ಅಲ್ಲಿಂದಿಲ್ಲಿಗೆ ಓಡಾಡುತ್ತ ಕಾಲವನ್ನು ಕಳೆಯುವರು.

೬೯. ವಿಧವಿಧವಾದ ಯಾತನಾಸ್ಥಾನಗಳಲ್ಲಿ ಅವರು ಬಿದ್ದು ಒದ್ದಾಡುತ್ತಾರೆ. ಶಾಲ್ಮಲಿ, ವೈತರಣಿ, ಕುಂಭೀಪಾಕ, ಅರ್ಧವಾಲುಕ, ಅಸಿಪತ್ರವನ ಮುಂತಾದ ಘೋರ ನರಕಗಳಲ್ಲಿ ತಮ್ಮ ಕರ್ಮಾನುಸಾರವಾಗಿ ತೊಳಲುವರು.

೭೦-೭೧. ಅವರು ಆ ನರಕಗಳಲ್ಲಿ ಬಿದ್ದು ನಿದ್ರೆ ಕೂಡ ಇಲ್ಲದೆ ದುಃಖಿಸುತ್ತಿರುವರು. ಹೀಗೆ ಅವರು ಲೋಕಾಂತರದಲ್ಲಿ ಕಷ್ಟಪಡುತ್ತಿರುವಾಗ, ಅವರ ಬಂಧುಗಳು ಅವರನ್ನು ಉದ್ದೇಶಿಸಿ, ಅವರ ನಾಮಗೋತ್ರಗಳನ್ನು ಉಚ್ಚರಿಸಿ ಭೂಮಿಯಲ್ಲಿ ದರ್ಭೆಗಳ ಮೇಲೆ ಅಪ್ರದಕ್ಷಿಣವಾಗಿ ಮೂರು ಪಿಂಡಗಳನ್ನು ಇಟ್ಟರೆ ಅವು ನರಕಾದಿ ಸ್ಥಾನಗಳಲ್ಲಿ ಇರತಕ್ಕ ಅವರಿಗೆ ತೃಪ್ತಿಯನ್ನು ಕೊಟ್ಟೇ ಕೊಡುತ್ತವೆ.

೭೨-೭೩. ಮೃತರಾದವರು ನರಕದಲ್ಲೇ ಇರದೆ ಅಲ್ಲಿಂದ ಇಳಿದು ತಮ್ಮ ಕರ್ಮವಶದಿಂದ ದೇವ, ಅಸುರ, ಮನುಷ್ಯ, ತಿರ್ಯಕ್ ಮತ್ತು ಸ್ಥಾವರಗಳೆಂಬ ಐದು

ನಾನಾರೂಪಾಸು ಜಾತೀನಾಂ ತಿರ್ಯಗ್ಯೋನಿಷು ಮೂರ್ತಿಷು ।
ಯದಾಹಾರಾ ಭವಂತ್ಯೇತೇ ತಾಸು ತಾಸ್ವಿಹ ಯೋನಿಷು ॥೭೩॥

ತಸ್ಮಿಂಸ್ತಸ್ಮಿಂಸ್ತದಾಹಾರೇ ಶ್ರಾದ್ಧಂ ದತ್ತಂ ತು ಪ್ರೀಣಯೇತ್ ।
ಕಾಲೇ ನ್ಯಾಯಾಗತಂ ಪಾತ್ರೇ ವಿಧಿನಾ ಪ್ರತಿಪಾದಿತಂ ।
ಪ್ರಾಪ್ನುವಂತ್ಯನ್ನಮಾದತ್ತಂ ಯತ್ರ ಯತ್ರಾವತಿಷ್ಠತಿ ॥೭೪॥

ಯಥಾ ಗೋಷು ಪ್ರತಿಷ್ಠಾಸು ವತ್ಸೋ ವಿಂದತಿ ಮಾತರಂ ।
ತಥಾ ಶ್ರಾದ್ಧೇಷು ದೃಷ್ಟಾಂತೋ ಮಂತ್ರಃ ಪ್ರಾಪಯತೇ ತು ತಂ ॥೭೫॥

ಏವಂ ಹ್ಯವಿಕಲಂ ಶ್ರಾದ್ಧಂ ಶ್ರದ್ಧಾದತ್ತಂ ಮನುರ್ಬ್ರವೀತ್ ।
ಸನತ್ಕುಮಾರಃ ಪ್ರೋವಾಚ ಪಶ್ಯನ್ ದಿವ್ಯೇನ ಚಕ್ಷುಷಾ ॥೭೬॥

---

ಬಗೆಯ ಜನ್ಮಗಳಲ್ಲಿ ಯಾವ ರೂಪದಿಂದ ಹುಟ್ಟಿದ್ದರೂ, ಅವರನ್ನು ಉದ್ದೇಶಿಸಿ ಮಾಡಿದ ಶ್ರಾದ್ಧವು ಅವರವರಿಗೆ ಅನುಗುಣವಾದ ಆಹಾರರೂಪವಾಗಿ ಪರಿಣಾಮ ಹೊಂದಿ ಅವರಿಗೆ ತೃಪ್ತಿಯನ್ನು ಕೊಡುತ್ತದೆ.

೭೪. ನ್ಯಾಯಮಾರ್ಗದಿಂದ ಸಂಪಾದಿಸಿದ ದ್ರವ್ಯವನ್ನು ಶಾಸ್ತ್ರೋಕ್ತವಾದ ಕಾಲದಲ್ಲಿ ಶ್ರಾದ್ಧದ ವಿಧಿಯನ್ನು ಅನುಸರಿಸಿ ಪಾತ್ರದಲ್ಲಿ ವಿನಿಯೋಗಿಸಬೇಕು. ಹಾಗೆ ಕೊಟ್ಟ ಅನ್ನಾದಿಪದಾರ್ಥಗಳು ಶ್ರಾದ್ಧಕರ್ತನ ಪಿತೃಗಳು ಯಾವ ಲೋಕ ದಲ್ಲಿದ್ದರೂ ಅವರನ್ನು ಸೇರಿ ತೃಪ್ತಿಗೊಳಿಸುತ್ತವೆ.

೭೫. ನೂರಾರು ಹಸುಗಳು ಗುಂಪುಕೂಡಿದ್ದರೂ ಕರುವು ತಪ್ಪದೆ ತನ್ನ ತಾಯಿಯ ಬಳಿಗೇ ಹೋಗುತ್ತದೆ. ಹಾಗೆಯೇ ಶ್ರಾದ್ಧದಲ್ಲಿ ಕೊಟ್ಟ ಅನ್ನಾದಿ ವಸ್ತುಗಳು ಉಳಿದವರಿಗೆ ಹೋಗದೆ ಉದ್ದಿಷ್ಟರಾದ ಪಿತೃಗಳನ್ನೇ ಸೇರುತ್ತದೆ. ಆ ದ್ರವ್ಯಗಳನ್ನು ಅವರಿಗೆ ತಲಪಿಸುವ ಶಕ್ತಿಯು ಮಂತ್ರಗಳಿಗಿದೆ.

೭೬-೭೭. ಶ್ರದ್ಧೆಯಿಂದ ನಡೆಸತಕ್ಕ ಕರ್ಮವಾದುದರಿಂದ ಶ್ರಾದ್ಧವೆಂಬ ನಿರ್ದುಷ್ಟವಾದ ಹೆಸರು ಬಂದಿತೆಂದು ಮನುವು ಹೇಳಿದನು. ಪಿತೃಗಳ ಗತಾಗತಿ ಯನ್ನೂ, ಶ್ರಾದ್ಧಾನ್ನವು ಅವರಿಗೆ ಹೋಗಿ ಸೇರುವ ವಿಧಾನವನ್ನೂ ದಿವ್ಯಜ್ಞಾನ

ಗತಾಗತಜ್ಞಾಃ ಪ್ರೇತಾನಾಂ ಪ್ರಾಪ್ತಿಂ ಶ್ರಾದ್ಧಸ್ಯ ಚೈವ ಹಿ ।
ಕೃಷ್ಣಪಕ್ಷಸ್ತ್ವಹಸ್ತೇಷಾಂ ಶುಕ್ಲಃ ಸ್ವಪ್ನಾಯ ಶರ್ವರೀ ॥೭೭॥

ಇತ್ಯೇತೇ ಪಿತರೋ ದೇವಾ ದೇವಾಶ್ಚ ಪಿತರಶ್ಚ ವೈ ।
ಅನ್ಯೋನ್ಯಪಿತರೋ ಹ್ಯೇತೇ ದೇವಾಶ್ಚ ಪಿತರೋ ದಿವಿ ॥೭೮॥

ಏತೇ ತು ಪಿತರೋ ದೇವಾ ಮನುಷ್ಯಾಃ ಪಿತರಶ್ಚ ಯೇ ।
ಪಿತಾ ಪಿತಾಮಹಶ್ಚೈವ ತಥೈವ ಪ್ರಪಿತಾಮಹಾಃ ॥೭೯॥

ಇತ್ಯೇಷ ವಿಷಯಃ ಪ್ರೋಕ್ತಃ ಪಿತೄಣಾಂ ಸೋಮಪಾಯಿನಾಂ ।
ಏತತ್ಪಿತೃಮಹತ್ವಂ ಹಿ ಪುರಾಣೇ ನಿಶ್ಚಯಂ ಗತಂ ॥೮೦॥

ಇತ್ಯೇಷ ಸೋಮಸೂರ್ಯಾಭ್ಯಾಮೈಲಸ್ಯ ಚ ಸಮಾಗಮಃ ।
ಅವಾಪ್ತಿಃ ಶ್ರದ್ಧಯಾ ಚೈವ ಪಿತೄಣಾಂ ಚೈವ ತರ್ಪಣಂ ॥೮೧॥

---

ದಿಂದ ಅರಿತ ಸನತ್ಕುಮಾರನು ಹೀಗೆ ಹೇಳಿರುವನು. ಪಿತೃಗಳಿಗೆ ಕೃಷ್ಣಪಕ್ಷವು ಹಗಲು; ಶುಕ್ಲಪಕ್ಷವು ರಾತ್ರಿ. ಇದೇ ಅವರಿಗೆ ನಿದ್ರೆಯ ಕಾಲ.

೭೮. ಹೀಗೆ ಋತುಗಳು, ಅರ್ಧಮಾಸಗಳು, ಪಂಚಾಬ್ದರು ಎಂಬ ರೂಪದಿಂದಿರುವ ಪಿತೃಗಳು ದೇವತಾಸ್ವರೂಪರಾಗಿರುವರು. ದೇವತೆಗಳೂ ಕೂಡ ಪಿತೃಸ್ವರೂಪದಿಂದಿರುವರು. ಅಲ್ಲದೆ ಅವರು ಪರಸ್ಪರ ಪಿತೃಸ್ವರೂಪರೂ ಆಗಿರುವರು.

೭೯. ಮೇಲೆ ಹೇಳಿದವರು ದೇವಪಿತೃಗಳು. ಇವರಲ್ಲದೆ ಮನುಷ್ಯಪಿತೃಗಳೂ ಉಂಟು. ಇವರನ್ನೇ ಪಿತೃ, ಪಿತಾಮಹ ಮತ್ತು ಪ್ರಪಿತಾಮಹರೆಂದು ಹೇಳುವರು.

೮೦. ಚಂದ್ರನ ಸುಧಾರಸವನ್ನು ಪಾನಮಾಡುವ ಪಿತೃಗಳ ಈ ಮಾಹಾತ್ಮ್ಯವನ್ನು ಪುರಾಣಗಳಲ್ಲಿ ನಿಷ್ಕರ್ಷಿಸಿ ಹೇಳಿದೆ.

೮೧-೮೩. ಚಂದ್ರಸೂರ್ಯರೊಡನೆ ಪುರೂರವಸ್ಸಿನ ಸಮಾಗಮ, ಶ್ರಾದ್ಧದಲ್ಲಿ ನೀಡಿದ ಅನ್ನಾದಿವಸ್ತುಗಳು ಪಿತೃಗಳಿಗೆ ಸೇರುವ ಬಗೆ, ಶ್ರದ್ಧೆಯಿಂದ ಪಿತೃಗಳಿಗೆ

**ಪರ್ವಣಾಂ ಚೈವ ಯಃ ಕಾಲೋ ಯಾತನಾಸ್ಥಾನಮೇವ ಚ ।**
**ಸಮಾಸಾತ್ಕೀರ್ತಿತಸ್ತುಭ್ಯಂ ಸರ್ಗ ಏಷ ಸನಾತನಃ ॥೮೨॥**

**ವೈದುಷ್ಯಾಯ ನ ತತ್ಸರ್ವಂ ಕಥಿತಂ ತ್ವೇಕದೇಶಿಕಂ ।**
**ಅಶಕ್ಯಂ ಪರಿಸಂಖ್ಯಾತುಂ ಶ್ರದ್ಧೇಯಂ ಭೂತಿಮಿಚ್ಛತಾ ॥೮೩॥**

**ಸ್ವಾಯಂಭುವಸ್ಯ ದೇವಸ್ಯ ಏಷ ಸರ್ಗೋ ಮಯೇರಿತಃ ।**
**ವಿಸ್ತರೇಣಾನುಪೂರ್ವ್ಯಾಚ್ಚ ಭೂಯಃ ಕಿಂ ಕಥಯಾಮಿ ವಃ ॥೮೪॥**

**ಇತಿ ಶ್ರೀಮತ್ಸ್ಯೇ ಮಹಾಪುರಾಣೇ ಮನ್ವಂತರಾನುಕೀರ್ತನೇ**
**ಶ್ರಾದ್ಧಾನುಕೀರ್ತನಂ ನಾಮೈಕಚತ್ವಾರಿಂಶದಧಿಕಶತತಮೋಽಧ್ಯಾಯಃ**

---

ತೃಪ್ತಿಯನ್ನು ಉಂಟುಮಾಡುವ ವಿಧಾನ, ಪರ್ವಗಳ ಕಾಲ, ವಿಧವಿಧವಾದ ನರಕಗಳು ಇವೆಲ್ಲವನ್ನೂ ನಿನಗೆ ಸಂಗ್ರಹವಾಗಿ ಹೇಳಿದ್ದೇನೆ. ಈ ಪಿತೃಸೃಷ್ಟಿಯು ಸನಾತನವಾದದು.

೮೩. ಪಾಂಡಿತ್ಯಬಲದಿಂದ ಪಿತೃಗಳ ವಿಷಯವೆಲ್ಲವನ್ನೂ ಹೇಳಲು ಸಾಧ್ಯವಿಲ್ಲ. ಎಲ್ಲೋ ಕೆಲವು ವಿಚಾರಗಳನ್ನು ಮಾತ್ರ ತಿಳಿಸಿದ್ದೇನೆ. ಅದಿಷ್ಟೇ ಸರಿಯೆಂದು ನಿರ್ಣಯಿಸುವುದೂ ಅಶಕ್ಯ. ಶ್ರೇಯಸ್ಸನ್ನು ಕೋರುವವನು ಸಂದೇಹಪಡದೆ ನಂಬಬೇಕು.

೮೪. ಸ್ವಾಯಂಭುವ ಮನುಚಕ್ರವರ್ತಿಯ ಸೃಷ್ಟಿವಿವರವನ್ನು ನಿಮಗೆ ಕ್ರಮವಾಗಿಯೂ ವಿಸ್ತಾರವಾಗಿಯೂ ತಿಳಿಸಿದೆನು. ಇನ್ನು ಮುಂದೆ ಏನು ಹೇಳಲಿ?

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಪಿತೃಗಳಿಗೆ ತೃಪ್ತಿಯಾಗುವ ವಿಧಾನವನ್ನು ವರ್ಣಿಸಿದೆ.

ಪುರೂರವನು ಪ್ರತಿಯೊಂದು ತಿಂಗಳಲ್ಲಿಯೂ ತನ್ನ ಪಿತಾಮಹನಾದ ಚಂದ್ರನಲ್ಲಿಗೆ ಹೋಗಿ ಪಿತೃಗಳಿಗೆ ಸೇವೆಯನ್ನು ಮಾಡುವನು. ಚಂದ್ರನ ಕಲೆಗಳು ಶುಕ್ಲಪಕ್ಷದಲ್ಲಿ ದಿನದಿನಕ್ಕೂ ಬೆಳೆಯುವುವು. ಹುಣ್ಣಿಮೆಯ ದಿನ ಅವನು ಪೂರ್ಣನಾಗುವನು. ಪಿತೃದೇವತೆಗಳು ಆ ಕಲೆಗಳಲ್ಲಿರುವ ಅಮೃತವನ್ನು ಪಾನಮಾಡುವರು. ಆದುದರಿಂದ ಚಂದ್ರನು ಬರಬರುತ್ತ ಕೃಶನಾಗಿ ಅಮಾವಾಸ್ಯೆಯ ದಿನ ಸಂಪೂರ್ಣವಾಗಿ ಕ್ಷಯಿಸುವನು. ಸೂರ್ಯನು ಸುಷುಮ್ನಾನಾಡಿಯ ಮೂಲಕ ಮತ್ತೆ ಅವನನ್ನು ಅಭಿವೃದ್ಧಿಗೊಳಿಸುವನು.

ಅಮಾವಾಸ್ಯೆಯಲ್ಲಿ ಕುಹೂ, ಸಿನೀವಾಲೀ ಎಂಬ ಎರಡು ಪ್ರಭೇದಗಳಿವೆ. ಚಂದ್ರದರ್ಶನವಾದರೆ ಸಿನೀವಾಲಿಯೆಂದೂ, ಆಗದಿದ್ದರೆ ಕುಹುವೆಂದೂ ಹೆಸರು. ಹೀಗೆಯೇ ಹುಣ್ಣಿಮೆಯಲ್ಲಿ ಸಹ ಅನುಮತಿ, ರಾಕಾ ಎಂದು ಎರಡು ವಿಧಗಳುಂಟು.

ಪರ್ವಕಾಲಗಳಲ್ಲಿ ಪಿತೃಗಳನ್ನು ಉದ್ದೇಶಿಸಿ ಶ್ರಾದ್ಧಮಾಡಿದರೆ ಅವರು ತೃಪ್ತರಾಗುವರು. ಪಿತೃಗಳಲ್ಲಿ ಅಗ್ನಿಷ್ವಾತ್ತರು, ಬರ್ಹಿಷದರು, ಕಾವ್ಯರು ಎಂಬವರು ಮುಖ್ಯರು. ಇವರಲ್ಲದೆ ಮನುಷ್ಯ ಪಿತೃಗಳೆಂಬ ಪಂಗಡದವರೂ ಇದ್ದಾರೆ. ಇವರು ಮಾಸಶ್ರಾದ್ಧಭೋಜಿಗಳು. ಮೃತರಾದ ಲೌಕಿಕಪಿತೃಗಳಲ್ಲಿ ಹಲವರು ಸದ್ಗತಿಯನ್ನು ಕಾಣದೆ ಅಲೆದಾಡುತ್ತಿರುವರು. ಅವರ ಪುತ್ರಪೌತ್ರಾದಿಗಳು ಅವರನ್ನು ಉದ್ದೇಶಿಸಿ ಆಯಾ ಕಾಲಗಳಲ್ಲಿ ಮಾಡುವ ಶ್ರಾದ್ಧದಿಂದ ಅವರು ತೃಪ್ತರಾಗುತ್ತಾರೆ.

ಶ್ರೀಮತ್ಸ್ಯಮಹಾಪುರಾಣದಲ್ಲಿ ಮನ್ವಂತರಾನುಕೀರ್ತನದೊಳಗೆ
ಶ್ರಾದ್ಧಾನುಕೀರ್ತನವೆಂಬ ನೂರನಲವತ್ತೊಂದನೆಯ ಅಧ್ಯಾಯವು ಮುಗಿದುದು.



## ಅಥ ದ್ವಿಚತ್ವಾರಿಂಶದಧಿಕಶತತಮೋಽಧ್ಯಾಯಃ

॥ ಋಷಯ ಊಚುಃ ॥

ಚತುರ್ಯುಗಾನಿ ಯಾನಿ ಸ್ಯುಃ ಪೂರ್ವೇ ಸ್ವಾಯಂಭುವೇಽನ್ತರೇ ।
ಏಷಾಂ ನಿಸರ್ಗಂ ಸಂಖ್ಯಾಂ ಚ ಶ್ರೋತುಮಿಚ್ಛಾಮ ವಿಸ್ತರಾತ್ ॥ ೧ ॥

॥ ಸೂತ ಉವಾಚ ॥

ಪೃಥಿವೀದ್ಯುಪ್ರಸಂಗೇನ ಮಯಾ ತು ಪ್ರಾಗುದಾಹೃತಂ ।
ಏತಚ್ಚತುರ್ಯುಗಂ ತ್ವೇವಂ ತದ್ವಕ್ಷ್ಯಾಮಿ ನಿಬೋಧತ ।
ತತ್ಪ್ರಮಾಣಂ ಪ್ರಸಂಖ್ಯಾಯ ವಿಸ್ತರಾಚ್ಚೈವ ಕೃತ್ಸ್ನಶಃ ॥ ೨ ॥
ಲೌಕಿಕೇನ ಪ್ರಮಾಣೇನ ನಿಷ್ಪಾದ್ಯಾಬ್ದಂ ತು ಮಾನುಷಂ ।
ತೇನಾಪೀಹ ಪ್ರಸಂಖ್ಯಾಯ ವಕ್ಷ್ಯಾಮಿ ತು ಚತುರ್ಯುಗಂ ॥ ೩ ॥
ಕಾಷ್ಠಾ ನಿಮೇಷಾ ದಶ ಪಂಚ ಚೈವ
ತ್ರಿಂಶಚ್ಚ ಕಾಷ್ಠಾಂ ಗಣಯೇತ್ಕಲಾಂ ತು ।

---

೧. ಋಷಿಗಳು ಹೇಳಿದರು—ಹಿಂದಿನ ಸ್ವಾಯಂಭುವಮನ್ವಂತರದಲ್ಲಿ ಚತುರ್ಯುಗಗಳು ಕಳೆದುವಷ್ಟೆ. ಅವುಗಳ ಲಕ್ಷಣವನ್ನೂ ಪರಿಮಾಣವನ್ನೂ ವಿಸ್ತಾರವಾಗಿ ಕೇಳಬೇಕೆಂದಿದ್ದೇವೆ.

೨. ಸೂತಪೌರಾಣಿಕನು ಹೇಳಿದನು.—ಭೂಲೋಕ ಸ್ವರ್ಗಲೋಕಗಳ ಪ್ರಸಂಗದಲ್ಲಿ ಈ ನಾಲ್ಕು ಯುಗಗಳ ವೃತ್ತಾಂತವನ್ನು ಹಿಂದೆಯೇ ಸ್ವಲ್ಪಮಟ್ಟಿಗೆ ತಿಳಿಸಿದ್ದೇನೆ. ಈಗ ಅವುಗಳ ಪ್ರಮಾಣವನ್ನು ವರ್ಷಗಳ ಲೆಕ್ಕದೊಡನೆ ಹೇಳುತ್ತೇನೆ. ಲಕ್ಷಣವನ್ನು ಪೂರ್ಣವಾಗಿ ವರ್ಣಿಸುತ್ತೇನೆ.

೩. ಮನುಷ್ಯಮಾನದ ವರ್ಷವನ್ನು ಲೌಕಿಕ ಪ್ರಮಾಣದಿಂದ ನಿರೂಪಿಸಿ, ಆ ಮೂಲಕ ಚತುರ್ಯುಗಗಳ ಅಳತೆಯನ್ನು ತಿಳಿಸುವೆನು.

೪. ಹದಿನೈದುಸಾರಿ ರೆಪ್ಪೆ ಒಡಿಯುವಷ್ಟು ಹೊತ್ತಿಗೆ ಒಂದು ಕಾಷ್ಠೆಯೆಂದು ಹೆಸರು. ಮೂವತ್ತು ಕಾಷ್ಠೆಗಳಿಗೆ ಒಂದು ಕಲೆಯೆಂದೂ, ಮೂವತ್ತು ಕಲೆಗಳಿಗೆ

**ತ್ರಿಂಶತ್ಕಲಾಶ್ಚೈವ ಭವೇನ್ಮುಹೂರ್ತ**
**ಸ್ತೈಸ್ತ್ರಿಂಶತಾ ರಾತ್ರ್ಯಹನೀ ಸಮೇತೇ ॥ ೪ ॥**

**ಅಹೋರಾತ್ರೇ ವಿಭಜತೇ ಸೂರ್ಯೋ ಮಾನುಷಲೌಕಿಕೇ ।**
**ರಾತ್ರಿಃ ಸ್ವಪ್ನಾಯ ಭೂತಾನಾಂ ಚೇಷ್ಟಾಯೈ ಕರ್ಮಣಾಮಹಃ ॥ ೫ ॥**

**ಪಿತ್ರ್ಯೇ ರಾತ್ರ್ಯಹನೀ ಮಾಸಃ ಪ್ರವಿಭಾಗಸ್ತಯೋಃ ಪುನಃ ।**
**ಕೃಷ್ಣಪಕ್ಷಸ್ತ್ವಹಸ್ತೇಷಾಂ ಶುಕ್ಲಃ ಸ್ವಪ್ನಾಯ ಶರ್ವರೀ ॥ ೬ ॥**

**ತ್ರಿಂಶದ್ಯೇ ಮಾನುಷಾ ಮಾಸಾಃ ಪಿತ್ರ್ಯೋ ಮಾಸಃ ಸ ಉಚ್ಯತೇ ।**
**ಶತಾನಿ ತ್ರೀಣಿ ಮಾಸಾನಾಂ ಷಷ್ಟ್ಯಾ ಚಾಭ್ಯಧಿಕಾನಿ ತು ।**
**ಪಿತ್ರ್ಯಃ ಸಂವತ್ಸರೋ ಹ್ಯೇಷ ಮಾನುಷೇಣ ವಿಭಾವ್ಯತೇ ॥ ೭ ॥**

**ಮಾನುಷೇಣೈವ ಮಾನೇನ ವರ್ಷಾಣಾಂ ಯಚ್ಛತಂ ಭವೇತ್ ।**
**ಪಿತೄಣಾಂ ತಾನಿ ವರ್ಷಾಣಿ ಸಂಖ್ಯಾತಾನಿ ತು ತ್ರೀಣಿ ವೈ ।**
**ದಶ ಚ ದ್ವ್ಯಧಿಕಾ ಮಾಸಾ ಪಿತೃಸಂಖ್ಯೇಹ ಕೀರ್ತಿತಾ ॥ ೮ ॥**

---

ಒಂದು ಮುಹೂರ್ತವೆಂದೂ, ಮೂವತ್ತು ಮುಹೂರ್ತಗಳಿಗೆ ಒಂದು ದಿನವೆಂದೂ ಸಂಜ್ಞೆ. ದಿನದಲ್ಲಿ ಒಂದು ಹಗಲೂ ಒಂದು ರಾತ್ರಿಯೂ ಕೂಡಿರುವುವು.

೫. ಮನುಷ್ಯಲೋಕದಲ್ಲಿ ವ್ಯವಹಾರದಲ್ಲಿರುವ ಹಗಲುರಾತ್ರಿಗಳನ್ನು ಸೂರ್ಯನು ಎರಡು ಕಾರ್ಯಗಳಿಗಾಗಿ ವಿಭಾಗಿಸಿದ್ದಾನೆ. ರಾತ್ರಿಯಲ್ಲಿ ಪ್ರಾಣಿಗಳು ನಿದ್ರೆ ಮಾಡಬೇಕು ; ಹಗಲಿನಲ್ಲಿ ಕೆಲಸಮಾಡಬೇಕು.

೬. ಮನುಷ್ಯಮಾನದ ಒಂದು ತಿಂಗಳಿಗೆ ಪಿತೃಮಾನದಲ್ಲಿ ಒಂದು ದಿವಸ. ಅದೂ ಕೂಡ ಈ ರೀತಿಯಲ್ಲಿ ವಿಭಾಗವಾಗಿದೆ. ಕೃಷ್ಣಪಕ್ಷವು ಪಿತೃಗಳಿಗೆ ಹಗಲು ; ಶುಕ್ಲಪಕ್ಷವು ರಾತ್ರಿ ; ಅದೇ ಅವರಿಗೆ ನಿದ್ರೆಯ ಕಾಲ.

೭. ಮನುಷ್ಯರಿಗೆ ಮೂವತ್ತು ತಿಂಗಳು ಕಳೆದರೆ ಪಿತೃಗಳಿಗೆ ಒಂದು ತಿಂಗಳೂ, ಮುನ್ನೂರ ಅರವತ್ತು ತಿಂಗಳಾದರೆ ಒಂದು ಸಂವತ್ಸರವೂ ಆಗುವುವು.

೮. ಮನುಷ್ಯಮಾನದಲ್ಲಿ ನೂರು ವರ್ಷಗಳು ಮುಗಿದರೆ ಪಿತೃಗಳಿಗೆ ಮೂರು ವರ್ಷದ ಮೇಲೆ ಹತ್ತು ತಿಂಗಳಾಗುವುವು. ಮನುಷ್ಯರ ಮತ್ತು ಪಿತೃಗಳ ಕಾಲ ಮಾನದ ಸಂಖ್ಯೆಯನ್ನು ಹೇಳಿದುದಾಯಿತು.

ಲೌಕಿಕೇನ ಪ್ರಮಾಣೇನ ಅಬ್ದೋ ಯೋ ಮಾನುಷಃ ಸ್ಮೃತಃ ।
ಏತದ್ದಿವ್ಯಮಹೋರಾತ್ರಮಿತ್ಯೇಷಾ ವೈದಿಕೀ ಶ್ರುತಿಃ ॥ ೯ ॥

ದಿವ್ಯೇ ರಾತ್ರ್ಯಹನೀ ವರ್ಷಂ ಪ್ರವಿಭಾಗಸ್ತಯೋಃ ಪುನಃ ।
ಅಹಸ್ತು ಯದುದಕ್ಚೈವ ರಾತ್ರಿರ್ಯಾ ದಕ್ಷಿಣಾಯನಂ ।
ಏಕೇ ರಾತ್ರ್ಯಹನೀ ದಿವ್ಯೇ ಪ್ರಸಂಖ್ಯಾತೇ ತಯೋಃ ಪುನಃ ॥೧೦॥

ತ್ರಿಂಶದ್ಯಾನಿ ತು ವರ್ಷಾಣಿ ದಿವ್ಯೋ ಮಾಸಸ್ತು ಸ ಸ್ಮೃತಃ ।
ಮಾನುಷಾಣಾಂ ಶತಂ ಯಚ್ಚ ದಿವ್ಯಾ ಮಾಸಾಸ್ತ್ರಯಸ್ತು ವೈ ।
ದಶ ಚೈವ ತಥಾಹಾನಿ ದಿವ್ಯ ಏಷ ವಿಧಿಃ ಸ್ಮೃತಃ ॥೧೧॥

ತ್ರೀಣಿ ವರ್ಷಶತಾನ್ಯೇವಂ ಷಷ್ಟಿರ್ವರ್ಷಾಸ್ತಥೈವ ಚ ।
ದಿವ್ಯಃ ಸಂವತ್ಸರೋ ಹ್ಯೇಷ ಮಾನುಷೇಣ ಪ್ರಕೀರ್ತಿತಃ ॥೧೨॥

---

೯. ಹಿಂದೆ ಹೇಳಿದ ಲೌಕಿಕಪ್ರಮಾಣವನ್ನು ಅನುಸರಿಸಿ ಮನುಷ್ಯ ಮಾನದಲ್ಲಿ ಒಂದು ವರ್ಷವಾದರೆ, ದೇವತೆಗಳಿಗೆ ಒಂದು ಹಗಲೂ ರಾತ್ರಿಯೂ ಆಗುವುವೆಂದು ವೇದದಲ್ಲಿ ಹೇಳಿದೆ.

೧೦. ಮನುಷ್ಯರ ಒಂದು ವರ್ಷಕ್ಕೆ ದೇವತೆಗಳ ಒಂದು ಹಗಲು ರಾತ್ರಿಯಾಗುವುದಷ್ಟೆ. ಅದರ ವಿಭಾಗಕ್ರಮವು ಈ ರೀತಿಯಾಗಿರುವುದು. ಉತ್ತರಾಯಣವು ಹಗಲು; ದಕ್ಷಿಣಾಯನವು ರಾತ್ರಿ. ದೇವಮಾನದ ಹಗಲುರಾತ್ರಿಗಳ ಪರಿಮಿತಿಯು ಈ ತೆರನಾಗಿರುವುದು.

೧೧. ಮೂವತ್ತು ವರ್ಷಗಳು ಮನುಷ್ಯರ ಲೆಕ್ಕದಲ್ಲಿ ನಡೆದರೆ ದೇವತೆಗಳಿಗೆ ಒಂದು ತಿಂಗಳಾಗುತ್ತದೆ. ಮನುಷ್ಯರ ನೂರು ವರ್ಷಗಳಿಗೆ ದೇವತೆಗಳ ಮೂರು ತಿಂಗಳು ಮತ್ತು ಹತ್ತು ದಿನಗಳು ಸಮನಾಗುವುವು. ಇದೇ ಮನುಷ್ಯ ಮತ್ತು ದೇವಮಾನಗಳಿರುವ ಸಂಬಂಧ.

೧೨. ಮನುಷ್ಯಮಾನದಿಂದ ಮುನ್ನೂರ ಅರವತ್ತು ವರ್ಷಗಳಾದರೆ ದೇವ ಮಾನದಲ್ಲಿ ಒಂದು ವರ್ಷವಾಯಿತೆಂದು ಎಣಿಸಬೇಕು.

**ತ್ರೀಣಿ ವರ್ಷಸಹಸ್ರಾಣಿ ಮಾನುಷೇಣ ಪ್ರಮಾಣತಃ ।**
**ತ್ರಿಂಶದನ್ಯಾನಿ ವರ್ಷಾಣಿ ಸ್ಮೃತಃ ಸಪ್ತರ್ಷಿವತ್ಸರಃ ॥೧೩॥**

**ನವ ಯಾನಿ ಸಹಸ್ರಾಣಿ ವರ್ಷಾಣಾಂ ಮಾನುಷಾಣಿ ಚ ।**
**ವರ್ಷಾಣಿ ನವತಿಶ್ಚೈವ ಧ್ರುವಸಂವತ್ಸರಃ ಸ್ಮೃತಃ ॥೧೪॥**

**ಷಟ್ತ್ರಿಂಶತ್ತು ಸಹಸ್ರಾಣಿ ವರ್ಷಾಣಾಂ ಮಾನುಷಾಣಿ ಚ ।**
**ವರ್ಷಾಣಾಂ ತು ಶತಂ ಜ್ಞೇಯಂ ದಿವ್ಯೋ ಹ್ಯೇಷ ವಿಧಿಃ ಸ್ಮೃತಃ ।**
**ತ್ರೀಣ್ಯೇವ ನಿಯುತಾನ್ಯಾಹುರ್ವರ್ಷಾಣಾಂ ಮಾನುಷಾಣಿ ತು ॥೧೫॥**

**ಷಷ್ಟಿಶ್ಚೈವ ಸಹಸ್ರಾಣಿ ಸಂಖ್ಯಾತಾನಿ ತು ಸಂಖ್ಯಯಾ ।**
**ದಿವ್ಯಂ ವರ್ಷಸಹಸ್ರಂ ತು ಪ್ರಾಹುಃ ಸಂಖ್ಯಾವಿದೋ ಜನಾಃ ॥೧೬॥**

**ಇತ್ಯೇತದೃಷಿಭಿರ್ಗೀತಂ ದಿವ್ಯಯಾ ಸಂಖ್ಯಯಾ ದ್ವಿಜಾಃ ।**
**ದಿವ್ಯೇನೈವ ಪ್ರಮಾಣೇನ ಯುಗಸಂಖ್ಯಾ ಪ್ರಕಲ್ಪಿತಾ ॥೧೭॥**

---

೧೩. ಮನುಷ್ಯರ ಲೆಕ್ಕದಲ್ಲಿ ಮೂರುಸಾವಿರದ ಮೂವತ್ತು ವರ್ಷಗಳು ಮುಗಿದರೆ ಸಪ್ತರ್ಷಿಗಳಿಗೆ ಒಂದು ವರ್ಷವಾಗುತ್ತದೆ. ಅದನ್ನು ಸಪ್ತರ್ಷಿವತ್ಸರ ವೆನ್ನುವರು.

೧೪. ಮಾನುಷಪ್ರಮಾಣದ ಒಂಬತ್ತುಸಾವಿರದ ತೊಂಬತ್ತು ವರ್ಷಗಳಿಗೆ ಒಂದು ಧ್ರುವಸಂವತ್ಸರವೆಂದು ತಿಳಿಯಬೇಕು.

೧೫-೧೬. ಮನುಷ್ಯಮಾನದ ಮೂವತ್ತಾರು ಸಾವಿರ ವರ್ಷಗಳಿಗೆ ದೇವ ಮಾನದಲ್ಲಿ ಒಂದುನೂರು ವರ್ಷಗಳೂ, ಮೂರು ಲಕ್ಷದ ಅರವತ್ತುಸಾವಿರ ವರ್ಷಗಳಿಗೆ ಒಂದು ಸಾವಿರ ವರ್ಷಗಳೂ ಆಗುತ್ತವೆಯೆಂದು ಸಂಖ್ಯಾಪ್ರಮಾಣ ವನ್ನು ಬಲ್ಲ ಪ್ರಾಜ್ಞರು ಹೇಳುತ್ತಾರೆ.

೧೭. ಎಲೈ ಬ್ರಾಹ್ಮಣರೇ, ದೇವಮಾನದ ಲೆಕ್ಕದಿಂದ ಋಷಿಗಳು ಹೀಗೆಂದು ನಿರ್ಣಯಿಸಿರುವರು. ಯುಗಗಳ ಪರಿಮಿತಿಯನ್ನೂ ಕೂಡ ಅವರು ದೇವಮಾನದ ವರ್ಷಗಳಲ್ಲಿಯೇ ಹೇಳಿರುವರು.

**ಚತ್ವಾರಿ ಭಾರತೇ ವರ್ಷೇ ಯುಗಾನಿ ಋಷಯೋಽಬ್ರುವನ್ ।**
**ಕೃತಂ ತ್ರೇತಾ ದ್ವಾಪರಂ ಚ ಕಲಿಶ್ಚೈವ ಚತುರ್ಯುಗಂ ॥೧೮॥**

**ಪೂರ್ವಂ ಕೃತಯುಗಂ ನಾಮ ತತಸ್ತ್ರೇತಾಭಿಧೀಯತೇ ।**
**ದ್ವಾಪರಂ ಚ ಕಲಿಶ್ಚೈವ ಯುಗಾನಿ ಪರಿಕಲ್ಪಯೇತ್ ॥೧೯॥**

**ಚತ್ವಾರ್ಯಾಹುಃ ಸಹಸ್ರಾಣಿ ವರ್ಷಾಣಾಂ ತತ್ಕೃತಂ ಯುಗಂ ।**
**ತಸ್ಯ ತಾವಚ್ಛತೀ ಸಂಧ್ಯಾ ಸಂಧ್ಯಾಂಶಶ್ಚ ತಥಾವಿಧಃ ॥೨೦॥**

**ಇತರೇಷು ಸಸಂಧ್ಯೇಷು ಸಸಂಧ್ಯಾಂಶೇಷು ಚ ತ್ರಿಷು ।**
**ಏಕಪಾದೇ ನಿವರ್ತಂತೇ ಸಹಸ್ರಾಣಿ ಶತಾನಿ ಚ ॥೨೧॥**

**ತ್ರೇತಾ ತ್ರೀಣಿ ಸಹಸ್ರಾಣಿ ಯುಗಸಂಖ್ಯಾವಿದೋ ವಿದುಃ ।**
**ತಸ್ಯಾಪಿ ತ್ರಿಶತೀ ಸಂಧ್ಯಾ ಸಂಧ್ಯಾಂಶಃ ಸಂಧ್ಯಯಾ ಸಮಃ ॥೨೨॥**

---

೧೮. ಭಾರತವರ್ಷದಲ್ಲಿ ಕೃತ, ತ್ರೇತಾ, ದ್ವಾಪರ ಮತ್ತು ಕಲಿಗಳೆಂಬ ನಾಲ್ಕುಯುಗಗಳು ಪ್ರಚಾರದಲ್ಲಿವೆಯೆಂದು ಮಹರ್ಷಿಗಳು ತಿಳಿಸಿದ್ದಾರೆ.

೧೯. ಮೇಲೆ ಹೇಳಿದ ಕೃತ, ತ್ರೇತಾ, ದ್ವಾಪರ ಮತ್ತು ಕಲಿಗಳೆಂಬ ನಾಲ್ಕು ಯುಗಗಳು ಒಂದಾಗುತ್ತಲೊಂದು ಕ್ರಮವಾಗಿ ಬರುತ್ತವೆಯೆಂದು ತಿಳಿಯಬೇಕು.

೨೦. ಕೃತಯುಗವು ನಾಲ್ಕುಸಾವಿರ ದಿವ್ಯಸಂವತ್ಸರಗಳ ಪರಿಮಾಣವುಳ್ಳದು. ಅದರ ಸಂಧ್ಯಾಕಾಲವು ನಾಲ್ಕುನೂರುವರ್ಷ. ಸಂಧ್ಯಾಂಶದ ಪ್ರಮಾಣವೂ ಸಹ ಇಷ್ಟೇ.

೨೧. ಇನ್ನು ಉಳಿದ ಮೂರು ಯುಗಗಳಲ್ಲಿ ಯುಗಪ್ರಮಾಣದ ಸಾವಿರದ ಲೆಕ್ಕದಲ್ಲಿಯೂ, ಸಂಧ್ಯೆಯ ಮತ್ತು ಸಂಧ್ಯಾಂಶದ ನೂರರ ಲೆಕ್ಕದಲ್ಲಿಯೂ ಕ್ರಮವಾಗಿ ಇದರ ಕಾಲುಪಾಲಿನಷ್ಟು ಕಡಿಮೆಯಾಗುತ್ತ ಹೋಗುವುದು.

೨೨. ತ್ರೇತಾಯುಗದ ಪ್ರಮಾಣವು ಮೂರುಸಾವಿರ ವರ್ಷಗಳೆಂದು ಯುಗ ಸಂಖ್ಯೆಯನ್ನು ಬಲ್ಲ ಪ್ರಾಜ್ಞರು ಹೇಳುತ್ತಾರೆ. ಅದರ ಸಂಧ್ಯಾಕಾಲವು ಮುನ್ನೂರು ವರ್ಷ. ಸಂಧ್ಯಾಂಶವೂ ಸಹ ಇಷ್ಟೇ ಎಂದರೆ ಮುನ್ನೂರು ವರ್ಷವೇ ಆಗಿರುವುದು.

ದ್ವೇ ಸಹಸ್ರೇ ದ್ವಾಪರಂ ತು ಸಂಧ್ಯಾಂಶೌ ತು ಚತುಶ್ಶತಂ।
ಸಹಸ್ರಮೇಕಂ ವರ್ಷಾಣಾಂ ಕಲೀರೇವ ಪ್ರಕೀರ್ತಿತಃ।
ದ್ವೇ ಶತೇ ಚ ತಥಾನ್ಯೇ ಚ ಸಂಧ್ಯಾಸಂಧ್ಯಾಂಶಯೋಃ ಸ್ಮೃತೇ ॥೨೩॥

ಏಷಾ ದ್ವಾದಶಸಾಹಸ್ರೀ ಯುಗಸಂಖ್ಯಾ ತು ಸಂಜ್ಞಿತಾ।
ಕೃತಂ ತ್ರೇತಾ ದ್ವಾಪರಂ ಚ ಕಲಿಶ್ಚೇತಿ ಚತುಷ್ಟಯಂ ॥೨೪॥

ತತ್ರ ಸಂವತ್ಸರಾಃ ಸೃಷ್ಟಾ ಮಾನುಷಾಸ್ತಾನ್ನಿಬೋಧತ।
ನಿಯುತಾನಿ ದಶ ದ್ವೇ ಚ ಪಂಚ ಚೈವಾತ್ರ ಸಂಖ್ಯಯಾ।
ಅಷ್ಟಾವಿಂಶತ್ಸಹಸ್ರಾಣಿ ಕೃತಂ ಯುಗಮಥೋಚ್ಯತೇ ॥೨೫॥

ಪ್ರಯುತಂ ತು ತಥಾ ಪೂರ್ಣಂ ದ್ವೇ ಚಾನ್ಯೇ ನಿಯುತೇ ಪುನಃ।
ಷಣ್ಣವತಿ ಸಹಸ್ರಾಣಿ ಸಂಖ್ಯಾತಾನಿ ಚ ಸಂಖ್ಯಯಾ।
ತ್ರೇತಾಯುಗಸ್ಯ ಸಂಖ್ಯೈಷಾ ಮಾನುಷೇಣ ತು ಸಂಜ್ಞಿತಾ ॥೨೬॥

---

೨೩. ದ್ವಾಪರಯುಗದ ಪರಿಮಿತಿ ಎರಡುಸಾವಿರ ವರ್ಷಗಳು. ಸಂಧ್ಯಾ ಕಾಲವೂ ಸಂಧ್ಯಾಂಶಕಾಲವೂ ಸೇರಿ ಒಟ್ಟು ನಾಲ್ಕುನೂರು ವರ್ಷಗಳಾಗುತ್ತವೆ. ಕೊನೆಯದಾದ ಕಲಿಯುಗದ ಅವಧಿ ಒಂದುಸಾವಿರ ವರ್ಷ. ಅದರ ಸಂಧ್ಯಾ ಕಾಲವೂ ಸಂಧ್ಯಾಂಶಕಾಲವೂ ಕೂಡಿ—ಒಂದೊಂದೂ ನೂರು ವರ್ಷದಂತೆ— ಎರಡು ನೂರು ವರ್ಷಗಳಾಗುವುವು.

೨೪. ಹೀಗೆ ಕೃತ, ತ್ರೇತಾ, ದ್ವಾಪರ ಮತ್ತು ಕಲಿಗಳೆಂಬ ನಾಲ್ಕು ಯುಗಗಳ ಪರಿಮಿತಿಯು ಮೊತ್ತವು ಹನ್ನೆರಡುಸಾವಿರ ವರ್ಷವಾಗುತ್ತದೆ.

೨೫. ದೇವಮಾನದಲ್ಲಿ ಹೇಳಿದ ಈ ಯುಗಗಳ ಪರಿಮಾಣವನ್ನು ಇನ್ನು ಮನುಷ್ಯಮಾನದಲ್ಲಿ ತಿಳಿಸುವೆನು ಕೇಳಿ. ಕೃತಯುಗವು ಸಂಧ್ಯಾ ಮತ್ತು ಸಂಧ್ಯಾಂಶ ಗಳೊಡನೆ ಸೇರಿ ಹದಿನೇಳುಲಕ್ಷದ ಇಪ್ಪತ್ತೆಂಟುಸಾವಿರ ವರ್ಷಗಳಾಗುತ್ತದೆ.

೨೬. ತ್ರೇತಾಯುಗವು ಮನುಷ್ಯಮಾನದಲ್ಲಿ ಹನ್ನೆರಡುಲಕ್ಷದ ತೊಂಬತ್ತಾರು ಸಾವಿರ ವರ್ಷಗಳ ಪರಿಮಾಣವುಳ್ಳದಾಗಿದೆ.

ಅಷ್ಟೌ ಶತಸಹಸ್ರಾಣಿ ವರ್ಷಾಣಾಂ ಮಾನುಷಾಣಿ ತು।
ಚತುಃಷಷ್ಟಿಸಹಸ್ರಾಣಿ ವರ್ಷಾಣಾಂ ದ್ವಾಪರಂ ಯುಗಂ ॥೨೭॥

ಚತ್ವಾರಿ ನಿಯುತಾನಿ ಸ್ಯುರ್ವರ್ಷಾಣಿ ತು ಕಲಿರ್ಯುಗಂ।
ದ್ವಾತ್ರಿಂಶಚ್ಚ ತಥಾನ್ಯಾನಿ ಸಹಸ್ರಾಣಿ ತು ಸಂಖ್ಯಯಾ।
ಏತತ್ಕಲಿಯುಗಂ ಪ್ರೋಕ್ತಂ ಮಾನುಷೇಣ ಪ್ರಮಾಣತಃ ॥೨೮॥

ಏಷಾ ಚತುರ್ಯುಗಾವಸ್ಥಾ ಮಾನುಷೇಣ ಪ್ರಕೀರ್ತಿತಾ।
ಚತುರ್ಯುಗಸ್ಯ ಸಂಖ್ಯಾತಾ ಸಂಧ್ಯಾಸಂಧ್ಯಾಂಶಕೈಃ ಸಹ ॥೨೯॥

ಏಷಾ ಚತುರ್ಯುಗಾಖ್ಯಾ ತು ಸಾಧಿಕಾ ತ್ವೇಕಸಪ್ತತಿಃ।
ಕೃತತ್ರೇತಾದಿಯುಕ್ತಾ ಸಾ ಮನೋರಂತರಮುಚ್ಯತೇ ॥೩೦॥

ಮನ್ವಂತರಸ್ಯ ಸಂಖ್ಯಾಂ ತು ಮಾನುಷೇಣ ನಿಬೋಧತ।
ಏಕತ್ರಿಂಶತ್ತಥಾ ಕೋಟ್ಯಃ ಸಂಖ್ಯಾತಾಃ ಸಂಖ್ಯಯಾ ದ್ವಿಜೈಃ ॥೩೧॥

ತಥಾ ಶತಸಹಸ್ರಾಣಿ ದಶ ಚಾನ್ಯಾನಿ ಭಾಗಶಃ।
ಸಹಸ್ರಾಣಿ ತು ದ್ವಾತ್ರಿಂಶಚ್ಛತಾನ್ಯಷ್ಟಾಧಿಕಾನಿ ಚ ॥೩೨॥

---

೨೭. ದ್ವಾಪರಯುಗದ ಪ್ರಮಾಣವು ಎಂಟುಲಕ್ಷದ ಅರವತ್ತುನಾಲ್ಕು ಸಾವಿರ ಮನುಷ್ಯ ವರ್ಷಗಳೆಂದು ತಿಳಿಯಬೇಕು.

೨೮. ಮನುಷ್ಯಮಾನದಿಂದ ಲೆಕ್ಕಮಾಡಿದರೆ ಕಲಿಯುಗದ ಅವಧಿಯು ನಾಲ್ಕುಲಕ್ಷದ ಮೂವತ್ತೆರಡುಸಾವಿರ ವರ್ಷವಾಗುತ್ತದೆ.

೨೯. ಸಂಧ್ಯಾ ಮತ್ತು ಸಂಧ್ಯಾಂಶಕಾಲಗಳನ್ನು ಸೇರಿಸಿಕೊಂಡು ನಾಲ್ಕು ಯುಗಗಳ ಪರಿಮಾಣವು ಮನುಷ್ಯಮಾನದಲ್ಲಿ ಎಷ್ಟಾಗುತ್ತದೆಯೆಂಬುದನ್ನು ಹೇಳಿದಂತಾಯಿತು.

೩೦. ಈ ಕೃತತ್ರೇತಾದಿ ಚತುರ್ಯುಗಗಳು ಎಪ್ಪತ್ತೊಂದುಸಾರಿ ಮುಗಿದರೆ ಒಂದು ಮನ್ವಂತರಕಾಲ ವೆನಿಸಿಕೊಳ್ಳುತ್ತದೆ.

೩೧-೩೩. ಮನುಷ್ಯಮಾನದಲ್ಲಿ ಒಂದು ಮನ್ವಂತರದ ಪರಿಮಿತಿಯು

ಅಶೀತಿಶ್ಚೈವ ವರ್ಷಾಣಿ ಮಾಸಾಶ್ಚೈವಾಧಿಕಾಸ್ತು ಷಟ್ ।
ಮನ್ವಂತರಸ್ಯ ಸಂಖ್ಯೈಷಾ ಮಾನುಷೇಣ ಪ್ರಕೀರ್ತಿತಾ ॥೩೩॥

ದಿವ್ಯೇನ ಚ ಪ್ರಮಾಣೇನ ಪ್ರವಕ್ಷ್ಯಾಮ್ಯಂತರಂ ಮನೋಃ ।
ಸಹಸ್ರಾಣಾಂ ಶತಾನ್ಯಾಹುರ್ನವೇಹ ಪರಿಸಂಖ್ಯಯಾ ॥೩೪॥

ಚತ್ವಾರಿಂಶತ್ಸಹಸ್ರಾಣಿ ಮನೋರಂತರಮುಚ್ಯತೇ ।
ಮನ್ವಂತರಸ್ಯ ಕಾಲಸ್ತು ಯುಗೈಃ ಸಹ ಪ್ರಕೀರ್ತಿತಃ ॥೩೫॥

ಏಷಾ ಚತುರ್ಯುಗಾಖ್ಯಾ ತು ಸಾಧಿಕಾ ಹ್ಯೇಕಸಪ್ತತಿಃ ।
ಕ್ರಮೇಣ ಪರಿವೃತ್ತಾ ಸಾ ಮನೋರಂತರಮುಚ್ಯತೇ ॥೩೬॥

ಏತಚ್ಚತುರ್ದಶಗುಣಂ ಕಲ್ಪಮಾಹುಸ್ತು ತದ್ವಿದಃ ।
ತತಸ್ತು ಪ್ರಲಯಃ ಕೃತ್ಸ್ನಃ ಸ ತು ಸಂಪ್ರಲಯೋ ಮಹಾನ್ ॥೩೭॥

ಕಲ್ಪಪ್ರಮಾಣೋ ದ್ವಿಗುಣೋ ಯಥಾ ಭವತಿ ಸಂಖ್ಯಯಾ
ಚತುರ್ಯುಗಾಖ್ಯಾ ವ್ಯಾಖ್ಯಾತಾ ಕೃತಂ ತ್ರೇತಾಯುಗಂ ಚ ವೈ ॥೩೮॥

---

ಮೂವತ್ತೊಂದುಕೋಟಿ ಹತ್ತುಲಕ್ಷದ ಮೂವತ್ತೆರಡುಸಾವಿರದ ಎಂಟುನೂರೆಂಬತ್ತು ವರ್ಷ ಆರು ತಿಂಗಳೆಂದು ಅರಿಯಿರಿ.

೩೪-೩೫. ಮನ್ವಂತರದ ಪ್ರಮಾಣವನ್ನು ದೇವಮಾನದಲ್ಲಿಯೂ ಹೇಳುವೆನು ಕೇಳಿ. ಅದು ಒಂಬತ್ತುಲಕ್ಷದ ನಲವತ್ತುಸಾವಿರ ವರ್ಷವಾಗುತ್ತದೆ. ಹೀಗೆ ಮನ್ವಂತರದ ಮತ್ತು ಯುಗಗಳ ಕಾಲಪ್ರಮಾಣವನ್ನು ಹೇಳಿಯಾಯಿತು.

೩೬. ಈ ಚತುರ್ಯುಗಗಳು ಕ್ರಮವಾಗಿ ಎಪ್ಪತ್ತೊಂದುಸಾರಿ ಮುಗಿವರೆ ಆ ಕಾಲದ ಅವಧಿಯನ್ನು ಮನ್ವಂತರವೆಂದು ಹೇಳುತ್ತಾರೆ.

೩೭-೩೮. ಹದಿನಾಲ್ಕು ಮನ್ವಂತರಗಳಿಗೆ ಒಂದು ಕಲ್ಪವೆಂದು ಶಾಸ್ತ್ರಜ್ಞರು ತೀರ್ಮಾನಿಸಿರುವರು. ಬಳಿಕ ಸಂಪೂರ್ಣವಾದ ಪ್ರಲಯವಾಗುವುದು. ಅದಕ್ಕೆ ಮಹಾಪ್ರಲಯವೆಂದು ಹೆಸರು. ಅದರ ಪರಿಮಿತಿ ಎರಡು ಕಲ್ಪಗಳ ಕಾಲ. ಹೀಗೆ ಕೃತ ಮತ್ತು ತ್ರೇತಾಯುಗಗಳ ಸಹಿತವಾಗಿ ಚತುರ್ಯುಗವನ್ನು ವಿವರಿಸಿ ಹೇಳಿರುವೆನು.

ತ್ರೇತಾಸೃಷ್ಟಿಂ ಪ್ರವಕ್ಷ್ಯಾಮಿ ದ್ವಾಪರಂ ಕಲಿಮೇವ ಚ ।
ಯುಗಪತ್ಸಮವೇತೌ ದ್ವೌ ದ್ವಿಧಾ ವಕ್ತುಂ ನ ಶಕ್ಯತೇ ॥೩೯॥

ಕ್ರಮಾಗತಂ ಮಯಾಪ್ಯೇತತ್ತುಭ್ಯಂ ನೋಕ್ತಂ ಯುಗದ್ವಯಂ ।
ಋಷಿವಂಶಪ್ರಸಂಗೇನ ವ್ಯಾಕುಲತ್ವಾತ್ತಥಾ ಕ್ರಮಾತ್ ॥೪೦॥

ನೋಕ್ತಂ ತ್ರೇತಾಯುಗೇ ಶೇಷಂ ತದ್ವಕ್ಷ್ಯಾಮಿ ನಿಬೋಧತ ।
ಅಥ ತ್ರೇತಾಯುಗಸ್ಯಾದೌ ಮನುಃ ಸಪ್ತರ್ಷಯಶ್ಚ ಯೇ ।
ಶ್ರೌತಸ್ಮಾರ್ತಂ ಬ್ರುವನ್ ಧರ್ಮಂ ಬ್ರಹ್ಮಣಾ ತು ಪ್ರಚೋದಿತಾಃ ॥೪೧॥

ದಾರಾಗ್ನಿಹೋತ್ರಸಂಬಂಧಮೃಗ್ಯಜುಸ್ಸಾಮಸಂಹಿತಾಃ ।
ಇತ್ಯಾದಿ ಬಹುಲಂ ಶ್ರೌತಂ ಧರ್ಮಂ ಸಪ್ತರ್ಷಯೋಽಬ್ರುವನ್ ॥೪೨॥

ಪರಂಪರಾಗತಂ ಧರ್ಮಂ ಸ್ಮಾರ್ತಂ ತ್ವಾಚಾರಲಕ್ಷಣಂ ।
ವರ್ಣಾಶ್ರಮಾಚಾರಯುತಂ ಮನುಃ ಸ್ವಾಯಂಭುವೋಽಬ್ರವೀತ್ ॥೪೩॥

---

೩೯-೪೦. ಇನ್ನು ತ್ರೇತಾಯುಗದ ಸೃಷ್ಟಿಯನ್ನೂ ದ್ವಾಪರ ಮತ್ತು ಕಲಿಯುಗಗಳ ವಿಚಾರವನ್ನೂ ಹೇಳುವೆನು. ಒಟ್ಟಿಗೆ ಗುಣಧರ್ಮಗಳಿಂದ ಕೂಡಿರುವ ಕೊನೆಯ ಎರಡು ಯುಗಗಳನ್ನೂ ಬೇರೆ ಬೇರೆ ಹೇಳುವುದು ಸಾಧ್ಯವಿಲ್ಲ. ಕ್ರಮಪ್ರಾಪ್ತವಾಗಿದ್ದ ಅವೆರಡರ ವಿಷಯವನ್ನು ನಾನೂ ಸಹ ನಿಮಗೆ ಹೇಳಲಿಲ್ಲ. ಏಕೆಂದರೆ ಋಷಿಗಳ ವಂಶವರ್ಣನದ ಪ್ರಸಂಗದಲ್ಲಿ ನಾನು ನಿರತನಾಗಿದ್ದೆನು.

೪೧. ತ್ರೇತಾಯುಗದ ಪ್ರಸ್ತಾಪದಲ್ಲಿ ಹೇಳದೆ ಬಿಟ್ಟುಹೋದ ವಿಷಯಗಳನ್ನು ಹೇಳುವೆನು ಕೇಳಿರಿ. ಆ ಯುಗದ ಆದಿಯಲ್ಲಿ ಮನುಗಳೂ, ಸಪ್ತರ್ಷಿಗಳೂ ಬ್ರಹ್ಮನ ಆಜ್ಞೆಯಂತೆ ಶ್ರುತಿಗಳಲ್ಲಿಯೂ ಸ್ಮೃತಿಗಳಲ್ಲಿಯೂ ಉಕ್ತವಾದ ಧರ್ಮವನ್ನು ಲೋಕಕ್ಕೆ ಉಪದೇಶಿಸಿದರು.

೪೨. ಋಗ್ವೇದ, ಯಜುರ್ವೇದ ಮತ್ತು ಸಾಮವೇದಗಳ ಮಂತ್ರಗಳನ್ನೂ, ಔಪಾಸನಾಗ್ನಿಯಿಂದಲೂ ಧಾರ್ಯಾಗ್ನಿಯಿಂದಲೂ ನೆರವೇರಿಸಬೇಕಾದ ಕರ್ಮಗಳನ್ನೂ, ಇನ್ನೂ ಎಷ್ಟೋ ಶ್ರುತ್ಯುಕ್ತವಾದ ಧರ್ಮವನ್ನೂ ಸಪ್ತರ್ಷಿಗಳು ಹೇಳಿದರು.

೪೩. ಸ್ವಾಯಂಭುವಮನುವು ಆಚಾರಪ್ರಾಪ್ತವಾಗಿ ಪರಂಪರೆಯಿಂದ ಬಂದ ಸ್ಮಾರ್ತಧರ್ಮವನ್ನು ವರ್ಣಾಶ್ರಮಾಚಾರಗಳ ಸಹಿತವಾಗಿ ಹೇಳಿದನು.

ಸತ್ಯೇನ ಬ್ರಹ್ಮಚರ್ಯೇಣ ಶ್ರುತೇನ ತಪಸಾ ತಥಾ ।
ತೇಷಾಂ ಸುತಪ್ತತಪಸಾಮಾರ್ಷೇಣಾನುಕ್ರಮೇಣ ಹ ॥೪೪॥

ಸಪ್ತರ್ಷೀಣಾಂ ಮನೋಶ್ಚೈವ ಆದೌ ತ್ರೇತಾಯುಗೇ ತತಃ ।
ಅಬುದ್ಧಿಪೂರ್ವಕಂ ತೇನ ಸಕೃತ್ಪೂರ್ವಕಮೇವ ಚ ॥೪೫॥

ಅಭಿವೃತ್ತಾಸ್ತು ತೇ ಮಂತ್ರಾ ದರ್ಶನೈಸ್ತಾರಕಾದಿಭಿಃ ।
ಆದಿಕಲ್ಪೇ ತು ದೇವಾನಾಂ ಪ್ರಾದುರ್ಭೂತಾಸ್ತು ತೇ ಸ್ವಯಂ ॥೪೬॥

ಪ್ರಮಾಣೇಷ್ವಥ ಸಿದ್ಧಾನಾಮನ್ಯೇಷಾಂ ಚ ಪ್ರವರ್ತತೇ ।
ಮಂತ್ರಯೋಗೋ ವ್ಯತೀತೇಷು ಕಲ್ಪೇಷ್ವಥ ಸಹಸ್ರಶಃ ।
ತೇ ಮಂತ್ರಾ ವೈ ಪುನಸ್ತೇಷಾಂ ಪ್ರತಿಭಾಯಾಮುಪಸ್ಥಿತಾಃ ॥೪೭॥

ಋಚೋ ಯಜೂಂಷಿ ಸಾಮಾನಿ ಮಂತ್ರಾಶ್ಚಾಥರ್ವಣಾಸ್ತು ಯೇ ।
ಸಪ್ತರ್ಷಿಭಿಶ್ಚ ಯೇ ಪ್ರೋಕ್ತಾಃ ಸ್ಮಾರ್ತಂ ತು ಮನುರಬ್ರವೀತ್ ॥೪೮॥

---

೪೪-೪೬. ಸತ್ಯ, ಬಹ್ಮಚರ್ಯ, ಶಾಸ್ತ್ರಜ್ಞಾನ, ದೇಹಶ್ರಮ, ಋಷಿಪರಂಪರಾಗತವಾದ ಸಂಪ್ರದಾಯ ಇವುಗಳಿಂದ ಕೂಡಿ ಸಪ್ತರ್ಷಿಗಳೂ ಸ್ವಾಯಂಭುವ ಮನುವೂ ಅತಿಶಯವಾಗಿ ತಪಸ್ಸನ್ನು ಮಾಡಿದರು. ಅವರಿಗೆ ತ್ರೇತಾಯುಗದ ಆದಿಯಲ್ಲಿ ಆ ಮಂತ್ರಗಳು ಇತರರ ಉಪದೇಶವಿಲ್ಲದೆ ನಕ್ಷತ್ರೋದಯ ಮೊದಲಾದ ನಿದರ್ಶನಗಳಿಂದ ತಾವಾಗಿಯೇ ಭಾಸವಾದುವು. ಮೊದಲನೆಯ ಕಲ್ಪದಲ್ಲಿ ದೇವತೆಗಳಿಗೆ ಅವು ಸ್ವಯಂವ್ಯಕ್ತವಾದುವು.

೪೭. ಕಳೆದ ಸಾವಿರಾರು ಕಲ್ಪಗಳಿಂದ ಮಂತ್ರಯೋಗವು ಸಿದ್ಧಿಯನ್ನು ಪಡೆದವರಿಗೂ ಉಳಿದವರಿಗೂ ಪ್ರಮಾಣಭೂತವಾಗಿದೆ. ಆ ಮಂತ್ರಗಳು ಅಂತಹ ಮಹಾಮಹಿಮರ ಪ್ರತಿಭೆಗೆ ಅದೇ ಆನುಪೂರ್ವಿಯಲ್ಲಿಯೇ ಮರಳಿ ಗೋಚರವಾಗುತ್ತವೆ.

೪೮, ಋಕ್ಕುಗಳು, ಯಜುಸ್ಸುಗಳು, ಸಾಮಗಳು ಮತ್ತು ಆಥರ್ವಣಗಳೆಂಬ ಶ್ರೌತಮಂತ್ರಗಳನ್ನು ಸಪ್ತರ್ಷಿಗಳು ಹೇಳಿದರು. ಸ್ಮೃತಿಧರ್ಮಗಳನ್ನೋ ಎಂದರೆ ಮನುವು ಹೇಳಿದನು.

ತ್ರೇತಾದೌ ಸಂಹತಾ ವೇದಾಃ ಕೇವಲಂ ಧರ್ಮಸೇತವಃ ।
ಸಂರೋಧಾದಾಯುಷಶ್ಚೈವ ವ್ಯಸ್ಯಂತೇ ದ್ವಾಪರೇ ಚ ತೇ ।
ಋಷಯಸ್ತಪಸಾ ವೇದಾನಹೋರಾತ್ರಮಧೀಯತೇ ॥೪೯॥

ಅನಾದಿನಿಧನಾ ದಿವ್ಯಾಃ ಪೂರ್ವಂ ಪ್ರೋಕ್ತಾಃ ಸ್ವಯಂಭುವಾ ।
ಸ್ವಧರ್ಮಸಂವೃತಾಃ ಸಾಂಗಾ ಯಥಾಧರ್ಮಂ ಯುಗೇ ಯುಗೇ ।
ವಿಕ್ರಿಯಂತೇ ಸ್ವಧರ್ಮಂ ತು ವೇದವಾದಾದ್ಯಥಾಯುಗಂ ॥೫೦॥

ಆರಂಭಯಜ್ಞಾಃ ಕ್ಷತ್ರಸ್ಯ ಹವಿರ್ಯಜ್ಞಾ ವಿಶಃ ಸ್ಮೃತಾಃ ।
ಪರಿಚಾರಯಜ್ಞಾ ಶೂದ್ರಾಶ್ಚ ಜಪಯಜ್ಞಾಶ್ಚ ಬ್ರಾಹ್ಮಣಾಃ ॥೫೧॥

ತತಃ ಸಮುದಿತಾ ವರ್ಣಾಸ್ತ್ರೇತಾಯಾಂ ಧರ್ಮಶಾಲಿನಃ ।
ಕ್ರಿಯಾವಂತಃ ಪ್ರಜಾವಂತಃ ಸಮೃದ್ಧಾಃ ಸುಖಿನಶ್ಚ ವೈ ॥೫೨॥

೪೯. ಧರ್ಮಾಚರಣೆಗೆ ಅತಿಮುಖ್ಯವಾದ ಪ್ರಮಾಣವೆನಿಸಿರುವ ವೇದಗಳು ತ್ರೇತಾಯುಗದ ಪ್ರಾರಂಭದಲ್ಲಿ ಅಖಂಡವಾಗಿ ಒಟ್ಟುಗೂಡಿದ್ದುವು. ಜೀವಮಾನದಲ್ಲಿ ಅವೆಲ್ಲವನ್ನೂ ಅಧ್ಯಯನಮಾಡುವುದು ಪ್ರಯಾಸವಾದುದರಿಂದ ದ್ವಾಪರಯುಗದಲ್ಲಿ ಅವು ಬೇರೆ ಬೇರೆಯಾಗಿ ವಿಂಗಡಿಸಲ್ಪಟ್ಟುವು. ಋಷಿಗಳು ಕಾಯಕ್ಲೇಶಪಟ್ಟು, ತಪಸ್ವಿಗಳಾಗಿ ಹಗಲೂ ರಾತ್ರಿಯೂ ವೇದಗಳನ್ನು ಅಧ್ಯಯನಮಾಡುತ್ತಿರುವರು.

೫೦. ಆದ್ಯಂತರಹಿತವೂ, ಸಕಲಧರ್ಮಸಹಿತವೂ ಆದ ಪರಮಪವಿತ್ರವಾದ ವೇದಗಳನ್ನು ಆದಿಯಲ್ಲಿ ಬ್ರಹ್ಮನು ಶಿಕ್ಷಾದ್ಯಂಗಗಳ ಸಹಿತವಾಗಿ ಉಪದೇಶಿಸಿದನು. ಅವು ಆಯಾ ಯುಗಧರ್ಮಗಳಿಗೆ ತಕ್ಕಂತೆ ವ್ಯಾಸ ಸಮಾಸರೂಪವಾದ ವ್ಯತ್ಯಾಸವನ್ನು ಪಡೆಯುವುವು. ಯುಗಗಳಿಗೆ ಅನುಸಾರವಾಗಿ ತಮ್ಮತಮ್ಮ ಧರ್ಮದ ವ್ಯವಸ್ಥೆಯನ್ನು ವೇದವಚನಗಳಿಂದ ಅರಿತುಕೊಳ್ಳಬೇಕು.

೫೧. ಉತ್ಸಾಹದಿಂದ ಕೂಡಿದ ಕಾರ್ಯಪ್ರವೃತ್ತಿಯೇ ಕ್ಷತ್ರಿಯರಿಗೆ ಯಜ್ಞ. ಹವಿಸ್ಸುಗಳನ್ನು ಎಂದರೆ ಧರ್ಮಕ್ಕೆ ವಿರೋಧವಿಲ್ಲದಂತಹ ಸುಖಸಾಧನ ವಸ್ತುಗಳನ್ನು ಒದಗಿಸುವುದು ವೈಶ್ಯರಿಗೆ ಯಜ್ಞ. ಸಮಾಜದ ಸೇವೆಯೇ ಶೂದ್ರರ ಯಜ್ಞ. ಬ್ರಾಹ್ಮಣನಿಗಾದರೋ ಜಪವೇ ಯಜ್ಞ.

೫೨. ತ್ರೇತಾಯುಗದಲ್ಲಿ ನಾಲ್ಕು ವರ್ಣಗಳೂ ಉದಿಸಿದುವು. ಜನರು ಧರ್ಮಶಾಲಿಗಳೂ ಕರ್ತವ್ಯನಿಷ್ಠರೂ ಆಗಿ, ಸತ್ಸಂತಾನವನ್ನು ಪಡೆದು, ಸಂಪತ್ಸಮೃದ್ಧರಾಗಿ ಸುಖದಿಂದ ಬಾಳುತ್ತಿದ್ದರು.

ಬ್ರಾಹ್ಮಣೈಶ್ಚ ವಿಧೀಯಂತೇ ಕ್ಷತ್ರಿಯಾಃ ಕ್ಷತ್ರಿಯೈರ್ವಿಶಃ ।
ವೈಶ್ಯಾಞ್ಛೂದ್ರಾನುವರ್ತಂತೇ ಶೂದ್ರಾನ್ ಪರಮನುಗ್ರಹಾತ್ । ||೫೩||

ಶುಭಾಃ ಪ್ರಕೃತಯಸ್ತೇಷಾಂ ಧರ್ಮಾ ವರ್ಣಾಶ್ರಮಾಶ್ರಯಾಃ ।
ಸಂಕಲ್ಪಿತೇನ ಮನಸಾ ವಾಚಾ ವಾ ಹಸ್ತಕರ್ಮಣಾ ।
ತ್ರೇತಾಯುಗೇ ಹ್ಯವಿಕಲೇ ಕರ್ಮಾರಂಭಃ ಪ್ರಸಿಧ್ಯತಿ ||೫೪||

ಆಯುಃ ರೂಪಂ ಬಲಂ ಮೇಧಾ ಆರೋಗ್ಯಂ ಧರ್ಮಶೀಲತಾ ।
ಸರ್ವಸಾಧಾರಣಂ ಹ್ಯೇತದಾಸೀತ್ತ್ರೇತಾಯುಗೇ ತು ವೈ ||೫೫||

ವರ್ಣಾಶ್ರಮವ್ಯವಸ್ಥಾನಮೇಷಾಂ ಬ್ರಹ್ಮಾ ತಥಾಕರೋತ್ ।
ಸಂಹಿತಾಶ್ಚ ತಥಾ ಮಂತ್ರಾ ಆರೋಗ್ಯಂ ಧರ್ಮಶೀಲತಾ ||೫೬||

ಸಂಹಿತಾಶ್ಚ ತಥಾ ಮಂತ್ರಾ ಋಷಿಭಿರ್ಬ್ರಹ್ಮಣಃ ಸುತೈಃ ।
ಯಜ್ಞಾಃ ಪ್ರವರ್ತಿತಶ್ಚೈವ ತದಾ ಹ್ಯೇವ ತು ದೈವತೈಃ ||೫೭||

---

೫೩. ಕ್ಷತ್ರಿಯರು ಬ್ರಾಹ್ಮಣರನ್ನೂ, ವೈಶ್ಯರು ಕ್ಷತ್ರಿಯರನ್ನೂ, ಶೂದ್ರರು ವೈಶ್ಯರನ್ನೂ ಅನುವರ್ತಿಸಿ ನಡೆಯುತ್ತಿದ್ದರು. ಉಳಿದ ವರ್ಣದವರೆಲ್ಲರೂ ಶೂದ್ರರ ವಿಷಯದಲ್ಲಿ ವಿಶೇಷವಾದ ಅನುಗ್ರಹವನ್ನು ತೋರುತ್ತಿದ್ದರು.

೫೪. ಅವರ ಸ್ವಭಾವಗಳು ಒಳ್ಳೆಯವು. ಅವರು ವರ್ಣಾಶ್ರಮಗಳಿಗೆ ತಕ್ಕಂತೆ ಧರ್ಮವನ್ನು ಆಚರಿಸುತ್ತಿದ್ದರು. ನಿರ್ದುಷ್ಟವಾದ ಆ ತ್ರೇತಾಯುಗದಲ್ಲಿ ಜನರು ನಿಶ್ಚಿತಮನಸ್ಸಿನಿಂದಲೂ, ಶುದ್ಧವಾದ ಮಾತಿನಿಂದಲೂ, ಕೈಗಳಿಂದಲೂ, ಕಾರ್ಯದಿಂದಲೂ ಕೂಡಿ ಹಿಡಿದ ಕೆಲಸದಲ್ಲಿ ಜಯವನ್ನು ಪಡೆಯುತ್ತಿದ್ದರು.

೫೫. ಆಯುಸ್ಸು, ರೂಪ, ಬಲ, ಬುದ್ಧಿ, ಆರೋಗ್ಯ, ಧರ್ಮಶೀಲತೆ ಈ ಗುಣಗಳು ತ್ರೇತಾಯುಗದಲ್ಲಿ ಸರ್ವಸಾಧಾರಣವಾಗಿದ್ದುವು.

೫೬. ವರ್ಣಾಶ್ರಮ ವ್ಯವಸ್ಥೆಯು ಬ್ರಹ್ಮನಿಂದ ಏರ್ಪಟ್ಟಿತು. ಮಂತ್ರಗಳು ಸಂಹಿತಾರೂಪವಾಗಿದ್ದುವು. ಜನರಲ್ಲಿ ಆರೋಗ್ಯವೂ, ಧರ್ಮಸ್ವಭಾವವೂ ಬೇರೂರಿದ್ದುವು.

೫೭. ಬ್ರಹ್ಮನ ಮಾನಸಪುತ್ರರಾದ ಮಹರ್ಷಿಗಳು ಕರ್ಮಸಾಧನವಾದ ಅನೇಕ ಮಂತ್ರಗಳನ್ನು ಸಂಗ್ರಹಿಸಿದರು. ಯಜ್ಞವು ಪ್ರಚಾರಕ್ಕೆ ಬಂದಿತು. ಆಗಲೇ ದೇವತೆಗಳೂ ಕೂಡ ಅದನ್ನು ಕೈಗೊಂಡರು.

ಯಾಮೈಃ ಶುಕ್ಲೈರ್ಜಯೈಶ್ಚೈವ ಸರ್ವಸಾಧನಸಂಭೃತೈಃ ।
ವಿಶ್ವಸೃಡ್ಭಿಸ್ತಥಾ ಸಾರ್ಧಂ ದೇವೇಂದ್ರೇಣ ಮಹೌಜಸಾ ।
ಸ್ವಾಯಂಭುವೇಽಂತರೇ ದೇವೈಸ್ತೇ ಯಜ್ಞಾಃ ಪ್ರಾಕ್ಪ್ರವರ್ತಿತಾಃ ॥೫೮॥

ಸತ್ಯಂ ಜಪಸ್ತಪೋ ದಾನಂ ಪೂರ್ವಧರ್ಮೋಽಯಮುಚ್ಯತೇ ।
ಯದಾ ಧರ್ಮಸ್ಯ ಹ್ರಸತೇ ಶಾಖಾಽಧರ್ಮಸ್ಯ ವರ್ಧತೇ ॥೫೯॥

ಜಾಯಂತೇ ಚ ತದಾ ಶೂರಾ ಆಯುಷ್ಮಂತೋ ಮಹಾಬಲಾಃ ।
ನ್ಯಸ್ತದಂಡಾ ಮಹಾಯೋಗಾ ಯಜ್ವಾನೋ ಬ್ರಹ್ಮವಾದಿನಃ ॥೬೦॥

ಪದ್ಮಪತ್ರಾಯತಾಕ್ಷಾಶ್ಚ ಪೃಥುವಕ್ತ್ರಾಃ ಸುಸಂಹತಾಃ ।
ಸಿಂಹೋರಸ್ಕಾ ಮಹಾಸತ್ವಾ ಮತ್ತಮಾತಂಗಗಾಮಿನಃ ॥೬೧॥

ಮಹಾಧರ್ಮಧರಾಶ್ಚೈವ ತ್ರೇತಾಯಾಂ ಚಕ್ರವರ್ತಿನಃ ।
ಸರ್ವಲಕ್ಷಣಪೂರ್ಣಾಸ್ತೇ ನ್ಯಗ್ರೋಧಪರಿಮಂಡಲಾಃ ॥೬೨॥

---

೫೮. ಸ್ವಾಯಂಭುವಮನ್ವಂತರದಲ್ಲಿ ಯಾಮರು, ಶುಕ್ಲರು, ಜಯರು, ವಿಶ್ವಸೃಜರು ಮುಂತಾದ ದೇವತೆಗಳು ಮಹಾಶೂರನಾದ ದೇವೇಂದ್ರನೊಡಗೂಡಿ ಯಜ್ಞಗಳನ್ನು ಮೊದಲು ನಡೆಸಿದರು.

೫೯-೬೦. ಸತ್ಯ, ಜಪ, ತಪಸ್ಸು, ದಾನ ಇವು ಮೊತ್ತಮೊದಲನೆಯ ಧರ್ಮ, ಧರ್ಮದ ರೆಂಬೆಯು ಬೆಳೆಯದೆ ನಿಂತುಹೋಗಿ ಅಧರ್ಮದ ಶಾಖೆಯು ಬೆಳೆಯ ತೊಡಗಿದಾಗ ಶೂರರೂ, ಆಯುಷ್ಮಂತರೂ, ಮಹಾಬಲರೂ, ಕ್ಷಮಾಶೀಲರೂ, ಮಹಾಯೋಗಿಗಳೂ, ಕರ್ಮಶೀಲರೂ, ಬ್ರಹ್ಮಜ್ಞಾನಿಗಳೂ ಆದ ವೀರಾಗ್ರೇಸರರು ಅವತರಿಸುತ್ತಾರೆ.

೬೧-೬೨. ತ್ರೇತಾಯುಗದಲ್ಲಿ ಜನ್ಮವೆತ್ತಿದ ಆ ಚಕ್ರವರ್ತಿಗಳ ಕಣ್ಣುಗಳು ತಾವರೆಯ ಎಸಳಿನಂತೆ ವಿಸ್ತಾರವಾಗಿದ್ದುವು. ಮುಖವು ಅಗಲವಾಗಿತ್ತು. ದೇಹವು ಪರಿಪುಷ್ಟವಾಗಿತ್ತು. ಎದೆಯು ಸಿಂಹದ ಎದೆಯನ್ನು ಹೋಲುತ್ತಿತ್ತು. ಅವರು ಮಹಾ ಸಾಹಸಿಗಳು. ಮದಿಸಿದ ಆನೆಯಂತೆ ನಡೆಯುತ್ತಿದ್ದರು. ಧನುರ್ವಿದ್ಯೆಯಲ್ಲಿ ಪಾರಂಗತರಾಗಿದ್ದರು.

ನ್ಯಗ್ರೋಧೌ ತು ಸ್ಮೃತೌ ಬಾಹೂ ವ್ಯಾಮೋ ನ್ಯಗ್ರೋಧ ಉಚ್ಯತೇ ।
ವ್ಯಾಮೇನ ತೂಚ್ಛ್ರಯೋ ಯಸ್ಯ ಅತ ಊರ್ಧ್ವಂ ತು ದೇಹಿನಃ ।
ಸಮುಚ್ಛ್ರಯಃ ಪರೀಣಾಹೋ ನ್ಯಗ್ರೋಧಪರಿಮಂಡಲಃ ||೬೩||

ಚಕ್ರಂ ರಥೋ ಮಣಿರ್ಭಾರ್ಯಾ ನಿಧಿರಶ್ವೋ ಗಜಸ್ತಥಾ ।
ಪ್ರೋಕ್ತಾನಿ ಸಪ್ತ ರತ್ನಾನಿ ಪೂರ್ವಂ ಸ್ವಾಯಂಭುವೇಽಂತರೇ ||೬೪||

ವಿಷ್ಣೋರಂಶೇನ ಜಾಯಂತೇ ಪೃಥಿವ್ಯಾಂ ಚಕ್ರವರ್ತಿನಃ ।
ಮನ್ವಂತರೇಷು ಸರ್ವೇಷು ಹ್ಯತೀತಾನಾಗತೇಷು ವೈ ||೬೫||

ಭೂತಭವ್ಯಾನಿ ಯಾನೀಹ ವರ್ತಮಾನಾನಿ ಯಾನಿ ಚ ।
ತ್ರೇತಾಯುಗಾನಿ ತೇಷ್ವತ್ರ ಜಾಯಂತೇ ಚಕ್ರವರ್ತಿನಃ ||೬೬||

---

೬೨-೬೩. ಅವರು ಎಲ್ಲ ಬಗೆಯ ರಾಜಚಿಹ್ನೆಗಳಿಂದಲೂ ಪೂರ್ಣರಾಗಿ ನ್ಯಗ್ರೋಧಪರಿಮಂಡಲವೆಂಬ ಲಕ್ಷಣವಿಶೇಷದಿಂದ ಶೋಭಿಸುತ್ತಿದ್ದರು. ಅವರ ತೋಳುಗಳು ನ್ಯಗ್ರೋಧದ ಎಂದರೆ ಆಲದಮರದ ಕೊಂಬೆಗಳಂತಿದ್ದುವು. ಒಂದು ಮಾರು ಅಳತೆಗೂ ನ್ಯಗ್ರೋಧವೆಂಪೇ ಹೆಸರು. ಯಾವ ಮನುಷ್ಯನು ಮಾರಿನಷ್ಟು ಅಥವಾ ಅದಕ್ಕಿಂತ ಹೆಚ್ಚು ಎತ್ತರವಿರುವನೋ ಅವನು ತೋಳುಗಳನ್ನು ನೀಡಿದಾಗಲೂ ಅಷ್ಟೇ ವಿಶಾಲವಾಗುವುದರಿಂದ ನ್ಯಗ್ರೋಧ ಪರಿಮಂಡಲನೆನಿಸಿಕೊಳ್ಳುವನು.

೬೪. ಚಕ್ರ, ರಥ, ರತ್ನ, ಭಾರ್ಯೆ, ನಿಧಿ, ಅಶ್ವ, ಗಜ ಈ ಏಳಕ್ಕೂ ಸ್ವಾಯಂಭುವಮನ್ವಂತರದಲ್ಲಿ ಸಪ್ತರತ್ನಗಳೆಂಬ ವ್ಯವಹಾರವಿತ್ತು.

೬೫. ಹಿಂದೆ ಕಳೆದ ಮತ್ತು ಮುಂದೆ ಬರಲಿರುವ ಎಲ್ಲ ಮನ್ವಂತರಗಳಲ್ಲಿಯೂ ಭೂಮಿಯಲ್ಲಿ ಜನಿಸಿದ ಮತ್ತು ಜನಿಸುವ ಚಕ್ರವರ್ತಿಗಳು ವಿಷ್ಣುವಿನ ಅಂಶದವರೇ ಆಗಿರುವರೆಂದು ತಿಳಿಯಬೇಕು.

೬೬. ನಡೆದುಹೋದ, ಮುಂದೆ ಬರುವ ಮತ್ತು ನಡೆಯುತ್ತಿರುವ ತ್ರೇತಾಯುಗಗಳಲ್ಲೆಲ್ಲ ಚಕ್ರವರ್ತಿಗಳು ಹುಟ್ಟಿದರು ಮತ್ತು ಹುಟ್ಟುವರು.

ಭದ್ರಾಣೀಮಾನಿ ತೇಷಾಂ ಚ ವಿಭಾವ್ಯಂತೇ ಮಹೀಕ್ಷಿತಾಂ ।
ಅತ್ಯುದ್ಭುತಾನಿ ಚತ್ವಾರಿ ಬಲಂ ಧರ್ಮಂ ಸುಖಂ ಧನಂ ॥೬೭॥

ಅನ್ಯೋನ್ಯಸ್ಯಾವಿರೋಧೇನ ಪ್ರಾಪ್ಯಂತೇ ನೃಪತೇಃ ಸಮಂ ।
ಅರ್ಥೋ ಧರ್ಮಶ್ಚ ಕಾಮಶ್ಚ ಯಶೋ ವಿಜಯ ಏವ ಚ ॥೬೮॥

ಐಶ್ವರ್ಯೇಣಾಣಿಮಾದ್ಯೇನ ಪ್ರಭುಶಕ್ತಿಬಲಾನ್ವಿತಾಃ ।
ಶ್ರೌತೇನ ತಪಸಾ ಚೈವ ಋಷೀಂಸ್ತೇಽಭಿಭವಂತಿ ಹಿ ॥೬೯॥

ಬಲೇನಾಭಿಭವಂತ್ಯೇತೇ ತೇನ ದಾನವಮಾನವಾ ।
ಲಕ್ಷಣೈಶ್ಚೈವ ಜಾಯಂತೇ ಶರೀರಸ್ಥೈರಮಾನುಷೈಃ ॥೭೦॥

ಕೇಶಾಃ ಸ್ಥಿತಾ ಲಲಾಟೇನ ಜಿಹ್ವಾ ಚ ಪರಿಮಾರ್ಜನೀ ।
ಶ್ಯಾಮಪ್ರಭಾಶ್ಚತುರ್ದಂಷ್ಟ್ರಾಃ ಸುವಂಶಾಶ್ಚೋರ್ಧ್ವರೇತಸಃ ॥೭೧॥

---

೬೭. ಬಲ, ಧರ್ಮ, ಸುಖ ಮತ್ತು ಧನಗಳೆಂಬ ನಾಲ್ಕು ರಾಜರಿಗೆ ಶುಭವನ್ನು ಕೊಡುವ ಅಸಾಧಾರಣ ಸಾಧನಗಳೆಂದು ಪರಿಗಣಿತವಾಗಿವೆ.

೬೮. ಅರ್ಥ, ಧರ್ಮ, ಕಾಮ, ಕೀರ್ತಿ, ವಿಜಯ ಇವುಗಳನ್ನು ಪರಸ್ಪರ ವಿರೋಧವಿಲ್ಲದಂತೆ ರಾಜರು ಸಮವಾಗಿ ಸಂಪಾದಿಸಬೇಕು.

೬೯. ಅಣಿಮಾದ್ಯಷ್ಟೈಶ್ವರ್ಯ, ಪ್ರಭುಶಕ್ತಿ, ಬಾಹುಬಲ, ವೇದೋಕ್ತಧರ್ಮಾಚರಣೆ, ತಪಸ್ಸು ಇವುಗಳಿಂದ ಕೂಡಿ ಈ ರಾಜರು ಮಹರ್ಷಿಗಳನ್ನು ಕೂಡ ತಮ ಮಹಿಮಾತಿಶಯದಿಂದ ಮೀರಿಸಬಲ್ಲರು.

೭೦. ಇವರು ತಮ್ಮ ಅಸಾಧಾರಣವಾದ ಬಲದಿಂದ ದಾನವರನ್ನೂ ಮಾನವರನ್ನೂ ಗೆಲ್ಲಬಲ್ಲರು. ಹುಟ್ಟುವಾಗಲೇ ಇವರ ಶರೀರಗಳಲ್ಲಿ ಅಮಾನುಷ ಲಕ್ಷಣಗಳು ಕಂಡುಬರುವುವು.

೭೧. ಅವರ ಹಣೆಯ ಮೇಲ್ಗಡೆ ಅದರ ವೈಶಾಲ್ಯವು ಕೆಡದಂತೆ ಕೂದಲು ಬೆಳೆದಿದ್ದುವು. ನಾಲಗೆಯು ಬಾಯಿಯ ಸುತ್ತಲೂ ಒರಸುವಷ್ಟು ದೀರ್ಘವಾಗಿತ್ತು. ಅವರಿಗೆ ನಾಲ್ಕು ಕೋರೆ ಹಲ್ಲುಗಳಿದ್ದುವು. ಅವರು ಶ್ಯಾಮವರ್ಣದವರು ; ಒಳ್ಳೆಯ ವಂಶದಲ್ಲಿ ಹುಟ್ಟಿದವರು ; ಮತ್ತು ಜಿತೇಂದ್ರಿಯರು.

**ಆಜಾನುಬಾಹುವಶ್ಚೈವ ತಾಲಹಸ್ತೌ ವೃಷಾಕೃತೀ ।**
**ಪರಿಣಾಹಪ್ರಮಾಣಾಭ್ಯಾಂ ಸಿಂಹಸ್ಕಂಧಾಶ್ಚ ಮೇಧಿನಃ ॥೭೨॥**

**ಪಾದಯೋಶ್ಚಕ್ರಮತ್ಸ್ಯೌ ತು ಶಂಖಪದ್ಮೇ ಚ ಹಸ್ತಯೋಃ ।**
**ಪಂಚಾಶೀತಿಸಹಸ್ರಾಣಿ ಜೀವಂತಿ ಹ್ಯಜರಾಮಯಾಃ ॥೭೩॥**

**ಅಸಂಗಾ ಗತಯಸ್ತೇಷಾಂ ಚತಸ್ರಶ್ಚಕ್ರವರ್ತಿನಾಂ ।**
**ಅಂತರಿಕ್ಷೇ ಸಮುದ್ರೇಷು ಪಾತಾಲೇ ಪರ್ವತೇಷು ಚ ॥೭೪॥**

**ಇಜ್ಯಾ ದಾನಂ ತಪಃ ಸತ್ಯಂ ತ್ರೇತಾಧರ್ಮಾಸ್ತು ವೈ ಸ್ಮೃತಾಃ ।**
**ತದಾ ಪ್ರವರ್ತತೇ ಧರ್ಮೋ ವರ್ಣಾಶ್ರಮವಿಭಾಗಶಃ ।**
**ಮರ್ಯಾದಾಸ್ಥಾಪನಾರ್ಥಂ ಚ ದಂಡನೀತಿಃ ಪ್ರವರ್ತತೇ ॥೭೫॥**

---

೭೨. ಅವರ ತೋಳುಗಳು ಮೊಣಕಾಲುಗಳನ್ನು ಮುಟ್ಟುತ್ತಿದ್ದುವು. ಕೈಗಳು ತಾಲವೃಕ್ಷಗಳಂತಿದ್ದುವು. ಅವರು ಪ್ರಮಾಣದಲ್ಲೂ ಗಾತ್ರದಲ್ಲೂ ವೃಷಭವನ್ನು ಹೋಲುತ್ತಿದ್ದರು. ಅವರ ಹೆಗಲು ಸಿಂಹದ ಹೆಗಲನ್ನು ಹೋಲುತ್ತಿತ್ತು. ಅವರು ಬಹು ಬುದ್ಧಿವಂತರಾಗಿದ್ದರು.

೭೩. ಆ ಚಕ್ರವರ್ತಿಗಳ ಪಾದಗಳಲ್ಲಿ ಚಕ್ರರೇಖೆ ಮತ್ತು ಮತ್ಸ್ಯರೇಖೆಗಳೂ, ಕೈಗಳಲ್ಲಿ ಶಂಖ ಮತ್ತು ಪದ್ಮರೇಖೆಗಳೂ ಇದ್ದುವು. ಅವರು ಎಂಬತ್ತೈದು ಸಾವಿರ ವರ್ಷಗಳ ಕಾಲ ಮುಪ್ಪೂ ರೋಗವೂ ಇಲ್ಲದೆ ಬದುಕುತ್ತಿದ್ದರು.

೭೪. ಅಂತರಿಕ್ಷ, ಸಮುದ್ರ, ಪಾತಾಲ, ಪರ್ವತ ಈ ನಾಲ್ಕು ಕಡೆಗಳಲ್ಲಿಯೂ ಆ ಚಕ್ರವರ್ತಿಗಳು ಯಾವ ಅಡ್ಡಿಯೂ ಇಲ್ಲದೆ ಸಂಚರಿಸಬಲ್ಲವರಾಗಿದ್ದರು.

೭೫. ಯಾಗ, ದಾನ, ತಪಸ್ಸು, ಸತ್ಯ ಇವು ತ್ರೇತಾಯುಗದ ಧರ್ಮಗಳು. ಆಗ ವರ್ಣಾಶ್ರಮ ವಿಭಾಗಗಳಿಗೆ ತಕ್ಕಂತೆ ಧರ್ಮವು ನಡೆಯುತ್ತಿತ್ತು. ಲೋಕ ಮರ್ಯಾದೆಯನ್ನು ಉಳಿಸುವುದಕ್ಕಾಗಿ ದಂಡನೀತಿಯು ಪ್ರವರ್ತಿಸುತ್ತಿತ್ತು.

**ಹೃಷ್ಟಪುಷ್ಟಾ ಜನಾಃ ಸರ್ವೇ ಅರೋಗಾಃ ಪೂರ್ಣಮಾನಸಾಃ ।**
**ಏಕೋ ವೇದಶ್ಚತುಷ್ಪಾದಸ್ತ್ರೇತಾಯಾಂ ತು ವಿಧಿಃ ಸ್ಮೃತಃ ।**
**ತ್ರೀಣಿ ವರ್ಷಸಹಸ್ರಾಣಿ ಜೀವಂತೇ ತತ್ರ ತಾಃ ಪ್ರಜಾಃ ॥೭೬॥**

**ಪುತ್ರಪೌತ್ರಸಮಾಕೀರ್ಣಾ ಮ್ರಿಯಂತೇ ಚ ಕ್ರಮೇಣ ತಾಃ ।**
**ಏಷ ತ್ರೇತಾಯುಗೇ ಭಾವಸ್ತ್ರೇತಾಸಂಧ್ಯಾಂ ನಿಬೋಧತ ॥೭೭॥**

**ತ್ರೇತಾಯುಗಸ್ವಭಾವೇನ ಸಂಧ್ಯಾ ಪಾದೇನ ವರ್ತತೇ ।**
**ಸಂಧ್ಯಾಪಾದಃ ಸ್ವಭಾವಾಚ್ಚ ಯೋಽಂಶಃ ಪಾದೇನ ತಿಷ್ಠತಿ ॥೭೮॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಮನ್ವಂತರಾನುಕಲ್ಪೋ ನಾಮ ದ್ವಿಚತ್ವಾರಿಂಶದಧಿಕಶತತಮೋಽಧ್ಯಾಯಃ**

---

೭೬. ಜನರೆಲ್ಲ ಸಂತುಷ್ಟರೂ, ಪುಷ್ಟರೂ, ರೋಗರಹಿತರೂ, ಪೂರ್ಣ ಮನಸ್ಕರೂ ಆಗಿದ್ದರು. ವೇದವು'ಅಖಂಡವಾಗಿ ಏಕರೂಪದಿಂದ ನಾಲ್ಕು ಪಾದ ಗಳುಳ್ಳದಾಗಿತ್ತು. ಪ್ರಜೆಗಳು ಮೂರುಸಾವಿರ ವರ್ಷ ಬದುಕುತ್ತಿದ್ದರು.

೭೭. ಜನರು ಹಲವರು ಮಕ್ಕಳನ್ನೂ ಮೊಮ್ಮಕ್ಕಳನ್ನೂ ಪಡೆದು, ಬಹು ಕಾಲ ಬಾಳಿದ ಬಳಿಕ ಮುಪ್ಪಿನಲ್ಲಿ ಕ್ರಮವಾಗಿ ಮರಣವನ್ನೈದುತ್ತಿದ್ದರು. ಇದೇ ತ್ರೇತಾಯುಗದ ಲಕ್ಷಣ. ಇನ್ನು ಅದರ ಸಂಧ್ಯಾಕಾಲದ ಸ್ವಭಾವವನ್ನು ಕೇಳಿರಿ.

೭೮. ತ್ರೇತಾಯುಗದ ಲಕ್ಷಣವು ಅದರ ಸಂಧ್ಯಾಕಾಲದಲ್ಲಿ ಕಾಲುಪಾಲಿ ನಷ್ಟು ಮಾತ್ರ ರೂಢಿಯಲ್ಲಿರುವುದು. ಸಂಧ್ಯಾಂಶದಲ್ಲೋ ಎಂದರೆ ಸಂಧ್ಯಾಕಾಲದ ಲಕ್ಷಣದ ನಾಲ್ಕರಲ್ಲೊಂದುಪಾಲು ಉಳಿಯುವುದು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ವಿಧವಿಧವಾದ ಕಾಲಮಾನಗಳನ್ನೂ ಯುಗಗಳ ಲಕ್ಷಣ ವನ್ನೂ ತಿಳಿಸಿದೆ.

ಮನುಷ್ಯಮಾನದಲ್ಲಿ ಮೂವತ್ತು ದಿನಗಳಾದರೆ ಪಿತೃಗಳಿಗೆ ಒಂದು ದಿನ. ಅವರಿಗೆ ಕೃಷ್ಣಪಕ್ಷವೇ ಹಗಲು; ಶುಕ್ಲಪಕ್ಷವೇ ರಾತ್ರಿ. ಮನುಷ್ಯರಿಗೆ ಮುನ್ನೂರ ಅರವತ್ತು ದಿವಸಗಳು ಮುಗಿದರೆ ದೇವತೆಗಳಿಗೆ ಒಂದು ದಿವಸವಾಗುತ್ತದೆ. ಉತ್ತರಾಯಣವೇ ಅವರಿಗೆ ಹಗಲು; ದಕ್ಷಿಣಾಯನವೇ ರಾತ್ರಿ.

ಕೃತ, ತ್ರೇತಾ, ದ್ವಾಪರ ಮತ್ತು ಕಲಿಗಳೆಂಬವು ನಾಲ್ಕು ಯುಗಗಳು. ಇವುಗಳ ಒಟ್ಟು ಪರಿಮಿತಿ ದೇವಮಾನದಲ್ಲಿ ಹನ್ನೆರಡುಸಾವಿರ ವರ್ಷಗಳು. ಇಂತಹ ಚತುರ್ಯುಗಗಳು ಎಪ್ಪತ್ತೊಂದುಸಾರಿ ಮುಗಿದರೆ ಒಂದು ಮನ್ವಂತರವೆನಿಸುವುದು. ಹೀಗೆ ಹದಿನಾಲ್ಕು ಮನ್ವಂತರಗಳು ಕಳೆದ ಮೇಲೆ ಮಹಾಪ್ರಳಯವಾಗುವುದು.

ತ್ರೇತಾಯುಗದಲ್ಲಿ ವೇದವು ವಿಭಾಗವಿಲ್ಲದೆ ಅಖಂಡವಾಗಿರುವುದು. ಬ್ರಹ್ಮನ ಆಜ್ಞೆಯಿಂದ ಯಜ್ಞಯಾಗಾದಿಗಳು ಪ್ರಚಾರಕ್ಕೆ ಬರುವುವು. ಧರ್ಮಸಂಸ್ಥಾಪನಕ್ಕಾಗಿ ವೀರಾಧಿವೀರರಾದ ಚಕ್ರವರ್ತಿಗಳು ಜನಿಸುವರು. ಅವರು ಸಕಲ ಸಲ್ಲಕ್ಷಣ ಗಳಿಂದ ಕೂಡಿ ಮಹರ್ಷಿಗಳನ್ನು ಸಹ ಮೀರಿಸುವರು. ಪ್ರಜೆಗಳು ಸಕಲ ವಿಧವಾದ ಮನೋರಥಗಳನ್ನೂ ಪಡೆದು, ಪುತ್ರಪೌತ್ರರೊಡಗೂಡಿ ಸುಖದಿಂದ ಬಾಳುತ್ತ, ಮುಪ್ಪು ಬಂದ ಬಳಿಕ ಸರಿಯಾದ ವಯಸ್ಸಿನಲ್ಲಿ ದೇಹವನ್ನು ಬಿಡುವರು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಮನ್ವಂತರಾನುಕಲ್ಪವೆಂಬ
ನೂರನಲವತ್ತೆರಡನೆಯ ಅಧ್ಯಾಯವು ಮುಗಿದುದು.



## ಅಥ ತ್ರಿಚತ್ವಾರಿಂಶದಧಿಕಶತತಮೋಽಧ್ಯಾಯಃ

॥ ಋಷಯ ಊಚುಃ ॥

ಕಥಂ ತ್ರೇತಾಯುಗಮುಖೇ ಯಜ್ಞಸ್ಯಾಸೀತ್ಪ್ರವರ್ತನಂ ।
ಪೂರ್ವೇ ಸ್ವಾಯಂಭುವೇ ಸರ್ಗೇ ಯಥಾವತ್ಪ್ರಬ್ರವೀಹಿ ನಃ ॥ ೧ ॥
ಅಂತರ್ಹಿತಾಯಾಂ ಸಂಧ್ಯಾಯಾಂ ಸಾರ್ಧಂ ಕೃತಯುಗೇನ ಹಿ ।
ಕಾಲಾಖ್ಯಾಯಾಂ ಪ್ರವೃತ್ತಾಯಾಂ ಪ್ರಾಪ್ತೇ ತ್ರೇತಾಯುಗೇ ತದಾ ॥ ೨ ॥
ಓಷಧೀಷು ಚ ಜಾತಾಸು ಪ್ರವೃತ್ತೇ ವೃಷ್ಟಿಸರ್ಜನೇ ।
ಪ್ರತಿಷ್ಠಿತಾಯಾಂ ವಾರ್ತಾಯಾಂ ಗ್ರಾಮೇಷು ಚ ಪುರೇಷು ಚ ॥ ೩ ॥
ವರ್ಣಾಶ್ರಮಪ್ರತಿಷ್ಠಾನಂ ಕೃತ್ವಾ ಮಂತ್ರೈಶ್ಚ ತೈಃ ಪುನಃ ।
ಸಂಹಿತಾಸ್ತು ಸುಸಂಹೃತ್ಯ ಕಥಂ ಯಜ್ಞಃ ಪ್ರವರ್ತಿತಃ ।
ಏತಚ್ಛ್ರುತ್ವಾಽಬ್ರವೀತ್ಸೂತಃ ಶ್ರೂಯತಾಂ ತತ್ಪ್ರಚೋದಿತಂ ॥ ೪ ॥

॥ ಸೂತ ಉವಾಚ ॥

ಮಂತ್ರಾನ್ವೈ ಯೋಜಯಿತ್ವಾ ತು ಇಹಾಮುತ್ರ ಚ ಕರ್ಮಸು ।
ತಥಾ ವಿಶ್ವಭುಗಿಂದ್ರಸ್ತು ಯಜ್ಞಂ ಪ್ರಾವರ್ತಯತ್ಪ್ರಭುಃ ॥ ೫ ॥

---

೧. ಋಷಿಗಳು ಹೇಳಿದರು.—ಹಿಂದೆ ಸ್ವಾಯಂಭುವಮನ್ವಂತರದಲ್ಲಿ ತ್ರೇತಾಯುಗವು ಪ್ರಾರಂಭವಾಯಿತಷ್ಟೆ! ಆಗ ಯಜ್ಞವು ಉಪಕ್ರಮವಾದ ಬಗೆ ಹೇಗೆ? ಇದನ್ನು ಕ್ರಮವಾಗಿ ನಮಗೆ ವಿವರಿಸಿ ಹೇಳು.

೨-೪. ಕೃತಯುಗವೂ ಅದರ ಸಂಧ್ಯಾಕಾಲವೂ ಕಳೆದುಹೋದುವು. ತ್ರೇತಾಯುಗವು ಬಂದಿತು. ಗಿಡಮೂಲಿಕೆಗಳು ಹುಟ್ಟಿದುವು. ಮಳೆ ಬೆಳೆಗಳಾದುವು. ಹಳ್ಳಿಗಳಲ್ಲಿಯೂ ಪಟ್ಟಣಗಳಲ್ಲಿಯೂ ಜನರಿಗೆ ಜೀವಿಕೆಯ ವೃತ್ತಿ ಏರ್ಪಟ್ಟಿತು. ಇಷ್ಟಾದ ತರುವಾಯ ವರ್ಣಾಶ್ರಮವ್ಯವಸ್ಥೆಯನ್ನು ನೆಲೆಗೊಳಿಸಿ, ಸಂಹಿತೆಗಳನ್ನು ಸಂಗ್ರಹಿಸಿ, ಆ ಮಂತ್ರಗಳಿಂದ ಯಜ್ಞವನ್ನು ಪ್ರಾರಂಭಮಾಡಿದ ರೀತಿ ಹೇಗೆ? ಇದನ್ನು ಕೇಳಿ ಸೂತಪೌರಾಣಿಕನು ಅವರಿಗೆ ಉತ್ತರವಿತ್ತನು. ಅದೆಂತೆಂದರೆ:—

೫-೬. ಸೂತಪೌರಾಣಿಕನು ಹೇಳಿದನು.—ತ್ರಿಲೋಕಾಧಿಪತಿಯಾದ ಇಂದ್ರನು ಇಹಪರಸುಖಸಾಧನಗಳಾದ ಕರ್ಮಗಳಲ್ಲಿ ಮಂತ್ರಗಳನ್ನು ವಿನಿಯೋಗಿಸಿ

ದೈವತೈಃ ಸಹ ಸಂಹೃತ್ಯ ಸರ್ವಸಾಧನಸಂವೃತಃ ।
ತಸ್ಯಾಶ್ವಮೇಧೇ ವಿತತೇ ಸಮಾಜಗ್ಮುರ್ಮಹರ್ಷಯಃ ॥ ೬ ॥

ಯಜ್ಞಕರ್ಮಣ್ಯವರ್ತಂತ ಕರ್ಮಣ್ಯಗ್ರೇ ತಥರ್ತ್ವಿಜಃ ।
ಹೂಯಮಾನೇ ದೇವಹೋತ್ರೇ ಅಗ್ನೌ ಬಹುವಿಧಂ ಹವಿಃ ॥ ೭ ॥

ಸಂಪ್ರತೀತೇಷು ದೇವೇಷು ಸಾಮಗೇಷು ಚ ಸುಸ್ವರಂ ।
ಪರಿಕ್ರಾಂತೇಷು ಲಘುಷು ಅಧ್ವರ್ಯುಪುರುಷೇಷು ಚ ॥ ೮ ॥

ಆಲಬ್ಧೇಷು ಚ ಮಧ್ಯೇ ತು ತಥಾ ಪಶುಗಣೇಷು ವೈ ।
ಆಹೂತೇಷು ಚ ದೇವೇಷು ಯಜ್ಞಭುಕ್ಷು ತತಸ್ತದಾ ॥ ೯ ॥

ಯ ಇಂದ್ರಿಯಾತ್ಮಕಾ ದೇವಾ ಯಜ್ಞಭಾಗಭುಜಸ್ತು ತೇ ।
ತಾನ್ಯಜಂತಿ ತದಾ ದೇವಾಃ ಕಲ್ಪಾದಿಷು ಭವಂತಿ ಯೇ ॥೧೦॥

ಅಧ್ವರ್ಯುಪ್ರೈಷಕಾಲೇ ತು ವ್ಯುತ್ಥಿತಾ ಋಷಯಸ್ತಥಾ ।
ಮಹರ್ಷಯಶ್ಚ ತಾನ್ ದೃಷ್ಟ್ವಾ ದೀನಾನ್ ಪಶುಗಣಾಂಸ್ತದಾ ।
ವಿಶ್ವಭುಜಂ ತೇ ತ್ವಪೃಚ್ಛನ್ ಕಥಂ ಯಜ್ಞವಿಧಿಸ್ತವ ॥೧೧॥

---

ಸಕಲಸಾಧನಸಹಿತನಾಗಿ ದೇವತೆಗಳೊಡಗೂಡಿ ಯಜ್ಞಕ್ಕೆ ಪ್ರವರ್ತಿಸಿದನು. ಅತಿ ಸಂಭ್ರಮದಿಂದ ನಡೆದ ಆ ಅಶ್ವಮೇಧಯಾಗಕ್ಕೆ ಮಹರ್ಷಿಗಳು ಬಂದರು.

೭-೧೦. ಋತ್ವಿಕ್ಕುಗಳು ಮೊದಲು ಯಜ್ಞಕರ್ಮದಲ್ಲಿ ತೊಡಗಿದರು. ಹೋತೃಗಳು ಅಗ್ನಿಯಲ್ಲಿ ಬಹು ವಿಧವಾದ ಹವಿಸ್ಸುಗಳನ್ನು ಹೋಮಮಾಡಿದರು. ದೇವತೆಗಳು ಸಂತುಷ್ಟರಾದರು. ಸಾಮವೇದಿಗಳು ಸುಸ್ವರದಿಂದ ಗಾನಮಾಡಿದರು. ಅಧ್ವರ್ಯುಗಳು ಚಟುವಟಿಕೆಯಿಂದ ಸುತ್ತಲೂ ಓಡಾಡಿದರು. ಯಜ್ಞಶಾಲೆಯ ಮಧ್ಯದಲ್ಲಿ ಅನೇಕ ಪಶುಗಳನ್ನು ಹನನಮಾಡಿದರು. ಇಂದ್ರಿಯಾಭಿಮಾನಿಗಳಾದ ದೇವತೆಗಳೇ ಯಜ್ಞಭಾಗದ ಸ್ವೀಕಾರಕ್ಕಾಗಿ ಬಂದರು. ಮಿಕ್ಕ ದೇವತೆಗಳು ಅವರನ್ನು ಪೂಜಿಸಿದರು. ಎಲ್ಲ ಕಲ್ಪಗಳ ಆದಿಯಲ್ಲಿಯೂ ಯಜ್ಞಭಾಗಾರ್ಹರೆನಿಸಿ ಕೊಂಡಿರುವ ದೇವತೆಗಳು ಇವರೇ.

೧೧. ಅಧ್ವರ್ಯುಗಳು ಆಹ್ವಾನಮಾಡಿದಾಗ ಅಲ್ಲಿದ್ದ ಋಷಿಗಳೂ ಮಹರ್ಷಿಗಳೂ ಎದ್ದುನಿಂತರು. ಬಡಪಾಯಿಗಳಾದ ಆ ಪಶುಗಳನ್ನು ನೋಡಿ "ಇದೇನು ನಿನ್ನ ಈ ಯಜ್ಞವಿಧಿ!" ಎಂದು ಅವರು ಇಂದ್ರನನ್ನು ಕೇಳಿದರು.

ಅಧರ್ಮೋ ಬಲವಾನೇಷ ಹಿಂಸಾ ಧರ್ಮೇಪ್ಸಯಾ ತವ ।
ನವಃ ಪಶುವಿಧಿಸ್ತ್ವಿಷ್ಟಸ್ತವ ಯಜ್ಞೇ ಸುರೋತ್ತಮ ॥೧೨॥

ಅಧರ್ಮೋ ಧರ್ಮಘಾತಾಯ ಪ್ರಾರಬ್ಧಃ ಪಶುಭಿಸ್ತ್ವಯಾ ।
ನಾಯಂ ಧರ್ಮೋ ಹ್ಯಧರ್ಮೋಽಯಂ ನ ಹಿಂಸಾ ಧರ್ಮ ಉಚ್ಯತೇ ।
ಆಗಮೇನ ಭವಾನ್ ಧರ್ಮಂ ಪ್ರಕರೋತು ಯದೀಚ್ಛತಿ ॥೧೩॥

ವಿಧಿದೃಷ್ಟೇನ ಯಜ್ಞೇನ ಧರ್ಮೇಣಾವ್ಯವಸನೇನ ತು ।
ಯಜ್ಞಬೀಜೈಃ ಸುರಶ್ರೇಷ್ಠ ತ್ರಿವರ್ಗಪರಿವೋಷಿತೈಃ ॥೧೪॥

ಏಷ ಯಜ್ಞೋ ಮಹಾನಿಂದ್ರ ಸ್ವಯಂಭುವಿಹಿತಃ ಪುರಾ ।
ಉಕ್ತೋ ನ ಪ್ರತಿಜಗ್ರಾಹ ಮಾನವೋಹಸಮನ್ವಿತಃ ॥೧೫॥

---

೧೨. ಓ ದೇವರಾಜಾ, ಧರ್ಮಾಭಿಲಾಷೆಯಿಂದ ಪ್ರವೃತ್ತನಾದ ನಿನಗೆ ಹಿಂಸಾಮಯವಾದ ಈ ಅಧರ್ಮವು ಒದಗಿತು. ನಿನ್ನ ಯಜ್ಞದಲ್ಲಿ ಪಶುಸಂಹಾರ ರೂಪವಾದ ಹೊಸ ಕ್ರಮವು ಪ್ರಾರಂಭವಾಯಿತು.

೧೩. ಧರ್ಮನಾಶಕ್ಕೋಸ್ಕರ ನೀನು ಪಶುಸಂಹಾರರೂಪದಿಂದ ಈ ಅಧರ್ಮ ಕಾರ್ಯದಲ್ಲಿ ತೊಡಗಿದೆ. ಇದು ಧರ್ಮವಲ್ಲ; ಅಧರ್ಮ. ಏಕೆಂದರೆ ಹಿಂಸೆಯು ಧರ್ಮವೆನಿಸಿಕೊಳ್ಳಲಾರದು. ನಿನಗೆ ಇಷ್ಟವಿದ್ದರೆ ಆಗಮೋಕ್ತವಾಗಿ ಉತ್ಕೃಷ್ಟವಾದ ರೀತಿಯಿಂದ ಧರ್ಮವನ್ನು ನಡೆಸು.

೧೪. ಓ ದೇವೋತ್ತಮಾ, ಯಜ್ಞಾರ್ಹವಾದ ಧಾನ್ಯಗಳಿಂದಲೂ, ಕಂದ ಮೂಲಫಲಾದಿಗಳಿಂದಲೂ ದೇವತೆಗಳನ್ನು ಆರಾಧಿಸು. ಇದೇ ಶಾಸ್ತ್ರೋಕ್ತವಾದ ಯಜ್ಞ; ಹಿಂಸಾರೂಪವಲ್ಲದುದು; ಧರ್ಮಾರ್ಥಕಾಮಗಳೆಂಬ ಪುರುಷಾರ್ಥಗಳನ್ನು ಕೊಡುವಂತಹುದು. ಇಂದ್ರಾ, ಪೂರ್ವದಲ್ಲಿ ಬ್ರಹ್ಮನು ಲೋಕಹಿತಕ್ಕಾಗಿ ಏರ್ಪಡಿಸಿದ ಮಹಾಯಜ್ಞವೇ ಇದು.

೧೫. ತತ್ವದರ್ಶಿಗಳಾದ ಮಹರ್ಷಿಗಳು ಹೀಗೆ ಹೇಳಿದರೂ ತ್ರಿಲೋಕಾಧಿಪತಿಯಾದ ಇಂದ್ರನು ಗರ್ವಮೋಹಗಳಿಗೆ ಒಳಗಾಗಿ ಅದಕ್ಕೆ ಒಡಂಬಡಲಿಲ್ಲ.

**ತೇಷಾಂ ವಿವಾದಃ ಸುಮಹಾನ್ ಜಜ್ಞೇ ಇಂದ್ರಮಹರ್ಷಿಣಾಂ ।**
**ಜಂಗಮೈಃ ಸ್ಥಾವರೈಃ ಕೇನ ಯಷ್ಟವ್ಯಮಿತಿ ಚೋಚ್ಯತೇ ॥೧೬॥**

**ತೇ ತು ಖಿನ್ನಾ ವಿವಾದೇನ ಶಕ್ತ್ಯಾ ಯುಕ್ತಾ ಮಹರ್ಷಯಃ ।**
**ಸಂಧಾಯ ಸಮಮಿಂದ್ರೇಣ ಪಪ್ರಚ್ಛುಃ ಖಚರಂ ವಸುಂ ॥೧೭॥**

**॥ ಋಷಯ ಊಚುಃ ॥**

**ಮಹಾಪ್ರಾಜ್ಞ ತ್ವಯಾ ದೃಷ್ಟಃ ಕಥಂ ಯಜ್ಞವಿಧಿರ್ನೃಪ ।**
**ಔತ್ತಾನಪಾದೇ ಪ್ರಬ್ರೂಹಿ ಸಂಶಯಂ ನಸ್ತುದ ಪ್ರಭೋ ॥೧೮॥**

**॥ ಸೂತ ಉವಾಚ ॥**

**ಶ್ರುತ್ವಾ ವಾಕ್ಯಂ ವಸುಸ್ತೇಷಾಮವಿಚಾರ್ಯ ಬಲಾಬಲಂ ।**
**ವೇದಶಾಸ್ತ್ರಮನುಸ್ಮೃತ್ಯ ಯಜ್ಞತತ್ತ್ವಮುವಾಚ ಹ ॥೧೯॥**

---

೧೬. "ಯಾಗಮಾಡಬೇಕಾದುದು ಏತರಿಂದ? ಶಾಸ್ತ್ರಗಳಲ್ಲಿ ಹೇಳಿರುವುದೇನು? ಪಶುಗಳಿಂದಲೋ ಕಂದ ಮೂಲಫಲಾದಿಗಳಿಂದಲೋ?" ಎಂದು ಇಂದ್ರನಿಗೂ ಮಹರ್ಷಿಗಳಿಗೂ ದೊಡ್ಡ ವಿವಾದವು ಹುಟ್ಟಿತು.

೧೭. ಶಾಪಾನುಗ್ರಹಸಮರ್ಥರಾದ ಆ ಮಹರ್ಷಿಗಳಿಗೆ ಈ ವಿವಾದದಿಂದ ವಿಷಾದ ಹುಟ್ಟಿತು. ಅವರು ಇಂದ್ರನೊಡನೆ ಸಮಾಧಾನಮಾಡಿಕೊಂಡು ಅಂತರಿಕ್ಷಚಾರಿಯಾದ ವಸುವನ್ನು ಕೇಳಿದರು.

೧೮. ಋಷಿಗಳು ಹೇಳಿದರು.—ಮಹಾಪ್ರಾಜ್ಞನೂ, ಉತ್ತಾನಪಾದನ ಪುತ್ರನೂ ಆದ ಎಲೈ ವಸುರಾಜನೇ, ನೀನು ತಿಳಿದಿರುವಂತೆ ಯಜ್ಞದ ವಿಧಿಯೆಂತು? ಪ್ರಭೂ, ನಮ್ಮ ಸಂಶಯವನ್ನು ಪರಿಹರಿಸು.

೧೯. ಸೂತಪೌರಾಣಿಕನು ಹೇಳಿದನು.—ವಸುವು ಅವರ ಮಾತನ್ನು ಕೇಳಿ ಎರಡು ಪಕ್ಷದವರ ಬಲಾಬಲಗಳನ್ನು ವಿಚಾರಮಾಡದೆ, ವೇದಶಾಸ್ತ್ರಗಳ ಸಾರವನ್ನು ಚಿಂತಿಸಿ ಯಜ್ಞದ ತತ್ತ್ವವನ್ನು ಹೇಳಿದನು.

ಯಥೋಪನೀತೈರ್ಯಷ್ಟವ್ಯಮಿತಿ ಹೋವಾಚ ಪಾರ್ಥಿವಃ।
ಯಷ್ಟವ್ಯಂ ಪಶುಭಿರ್ಮೇಧ್ಯೈರಥ ಮೂಲಫಲೈರಪಿ ॥೨೦॥

ಹಿಂಸಾಸ್ವಭಾವೋ ಯಜ್ಞಸ್ಯ ಇತಿ ಮೇ ದರ್ಶನಾಗಮಃ।
ತಥೈತೇ ಭಾವಿತಾ ಮಂತ್ರಾ ಹಿಂಸಾಲಿಂಗಾ ಮಹರ್ಷಿಭಿಃ ॥೨೧॥

ದೀರ್ಘೇಣ ತಪಸಾ ಯುಕ್ತೈಸ್ತಾರಕಾದಿನಿದರ್ಶಿಭಿಃ।
ತತ್ಪ್ರಮಾಣಂ ಮಯಾ ಚೋಕ್ತಂ ತಸ್ಮಾಚ್ಛಮಿತುಮರ್ಹಥ ॥೨೨॥

ಯದಿ ಪ್ರಮಾಣಂ ಸ್ವಾನ್ಯೇವ ಮಂತ್ರವಾಕ್ಯಾನಿ ವೋ ದ್ವಿಜಾಃ।
ತಥಾ ಪ್ರವರ್ತತಾಂ ಯಜ್ಞೋ ಹ್ಯನ್ಯಥಾ ಮಾಽನೃತಂ ವಚಃ ॥೨೩॥

ಏವಂ ಕೃತೋತ್ತರಾಸ್ತೇ ತು ಯುಜ್ಯಾತ್ಮಾನಂ ತತೋ ಧಿಯಾ।
ಅವಶ್ಯಂ ಭಾವಿನಂ ದೃಷ್ಟ್ವಾ ತಮಥೋ ಹ್ಯಶಪಂಸ್ತದಾ ॥೨೪॥

---

೨೦. "ತನ್ನ ಶಕ್ತಿಗೆ ತಕ್ಕಂತೆ ಸಂಪಾದಿಸಿದ, ಶಾಸ್ತ್ರಕ್ಕೆ ವಿರೋಧವಿಲ್ಲದ ಪಶುಗಳಿಂದಲೂ, ಕಂದಮೂಲಗಳಿಂದಲೂ, ಫಲಗಳಿಂದಲೂ ಯಾಗಮಾಡಬೇಕು. ಎಂದು ಧ್ರುವನು ಉತ್ತರವಿತ್ತನು.

೨೧-೨೨. ಯಜ್ಞದ ಸ್ವಭಾವವೇ ಹಿಂಸೆಯೆಂದು ಶಾಸ್ತ್ರಗಳಿಂದ ನಾನು ತಿಳಿದುಕೊಂಡಿದ್ದೇನೆ. ದೀರ್ಘಕಾಲ ತಪಸ್ಸು ಮಾಡಿ ತಾರಕಾದಿಮಹಾಮಂತ್ರ ಗಳನ್ನು ಸಾಕ್ಷಾತ್ಕಾರ ಮಾಡಿಕೊಂಡಿರುವ ಮಹರ್ಷಿಗಳೂ ಕೂಡ ಮಂತ್ರಗಳು ಹಿಂಸಾರ್ಥಸೂಚಕಗಳೆಂದು ಎಣಿಸುತ್ತಾರೆ. ಆ ಪ್ರಮಾಣವನ್ನು ನಿಮಗೆ ನಾನು ಹೇಳಿರುವೆನು. ಇನ್ನು ನೀವು ಸಮಾಧಾನವನ್ನು ಹೊಂದಿ.

೨೩. ಎಲೈ ಬ್ರಾಹ್ಮಣರೇ, ನೀವು ಹೇಳುವ ಮಂತ್ರವಾಕ್ಯಗಳೇ ಪ್ರಮಾಣ ವೆಂದು ನಿಮಗೆ ನಂಬಿಕೆಯಾದರೆ ನಿಮ್ಮ ಇಷ್ಟದಂತೆಯೇ ಯಜ್ಞವನ್ನು ನಡೆಸಿ; ಇಲ್ಲದಿದ್ದರೆ ಬೇಡಿ ; ಅದು ಸತ್ಯವಲ್ಲವೆಂದು ತಿಳಿಯಿರಿ."

೨೪. ವಸುರಾಜನು ಇಂತು ಉತ್ತರಕೊಡಲು ಆ ಮಹರ್ಷಿಗಳು ತಮ್ಮ ದಿವ್ಯಜ್ಞಾನದಿಂದ ನೋಡಿ, ಮುಂದೆ ಅವಶ್ಯವಾಗಿ ನಡೆಯಬೇಕಾದ ಸಂಗತಿಯನ್ನರಿತು ಪಾತಾಳದಲ್ಲಿ ಬೀಳುವಂತೆ ಅವನಿಗೆ ಶಾಪವಿತ್ತರು.

ಇತ್ಯುಕ್ತಮಾತ್ರೋ ನೃಪತಿಃ ಪ್ರವಿವೇಶ ರಸಾತಲಂ ।
ಊರ್ಧ್ವಚಾರೀ ನೃಪೋ ಭೂತ್ವಾ ರಸಾತಲಚರೋಽಭವತ್ ॥೨೫॥

ವಸುಧಾತಲಚಾರೀ ತು ತೇನ ವಾಕ್ಯೇನ ಸೋಽಭವತ್ ।
ಧರ್ಮಾಣಾಂ ಸಂಶಯಚ್ಛೇತ್ತಾ ರಾಜಾ ವಸುರಧೋಗತಃ ॥೨೬॥

ತಸ್ಮಾನ್ನ ವಾಚ್ಯೋ ಹ್ಯೇಕೇನ ಬಹುಜ್ಞೇನಾಪಿ ಸಂಶಯಃ ।
ಬಹುದ್ವಾರಸ್ಯ ಧರ್ಮಸ್ಯ ಸೂಕ್ಷ್ಮಾ ದುರನುಗಾ ಗತಿಃ ॥೨೭॥

ತಸ್ಮಾನ್ನ ನಿಶ್ಚಯಾದ್ವಕ್ತುಂ ಧರ್ಮಃ ಶಕ್ಯೋ ಹಿ ಕೇನಚಿತ್ ।
ದೇವಾನೃಷೀನುಪಾದಾಯ ಸ್ವಾಯಂಭುವಮೃತೇ ಮನುಂ ॥೨೮॥

ತಸ್ಮಾನ್ನ ಹಿಂಸಾ ಯಜ್ಞೇ ಸ್ಯಾದ್ಯದುಕ್ತಮೃಷಿಭಿಃ ಪುರಾ ।
ಋಷಿಕೋಟಿಸಹಸ್ರಾಣಿ ಸ್ವೈಸ್ತಪೋಭಿರ್ದಿವಂ ಗತಾಃ ॥೨೯॥

---

೨೫. ಋಷಿಗಳು ಹೇಳಿದ ಕೂಡಲೇ ರಾಜನು ಪಾತಾಳದಲ್ಲಿ ಬಿದ್ದನು. ಇದು ವರೆಗೆ ಗಗನದಲ್ಲಿ ಸಂಚರಿಸುತ್ತಿದ್ದವನು ಈಗ ರಸಾತಲದಲ್ಲಿ ಸಂಚರಿಸಬೇಕಾಯಿತು.

೨೬. ಆ ಮಹರ್ಷಿಗಳ ವಚನದಿಂದ ಅವನು ಭೂಲೋಕದ ಕೆಳಗಡೆಯಲ್ಲಿ ವಾಸಿಸುವವನಾದನು. ಧರ್ಮರಹಸ್ಯಗಳ ವಿಷಯದಲ್ಲಿ ತಲೆದೋರಿದ ಸಂಶಯ ಗಳನ್ನು ಪರಿಹರಿಸಬಲ್ಲ ರಾಜನಾದ ವಸುವು ಅಧೋಲೋಕಕ್ಕೆ ತೆರಳಿದನು.

೨೭. ಈ ಕಾರಣದಿಂದ ಎಷ್ಟೇ ತಿಳಿದವನಾಗಿರಲಿ ಸಂಯುಶಗ್ರಸ್ತವಾದ ವಿಷಯ ವನ್ನು ಒಬ್ಬನೇ ನಿರ್ಣಯಿಸಿ ಹೇಳಬಾರದು. ಧರ್ಮಕ್ಕೆ ನೂರಾರು ಹಾದಿಗಳುಂಟು. ಅದರ ಗತಿ ಸೂಕ್ಷ್ಮವಾದುದು. ಅದನ್ನು ಅನುಸರಿಸುವುದೂ ಕಷ್ಟ.

೨೮. ಆದುದರಿಂದ ಸ್ವಾಯಂಭುವ ಮನುವನ್ನು ಬಿಟ್ಟು ಉಳಿದ ದೇವತೆ ಗಳಿಗಾಗಲಿ, ಋಷಿಗಳಿಗಾಗಲಿ ಧರ್ಮವನ್ನು ಹೀಗೆಯೇ ಸರಿಯೆಂದು ನಿಶ್ಚಯವಾಗಿ ಹೇಳಲು ಯಾರಿಗೂ ಸಾಧ್ಯವಿಲ್ಲ.

೨೯. ಆದಕಾರಣ ಯಜ್ಞದಲ್ಲಿ ಹಿಂಸೆಯೆಂಬುದು ಯುಕ್ತವಲ್ಲ. ಇದನ್ನೇ ಹಿಂದೆ ಋಷಿಗಳೂ ಕೂಡ ಹೇಳಿರುವರು. ಕೋಟಿಗಟ್ಟಲೆ ಮುನಿಜನರು ತಮ್ಮ ತಪೋಮಹಿಮೆಯಿಂದ ಸ್ವರ್ಗವನ್ನು ಸೇರಿದ್ದಾರೆ.

ತಸ್ಮಾನ್ನ ಹಿಂಸಾಯಜ್ಞಂ ಚ ಪ್ರಶಂಸಂತಿ ಮಹರ್ಷಯಃ ।
ಉಂಛಂ ಮೂಲಂ ಫಲಂ ಶಾಕಮುದಪಾತ್ರಂ ತಪೋಧನಾಃ ॥೩೦॥

ಏತದ್ದತ್ವಾ ವಿಭವತಃ ಸ್ವರ್ಗಲೋಕೇ ಪ್ರತಿಷ್ಠಿತಾಃ ।
ಅದ್ರೋಹಶ್ಚಾಪ್ಯಲೋಭಶ್ಚ ದಮೋ ಭೂತದಯಾ ಶಮಃ ॥೩೧॥

ಬ್ರಹ್ಮಚರ್ಯಂ ತಪಃ ಶೌಚಮನುಕ್ರೋಶಂ ಕ್ಷಮಾ ಧೃತಿಃ ।
ಸನಾತನಸ್ಯ ಧರ್ಮಸ್ಯ ಮೂಲಮೇವ ದುರಾಸದಂ ॥೩೨॥

ದ್ರವ್ಯಮಂತ್ರಾತ್ಮಕೋ ಯಜ್ಞಸ್ತಪಶ್ಚ ಸಮತಾತ್ಮಕಂ ।
ಯಜ್ಞೈಶ್ಚ ದೇವಾನಾಪ್ನೋತಿ ವೈರಾಜಂ ತಪಸಾ ಪುನಃ ॥೩೩॥

ಬ್ರಹ್ಮಣಃ ಕರ್ಮಸನ್ಯಾಸಾದ್ವೈರಾಗ್ಯಾತ್ಪ್ರಕೃತೇರ್ಲಯಂ ।
ಜ್ಞಾನಾತ್ಪ್ರಾಪ್ನೋತಿ ಕೈವಲ್ಯಂ ಪಂಚೈತಾ ಗತಯಃ ಸ್ಮೃತಾಃ ॥೩೪॥

---

೩೦-೩೨. ಆದಕಾರಣದಿಂದಲೇ ಮಹರ್ಷಿಗಳು ಹಿಂಸಾರೂಪವಾದ ಯಜ್ಞವನ್ನು ಶ್ಲಾಘಿಸುವುದಿಲ್ಲ. ಏಕೆಂದರೆ ಎಷ್ಟೋಜನ ತಪೋಧನರು ಹಕ್ಕುಲಾರಿಸಿದ ಧಾನ್ಯ, ಗೆಡ್ಡೆ ಗೆಣಸು, ಹಣ್ಣು, ಕಾಯಿಪಲ್ಯ, ಜಲಕುಂಭ ಮುಂತಾದವುಗಳನ್ನು ತಮ್ಮ ಯೋಗ್ಯತೆಗೆ ತಕ್ಕಂತೆ ವಿಭವದಿಂದ ಕೊಟ್ಟು ಸ್ವರ್ಗಲೋಕವನ್ನು ಸೇರಿದ್ದಾರೆ. ದ್ರೋಹಮಾಡದಿರುವುದು, ದುರಾಸೆಯಿಲ್ಲದಿರುವುದು, ಬಾಹ್ಯೇಂದ್ರಿಯನಿಗ್ರಹ, ಪ್ರಾಣಿದಯೆ, ಅಂತರಿಂದ್ರಿಯ ನಿಗ್ರಹ, ಬ್ರಹ್ಮಚರ್ಯ, ತಪಸ್ಸು, ಶುಚಿತ್ವ, ಕರುಣೆ, ತಾಳ್ಮೆ, ಧೈರ್ಯ ಇವೆಲ್ಲವೂ ಅವಶ್ಯವಾಗಿ ಅನುಸರಿಸಬೇಕಾದ ಗುಣಗಳು. ಸನಾತನ ಧರ್ಮದ ಮೂಲವನ್ನು ತಿಳಿಯುವುದೇ ಬಹುಶ್ರಮ.

೩೩. ಯಜ್ಞವು ದ್ರವ್ಯ ಮತ್ತು ಮಂತ್ರರೂಪವಾದುದು; ತಪಸ್ಸು ಸಮತಾಭಾವಮಯವಾದುದು. ಯಜ್ಞಗಳಿಂದ ದೇವತಾಸಾನ್ನಿಧ್ಯವು ಲಭಿಸುತ್ತದೆ. ತಪಸ್ಸಿನಿಂದಲೋ ಎಂದರೆ ವೈರಾಜವೆಂಬ ದಿವ್ಯಲೋಕವು ಪ್ರಾಪ್ತವಾಗುತ್ತದೆ.

೩೪. ಅನುಷ್ಠಾನಮಾಡುವ ನಿತ್ಯನೈಮಿತ್ತಿಕ ಕರ್ಮಗಳನ್ನು ವೈರಾಗ್ಯದಿಂದ ಬ್ರಹ್ಮಾರ್ಪಣಮಾಡಿದರೆ ಪ್ರಕೃತಿಯ ಬಂಧನದಿಂದ ಪಾರಾಗುತ್ತಾನೆ. ಜ್ಞಾನದಿಂದ ಕೈವಲ್ಯವನ್ನು ಪಡೆಯುತ್ತಾನೆ. ಹೀಗೆ ಯಜ್ಞ, ತಪಸ್ಸು, ಕರ್ಮಸಂನ್ಯಾಸ, ವೈರಾಗ್ಯ ಮತ್ತು ಜ್ಞಾನಗಳೆಂಬ ಈ ಐದನ್ನೂ ಸದ್ಗತಿಸಾಧನಗಳೆಂದು ಹೇಳುತ್ತಾರೆ.

**ಏವಂ ವಿವಾದಃ ಸುಮಹಾನ್ ಯಜ್ಞಸ್ಯಾಸೀತ್ಪ್ರವರ್ತನೇ ।**
**ಋಷೀಣಾಂ ದೇವತಾನಾಂ ಚ ಪೂರ್ವೇ ಸ್ವಾಯಂಭುವೇಽಂತರೇ ॥೩೫॥**

**ತತಸ್ತೇ ಋಷಯೋ ದೃಷ್ಟ್ವಾ ಹೃತಂ ಧರ್ಮಂ ಬಲೇನ ತು ।**
**ವಸೋರ್ವಾಕ್ಯಮನಾದೃತ್ಯ ಜಗ್ಮುಸ್ತೇ ವೈ ಯಥಾಗತಂ ॥೩೬॥**

**ಗತೇಷು ಋಷಿಸಂಘೇಷು ದೇವಾ ಯಜ್ಞಮವಾಪ್ನುಯುಃ ।**
**ಶ್ರೂಯಂತೇ ಹಿ ತಪಃಸಿದ್ಧಾ ಬ್ರಹ್ಮಕ್ಷತ್ರಾದಯೋ ನೃಪಾಃ ॥೩೭॥**

**ಪ್ರಿಯವ್ರತೋತ್ತಾನಪಾದೌ ಧ್ರುವೋ ಮೇಧಾತಿಥಿರ್ವಸುಃ ।**
**ಸುಧಾಮಾ ವಿರಜಾಶ್ಚೈವ ಶಂಖಪಾದ್ರಾಜಸಸ್ತಥಾ ॥೩೮॥**

**ಪ್ರಾಚೀನಬರ್ಹಿಃ ಪರ್ಜನ್ಯೋ ಹವಿರ್ಧಾನಾದಯೋ ನೃಪಾಃ ।**
**ಏತೇ ಚಾನ್ಯೇ ಚ ಬಹವಸ್ತೇ ತಪೋಭಿರ್ದಿವಂ ಗತಾಃ ॥೩೯॥**

---

೩೫. ಹಿಂದೆ ಸ್ವಾಯಂಭುವಮನ್ವಂತರದಲ್ಲಿ ಯಜ್ಞದ ಪ್ರವರ್ತನವನ್ನು ಕುರಿತು ಋಷಿಗಳಿಗೂ ದೇವತೆಗಳಿಗೂ ಹೀಗೆ ದೊಡ್ಡ ವಿವಾದವು ನಡೆಯಿತು.

೩೬. ಬಳಿಕ ಆ ಋಷಿಗಳು ಬಲಾತ್ಕಾರದಿಂದ ಧರ್ಮಕ್ಕೆ ಲೋಪವು ಬಂದಿತೆಂದು ತಿಳಿದು, ವಸುವಿನ ವಾಕ್ಯವನ್ನು ಅಲೆಗಳೆದು ತಮ್ಮ ಇಷ್ಟಾನುಸಾರ ವಾಗಿ ಹೊರಟುಹೋದರು.

೩೭. ಋಷಿಗಳು ಹೊರಟುಹೋದ ಮೇಲೆ ದೇವತೆಗಳು ಯಜ್ಞವನ್ನು ನಡೆಸಿದರು. ಬ್ರಾಹ್ಮಣರೂ, ಎಷ್ಟೋ ಜನ ಕ್ಷತ್ರಿಯರಾಜರೂ ತಪಸ್ಸನ್ನು ಆಚರಿಸಿ ಸಿದ್ಧಿಯನ್ನು ಪಡೆದರೆಂದು ಕೇಳಿದ್ದೇವೆ.

೩೮-೩೯. ಪ್ರಿಯವ್ರತ, ಉತ್ತಾನಪಾದ, ಧ್ರುವ, ಮೇಧಾತಿಥಿ, ವಸು, ಸುಧಾಮ, ವಿರಜಸ್, ಶಂಖಪಾತ್, ರಾಜಸ, ಪ್ರಾಚೀನಬರ್ಹಿ, ಪರ್ಜನ್ಯ, ಹವಿರ್ಧಾನ ಮೊದಲಾದ ಇನ್ನೂ ಎಷ್ಟೋ ಜನ ರಾಜರು ತಪಸ್ಸಿನಿಂದ ಸ್ವರ್ಗವನ್ನೈದಿದರು.

**ರಾಜರ್ಷಯೋ ಮಹಾತ್ಮಾನೋ ಯೇಷಾಂ ಕೀರ್ತಿಃ ಪ್ರತಿಷ್ಠಿತಾ ।**
**ತಸ್ಮಾದ್ವಿಶಿಷ್ಯತೇ ಯಜ್ಞಾತ್ತಪಃ ಸರ್ವೈಸ್ತು ಕಾರಣೈಃ ॥೪೦॥**

**ಬ್ರಹ್ಮಣಾ ತಪಸಾ ಸೃಷ್ಟಂ ಜಗದ್ವಿಶ್ವಮಿದಂ ಪುರಾ ।**
**ತಸ್ಮಾನ್ನಾಪ್ನೋತಿ ತದ್ಯಜ್ಞಾತ್ತಪೋಮೂಲಮಿದಂ ಸ್ಮೃತಂ ॥೪೧॥**

**ಯಜ್ಞಪ್ರವರ್ತನಂ ಹ್ಯೇವಮಾಸೀತ್ಸ್ವಾಯಂಭುವೇಽಂತರೇ ।**
**ತದಾ ಪ್ರಭೃತಿ ಯಜ್ಞೋಽಯಂ ಯುಗೈಃ ಸಾರ್ಧಂ ಪ್ರವರ್ತಿತಃ ॥೪೨॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಮನ್ವಂತರಾನುಕಲ್ಪೇ**
**ದೇವರ್ಷಿಸಂವಾದೋ ನಾಮ ತ್ರಿಚತ್ವಾರಿಂಶದಧಿಕಶತತಮೋಽಧ್ಯಾಯಃ**

---

೪೦. ಸಿದ್ಧಿಯನ್ನು ಪಡೆದ ಮಹಾತ್ಮರಾದ ಆ ರಾಜರ್ಷಿಗಳ ಕೀರ್ತಿಯು ಸ್ಥಿರವಾಗಿ ನಿಂತಿದೆ, ಆದುದರಿಂದ ಎಲ್ಲಕಾರಣಗಳಿಂದಲೂ ಯಜ್ಞಕ್ಕಿಂತ ತಪಸ್ಸು ಶ್ರೇಷ್ಠವಾದುದು.

೪೧. ಪೂರ್ವದಲ್ಲಿ ಬ್ರಹ್ಮನು ತನ್ನ ತಪಸ್ಸಿನ ಬಲದಿಂದ ಈ ಎಲ್ಲ ಜಗತ್ತನ್ನೂ ಸೃಷ್ಟಿಸಿದನು. ಯಜ್ಞದಿಂದ ಈ ಕಾರ್ಯವು ಸಾಧ್ಯವಾಗದು. ತಪಸ್ಸೇ ಇದರ ಸಾಧನದ ಮೂಲವೆಂದು ತಿಳಿಯಬೇಕು.

೪೨. ಸ್ವಾಯಂಭುವಮನ್ವಂತರದಲ್ಲಿ ಯಜ್ಞವು ಪ್ರಾರಂಭವಾದ ರೀತಿ ಹೀಗೆ. ಅದು ಮೊದಲು ಯುಗಗಳು ಕಳೆದು ಹಾಗೆಲ್ಲ ಇದು ನಡೆದುಕೊಂಡು ಬರುತ್ತಲೇ ಇದೆ.

## ಅಧ್ಯಾಯದ ಸಾರಾಂಶ

ಸ್ವಾಯಂಭುವಮನ್ವಂತರದಲ್ಲಿ ಯಜ್ಞವು ಪ್ರಚಾರಕ್ಕೆ ಬಂದ ರೀತಿಯನ್ನು ಈ ಅಧ್ಯಾಯವು ಪ್ರತಿಪಾದಿಸುತ್ತದೆ.

ತ್ರೇತಾಯುಗದ ಪ್ರಾರಂಭದಲ್ಲಿ ಇಂದ್ರನು ಯಜ್ಞಕ್ಕೆ ತೊಡಗಿದನು. ಅನೇಕ ಜನ ಮಹರ್ಷಿಗಳು ಅದಕ್ಕಾಗಿ ಬಂದಿದ್ದರು. ಪಶುಗಳ ಹನನವನ್ನು ನೋಡಿ ಸೈರಿಸಲಾರದೆ "ಯಜ್ಞದಲ್ಲಿ ಪಶುಹಿಂಸೆಯು ಸರಿಯಲ್ಲ" ಎಂದು ಅವರು ಇಂದ್ರನಿಗೆ

ಹೇಳಿದರು. ಅವನಿಗೆ ಅವರ ಮಾತು ಸರಿಬರಲಿಲ್ಲ. ಬಳಿಕ ಋಷಿಗಳು ಶಾಸ್ತ್ರದೃಷ್ಟಿಯಿಂದ ಯಜ್ಞವಿಧಿಯನ್ನು ಹೇಳಬೇಕೆಂದು ಅಂತರಿಕ್ಷಚಾರಿಯಾದ ವಸುವನ್ನು ಕೇಳಿದರು. ಅವನು ಇಂದ್ರನ ಪಕ್ಷವನ್ನೇ ಸಮರ್ಥನಮಾಡಿದನು. ಋಷಿಗಳು ಅಸಮಾಧಾನಗೊಂಡು ಅಧೋಗತಿಗಿಳಿಯುವಂತೆ ವಸುವಿಗೆ ಶಾಪಕೊಟ್ಟು ಹೊರಟುಹೋದರು.

ಧರ್ಮವು ಬಹು ಸೂಕ್ಷ್ಮವಾದುದು ; ಮತ್ತು ಬಹುಮುಖವಾದುದು. ಎಷ್ಟೇ ಪ್ರಾಜ್ಞನಾಗಿರಲಿ ಸಂಶಯಗ್ರಸ್ತವಾದ ವಿಷಯವನ್ನು ಹೀಗೆಯೇ ಸರಿಯೆಂದು ನಿರ್ಣಯಿಸುವ ಸಾಹಸಕ್ಕೆ ಹೋಗಬಾರದು. ಎಷ್ಟೋ ಜನ ಮಹರ್ಷಿಗಳೂ, ರಾಜರೂ ತಪಸ್ಸಿನ ಬಲದಿಂದಲೇ ಸದ್ಗತಿಯನ್ನು ಪಡೆದಿರುವರು. ಬ್ರಹ್ಮನು ತನ್ನ ತಪೋಮಹಿಮೆಯಿಂದ ಜಗತ್ತನ್ನು ಸೃಷ್ಟಿಸಿದನು. ಆದುದರಿಂದ ಯಜ್ಞಕ್ಕಿಂತಲೂ ತಪಸ್ಸೇ ಶ್ರೇಷ್ಠವಾದುದು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಮನ್ವಂತರಾನುಕಲ್ಪದೊಳಗೆ ದೇವರ್ಷಿಸಂವಾದ
ವೆಂಬ ನೂರನಲವತ್ತಮೂರನೆಯ ಅಧ್ಯಾಯವು ಮುಗಿದುದು.



## ಅಥ ಚತುಶ್ಚತ್ವಾರಿಂಶದಧಿಕಶತತಮೋಽಧ್ಯಾಯಃ

॥ ಸೂತ ಉವಾಚ ॥

ಅತ ಊರ್ಧ್ವಂ ಪ್ರವಕ್ಷ್ಯಾಮಿ ದ್ವಾಪರಸ್ಯ ವಿಧಿಂ ಪುನಃ ।
ತತ್ರ ತ್ರೇತಾಯುಗೇ ಕ್ಷೀಣೇ ದ್ವಾಪರಂ ಪ್ರತಿಪದ್ಯತೇ ॥ ೧ ॥

ದ್ವಾಪರಾದೌ ಪ್ರಜಾನಾಂ ತು ಸಿದ್ಧಿಸ್ತ್ರೇತಾಯುಗೇ ತು ಯಾ ।
ಪರಿವೃತ್ತೇ ಯುಗೇ ತಸ್ಮಿಂಸ್ತತಃ ಸಾ ವೈ ಪ್ರಣಶ್ಯತಿ ॥ ೨ ॥

ತತಃ ಪ್ರವರ್ತತೇ ತಾಸಾಂ ಪ್ರಜಾನಾಂ ದ್ವಾಪರೇ ಪುನಃ ।
ಲೋಭೋಽಧೃತಿರ್ವಣಿಗ್ಯುದ್ಧಂ ತತ್ತ್ವಾನಾಮವಿನಿಶ್ಚಯಃ ॥ ೩ ॥

ಪ್ರಧ್ವಂಸಶ್ಚೈವ ವರ್ಣಾನಾಂ ಕರ್ಮಣಾಂ ತು ವಿಪರ್ಯಯಃ ।
ಯಾಚ್ಞಾ ವಧಃ ಪರೋ ದಂಡೋ ಮಾನೋ ದರ್ಪೋಽಕ್ಷಮಾ ಬಲಂ ॥

ತಥಾ ರಜಸ್ತಮೋ ಭೂಯಃ ಪ್ರವೃತ್ತೇ ದ್ವಾಪರೇ ಯುಗೇ ।
ಆದ್ಯೇ ಕೃತೇ ನಾಧರ್ಮೋಽಸ್ತಿ ಸ ತ್ರೇತಾಯಾಂ ಪ್ರವರ್ತಿತಃ ॥ ೫ ॥

---

೧. ಸೂತಪೌರಾಣಿಕನು ಹೇಳಿದನು.—ಇನ್ನು ಮುಂದೆ ದ್ವಾಪರಯುಗದ ಲಕ್ಷಣವನ್ನು ಹೇಳುವೆನು. ತ್ರೇತಾಯುಗವು ಮುಗಿದ ಬಳಿಕ ದ್ವಾಪರಯುಗವು ಪ್ರವೇಶಿಸುತ್ತದೆ.

೨. ದ್ವಾಪರಯುಗದ ಆದಿಯಲ್ಲಿ ಪ್ರಜೆಗಳಿಗೆ ತ್ರೇತಾಯುಗದಲ್ಲಿದ್ದ ಸಿದ್ಧಿಯೇ ಇರುವುದು. ಆದರೆ ಆ ಯುಗವು ಕಳೆಯುತ್ತ ಬಂದಂತೆಲ್ಲ ಅದು ಮಾಯವಾಗುತ್ತದೆ.

೩–೫. ದ್ವಾಪರಯುಗವು ಪ್ರವೃತ್ತವಾದ ಮೇಲೆ ಪ್ರಜೆಗಳಲ್ಲಿ ಲೋಭವೂ, ಅಧೈರ್ಯವೂ ತಲೆಯೆತ್ತುವುವು. ವರ್ತಕರಲ್ಲಿ ಕಲಹಗಳು ಮೂಡುವುವು. ತತ್ವಗಳ ನಿಶ್ಚಯಜ್ಞಾನವು ದೂರವಾಗುವುದು. ವರ್ಣಗಳು ನಾಶವಾಗಿ ಕರ್ಮಾಚರಣೆಯಲ್ಲಿ ವೈಪರೀತ್ಯವು ತಲೆಹಾಕುವುದು. ಪ್ರಯಾಣಿಕರ ಕೊಲೆ, ತೀವ್ರವಾದ ದಂಡ, ಗರ್ವ, ದರ್ಪ, ಅಶಾಂತಿ, ಬಲ, ರಜೋಗುಣ ಮತ್ತು ತಮೋಗುಣಗಳು ಹೆಚ್ಚುವುವು. ಮೊದಲನೆಯದಾದ ಕೃತಯುಗದಲ್ಲಿ ಅಧರ್ಮವೆಂಬುದೇ ಇರಲಿಲ್ಲ. ತ್ರೇತಾಯುಗದಲ್ಲಿ ಅದು ತಲೆಹಾಕಿತು.

**ದ್ವಾಪರೇ ವ್ಯಾಕುಲೋ ಭೂತ್ವಾ ಪ್ರಣಶ್ಯತಿ ಕಲೌ ಪುನಃ ।**
**ವರ್ಣಾನಾಂ ದ್ವಾಪರೇ ಧರ್ಮಾಃ ಸಂಕೀರ್ಯಂತೇ ತಥಾಽಽಶ್ರಮಾಃ ॥ ೬ ॥**

**ದ್ವೈಧಮುತ್ಪದ್ಯತೇ ಚೈವ ಯುಗೇ ತಸ್ಮಿಞ್ಛ್ರುತಿಸ್ಮೃತೌ ।**
**ದ್ವಿಧಾ ಶ್ರುತಿಃ ಸ್ಮೃತಿಶ್ಚೈವ ನಿಶ್ಚಯೋ ನಾಧಿಗಮ್ಯತೇ ॥ ೭ ॥**

**ಅನಿಶ್ಚಯಾವಗಮನಾದ್ಧರ್ಮತತ್ತ್ವಂ ನ ವಿದ್ಯತೇ ।**
**ಧರ್ಮತತ್ತ್ವೇ ಹ್ಯವಿಜ್ಞಾತೇ ಮತಿಭೇದಸ್ತು ಜಾಯತೇ ॥ ೮ ॥**

**ಪರಸ್ಪರಂ ವಿಭಿನ್ನಾಸ್ತೇ ದೃಷ್ಟೀನಾಂ ವಿಭ್ರಮೇಣ ತು ।**
**ಅತೋ ದೃಷ್ಟಿವಿಭಿನ್ನೈಸ್ತೈಃ ಕೃತಮತ್ಯಾಕುಲಂ ತ್ವಿದಂ ॥ ೯ ॥**

**ಏಕೋ ವೇದಶ್ಚತುಷ್ಪಾದಃ ಸಂಹೃತ್ಯ ತು ಪುನಃ ಪುನಃ ।**
**ಸಂಕ್ಷೇಪಾದಾಯುಷಶ್ಚೈವ ವ್ಯಸ್ಯತೇ ದ್ವಾಪರೇಷ್ವಿಹ ॥೧೦॥**

---

೬. ದ್ವಾಪರಯುಗದಲ್ಲಿ ಧರ್ಮವು ಅಧರ್ಮಮಿಶ್ರವಾಗಿರುವುದು. ಕಲಿಯುಗದಲ್ಲಾದರೋ ಅದು ಸಂಪೂರ್ಣವಾಗಿ ನಾಶವಾಗುವುದು. ದ್ವಾಪರಯುಗದಲ್ಲಿ ವರ್ಣಾಶ್ರಮಧರ್ಮಗಳು ಸಂಕರವಾಗುವುವು.

೭. ಆ ಯುಗದಲ್ಲಿ ಶ್ರುತಿಸ್ಮೃತಿಗಳಿಗೆ ಭಿನ್ನಾಭಿಪ್ರಾಯವೇರ್ಪಡುವುದು ವೇದಗಳಿಗೂ ಸ್ಮೃತಿಗಳಿಗೂ ಎರಡು ವಿಧವಾದ ಅರ್ಥವುಂಟಾಗಿ ನಿಶ್ಚಯಾರ್ಥವು ತೋರದೆ ಹೋಗುವುದು.

೮. ನಿಶ್ಚಯಜ್ಞಾನವಿಲ್ಲದಿರುವುದರಿಂದ ಧರ್ಮತತ್ತ್ವವು ತೋಚದು. ಧರ್ಮತತ್ತ್ವವು ಗೊತ್ತಾಗದ ಬಳಿಕ ಭಿನ್ನಾಭಿಪ್ರಾಯವು ಹುಟ್ಟುವುದು.

೯. ದೃಷ್ಟಿಭೇದದಿಂದ ಜನರಲ್ಲಿ ಪರಸ್ಪರ ಅನೈಕಮತ್ಯವು ತಲೆದೋರುವುದು. ಪ್ರಜೆಗಳಲ್ಲಿ ಐಕಮತ್ಯವಿಲ್ಲದ ಮೇಲೆ ಬಹಳ ದೊಡ್ಡ ಅನರ್ಥವು ಉಂಟಾಗುವುದು.

೧೦. ಬರಬರುತ್ತ ಮನುಷ್ಯರ ಜೀವಮಾನವು ಕುಗ್ಗುತ್ತ ಬರುವಕಾರಣ, ನಾಲ್ಕು ಪಾದಗಳಿಂದ ಕೂಡಿ ಅಖಂಡವಾಗಿದ್ದ ಒಂದೇ ವೇದವು ಪ್ರತಿಯೊಂದು ದ್ವಾಪರಯುಗದಲ್ಲಿಯೂ ಬೇರೆ ಬೇರೆಯಾಗಿ ವಿಭಾಗಿಸಲ್ಪಡುತ್ತದೆ.

ವೇದಶ್ಚೈಕಶ್ಚತುರ್ಧಾ ತು ವ್ಯಸ್ಯತೇ ದ್ವಾಪರಾದಿಷು ।
ಋಷಿಪುತ್ರೈಃ ಪುನರ್ವೇದಾ ಭಿದ್ಯಂತೇ ದೃಷ್ಟಿವಿಭ್ರಮೈಃ ॥೧೧॥

ತೇ ತು ಬ್ರಾಹ್ಮಣವಿನ್ಯಾಸೈಃ ಸ್ವರಕ್ರಮವಿಪರ್ಯಯೈಃ ।
ಸಂಹೃತಾ ಋಗ್ಯಜುಸ್ಸಾಮ್ನಾಂ ಸಂಹಿತಾಸ್ತೈರ್ಮಹರ್ಷಿಭಿಃ ॥೧೨॥

ಸಾಮಾನ್ಯಾದ್ವೈಕೃತಾಚ್ಚೈವ ದೃಷ್ಟಿಭಿನ್ನೈಃ ಕ್ವಚಿತ್ಕ್ವಚಿತ್ ।
ಬ್ರಾಹ್ಮಣಂ ಕಲ್ಪಸೂತ್ರಾಣಿ ಭಾಷ್ಯವಿದ್ಯಾಸ್ತಥೈವ ಚ ॥೧೩॥

ಅನ್ಯೇ ತು ಪ್ರಸ್ಥಿತಾಸ್ತಾನ್ ವೈ ಕೇಚಿತ್ತಾನ್ ಪ್ರತ್ಯವಸ್ಥಿತಾಃ ।
ದ್ವಾಪರೇಷು ಪ್ರವರ್ತಂತೇ ಭಿನ್ನಾರ್ಥೈಸ್ತೈಃ ಸ್ವದರ್ಶನೈಃ ॥೧೪॥

ಏಕಮಾಧ್ವರ್ಯವಂ ಪೂರ್ವಮಾಸೀದ್ದ್ವೈಧಂ ತು ತತ್ಪುನಃ ।
ಸಾಮಾನ್ಯವಿಪರೀತಾರ್ಥೈಃ ಕೃತಂ ಶಾಸ್ತ್ರಾಕುಲಂ ತ್ವಿದಂ ॥೧೫॥

---

೧೧. ಏಕರೂಪವಾಗಿದ್ದ ವೇದವು ದ್ವಾಪರಯುಗದ ಪ್ರಾರಂಭದಲ್ಲಿ ನಾಲ್ಕು ಭಾಗವಾಗಿ ವಿಂಗಡಿಸಲ್ಪಡುತ್ತದೆಯಷ್ಟೆ. ಋಷಿಪುತ್ರರು (ಇವರ ವಿಷಯವನ್ನು ಮುಂದೆ ಹೇಳಿದೆ) ತಮ್ಮ ತಮ್ಮ ದೃಷ್ಟಿತಾರತಮ್ಯಗಳಿಂದ ಅವುಗಳಿಗೆ ಅರ್ಥಭೇದ ಗಳನ್ನು ಕಲ್ಪಿಸುತ್ತಾರೆ.

೧೨. ಮಹರ್ಷಿಗಳು ಸ್ವರವಿನ್ಯಾಸ ಪ್ರಭೇದಗಳ ಸಹಿತವಾಗಿ ಬ್ರಾಹ್ಮಣ ಗಳನ್ನು ಸೇರಿಸಿ ಋಗ್ಯಜುಸ್ಸಾಮಗಳೆಂಬ ಮೂರು ವೇದಗಳ ಸಂಹಿತೆಗಳನ್ನು ಸಂಗ್ರಹಿಸಿದರು.

೧೩. ಮಹರ್ಷಿಗಳ ಅಭಿಪ್ರಾಯದಲ್ಲಿ ಸಮಾನತೆಯಿತ್ತು ; ಒಂದೊಂದು ಕಡೆ ದೃಷ್ಟಿಭೇದದಿಂದ ವ್ಯತ್ಯಾಸವೂ ಇದ್ದಿತು. ಬ್ರಾಹ್ಮಣ, ಕಲ್ಪಸೂತ್ರ ಮತ್ತು ಭಾಷ್ಯಗಳನ್ನು ಅವರು ವೇದಾರ್ಥಪರಿಸ್ಫೂರ್ತಿಗಾಗಿ ಪ್ರಚುರಗೊಳಿಸಿದರು.

೧೪. ಕೆಲವರು ಅವರ ಅಭಿಪ್ರಾಯವನ್ನು ಅನುಸರಿಸಿದರು. ಮತ್ತೆ ಕೆಲವರು ಅವರಿಗೆ ವಿರುದ್ಧವಾಗಿ ಹೊರಟರು. ದ್ವಾಪರಯುಗಗಳಲ್ಲಿ ಋಷಿಗಳು ಭಿನ್ನಾರ್ಥ ಗಳಿಂದ ಕೂಡಿದ ತಮ್ಮ ತಮ್ಮ ದರ್ಶನಗಳನ್ನು ಪ್ರಚಾರಕ್ಕೆ ತಂದರು.

೧೫-೧೬. ಯಜುಶ್ಶಾಖೆಯು ಆದಿಯಲ್ಲಿ ಒಂದೇ ಆಗಿದ್ದಿತು. ಬಳಿಕ ಅದು ಕೃಷ್ಣಯಜುರ್ವೇದ ಮತ್ತು ಶುಕ್ಲಯಜುರ್ವೇದಗಳೆಂಬ ಎರಡು ಕವಲಾಗಿ ಒಡೆ ಯಿತು. ಇವುಗಳಲ್ಲಿ ಪ್ರತಿಪಾದ್ಯವಾದ ವಿಷಯಗಳು ಸಮಾನವೂ ಆಗಿವೆ; ಎಷ್ಟೋ

**ಅಧ್ವರ್ಯವಂ ಚ ಪ್ರಸ್ಥಾನೈರ್ಬಹುಧಾ ವ್ಯಾಕುಲೀಕೃತಂ ।**
**ತಥೈವಾಥರ್ವಣಾಂ ಸಾಮ್ನಾಂ ವಿಕಲ್ಪೈಃ ಸ್ವಸ್ಯ ಸಂಕ್ಷಯೈಃ ॥೧೬॥**

**ವ್ಯಾಕುಲೋ ದ್ವಾಪರೇಷ್ವರ್ಥಃ ಕ್ರಿಯತೇ ಭಿನ್ನದರ್ಶನೈಃ ।**
**ದ್ವಾಪರೇ ಸನ್ನಿವೃತ್ತೇ ತು ವೇದಾ ನಶ್ಯಂತಿ ವೈ ಕಲೌ ॥೧೭॥**

**ತೇಷಾಂ ವಿಪರ್ಯಯೋತ್ಪನ್ನಾ ಭವಂತಿ ದ್ವಾಪರೇ ಪುನಃ ।**
**ಅದೃಷ್ಟಿರ್ಮರಣಂ ಚೈವ ತಥೈವ ವ್ಯಾಧ್ಯುಪದ್ರವಾಃ ॥೧೮॥**

**ವಾಙ್ಮನಃಕರ್ಮಭಿರ್ದುಃಖೈರ್ನಿರ್ವೇದೋ ಜಾಯತೇ ತತಃ ।**
**ನಿರ್ವೇದಾಜ್ಜಾಯತೇ ತೇಷಾಂ ದುಃಖಮೋಕ್ಷವಿಚಾರಣಾ ॥೧೯॥**

---

ಕಡೆ ಪರಸ್ಪರ ವಿರುದ್ಧವೂ ಆಗಿವೆ. (ಉದಾಹರಣೆಗಾಗಿ ಕಾಣಗಾರ್ದಭಯಾಗ) ಮತ್ತು ಯಜುರ್ವೇದದ ಅರ್ಥವನ್ನು ವಿವರಿಸುವುದಕ್ಕಾಗಿ ಬೋಧಾಯನ, ಆಪಸ್ತಂಭ, ಸತ್ಯಾಷಾಢ, ಕಾತ್ಯಾಯನ ಮೊದಲಾದ ಮಹರ್ಷಿಗಳು ಬೇರೆಬೇರೆ ಸೂತ್ರಗಳನ್ನು ರಚಿಸಿದರು. ಅವರ ಅಭಿಪ್ರಾಯಗಳಲ್ಲಿಯೂ ಸಹ ಹಲವು ಕಡೆ ಭೇದವು ಕಾಣಬರುತ್ತದೆ. ಹೀಗೆಯೇ ಸಾಮಸೂತ್ರಗಳಲ್ಲಿಯೂ, ಆಥರ್ವಣಸೂತ್ರಗಳಲ್ಲಿಯೂ ಎಷ್ಟೋ ಅರ್ಥಗಳು ವೈಕಲ್ಪಿಕವಾಗಿವೆ. ಅಲ್ಲದೆ ಕೆಲವು ಸಂದರ್ಭಗಳಲ್ಲಿ ಮಂತ್ರಗಳೂ ಲುಪ್ತವಾಗಿವೆ.

೧೭. ದ್ವಾಪರಯುಗದಲ್ಲಿ ಭಿನ್ನಭಿನ್ನ ಶಾಸ್ತ್ರಗಳ ಪ್ರಾಚುರ್ಯದಿಂದ ವೇದಾರ್ಥವು ದುರವಗಾಹವಾಗುತ್ತದೆ. ಆ ಯುಗವು ಕಳೆದುಹೋಗಿ ಕಲಿಯುಗವು ಬಂದಾಗ ವೇದಗಳು ಲುಪ್ತವಾಗುವುವು.

೧೮. ಹೀಗೆ ಶಾಸ್ತ್ರಗಳ ಅರ್ಥವಿಚಾರದಲ್ಲಿ ಉಂಟಾದ ಭಿನ್ನಾಭಿಪ್ರಾಯಗಳ ಫಲವಾಗಿ ದ್ವಾಪರಯುಗದಲ್ಲಿ ಅಜ್ಞಾನ, ಅಕಾಲಮರಣ ಮತ್ತು ರೋಗಾದ್ಯುಪದ್ರವಗಳು ಸಂಭವಿಸುತ್ತವೆ.

೧೯. ಮಾತಿನಿಂದ, ಮನಸ್ಸಿನಿಂದ ಮತ್ತು ಕಾರ್ಯಗಳಿಂದ ಜನರಿಗೆ ಬಗೆಬಗೆಯ ದುಃಖಗಳು ಹುಟ್ಟುವುವು. ತರುವಾಯ ಅವರಿಗೆ ನಿರ್ವೇದವು ತಲೆದೋರುವುದು. ಆದರ ಫಲವಾಗಿ "ಈ ದುಃಖದಿಂದ ಬಿಡುಗಡೆಹೊಂದುವ ಉಪಾಯವಾವುದು" ಎಂಬ ವಿಮರ್ಶೆಯು ಮೂಡುವುದು.

ವಿಚಾರಣಾಯಾಂ ವೈರಾಗ್ಯಂ ವೈರಾಗ್ಯಾದ್ದೋಷದರ್ಶನಂ ।
ದೋಷಾಣಾಂ ದರ್ಶನಾಚ್ಚೈವ ಜ್ಞಾನೋತ್ಪತ್ತಿಸ್ತು ಜಾಯತೇ ॥೨೦॥

ತೇಷಾಂ ಮೇಧಾವಿನಾಂ ಪೂರ್ವಂ ಮರ್ತ್ಯೇ ಸ್ವಾಯಂಭುವೇಽಂತರೇ ।
ಉತ್ಪತ್ಸ್ಯಂತೀಹ ಶಾಸ್ತ್ರಾಣಾಂ ದ್ವಾಪರೇ ಪರಿಪಂಥಿನಃ ॥೨೧॥

ಆಯುರ್ವೇದವಿಕಲ್ಪಾಶ್ಚ ಅಂಗಾನಾಂ ಜ್ಯೋತಿಷಸ್ಯ ಚ ।
ಅರ್ಥಶಾಸ್ತ್ರವಿಕಲ್ಪಾಶ್ಚ ಹೇತುಶಾಸ್ತ್ರವಿಕಲ್ಪನಂ ॥೨೨॥

ಪ್ರಕ್ರಿಯಾ ಕಲ್ಪಸೂತ್ರಾಣಾಂ ಭಾಷ್ಯವಿದ್ಯಾವಿಕಲ್ಪನಂ ।
ಸ್ಮೃತಿಶಾಸ್ತ್ರಪ್ರಭೇದಾಶ್ಚ ಪ್ರಸ್ಥಾನಾನಿ ಪೃಥಕ್ಪೃಥಕ್ ॥೨೩॥

ದ್ವಾಪರೇಷ್ವಭಿವರ್ತಂತೇ ಮತಿಭೇದಾಸ್ತಥಾ ನೃಣಾಂ ।
ಮನಸಾ ಕರ್ಮಣಾ ವಾಚಾ ಕೃಚ್ಛ್ರಾದ್ವಾರ್ತಾ ಪ್ರಸಿಧ್ಯತಿ ॥೨೪॥

---

೨೦. ವಿಷಯವಿಮರ್ಶೆಯಿಂದ ವೈರಾಗ್ಯವೂ, ವೈರಾಗ್ಯದಿಂದ ಇಂದ್ರಿಯಾರ್ಥಗಳಲ್ಲಿ ದೋಷಬುದ್ಧಿಯೂ, ದೋಷಜ್ಞಾನದಿಂದ ಜ್ಞಾನೋತ್ಪತ್ತಿಯೂ ಉಂಟಾಗುವುವು.

೨೧. ಹಿಂದೆ ಸ್ವಾಯಂಭುವಮನ್ವಂತರದಲ್ಲಿ ನಡೆದಂತೆಯೇ ಒಂದೊಂದು ದ್ವಾಪರಯುಗದಲ್ಲಿಯೂ ಜ್ಞಾನಿಗಳು ಜನಿಸಿ, ಒಬ್ಬರಿಗಿಂತ ಮತ್ತೊಬ್ಬರು ಪ್ರತಿಭಾಸಂಪನ್ನರಾಗಿ ವಿಧವಿಧವಾದ ಶಾಸ್ತ್ರಗಳನ್ನು ಲೋಕದಲ್ಲಿ ಪ್ರವರ್ತನ ಮಾಡುತ್ತಾರೆ.

೨೨-೨೩. ವೈದ್ಯಶಾಸ್ತ್ರ ಪ್ರಭೇದಗಳು, ವೇದಾಂಗಗಳು, ಜ್ಯೋತಿಷ, ಅರ್ಥಶಾಸ್ತ್ರ ಮತ್ತು ಯುಕ್ತಿಶಾಸ್ತ್ರಗಳ ಪ್ರಭೇದಗಳು ಎಷ್ಟೋ ಇವೆ. ಕಲ್ಪಸೂತ್ರಗಳ ಪ್ರಕ್ರಿಯೆ, ಭಾಷ್ಯಗಳ ವೈವಿಧ್ಯ, ಧರ್ಮಶಾಸ್ತ್ರಗಳ ಪ್ರಭೇದ ಇವೆಲ್ಲವೂ ಬೇರೆ ಬೇರೆಯಾಗಿ ಶಾಖೋಪಶಾಖೆಗಳಾಗಿ ಜ್ಞಾನಕ್ಕೆ ಸಾಧನವಾಗಿ ಹೊರಟಿವೆ.

೨೪. ದ್ವಾಪರಯುಗದ ಜನರ ಬುದ್ಧಿಯಲ್ಲಿ ಐಕಕಂಠ್ಯವಿಲ್ಲ. ಮನಸ್ಸು, ಮಾತು ಮತ್ತು ಕೆಲಸವೆಂಬ ತ್ರಿಕರಣಗಳಲ್ಲಿ ಹೊಂದಿಕೆಯಿಲ್ಲ. ಜೀವನವನ್ನು ಸಾಗಿಸುವುದೂ ಸಹ ಅವರಿಗೆ ಕಷ್ಟವೇ.

ದ್ವಾಪರೇ ಸರ್ವಭೂತಾನಾಂ ಕಾಲಃ ಕ್ಲೇಶಪರಃ ಸ್ಮೃತಃ ।
ಲೋಭೋಽಧೃತಿರ್ವಣಿಗ್ಯುದ್ಧಂ ತತ್ತ್ವಾನಾಮವಿನಿಶ್ಚಯಃ ॥೨೫॥

ವೇದಶಾಸ್ತ್ರಪ್ರಣಯನಂ ವರ್ಣಾನಾಂ ಸಂಕರಸ್ತಥಾ ।
ವರ್ಣಾಶ್ರಮಪರಿಧ್ವಂಸಃ ಕಾಮದ್ವೇಷೌ ತಥೈವ ಚ ॥೨೬॥

ಪೂರ್ಣೇ ವರ್ಷಸಹಸ್ರೇ ದ್ವೇ ಪರಮಾಯುಸ್ತದಾ ನೃಣಾಂ ।
ನಿಶ್ಶೇಷೇ ದ್ವಾಪರೇ ತಸ್ಮಿಂಸ್ತಸ್ಯ ಸಂಧ್ಯಾ ತು ಪಾದತಃ ॥೨೭॥

ಗುಣಹೀನಾಸ್ತು ತಿಷ್ಠಂತಿ ಧರ್ಮಸ್ಯ ದ್ವಾಪರಸ್ಯ ತು ।
ತಥೈವ ಸಂಧ್ಯಾ ಪಾದೇನ ಅಂಶಸ್ತಸ್ಯಾಂ ಪ್ರತಿಷ್ಠಿತಃ ॥೨೮॥

ದ್ವಾಪರಸ್ಯ ತು ಪರ್ಯಾಯಾ ಪುಷ್ಯಸ್ಯ ಚ ನಿಬೋಧತ ।
ದ್ವಾಪರಸ್ಯಾಂಶಶೇಷೇ ತು ಪ್ರತಿಪತ್ತಿಃ ಕಲೇರಥ ॥೨೯॥

---

೨೫-೨೬. ದ್ವಾಪರದಲ್ಲಿ ಪ್ರಾಣಿಗಳಿಗೆಲ್ಲ ಕಾಲವು ಕಷ್ಟಕರವಾಗಿಯೇ ಇರುವುದು. ಜನರಲ್ಲಿ ದುರಾಸೆ ಮತ್ತು ಅಧೈರ್ಯಗಳು ಹೆಚ್ಚುವುವು. ವರ್ತಕರಲ್ಲಿ ಕಲಹಗಳುಂಟಾಗುವುವು. ತತ್ತ್ವಗಳ ನಿಶ್ಚಯಜ್ಞಾನವಿರುವುದಿಲ್ಲ. ವೇದಶಾಸ್ತ್ರಗಳಿಗೆ ಅವರವರ ಬುದ್ಧಿಗೆ ಅನುಸಾರವಾದ ವ್ಯಾಖ್ಯಾನಗಳು ರಚಿತವಾಗುವುವು. ವರ್ಣಗಳ ಸಾಂಕರ್ಯವೂ, ವರ್ಣಾಶ್ರಮಗಳ ನಾಶವೂ, ಕಾಮದ್ವೇಷಗಳ ಅಭಿವೃದ್ಧಿಯೂ ಆಗುವುವು.

೨೭. ಮನುಷ್ಯರ ಪೂರ್ಣಾಯುಸ್ಸೆಂದರೆ ಆಗ ಎರಡುಸಾವಿರ ವರ್ಷಗಳು. ಹೀಗೆ ದ್ವಾಪರಯುಗವು ಸಂಪೂರ್ಣವಾಗಿ ಮುಗಿದಮೇಲೆ ಅದರ ಸಂಧ್ಯಾಕಾಲವು ಪ್ರಾರಂಭವಾಗುವುದು. ಆ ಕಾಲದಲ್ಲಿ ಯುಗಧರ್ಮವು ಕಾಲುಪಾಲಿನಷ್ಟಿರುವುದು.

೨೮. ಆ ಸಂಧ್ಯಾಕಾಲದಲ್ಲಿ ದ್ವಾಪರಯುಗದ ಧರ್ಮಗಳೂ, ಸದ್ಗುಣಗಳೂ, ಜನರಲ್ಲಿ ಅಳಿಸಿಹೋಗುವುವು. ಸಂಧ್ಯಾಂಶದಲ್ಲೋ ಎಂದರೆ ಸಂಧ್ಯಾಕಾಲದ ಕಾಲು ಪಾಲಿನಷ್ಟು ಮಾತ್ರ ಧರ್ಮವು ನಿಲ್ಲುವುದು.

೨೯. ದ್ವಾಪರಯುಗದ ಸಂಧ್ಯಾಂಶದ ಮತ್ತು ಕಲಿಯುಗದ ಲಕ್ಷಣಗಳನ್ನು ಕೇಳಿರಿ. ದ್ವಾಪರಯುಗದ ಸಂಧ್ಯಾಂಶಶೇಷದಲ್ಲಿ ಕಲಿಯುಗದ ಲಕ್ಷಣವು ತೋರಿಬರುವುದು.

ಹಿಂಸಾ ಸ್ತೇಯಾನೃತಂ ಮಾಯಾ ದಂಭಶ್ಚೈವ ತಪಸ್ವಿನಾಂ ।
ಏತೇ ಸ್ವಭಾವಾಃ ಪುಷ್ಯಸ್ಯ ಸಾಧಯಂತಿ ಚ ತಾಃ ಪ್ರಜಾಃ ॥೩೦॥

ಏಷ ಧರ್ಮಃ ಸ್ಮೃತಃ ಕೃತ್ಸ್ನೇ ಧರ್ಮಶ್ಚ ಪರಿಹೀಯತೇ ।
ಮನಸಾ ಕರ್ಮಣಾ ವಾಚಾ ವಾರ್ತಾಃ ಸಿಧ್ಯಂತಿ ವಾ ನ ವಾ ॥೩೧॥

ಕಲಿಃ ಪ್ರಮಾರಕೋ ರೋಗಃ ಸತತಂ ಚಾಪಿ ಕ್ಷುದ್ಭಯಂ ।
ಅನಾವೃಷ್ಟಿಭಯಂ ಚೈವ ದೇಶಾನಾಂ ಚ ವಿಪರ್ಯಯಃ ॥೩೨॥

ನ ಪ್ರಮಾಣೇ ಸ್ಥಿತಿರ್ಹ್ಯಸ್ತಿ ಪುಷ್ಯೇ ಘೋರೇ ಯುಗೇ ಕಲೌ ।
ಗರ್ಭಸ್ಥೋ ಮ್ರಿಯತೇ ಕಶ್ಚಿದ್ಯೌವನಸ್ಥಸ್ತಥಾ ಪರಃ ॥೩೩॥

ಸ್ಥಾವಿರ್ಯೇ ಮಧ್ಯಕೌಮಾರೇ ಮ್ರಿಯಂತೇ ಚ ಕಲೌ ಪ್ರಜಾಃ ।
ಅಲ್ಪತೇಜೋಬಲಾಃ ಪಾಪಾ ಮಹಾಕೋಪಾ ಹ್ಯಧಾರ್ಮಿಕಾಃ ॥೩೪॥

---

೩೦. ಹಿಂಸೆ, ಕಳುವು, ಸುಳ್ಳು, ಮಾಯೆ, ಡಂಭಾಚಾರದ ತಪಸ್ಸು ಇವು ಕಲಿಯುಗದ ಸ್ವಭಾವಗಳು. ಈ ಲಕ್ಷಣಗಳೇ ಪ್ರಜೆಗಳಲ್ಲೆಲ್ಲ ರೂಢಿಗೆ ಬರುವುವು.

೩೧. ಇದೇ ಧರ್ಮವೆನಿಸಿಕೊಳ್ಳುವುದು. ವೇದೋಕ್ತವಾದ ವರ್ಣಾಶ್ರಮ ಧರ್ಮವು ಸಂಪೂರ್ಣವಾಗಿ ನಷ್ಟವಾಗುವುದು. ಮನಸ್ಸು, ಮಾತು ಮತ್ತು ಕಾರ್ಯ ಗಳೆಂಬ ತ್ರಿಕರಣಗಳಲ್ಲಿಯೂ ಧರ್ಮಲೋಪವು ಕಂಡುಬರುವುದು. ಜನರಿಗೆ ಜೀವಿಕೆ ನಡೆಯುವುದೋ ಇಲ್ಲವೋ ಹೇಳುವುದೇ ಕಷ್ಟ.

೩೨. ಕಲಿಯೆಂಬುದು ಪ್ರಾಣಾಂತಕವಾದ ರೋಗ. ಅದರಲ್ಲಿ ಯಾವಾಗಲೂ ಹಸಿವು ಮತ್ತು ಅನಾವೃಷ್ಟಿಗಳ ಭಯವು ಇದ್ದೇ ಇರುವುದು. ದೇಶದ ಲಕ್ಷಣಗಳು ಕೂಡ ವ್ಯತ್ಯಾಸವಾಗುವುವು.

೩೩-೩೪. ಪುಷ್ಯವೆಂಬ ನಾಮಾಂತರವುಳ್ಳ ಭಯಂಕರವಾದ ಕಲಿಯುಗ ದಲ್ಲಿ ಜನರು ಶಾಸ್ತ್ರಾಧಾರಗಳಿಗೆ ಬದ್ಧರಾಗಿ ನಡೆಯುವುದಿಲ್ಲ. ಗರ್ಭದಲ್ಲಿರುವಾಗಲೇ ಒಬ್ಬನು ಸಾಯುವನು. ಯೌವನ ಬಂದಾಗ ಮತ್ತೊಬ್ಬನು ಮೃತಿಯನ್ನೈದುವನು. ಮುಪ್ಪಿನಲ್ಲಿಯೂ ನಡುವಯಸ್ಸಿನಲ್ಲಿಯೂ ಮರಣಕ್ಕೆ ತುತ್ತಾಗುವವರು ಎಷ್ಟೋ ಮಂದಿ. ಪ್ರಜೆಗಳ ತೇಜಸ್ಸೂ ಬಲವೂ ಕ್ಷೀಣವಾಗುವುವು. ಅವರು ಪಾಪನಿರತರೂ, ಬಹು ಕೋಪಿಷ್ಠರೂ, ಅಧಾರ್ಮಿಕರೂ ಆಗುವರು.

ಅನೃತವ್ರತಲುಬ್ಧಾಶ್ಚ ಪುಷ್ಯೇ ಚೈವ ಪ್ರಜಾಃ ಸ್ಥಿತಾಃ ।
ದುರಿಷ್ಟೈರ್ದುರಧೀತೈಶ್ಚ ದುರಾಚಾರೈರ್ದುರಾಗಮೈಃ ॥೩೫॥

ವಿಪ್ರಾಣಾಂ ಕರ್ಮದೋಷೈಸ್ತೈಃ ಪ್ರಜಾನಾಂ ಜಾಯತೇ ಭಯಂ ।
ಹಿಂಸಾ ಮಾನಸ್ತಥೇರ್ಷ್ಯಾ ಚ ಕ್ರೋಧೋಽಸೂಯಾಽಕ್ಷಮಾಽಧೃತಿಃ ॥೩೬॥

ಪುಷ್ಯೇ ಭವಂತಿ ಜಂತೂನಾಂ ಲೋಭೋ ಮೋಹಶ್ಚ ಸರ್ವಶಃ ।
ಸಂಕ್ಷೋಭೋ ಜಾಯತೇಽತ್ಯರ್ಥಂ ಕಲಿಮಾಸಾದ್ಯ ವೈ ಯುಗಂ ॥೩೭॥

ನಾಧೀಯತೇ ತಥಾ ವೇದಾನ್ನ ಯಜಂತೇ ದ್ವಿಜಾತಯಃ ।
ಉತ್ಸೀದಂತಿ ತಥಾ ಚೈವ ವೈಶ್ಯೈಃ ಸಾರ್ಧಂ ತು ಕ್ಷತ್ರಿಯಾಃ ॥೩೮॥

ಶೂದ್ರಾಣಾಂ ಮಂತ್ರಯೋನಿಸ್ತು ಸಂಬಂಧೋ ಬ್ರಾಹ್ಮಣೈಃ ಸಹ ।
ಭವತೀಹ ಕಲೌ ತಸ್ಮಿಞ್ಛಯನಾಸನಭೋಜನೈಃ ॥೩೯॥

---

೩೫. ಕಲಿಯುಗದ ಜನರಿಗೆ ಅಸತ್ಯವೇ ವ್ರತ. ಅವರ ಆಸೆಗೆ ಪಾರವೇ ಇಲ್ಲ. ಅವರ ಅಭಿಲಾಷೆ, ವಿದ್ಯಾಭ್ಯಾಸ, ಆಚಾರ, ಶಾಸ್ತ್ರ ಇವೆಲ್ಲವೂ ದೂಷ್ಯವೇ ಆಗಿರುವುವು.

೩೬–೩೭. ಬ್ರಾಹ್ಮಣರು ನಿತ್ಯನೈಮಿತ್ತಿಕ ಕರ್ಮಾನುಷ್ಠಾನದಲ್ಲಿ ಶ್ರದ್ಧೆಯನ್ನು ತೊರೆಯುವರು. ಅವರ ಆ ದೋಷದಿಂದ ಪ್ರಜೆಗಳೆಲ್ಲರಿಗೂ ಭೀತಿಯುಂಟಾಗುವುದು. ಹಿಂಸೆ, ಗರ್ವ, ಅಸೂಯೆ, ಕೋಪ, ಅಸಹನೆ, ಅಧೈರ್ಯ, ಲೋಭ, ಮೋಹ ಇವು ಎಲ್ಲರಲ್ಲಿಯೂ ತಾಂಡವವಾಡುವುವು. ಕ್ಷಾಮ, ರೋಗ ಮುಂತಾದುವುಗಳ ಅಪರಿಮಿತವಾದ ಬಾಧೆಯು ಕಲಿಯುಗದ ಒಂದು ವಿಶೇಷಲಕ್ಷಣವೆಂದು ತಿಳಿಯಬೇಕು.

೩೮. ಬ್ರಾಹ್ಮಣರು ವೇದಾಭ್ಯಾಸವನ್ನು ಮಾಡರು; ಯಜ್ಞಯಾಗಗಳನ್ನು ಆಚರಿಸರು. ವೈಶ್ಯರೂ ಕ್ಷತ್ರಿಯರೂ ತಮ್ಮತಮ್ಮ ಸ್ಥಾನಗೌರವಗಳನ್ನು ಕಳೆದುಕೊಂಡು ದುರ್ದಶೆಗೆ ಬರುವರು.

೩೯. ಬ್ರಾಹ್ಮಣರು ಶೂದ್ರರೊಡನೆ ಇಟ್ಟುಕೊಂಡಿದ್ದ ಹಿತೋಪದೇಶರೂಪವಾದ ಸಂಬಂಧವು ಹೋಗಿ ಕಲಿಯುಗದಲ್ಲಿ ಅವರೊಡನೆ ಮಲಗುವುದು, ಕೂರುವುದು, ಊಟಮಾಡುವುದು ಮುಂತಾದ ರೂಪಗಳಿಗೆ ತಿರುಗುವುದು.

ರಾಜಾನಃ ಶೂದ್ರಭೂಯಿಷ್ಠಾಃ ಪಾಷಂಡಾನಾಂ ಪ್ರವೃತ್ತಯಃ ।
ಕಾಷಾಯಿಣಶ್ಚ ನಿಷ್ಕಚ್ಛಾಸ್ತಥಾ ಕಾಪಾಲಿನಶ್ಚ ಹ ॥೪೦॥

ಯೇ ಚಾನ್ಯೇ ದೇವವ್ರತಿನಸ್ತಥಾ ಯೇ ಧರ್ಮದೂಷಕಾಃ ।
ದಿವಾವೃತ್ತಾಶ್ಚ ಯೇ ಕೇಚಿದ್ವೃತ್ಯರ್ಥಂ ಶ್ರುತಿಲಿಂಗಿನಃ ॥೪೧॥

ಏವಂವಿಧಾಶ್ಚ ಯೇ ಕೇಚಿದ್ಭವಂತೀಹ ಕಲೌ ಯುಗೇ ।
ಅಧೀಯತೇ ತದಾ ವೇದಾಞ್ಛೂದ್ರಾ ಧರ್ಮಾರ್ಥಕೋವಿದಾಃ ॥೪೨॥

ಯಜಂತಿ ಹ್ಯಶ್ವಮೇಧೈಸ್ತು ರಾಜಾನಃ ಶೂದ್ರಯೋನಯಃ ।
ಸ್ತ್ರೀಬಾಲಗೋವಧಂ ಕೃತ್ವಾ ಹತ್ವಾ ಚೈವ ಪರಸ್ಪರಂ ॥೪೩॥

ಉಪಹತ್ಯ ತಥಾನ್ಯೋನ್ಯಂ ಸಾಧಯಂತಿ ತದಾ ಪ್ರಜಾಃ ।
ದುಃಖಪ್ರಚುರತಾಲ್ಪಾಯುರ್ದೇಶೋತ್ಸಾದಃ ಸರೋಗತಾ ॥೪೪॥

---

೪೦-೪೧. ರಾಜರುಗಳಲ್ಲಿ ಶೂದ್ರರೇ ಹೆಚ್ಚು. ಅವರ ನಡೆವಳಿಕೆಗಳು ವೇದ ವಿರುದ್ಧವಾದುವು. ಜೀವನಕ್ಕೋಸ್ಕರವಾಗಿ ಜನರು ಹಲವು ವೇಷಗಳನ್ನು ಧರಿಸುವರು. ಕೆಲವರು ಕಾವಿಬಟ್ಟೆಯನ್ನು ಉಡುವರು; ಮತ್ತೆ ಕೆಲವರು ಕಚ್ಚೆ ಹಾಕದೆ ದಟ್ಟಿಯನ್ನು ಸುತ್ತುವರು. ಹಲವರು ಕಾಪಾಲಿಕರ ವೇಷವನ್ನು ಹಾಕಿಕೊಳ್ಳುವರು. ಉಳಿದವರು ದೈವಭಕ್ತರಂತೆ ತೋರ್ಪಡಿಸಿಕೊಳ್ಳುತ್ತ ಧರ್ಮವನ್ನೇ ಹಾಳುಮಾಡುವರು. ಎಷ್ಟೋ ಜನರು ಹಗಲುಹೊತ್ತಿನಲ್ಲಿ ಮಾತ್ರ ಸದಾಚಾರ ಶೀಲರಂತೆ ನಟಿಸುವರು. ಹೀಗೆ ಎಲ್ಲರೂ ಹೊಟ್ಟೆಗಾಗಿ ವೇದಮಾರ್ಗಾವಲಂಬಿಗಳಾಗಿರುವರು.

೪೨. ಕಲಿಯುಗದಲ್ಲಿ ಇಂತಹವರು ಇನ್ನೂ ಎಷ್ಟೋ ಜನರಿರುವರು. ಶೂದ್ರರು ವೇದಾಭ್ಯಾಸವನ್ನು ಮಾಡಿ ಧರ್ಮಶಾಸ್ತ್ರಪಾರಂಗತರೆನಿಸಿಕೊಳ್ಳುವರು.

೪೩. ಶೂದ್ರವಂಶೋತ್ಪನ್ನರಾದ ರಾಜರು ಅಶ್ವಮೇಧಯಾಗಗಳನ್ನು ಮಾಡುವರು. ಅವರು ಸ್ತ್ರೀವಧೆ, ಬಾಲವಧೆ, ಗೋವಧೆ ಇವುಗಳಿಗೆ ಹೇಸುವುದಿಲ್ಲ; ಒಬ್ಬರನ್ನೊಬ್ಬರು ಕೊಲ್ಲುವರು.

೪೪-೪೫. ಆಗ ಪ್ರಜೆಗಳು ಒಬ್ಬರನ್ನೊಬ್ಬರು ವಧಿಸಿ ಸ್ವಾರ್ಥವನ್ನು ಸಾಧಿಸಿಕೊಳ್ಳುವರು. ವಿಶೇಷವಾದ ದುಃಖ, ಅಲ್ಪಾಯುಸ್ಸು, ದೇಶನಾಶ, ರೋಗ

**ಅಧರ್ಮಾಭಿನಿವೇಶಿತ್ವಂ ತಮೋವೃತ್ತಂ ಕಲೌ ಸ್ಮೃತಂ ।**
**ಭ್ರೂಣಹತ್ಯಾ ಪ್ರಜಾನಾಂ ಚ ತಥಾ ಹ್ಯೇವಂ ಪ್ರವರ್ತತೇ ॥೪೫॥**

**ತಸ್ಮಾದಾಯುರ್ಬಲಂ ರೂಪಂ ಪ್ರಹೀಯಂತೇ ಕಲೌ ಯುಗೇ ।**
**ದುಃಖೇನಾಭಿಪ್ಲುತಾನಾಂ ಚ ಪರಮಾಯುಃ ಶತಂ ನೃಣಾಂ ॥೪೬॥**

**ಭೂತ್ವಾ ಚ ನ ಭವಂತೀಹ ವೇದಾಃ ಕಲಿಯುಗೇಽಖಿಲಾಃ ।**
**ಉತ್ಸೀದಂತೇ ತಥಾ ಯಜ್ಞಾಃ ಕೇವಲಂ ಧರ್ಮಹೇತವಃ ॥೪೭॥**

**ಏಷಾ ಕಲಿಯುಗಾವಸ್ಥಾ ಸಂಧ್ಯಾಂಶೌ ತು ನಿಬೋಧತ ।**
**ಯುಗೇ ಯುಗೇ ತು ಹೀಯಂತೇ ತ್ರೀಂಸ್ತ್ರೀನ್ ಪಾದಾಂಶ್ಚ ಸಿದ್ಧಯಃ ॥**

---

ಬಾಧೆ, ಅಧರ್ಮದಲ್ಲಿ ಅಭಿಲಾಷೆ, ತಮೋಗುಣದ ನಡೆವಳಿಕೆ, ಭ್ರೂಣಹತ್ಯೆ ಇವು ಕಲಿಯುಗದ ಸಾಮಾನ್ಯಲಕ್ಷಣಗಳು. ಇವು ಎತ್ತೆತ್ತಲೂ ವಿಶೇಷವಾಗಿ ಕಾಣಬರುವುವು.

೪೬. ಆದುದರಿಂದ ಆಯುಸ್ಸು, ಬಲ, ರೂಪ ಇವು ಕಲಿಯುಗದಲ್ಲಿ ಕ್ಷೀಣವಾಗುವುವು. ಜನರು ನಾನಾವಿಧವಾದ ದುಃಖಗಳಿಂದ ಪೀಡಿತರಾಗುವರು. ಅವರ ಆಯುಸ್ಸಿನ ಪರಮಾವಧಿಯೆಂದರೆ ನೂರುವರ್ಷ.

೪೭. ಕಲಿಯುಗದಲ್ಲಿ ವೇದಗಳೆಲ್ಲ ಹೆಸರಿಗೆ ಮಾತ್ರ ಉಳಿದಿರುವುವು; ಪ್ರಚಾರದಲ್ಲಿ ಇರುವುದಿಲ್ಲ. ಧರ್ಮಸಾಧನೆಗೆ ಅತಿಮುಖ್ಯವೆನಿಸಿದ ಯಜ್ಞಗಳು ನಷ್ಟವಾಗುವುವು.

೪೮. ಕಲಿಯುಗದ ಅವಸ್ಥೆ ಹೀಗಾಯಿತು. ಇನ್ನು ಸಂಧ್ಯೆಯ ಮತ್ತು ಸಂಧ್ಯಾಂಶದ ವಿಚಾರವನ್ನು ಕೇಳಿ. ಧರ್ಮಾಚಾರಗಳೂ, ತಪಸ್ಸಿನ ಸಿದ್ಧಿಗಳೂ ಒಂದು ಯುಗದಿಂದ ಮತ್ತೊಂದು ಯುಗಕ್ಕೆ ಕಾಲುಕಾಲು ಪಾಲಿನಷ್ಟು ಕ್ಷಯಿಸುತ್ತ ಹೋಗುವುವು. (ಎಂದರೆ ತ್ರೇತಾ ಮೊದಲಾದ ಮೂರು ಯುಗಗಳಲ್ಲಿ ಕ್ರಮವಾಗಿ ಮುಕ್ಕಾಲು, ಅರ್ಧ, ಮತ್ತು ಕಾಲುಪಾಲಿನಷ್ಟು ಧರ್ಮವು ನಿಲ್ಲುತ್ತದೆಯೆಂದು ಹೇಳಿದಂತಾಯಿತು.)

ಯುಗಸ್ವಭಾವಾಃ ಸಂಧ್ಯಾಸು ಅವತಿಷ್ಠಂತಿ ಪಾದಶಃ ।
ಸಂಧ್ಯಾಸ್ವಭಾವಾಃ ಸ್ವಾಂಶೇಷು ಪಾದೇನೈವಾವತಸ್ಥಿರೇ ॥೪೯॥

ಏವಂ ಸಂಧ್ಯಾಂಶಕೇ ಕಾಲೇ ಸಂಪ್ರಾಪ್ತೇ ತು ಯುಗಾಂತರೇ ।
ತೇಷಾಮಧರ್ಮಿಣಾಂ ಶಾಸ್ತಾ ಭೃಗೂಣಾಂ ಚ ಕುಲೇ ಸ್ಥಿತಃ ॥೫೦॥

ಗೋತ್ರೇಣ ವೈ ಚಂದ್ರಮಸೋ ನಾಮ್ನಾ ಪ್ರಮತಿರುಚ್ಯತೇ ।
ಕಲಿಸಂಧ್ಯಾಂಶಭಾಗೇಷು ಮನೋಃ ಸ್ವಾಯಂಭುವೇಽಂತರೇ ॥೫೧॥

ಸಮಾಸ್ತ್ರಿಂಶತ್ತು ಸಂಪೂರ್ಣಾಃ ಪರ್ಯಟನ್ ವೈ ವಸುಂಧರಾಂ ।
ಅಸ್ತ್ರಕರ್ಮಾ ಸ ವೈ ಸೇನಾಂ ಹಸ್ತ್ಯಶ್ವರಥಸಂಕುಲಾಂ ॥೫೨॥

ಪ್ರಗೃಹೀತಾಯುಧೈರ್ವಿಪ್ರೈಃ ಶತಶೋಽಥ ಸಹಸ್ರಶಃ ।
ಸ ತದಾ ತೈಃ ಪರಿವೃತೋ ಮ್ಲೇಚ್ಛಾನ್ ಸರ್ವಾನ್ನಿಜಘ್ನಿವಾನ್ ॥೫೩॥

---

೪೯. ಯುಗಧರ್ಮಗಳು ಆಯಾ ಸಂಧ್ಯೆಗಳಲ್ಲಿ ಕಾಲುಪಾಲಿನಷ್ಟು ಮಾತ್ರ ಉಳಿದಿರುತ್ತವೆ. ಸಂಧ್ಯಾಂಶಗಳಲ್ಲಿಯೋ ಎಂದರೆ ಇದರ ಕಾಲುಭಾಗದಷ್ಟು ಗೋಚರವಾಗುತ್ತವೆ.

೫೦. ಹೀಗೆ ಸಂಧ್ಯಾಂಶದಲ್ಲಿ ಕಲಿಯುಗವು ಮುಗಿಯುತ್ತ ಬಂದಾಗ ಭೃಗುವಂಶೋತ್ಪನ್ನನಾದ ಮಹಾಪುರುಷನೊಬ್ಬನು ಆ ಅಧರ್ಮಿಗಳನ್ನು ಶಿಕ್ಷಿಸಿದನು.

೫೧. ಅವನು ಚಂದ್ರನ ವಂಶದವನು. ಪ್ರಮತಿಯೆಂದು ಅವನ ಹೆಸರು. ಇದು ನಡೆದುದು ಸ್ವಾಯಂಭುವಮನ್ವಂತರದ ಕಲಿಯುಗದ ಸಂಧ್ಯಾಂಶಭಾಗದಲ್ಲಿ.

೫೨-೫೩. ಅಸ್ತ್ರಪ್ರಯೋಗದಲ್ಲಿ ನಿಪುಣನಾದ ಆತನು ಆನೆ, ಕುದುರೆ ಮತ್ತು ರಥಗಳಿಂದ ತುಂಬಿದ ಸೈನ್ಯವನ್ನೊಡಗೊಂಡು, ಅಸಂಖ್ಯಾತರಾದ ಬ್ರಾಹ್ಮಣರು ಆಯುಧಧಾರಿಗಳಾಗಿ ಅನುಸರಿಸಿ ಬರುತ್ತಿರಲು, ಮೂವತ್ತು ವರ್ಷಗಳ ಕಾಲ ಭೂಮಿಯನ್ನು ಸುತ್ತಿ ಮ್ಲೇಚ್ಛರೆಲ್ಲರನ್ನೂ ಸಂಹರಿಸಿದನು.

ಸ ಹತ್ವಾ ಸರ್ವಶಕ್ಚೈವ ರಾಜಾನಃ ಶೂದ್ರಯೋನಯಃ ।
ಪಾಷಂಡಾನ್ ಸ ತದಾ ಸರ್ವಾನ್ ನಿಶ್ಶೇಷಾನಕರೋತ್ಪ್ರಭುಃ ॥೫೪॥

ಅಧಾರ್ಮಿಕಾಶ್ಚ ಯೇ ಕೇಚಿತ್ತಾನ್ ಸರ್ವಾನ್ ಹಂತಿ ಸರ್ವಶಃ ।
ಉದೀಚ್ಯಾನ್ ಮಧ್ಯದೇಶಾಂಶ್ಚ ಪಾರ್ವತೀಯಾಂಸ್ತಥೈವ ಚ ॥೫೫॥

ಪ್ರಾಚ್ಯಾನ್ ಪ್ರತೀಚ್ಯಾಂಶ್ಚ ತಥಾ ವಿಂಧ್ಯಪೃಷ್ಠಾಪರಾಂತಿಕಾನ್ ।
ತಥೈವ ದಾಕ್ಷಿಣಾತ್ಯಾಂಶ್ಚ ದ್ರವಿಡಾನ್ ಸಿಂಹಲೈಃ ಸಹ ॥೫೬॥

ಗಾಂಧಾರಾನ್ ಪಾರದಾಂಶ್ಚೈವ ಪಹ್ನವಾನ್ ಯವನಾಞ್ಛಕಾನ್ ।
ತುಷಾರಾನ್ ಬರ್ಬರಾಞ್ಶ್ವೇತಾನ್ಹಲಿಕಾನ್ ದರದಾನ್ ಖಸಾನ್ ॥೫೭॥

ಲಂಪಕಾನಾಂಧ್ರಕಾಂಶ್ಚಾಪಿ ಚೋರಜಾತೀಂಸ್ತಥೈವ ಚ ।
ಪ್ರವೃತ್ತಚಕ್ರೋ ಬಲವಾಞ್ಛೂದ್ರಾಣಾಮಂತಕೃತ್ಪ್ರಭೌ ॥೫೮॥

---

೫೪. ಆ ಪ್ರಭುವು ದೇಶದಲ್ಲಿ ಎಲ್ಲಕಡೆಯೂ ಪ್ರಬಲರಾಗಿದ್ದ ಶೂದ್ರ ರಾಜರನ್ನು ಸಂಹರಿಸಿ, ವೇದದೂಷಕರಾದ ಧರ್ಮದ್ರೋಹಿಗಳೆಲ್ಲರನ್ನೂ ಹೆಸರಿಲ್ಲ ದಂತೆ ಮಾಡಿದನು.

೫೫. ಅಧಾರ್ಮಿಕರು ಯಾರುಯಾರಿದ್ದರೋ ಅವರೆಲ್ಲರನ್ನೂ ಅವನು ಎಲ್ಲೆಡೆಯಲ್ಲೂ ಕೊಂದನು. ಉತ್ತರದೇಶದವರು, ಮಧ್ಯದೇಶದವರು, ಪಾರ್ವತೀ ಯರು ಇವರೆಲ್ಲರೂ ಅವನಿಂದ ಹತರಾದರು.

೫೬-೫೮. ಬಲಿಷ್ಠನಾದ ಆ ಪ್ರಮತಿಯು ಪೂರ್ವದಿಕ್ಕಿನವರು, ಪಶ್ಚಿಮದಿಕ್ಕಿ ನವರು, ವಿಂಧ್ಯಪರ್ವತದಲ್ಲಿಯೂ ಅದರ ಸಮೀಪದಲ್ಲಿಯೂ ಇರತಕ್ಕವರು, ದಕ್ಷಿಣ ದಿಕ್ಕಿನವರು, ದ್ರಾವಿಡರು, ಸಿಂಹಳರು, ಗಾಂಧಾರದೇಶದವರು, ಪಾರದರು, ಪಹ್ನವರು, ಯವನರು, ಶಕರು, ತುಷಾರರು, ಬರ್ಬರರು, ಶ್ವೇತರು, ಹಲಿಕರು, ದರದರು, ಖಸರು, ಲಂಪಕರು, ಆಂಧ್ರರು ಚೋರಜಾತಿಯವರು ಮುಂತಾದ ಧರ್ಮಕಂಟಕರನ್ನು ಅಡಗಿಸಿ ಜಯಶಾಲಿಯಾಗಿ ಮೆರೆದನು.

ವಿದ್ರಾವ್ಯ ಸರ್ವಭೂತಾನಿ ಚಚಾರ ವಸುಧಾಮಿಮಾಂ ।
ಮಾನವಸ್ಯ ತು ವಂಶೇ ತು ನೃದೇವಸ್ಯೇಹ ಜಜ್ಞಿವಾನ್ ॥೫೯॥

ಪೂರ್ವಜನ್ಮನಿ ವಿಷ್ಣುಶ್ಚ ಪ್ರಮತಿರ್ನಾಮ ವೀರ್ಯವಾನ್ ।
ಸುತಃ ಸ ವೈ ಚಂದ್ರಮಸಃ ಪೂರ್ವೇ ಕಲಿಯುಗೇ ಪ್ರಭುಃ ॥೬೦॥

ದ್ವಾತ್ರಿಂಶೇಽಭ್ಯುದಿತೇ ವರ್ಷೇ ಪ್ರಕ್ರಾಂತೋ ವಿಂಶತಿಂ ಸಮಾಃ ।
ನಿಜಘ್ನೇ ಸರ್ವಭೂತಾನಿ ಮಾನುಷಾಣ್ಯೇವ ಸರ್ವಶಃ ॥೬೧॥

ಕೃತ್ವಾ ಬೀಜಾವಶಿಷ್ಟಾಂ ತಾಂ ಪೃಥ್ವೀಂ ಕ್ರೂರೇಣ ಕರ್ಮಣಾ ।
ಪರಸ್ಪರನಿಮಿತ್ತೇನ ಕಾಲೇನಾಕಸ್ಮಿಕೇನ ಚ ॥೬೨॥

ಸಂಸ್ಥಿತಾ ಸಹಸಾ ಯಾ ತು ಸೇನಾ ಪ್ರಮತಿನಾ ಸಹ ।
ಗಂಗಾಯಮುನಯೋರ್ಮಧ್ಯೇ ಸಿದ್ಧಿಂ ಪ್ರಾಪ್ತಾ ಸಮಾಧಿನಾ ॥೬೩॥

---

೫೯. ಧರ್ಮಕ್ಕೆ ವಿಘಾತವನ್ನುಂಟುಮಾಡುವ ಸಕಲ ಪ್ರಾಣಿಗಳನ್ನೂ ಓಡಿಸಿ ಅವನು ಈ ಭೂಮಿಯಲ್ಲೆಲ್ಲ ಸಂಚರಿಸಿದನು. ಅವನು ಈಗ ಮನು ವಂಶೋತ್ಪನ್ನನಾದ ನೃದೇವನ ಮನೆಯಲ್ಲಿ ಜನಿಸಿರುವನು.

೬೦. ಸರ್ವೇಶ್ವರನಾದ ವಿಷ್ಣುವೇ ಹಿಂದಿನ ಕಲಿಯುಗದಲ್ಲಿ ಚಂದ್ರನ ಮಗನಾಗಿ ಮಹಾವೀರನಾದ ಪ್ರಮತಿಯ ರೂಪದಿಂದ ಅವತರಿಸಿದನು.

೬೧. ತನ್ನ ಮೂವತ್ತೆರಡನೆಯ ವರ್ಷವು ಪ್ರಾರಂಭವಾಗಲು, ಅವನು ಇಪ್ಪತ್ತು ವರ್ಷಗಳ ಕಾಲ ಎಲ್ಲೆಲ್ಲೂ ಸಂಚರಿಸುತ್ತ ಧರ್ಮಕ್ಕೆ ಅಡ್ಡಿಯನ್ನು ತರುವ ಸಕಲ ಪ್ರಾಣಿಗಳನ್ನೂ ಮನುಷ್ಯರನ್ನೂ ಸಂಹರಿಸಿದನು.

೬೨-೬೩. ಪ್ರಮತಿಯು ತನ್ನ ಉಗ್ರವಾದ ಕರ್ಮದಿಂದ ಭೂಮಿಯಲ್ಲಿದ್ದ ಸಕಲ ಪ್ರಾಣಿಗಳನ್ನೂ ನಾಶಮಾಡಿದನು. ಒಂದೊಂದು ಜೀವವರ್ಗದಲ್ಲಿಯೂ ಬೀಜಮಾತ್ರವೇ ಉಳಿಯಿತು. ಹೀಗಿರುವಲ್ಲಿ ಅಕಸ್ಮಾತ್ತಾಗಿ ಕಾಲವಶದಿಂದ ಆ ಸಕಲ ಸೈನ್ಯಸಮೇತನಾಗಿ ಆತನು ಗಂಗಾಯಮುನಾನದಿಗಳ ಮಧ್ಯದಲ್ಲಿ ಸಮಾಧಿಯಿಂದ ದೇಹತ್ಯಾಗವನ್ನು ಮಾಡಿ ಸಿದ್ಧಿಯನ್ನು ಪಡೆದನು.

ತತಸ್ತೇಷು ಪ್ರನಷ್ಟೇಷು ಸಂಧ್ಯಾಂಶೇ ಕ್ರೂರಕರ್ಮಸು ।
ಉತ್ಸಾದ್ಯ ಪಾರ್ಥಿವಾನ್ ಸರ್ವಾಂಸ್ತೇಷ್ವತೀತೇಷು ವೈ ತದಾ ॥೬೪॥

ತತಃ ಸಂಧ್ಯಾಂಶಕೇ ಕಾಲೇ ಸಂಪ್ರಾಪ್ತೇ ಚ ಯುಗಾಂತಕೇ ।
ಸ್ಥಿತಾಸ್ವಲ್ಪಾವಶಿಷ್ಟಾಸು ಪ್ರಜಾಸ್ವಿಹ ಕ್ವಚಿತ್ಕ್ವಚಿತ್ ॥೬೫॥

ಸ್ವಾಪ್ರದಾನಾಸ್ತದಾ ತೇ ವೈ ಲೋಭಾವಿಷ್ಟಾಸ್ತು ವೃಂದಶಃ ।
ಉಪಹಿಂಸಂತಿ ಚಾನ್ಯೋನ್ಯಂ ಪ್ರಲುಂಪಂತಿ ಪರಸ್ಪರಂ ॥೬೬॥

ಅರಾಜಕೇ ಯುಗಾಂಶೇ ತು ಸಂಕ್ಷಯೇ ಸಮುಪಸ್ಥಿತೇ ।
ಪ್ರಜಾಸ್ತಾ ವೈ ತದಾ ಸರ್ವಾಃ ಪರಸ್ಪರಭಯಾರ್ದಿತಾಃ ॥೬೭॥

ವ್ಯಾಕುಲಾಸ್ತಾಃ ಪರಾವೃತ್ತಾಸ್ತ್ಯಜ್ಯ ದೇವಗೃಹಾಣಿ ತು ।
ಸ್ವಾನ್ ಸ್ವಾನ್ ಪ್ರಾಣಾನವೇಕ್ಷಂತೋ ನಿಷ್ಕಾರುಣ್ಯಾತ್ಸುದುಃಖಿತಾಃ ॥೬೮॥

---

೬೪-೬೬. ರಾಜರೆಲ್ಲರನ್ನೂ ಸಂಹಾರಮಾಡಿ ಕ್ರೂರಕರ್ಮಿಗಳೆನಿಸಿದ ಅವರು ಸಂಧ್ಯಾಂಶದಲ್ಲಿ ಗತಿಸಿಹೋದರಷ್ಟೆ! ಬಳಿಕ ಯುಗಾಂತವು ಬರಲು ಎಲ್ಲೋ ಒಂದೊಂದು ಕಡೆ ಕೆಲವರು ಮಾತ್ರವೇ ಪ್ರಜೆಗಳು ಉಳಿದರು. ಅವರು ತಮ್ಮಲ್ಲಿದ್ದ ಜೀವಿಕೆಯ ಪದಾರ್ಥಗಳನ್ನು ಇತರರು ಯಾರಿಗೂ ಕೊಡದೆ ದುರಾಸೆಯಿಂದಿದ್ದರು. ಇದರಿಂದ ಜನರು ಗುಂಪುಕಟ್ಟಿಕೊಂಡು ಬಂದು ಒಬ್ಬರನ್ನೊಬ್ಬರು ಹಿಂಸಿಸುತ್ತ ಲೂಟಿಮಾಡುತ್ತಿದ್ದರು.

೬೭-೬೮. ಪ್ರತಿಯೊಂದು ಕಲಿಯುಗದ ಸಂಧ್ಯಾಂಶದಲ್ಲಿಯೂ ಹೀಗೆಯೇ. ಅರಾಜಕತೆಯು ತಲೆದೋರಿ, ವಿನಾಶಕಾಲವೊದಗಲು, ಪ್ರಜೆಗಳೆಲ್ಲರೂ ಒಬ್ಬರಿಗೊಬ್ಬರು ಹೆದರಿಕೊಂಡು ಗಾಬರಿಯಿಂದ ತಮ್ಮ ತಮ್ಮ ಪ್ರಾಣರಕ್ಷಣೆಯಲ್ಲಿ ನಿರತರಾಗುವರು. ತಾವು ಆರಾಧಿಸುತ್ತಿದ್ದ ದೇವತಾ ಮೂರ್ತಿಗಳನ್ನೂ, ಮನೆಮಠಗಳನ್ನೂ ಬಿಟ್ಟು ಓಡಿಹೋಗಿ ಬಹುದುಃಖಕ್ಕೆ ಈಡಾಗುವರು. ಒಬ್ಬರಿಗಾದರೂ ಕನಿಕರವೆಂಬುದೇ ಇಲ್ಲ.

ನಷ್ಟೇ ಶ್ರೌತಸ್ಮೃತೇ ಧರ್ಮೇ ಕಾಮಕ್ರೋಧವಶಾನುಗಾಃ ।
ನಿರ್ಮರ್ಯಾದಾ ನಿರಾನಂದಾ ನಿಃಸ್ನೇಹಾ ನಿರಪತ್ರಪಾಃ ॥೧೯॥

ನಷ್ಟೇ ಧರ್ಮೇ ಪ್ರತಿಹತಾ ಹ್ರಸ್ವಕಾಃ ಪಂಚವಿಂಶಕಾಃ ।
ಹಿತ್ವಾ ದಾರಾಂಶ್ಚ ಪುತ್ರಾಂಶ್ಚ ವಿಷಾದವ್ಯಾಕುಲಪ್ರಜಾಃ ॥೨೦॥

ಅನಾವೃಷ್ಟಿಹತಾಸ್ತೇ ವೈ ವಾರ್ತಾಮುತ್ಸೃಜ್ಯ ದುಃಖಿತಾಃ ।
ಆಶ್ರಯಂತಿ ಸ್ಮ ಪ್ರತ್ಯಂತಾನ್ ಹಿತ್ವಾ ಜನಪದಾನ್ ಸ್ವಕಾನ್ ॥೨೧॥

ಸರಿತಃ ಸಾಗರಾನೂಪಾನ್ ಸೇವಂತೇ ಪರ್ವತಾನಪಿ ।
ಚೀರಕೃಷ್ಣಾಜಿನಧರಾ ನಿಷ್ಕ್ರಿಯಾ ನಿಷ್ಪರಿಗ್ರಹಾಃ ॥೨೨॥

ವರ್ಣಾಶ್ರಮಪರಿಭ್ರಷ್ಟಾಃ ಸಂಕರಂ ಘೋರಮಾಸ್ಥಿತಾಃ ।
ಏವಂ ಕಷ್ಟಮನುಪ್ರಾಪ್ತಾ ಹ್ಯಲ್ಪಶೇಷಾಃ ಪ್ರಜಾಸ್ತತಃ ॥೨೩॥

---

೧೯-೨೦. ಶ್ರುತಿಗಳಲ್ಲಿಯೂ ಸ್ಮೃತಿಗಳಲ್ಲಿಯೂ ಉಕ್ತವಾಗಿರುವ ಧರ್ಮವು ನಷ್ಟವಾಗುವುದು. ಜನರು ಕಾಮಕ್ರೋಧಗಳಿಗೆ ತುತ್ತಾಗುವರು. ಅವರಿಗೆ ಮರ್ಯಾದೆಯಿಲ್ಲ; ಆನಂದವಿಲ್ಲ; ಸ್ನೇಹವಿಲ್ಲ; ಲಜ್ಜೆಯಿಲ್ಲ. ಧರ್ಮಲೋಪದಿಂದ ಅವರು ವಿಪತ್ತಿಗೆ ಗುರಿಯಾಗುವರು. ಅವರ ಆಕಾರವು ಹ್ರಸ್ವವಾಗುವುದು; ಆಯುಸ್ಸು ಕ್ಷೀಣವಾಗಿ, ಪರಮಾವಧಿಯೆಂದರೆ ಇಪ್ಪತ್ತೈದು ವರ್ಷಗಳಿಗೆ ಇಳಿಯುವುದು. ಪತ್ನೀಪುತ್ರರನ್ನು ತೊರೆದು ದಿಕ್ಕುಕಾಣದೆ ಅವರು ವ್ಯಾಕುಲರಾಗುವರು.

೨೧. ಮಳೆಯಿಲ್ಲದೆ ತೊಂದರೆಪಡುತ್ತ ಅವರು ಕೃಷಿಕರ್ಮವನ್ನು ಬಿಟ್ಟು, ದುಃಖಕ್ಕೀಡಾಗಿ, ಸ್ವದೇಶವನ್ನು ತೊರೆದು ಮ್ಲೇಚ್ಛ ದೇಶಗಳನ್ನು ಸೇರುವರು.

೨೨-೨೩. ನದಿಗಳು, ಸಾಗರಗಳು, ಜಲಪ್ರದೇಶಗಳು, ಪರ್ವತಗಳು ಮೊದಲಾದ ಕಡೆಗಳಿಗೆ ಜನರು ಹೋಗಿ ಸೇರಿಕೊಳ್ಳುವರು. ನಾರುಬಟ್ಟೆಗಳನ್ನುಟ್ಟು ಹುಲ್ಲೆಯ ಚರ್ಮವನ್ನು ಹೊದೆದು, ಕೆಲಸವೂ ಆಸ್ತಿಪಾಸ್ತಿಗಳೂ ಇಲ್ಲದೆ, ವರ್ಣಾಶ್ರಮಧರ್ಮಹೀನರಾಗಿ ಘೋರವಾದ ಸಂಕರದೋಷಕ್ಕೆ ಗುರಿಯಾಗುವರು. ಅಳಿದುಳಿದ ಅಲ್ಪಸ್ವಲ್ಪ ಪ್ರಜೆಗಳ ಬಾಳು ಹೀಗೆಯೇ ಕಷ್ಟಮಯವಾಗಿರುವುದು.

ಜಂತವಶ್ಚ ಕ್ಷುಧಾವಿಷ್ಟಾ ದುಃಖಾನ್ನಿರ್ವೇದಮಾಗಮನ್ ।
ಸಂಶ್ರಯಂತಿ ಚ ದೇಶಾಂಸ್ತಾಂಶ್ಚಕ್ರವತ್ಪರಿವರ್ತನಾಃ ॥೭೪॥

ತತಃ ಪ್ರಜಾಸ್ತು ತಾಃ ಸರ್ವಾ ಮಾಂಸಾಹಾರಾ ಭವಂತಿ ಹಿ ।
ಮೃಗಾನ್ ವರಾಹಾನ್ ವೃಷಭಾನ್ ಯೇ ಚಾನ್ಯೇ ವನಚಾರಿಣಃ ॥೭೫॥

ಭಕ್ಷ್ಯಾಂಶ್ಚೈವಾಪ್ಯಭಕ್ಷ್ಯಾಂಶ್ಚ ಸರ್ವಾಂಸ್ತಾನ್ ಭಕ್ಷಯಂತಿ ತಾಃ ।
ಸಮುದ್ರಂ ಸಂಶ್ರಿತಾ ಯಾಸ್ತು ನದೀಶ್ಚೈವ ಪ್ರಜಾಸ್ತು ತಾಃ ॥೭೬॥

ತೇಽಪಿ ಮತ್ಸ್ಯಾನ್ ಹರಂತೀಹ ಆಹಾರಾರ್ಥಂ ಚ ಸರ್ವಶಃ ।
ಅಭಕ್ಷ್ಯಾಹಾರದೋಷೇಣ ಏಕವರ್ಣಗತಾಃ ಪ್ರಜಾಃ ॥೭೭॥

ಯಥಾ ಕೃತಯುಗೇ ಪೂರ್ವಮೇಕವರ್ಣಮಭೂತ್ಕಿಲ ।
ತಥಾ ಕಲಿಯುಗಸ್ಯಾಂತೇ ಶೂದ್ರೀಭೂತಾಃ ಪ್ರಜಾಸ್ತಥಾ ॥೭೮॥

---

೭೪. ಮನುಷ್ಯರ ಪಾಡಿರಲಿ! ಉಳಿದ ಜಂತುಗಳೂ ಅಷ್ಟೇ. ಹೊಟ್ಟೆಗಿಲ್ಲದೆ ಹಸಿವಿನಿಂದ ಬಳಲುತ್ತ, ಒಂದು ಕಡೆಯಿಂದ ಮತ್ತೊಂದು ಕಡೆಗೆ ಚಕ್ರಾಕಾರವಾಗಿ ಅಲೆಯುತ್ತಿರುವುವು.

೭೫. ಸಾಕಾದಷ್ಟು ಸಸ್ಯಾಹಾರವು ದೊರೆಯದೆ ಹೋಗುವುದರಿಂದ ಎಲ್ಲ ಜನರೂ ಮಾಂಸಾಹಾರಿಗಳಾಗುತ್ತಾರೆ. ಜಿಂಕೆಗಳು, ಹಂದಿಗಳು, ಎತ್ತುಗಳು, ಕಾಡಿನಲ್ಲಿ ಜೀವಿಸುವ ಇನ್ನೂ ಹಲವು ಬಗೆಯ ಜಂತುಗಳು ಇವುಗಳೆಲ್ಲವನ್ನೂ ಭಕ್ಷಿಸುವರು. ಇದನ್ನು ತಿನ್ನಬಹುದು ಇದನ್ನು ತಿನ್ನಬಾರದು ಎಂಬ ವಿವೇಚನೆಯೇ ಅವರಿಗೆ ಇರುವುದಿಲ್ಲ.

೭೬-೭೭. ಸಮುದ್ರಗಳನ್ನೂ ನದಿಗಳನ್ನೂ ಆಶ್ರಯಿಸಿದ ಪ್ರಜೆಗಳು ತಮ್ಮ ಆಹಾರಕ್ಕೋಸ್ಕರ ಎಲ್ಲೆಡೆಗಳಲ್ಲಿಯೂ ಇರುವ ಮೀನುಗಳನ್ನು ಹಿಡಿಯುವರು. ಹೀಗೆ ಆಹಾರನಿಯಮವಿಲ್ಲದೆ ಭಕ್ಷ್ಯಾರ್ಹವಲ್ಲದ ಪದಾರ್ಥಗಳನ್ನು ಭುಂಜಿಸುವಕಾರಣ, ವರ್ಣಭೇದಗಳೆಲ್ಲ ಅಳಿಸಿ ಹೋಗಿ ಜನರೆಲ್ಲ ಒಂದೇ ವರ್ಣದವರಾಗುವರು.

೭೮. ಮೊದಲು ಕೃತಯುಗದಲ್ಲಿ ಸಾರ್ವತ್ರಿಕವಾದ ಧರ್ಮಾನುಷ್ಠಾನದಿಂದ ಒಂದೇ ವರ್ಣವು ಪ್ರಚಾರದಲ್ಲಿದ್ದಿತಷ್ಟೆ! ಕಲಿಯುಗದ ಕೊನೆಯಲ್ಲಿಯೂ ಹಾಗೆಯೇ. ಧರ್ಮವೆಂಬುದೇ ಅಳಿಸಿಹೋಗಿ ಅದರ ಪ್ರಸಕ್ತಿಯೇ ಇಲ್ಲದ ಕಾರಣ, ಪ್ರಜೆಗಳೆಲ್ಲರೂ ಶೂದ್ರರೇ ಆಗಿಬಿಡುವರು.

ಏವಂ ವರ್ಷಶತಂ ಪೂರ್ಣಂ ದಿವ್ಯಂ ತೇಷಾಂ ನ್ಯವರ್ತತ ।
ಷಟ್ತ್ರಿಂಶಚ್ಚ ಸಹಸ್ರಾಣಿ ಮಾನುಷಾಣಿ ತು ತಾನಿ ವೈ ॥೭೯॥

ಅಥ ದೀರ್ಘೇಣ ಕಾಲೇನ ಪಕ್ಷಿಣಃ ಪಶವಸ್ತಥಾ ।
ಮತ್ಸ್ಯಾಶ್ಚೈವ ಹತಾಃ ಸರ್ವೈಃ ಕ್ಷುಧಾವಿಷ್ಟೈಶ್ಚ ಸರ್ವಶಃ ॥೮೦॥

ನಿಶ್ಶೇಷೇಷ್ವಥ ಸರ್ವೇಷು ಮತ್ಸ್ಯಪಕ್ಷಿಪಶುಷ್ವಥ ।
ಸಂಧ್ಯಾಂಶೇ ಪ್ರತಿಪನ್ನೇ ತು ನಿಶ್ಶೇಷಾಸ್ತು ತದಾ ಕೃತಾಃ ॥೮೧॥

ತತಃ ಪ್ರಜಾಸ್ತು ಸಂಭೂಯ ಕಂದಮೂಲಮಥೋಽಖನನ್ ।
ಫಲಮೂಲಾಶನಾಃ ಸರ್ವೇ ಅನಿಕೇತಾಸ್ತಥೈವ ಚ ॥೮೨॥

ವಲ್ಕಲಾನ್ಯಥ ವಾಸಾಂಸಿ ಅಧಃಶಯ್ಯಾಶ್ಚ ಸರ್ವಶಃ ।
ಪರಿಗ್ರಹೋ ನ ತೇಷ್ವಸ್ತಿ ಧನಂ ಶುದ್ಧಿರಥಾಪಿ ವಾ ॥೮೩॥

---

೭೯. ಹಿಂದಿನ ಮನ್ವಂತರದ ಕಲಿಯುಗದಲ್ಲಿಯೂ ಇದೇ ರೀತಿಯಾಗಿತ್ತು. ದೇವಮಾನದಲ್ಲಿ ಒಂದುನೂರು ವರ್ಷಗಳು ಹೀಗೆಯೇ ಕಳೆದುವು. ಮನುಷ್ಯ ಮಾನದಲ್ಲಿ ಇದೇ ಅವಧಿಯು ಮೂವತ್ತಾರುಸಾವಿರವರ್ಷವಾಗುವುದು.

೮೦. ಬಳಿಕ ಜನರೆಲ್ಲರೂ ಹಸಿವಿನ ಬಾಧೆಯನ್ನು ತಡೆಯಲಾರದೆ ಸಿಕ್ಕಿ ಸಿಕ್ಕಿದ ಕಡೆಗಳಲ್ಲಿ ಪಕ್ಷಿಗಳು, ಪಶುಗಳು, ಮತ್ತು ಮತ್ಸ್ಯಗಳನ್ನು ಕೊಂದು ತಿನ್ನುತ್ತಿದ್ದರು. ಹೀಗೆ ಬಹುಕಾಲ ನಡೆಯಿತು.

೮೧. ಮೀನುಗಳು, ಹಕ್ಕಿಗಳು, ಪಶುಗಳು ಇವೆಲ್ಲವೂ ನಿಶ್ಶೇಷವಾದುವು. ಹೀಗಾಗಿ ಸಂಧ್ಯಾಂಶದಲ್ಲಿ ಯಾವುದೂ ಉಳಿಯಲಿಲ್ಲ.

೮೨. ಹೊಟ್ಟೆಗಿಲ್ಲದೆ ಬಳಿಕ ಪ್ರಜೆಗಳು ಒಟ್ಟುಗೂಡಿ ಗೆಡ್ಡೆಗೆಣಸುಗಳನ್ನು ಅಗೆದರು. ಎಲ್ಲರಿಗೂ ಹಣ್ಣುಕಾಯಿ, ಗೆಡ್ಡೆಗೆಣಸು ಇವೇ ಆಹಾರವಾದುವು. ಒಬ್ಬರಿಗಾದರೂ ನಿಲ್ಲುವುದಕ್ಕೆ ನೆಲೆಯಿರಲಿಲ್ಲ.

೮೩. ಎಲ್ಲರೂ ನಾರುಬಟ್ಟೆಗಳನ್ನೇ ಉಡಬೇಕು; ನೆಲದ ಮೇಲೆಯೇ ಮಲಗಬೇಕು. ಆಸ್ತಿಪಾಸ್ತಿಗಳೂ ದುಡ್ಡುಕಾಸುಗಳೂ ಮಾಯವಾದುವು. ಪಾರಿಶುದ್ಧ್ಯವೆಂಬುದರ ಹೆಸರೇ ಅಳಿಸಿಹೋಯಿತು.

ಏವಂ ಕ್ಷಯಂ ಗಮಿಷ್ಯಂತಿ ಹ್ಯಲ್ಪಶಿಷ್ಟಾಃ ಪ್ರಜಾಸ್ತದಾ ।
ತಾಸಾಮಲ್ಪಾವಶಿಷ್ಟಾನಾಮಾಹಾರಾದ್ವೃದ್ಧಿರಿಷ್ಯತೇ ॥೮೪॥

ಏವಂ ವರ್ಷಶತಂ ದಿವ್ಯಂ ಸಂಧ್ಯಾಂಶಸ್ತಸ್ಯ ವರ್ತತೇ ।
ತತೋ ವರ್ಷಶತಸ್ಯಾಂತೇ ಅಲ್ಪಶಿಷ್ಟಾಃ ಸ್ತ್ರಿಯಃ ಸುತಾಃ ॥೮೫॥

ಮಿಥುನಾನಿ ತು ತಾಃ ಸರ್ವಾ ಹ್ಯನ್ಯೋನ್ಯಂ ಸಂಪ್ರಜಜ್ಞಿರೇ ।
ತತಸ್ತಾಸ್ತು ಮ್ರಿಯಂತೇ ವೈ ಪೂರ್ವೋತ್ಪನ್ನಾಃ ಪ್ರಜಾಸ್ತು ಯಾಃ ॥೮೬॥

ಜಾತಮಾತ್ರೇಷ್ವಪತ್ಯೇಷು ತತಃ ಕೃತಮವರ್ತತ ।
ಯಥಾ ಸ್ವರ್ಗೇ ಶರೀರಾಣಿ ನರಕೇ ಚೈವ ದೇಹಿನಾಂ ॥೮೭॥

ಉಪಭೋಗಸಮರ್ಥಾನಿ ಏವಂ ಕೃತಯುಗಾದಿಷು ।
ಏವಂ ಕೃತಸ್ಯ ಸಂತಾನಃ ಕಲೇಶ್ಚೈವ ಕ್ಷಯಸ್ತಥಾ ॥೮೮॥

ವಿಚಾರಣಾತ್ತು ನಿರ್ವೇದಃ ಸಾಮ್ಯಾವಸ್ಥಾತ್ಮನಾ ತಥಾ ।
ತತಶ್ಚೈವಾತ್ಮಸಂಬೋಧಃ ಸಂಬೋಧಾದ್ಧರ್ಮಶೀಲತಾ ॥೮೯॥

---

೮೪-೮೫. ಕಲಿಯುಗದ ಸಂಧ್ಯಾಂಶದಲ್ಲಿ ದೇವಮಾನದ ಒಂದುನೂರು ವರ್ಷಕಾಲ ಹೀಗೆ ನಡೆಯುವುದು. ಆ ಅವಧಿಯ ಕೊನೆಯಲ್ಲಿ ಹೆಂಗಸರೂ ಮಕ್ಕಳೂ ಎಲ್ಲೋ ಸ್ವಲ್ಪ ಜನ ಮಾತ್ರ ಇರುವರು.

೮೬. ಅವರೆಲ್ಲರೂ ಪರಸ್ಪರ ದಂಪತಿಗಳಾಗುವರು. ಅವರಲ್ಲಿ ಮಕ್ಕಳು ಹುಟ್ಟಿದ ಕೂಡಲೆ ಹಿಂದೆ ಹುಟ್ಟಿದ ಪ್ರಜೆಗಳೆಲ್ಲ ಸಾಯುವರು. ಬಳಿಕ ಕೃತ ಯುಗದ ಪ್ರವೇಶವಾಯಿತೆಂದು ತಿಳಿಯಬೇಕು.

೮೭-೮೮. ಸ್ವರ್ಗದಲ್ಲಿಯೂ ನರಕದಲ್ಲಿಯೂ ಜೀವರಿಗೆ ಸುಖದುಃಖಾನುಭವಸಮರ್ಥವಾದ ದೇಹವು ಹೇಗೆ ಬರುತ್ತದೆಯೋ ಹಾಗೆಯೇ ಕೃತಾದಿಯುಗಗಳಲ್ಲಿಯೂ ಕೂಡ ಅದು ಪ್ರಾಪ್ತವಾಗುತ್ತದೆ. ಕಲಿಯುಗದ ನಾಶವೂ ಕೃತ ಯುಗದ ಉತ್ಪತ್ತಿಯೂ ಈರೀತಿಯಾಗಿ ನಡೆಯುವುವು.

೮೯. ರಾಗದ್ವೇಷಾದಿಗಳನ್ನು ತೊರೆದು ಶಾಂತಚಿತ್ತದಿಂದ ವಿಮರ್ಶೆಮಾಡಿದರೆ ವೈರಾಗ್ಯವು ಹುಟ್ಟುವುದು. ಬಳಿಕ ಆತ್ಮಜ್ಞಾನವೂ ಅದರಿಂದ ಧರ್ಮಸ್ವಭಾವವೂ ಉಂಟಾಗುವುವು.

ಕಲಿಶಿಷ್ಟೇಷು ತೇಷ್ವೇವಂ ಜಾಯಂತೇ ಪೂರ್ವವತ್ಪ್ರಜಾಃ ।
ಭಾವಿನೋಽರ್ಥಸ್ಯ ಚ ಬಲಾತ್ತತಃ ಕೃತಮವರ್ತತ ॥೯೦॥

ಅತೀತಾನಾಗತಾನಿ ಸ್ಯುರ್ಯಾನಿ ಮನ್ವಂತರೇಷ್ವಿಹ ।
ಏತೇ ಯುಗಸ್ವಭಾವಾಸ್ತು ಮಯೋಕ್ತಾಸ್ತು ಸಮಾಸತಃ ॥೯೧॥

ವಿಸ್ತರೇಣಾನುಪೂರ್ವ್ಯಾಚ್ಚ ನಮಸ್ಕೃತ್ಯ ಸ್ವಯಂಭುವೇ ।
ಪ್ರವೃತ್ತೇ ತು ತತಸ್ತಸ್ಮಿನ್ ಪುನಃ ಕೃತಯುಗೇ ತು ವೈ ॥೯೨॥

ಉತ್ಪನ್ನಾಃ ಕಲಿಶಿಷ್ಟೇಷು ಪ್ರಜಾಃ ಕಾರ್ತಯುಗಾಸ್ತಥಾ ।
ತಿಷ್ಠಂತಿ ಚೇಹ ಯೇ ಸಿದ್ಧಾ ಅದೃಷ್ಟಾ ವಿಹರಂತಿ ಚ ॥೯೩॥

ಸಹ ಸಪ್ತರ್ಷಿಭಿರ್ಯೇ ತು ತತ್ರ ಯೇ ಚ ವ್ಯವಸ್ಥಿತಾಃ ।
ಬ್ರಹ್ಮಕ್ಷತ್ರವಿಶಃ ಶೂದ್ರಾ ಬೀಜಾರ್ಥೇ ಯ ಇಹ ಸ್ಮೃತಾಃ ॥೯೪॥

---

೯೦. ಕಲಿಯುಗಾಂತದಲ್ಲಿ ಉಳಿದಿದ್ದ ಆ ಜನರಿಂದ ಯಥಾಕ್ರಮದಲ್ಲಿ ಪ್ರಜೋತ್ಪತ್ತಿಯಾಗುವುದು. ಮುಂದೆ ಹೀಗೆ ನಡೆಯಬೇಕೆಂಬುದು ದೈವಾಜ್ಞೆ. ಅನಂತರ ಕೃತಯುಗವು ಪ್ರಚಾರಕ್ಕೆ ಬರುವುದು.

೯೧. ಹಿಂದೆ ನಡೆದ ಮತ್ತು ಮುಂದೆ ನಡೆಯಲಿರುವ ಮನ್ವಂತರಗಳಲ್ಲೆಲ್ಲ ಯುಗಗಳ ಸ್ವಭಾವವು ಹೀಗೆಯೇ ಇರುವುದು. ಬ್ರಹ್ಮದೇವನಿಗೆ ನಮಸ್ಕರಿಸಿ ಅವನ ಅನುಗ್ರಹ ಬಲದಿಂದ ಯುಗಗಳ ಲಕ್ಷಣವನ್ನು ಕ್ರಮವಾಗಿಯೂ ಸ್ಪಷ್ಟವಾಗಿಯೂ ನಿಮಗೆ ನಾನು ಸಂಗ್ರಹಿಸಿ ಹೇಳಿರುವೆನು.

೯೨-೯೩. ಕೃತಯುಗವು ಪುನಃ ಪ್ರವೇಶಿಸಿದಾಗ ಆ ಯುಗದ ಪ್ರಜೆಗಳು ಕಲಿಯುಗದಲ್ಲಿ ಅಳಿದು ಉಳಿದವರಿಂದ ಉತ್ಪನ್ನರಾದರಷ್ಟೆ. ಅವರಲ್ಲಿ ಎಷ್ಟೋ ಜನ ಸಿದ್ಧಪುರುಷರು ಇರುವರು. ಅವರು ಈ ಲೋಕದಲ್ಲಿ ಕಣ್ಣಿಗೆ ಕಾಣದಂತೆ ವಿಹರಿಸುತ್ತಿರುವರು.

೯೪-೯೬. ಆ ಸಿದ್ಧರು ಸಪ್ತರ್ಷಿಗಳೊಡಗೂಡಿ ವಿಹರಿಸುವರು. ಅವರಿಗೂ, ಕೃತಯುಗದಲ್ಲಿ ಬೀಜಭೂತರಾಗಿ ಉತ್ಪನ್ನರಾದ ಬ್ರಾಹ್ಮಣಾದಿ ಚತುರ್ವರ್ಣದವರಿಗೂ ಸಪ್ತರ್ಷಿಗಳು ಶ್ರೌತಸ್ಮಾರ್ತ ವಿಧಾನವನ್ನನುಸರಿಸಿ ವರ್ಣಾಶ್ರಮಾಚಾರ

ತೇಷಾಂ ಸಪ್ತರ್ಷಯೋ ಧರ್ಮಂ ಕಥಯಂತೀಹ ತೇಷು ಚ ||೯೫||
ವರ್ಣಾಶ್ರಮಾಚಾರಯುತಂ ಶ್ರೌತಸ್ಮಾರ್ತವಿಧಾನತಃ ।
ಏವಂ ತೇಷು ಕ್ರಿಯಾವತ್ಸು ಪ್ರವರ್ತಂತೀಹ ವೈ ಕೃತೇ ||೯೬||
ಶ್ರೌತಸ್ಮಾರ್ತಸ್ಥಿತಾನಾಂ ತು ಧರ್ಮೇ ಸಪ್ತರ್ಷಿದರ್ಶಿತೇ ।
ತೇ ತು ಧರ್ಮವ್ಯವಸ್ಥಾರ್ಥಂ ತಿಷ್ಠಂತೀಹ ಕೃತೇ ಯುಗೇ ||೯೭||
ಮನ್ವಂತರಾಧಿಕಾರೇಷು ತಿಷ್ಠಂತಿ ಋಷಯಸ್ತು ತೇ
ಯಥಾ ದಾವಪ್ರದಗ್ಧೇಷು ತೃಣೇಷ್ವೇವಾಪರಂ ತೃಣಂ ||೯೮||
ವನಾನಾಂ ಪ್ರಥಮಂ ವೃಷ್ಟ್ಯಾ ತೇಷಾಂ ಮೂಲೇಷು ಸಂಭವಃ ।
ಏವಂ ಯುಗಾದ್ಯುಗಾನಾಂ ವೈ ಸಂತಾನಸ್ತು ಪರಸ್ಪರಂ ||೯೯||
ಪ್ರವರ್ತತೇ ಹ್ಯವಿಚ್ಛೇದಾದ್ಯಾವನ್ಮನ್ವಂತರಕ್ಷಯಃ ।
ಸುಖಮಾಯುರ್ಬಲಂ ರೂಪಂ ಧರ್ಮಾರ್ಥೌ ಕಾಮ ಏವ ಚ ||೧೦೦||
ಯುಗೇಷ್ವೇತಾನಿ ಹೀಯಂತೇ ತ್ರಯಃ ಪಾದಾಃ ಕ್ರಮೇಣ ತು ।
ಇತ್ಯೇಷ ಪ್ರತಿಸಂಧಿರ್ವಃ ಕೀರ್ತಿತಸ್ತು ಮಯಾ ದ್ವಿಜಾಃ ||೧೦೧||

---

ಧರ್ಮವನ್ನು ಉಪದೇಶಿಸುವರು. ಹೀಗೆ ಕರ್ಮಶ್ರದ್ಧೆಯಿರುವ ಆ ಜನರಲ್ಲಿ ಅವರು ಧರ್ಮವನ್ನು ಪ್ರಚಾರಕ್ಕೆ ತರುತ್ತಾರೆ.

೯೭. ಶ್ರೌತಸ್ಮಾರ್ತಧರ್ಮಗಳನ್ನು ಅನುಷ್ಠಾನಮಾಡತಕ್ಕವರಿಗೆ ಸಪ್ತರ್ಷಿಗಳು ಅವುಗಳನ್ನು ಉಪದೇಶಿಸುತ್ತಾರೆ. ಆ ಮಹರ್ಷಿಗಳು ಧರ್ಮದ ವ್ಯವಸ್ಥೆಗೋಸ್ಕರವಾಗಿಯೇ ಕೃತಯುಗದಲ್ಲಿ ಅವತಾರಮಾಡಿರುವರು.

೯೮-೯೯. ಆ ಋಷಿಗಳು ಮನ್ವಂತರಾಧಿಕಾರಗಳಲ್ಲಿರುವರು. ಕಾಡಿನಲ್ಲಿ ಕಾಳ್ಕಿಚ್ಚಿನಿಂದ ಹುಲ್ಲು ಸುಟ್ಟು ಹೋದರೂ ಮಳೆಯಾದ ಮೇಲೆ ಅದರ ಬುಡದಲ್ಲಿ ಮತ್ತೆ ಹೊಸ ಹುಲ್ಲು ಹುಟ್ಟುವಂತೆ, ಯುಗಗಳಲ್ಲಿ ಒಂದು ಕಳೆದರೆ ಅದನ್ನನುಸರಿಸಿ ಮತ್ತೊಂದು ಬರುವುದು. ಹೀಗೆ ಮನ್ವಂತರವು ಮುಗಿಯುವ ವರೆಗೆ ಯುಗಗಳು ಬಿಡುವಿಲ್ಲದೆ ಒಂದಾಗುತ್ತಲೊಂದು ನಡೆಯುತ್ತಿರುವುವು.

೧೦೦-೧೦೧. ಸುಖ, ಆಯುಸ್ಸು, ಬಲ, ರೂಪ, ಧರ್ಮ ಅರ್ಥ, ಕಾಮ ಇವು ಕ್ರಮವಾಗಿ ಒಂದು ಯುಗದಿಂದ ಮತ್ತೊಂದು ಯುಗಕ್ಕೆ ಕಾಲುಪಾಲಿನಷ್ಟು ಕಡಿಮೆಯಾಗುವುವು. ಓ ಬ್ರಾಹ್ಮಣರೇ, ಈ ರೀತಿಯಲ್ಲಿ ಯುಗಲಕ್ಷಣಗಳನ್ನು ನಿಮಗೆ ಹೇಳಿರುವೆನು.

**ಚತುರ್ಯುಗಾನಾಂ ಸರ್ವೇಷಾಮೇತದೇವ ಪ್ರಸಾಧನಂ ।**
**ಏಷಾಂ ಚತುರ್ಯುಗಾನಾಂ ತು ಗಣಿತಾ ಹ್ಯೇಕಸಪ್ತತಿಃ ॥೧೦೨॥**

**ಕ್ರಮೇಣ ಪರಿವೃತ್ತಾಸ್ತಾ ಮನೋರಂತರಮುಚ್ಯತೇ ।**
**ಯುಗಾಖ್ಯಾಸು ಚ ಸರ್ವಾಸು ಭವತೀಹ ಯದಾ ಚ ಯತ್ ॥೧೦೩॥**

**ತದೇವ ಚ ತದನ್ಯಾಸು ಪುನಸ್ತದ್ವೈ ಯಥಾಕ್ರಮಂ ।**
**ಸರ್ಗೇ ಸರ್ಗೇ ಯಥಾ ಭೇದಾ ಹ್ಯುತ್ಪದ್ಯಂತೇ ತಥೈವ ಚ ॥೧೦೪॥**

**ಚತುರ್ದಶಸು ತಾವಂತೋ ಜ್ಞೇಯಾ ಮನ್ವಂತರೇಷ್ವಿಹ ।**
**ಆಸುರೀ ಯಾತುಧಾನೀ ಚ ಪೈಶಾಚೀ ಯಕ್ಷರಾಕ್ಷಸೀ ॥೧೦೫॥**

**ಯುಗೇ ಯುಗೇ ತದಾ ಕಾಲೇ ಪ್ರಜಾ ಜಾಯಂತಿ ತಾಃ ಶೃಣು ।**
**ಯಥಾಕಲ್ಪಂ ಯುಗೈಃ ಸಾರ್ಧಂ ಭವಂತೇ ತುಲ್ಯಲಕ್ಷಣಾಃ ।**
**ಇತ್ಯೇತಲ್ಲಕ್ಷಣಂ ಪ್ರೋಕ್ತಂ ಯುಗಾನಾಂ ವೈ ಯಥಾಕ್ರಮಂ ॥೧೦೬॥**

---

೧೦೨-೧೦೩. ಎಲ್ಲ ಮನ್ವಂತರಗಳಲ್ಲಿಯೂ ಚತುರ್ಯುಗಗಳ ಲಕ್ಷಣವು ಹೀಗೆಯೇ ಇರುವುದು. ಈ ನಾಲ್ಕು ಯುಗಗಳು ಒಂದಾಗುತ್ತಲೊಂದು ಕ್ರಮವಾಗಿ ಎಪ್ಪತ್ತೊಂದು ಸಾರಿ ಮರಳಿ ಬಂದರೆ ಒಂದು ಮನ್ವಂತರವೆನಿಸುವುದು. ಯಾವ ಮನ್ವಂತರದಲ್ಲಿ ಈ ಯುಗಗಳು ಬಂದರೂ ಅವುಗಳ ಲಕ್ಷಣವು ಏಕ ರೀತಿಯಾಗಿರುವುದು. ಈ ಕ್ರಮದಲ್ಲಿಯೇ ಚತುರ್ಯುಗ ಪರಿವರ್ತನವಾಗುವುದು.

೧೦೪-೧೦೫. ಪ್ರತಿಯೊಂದು ಸೃಷ್ಟಿಯಲ್ಲಿಯೂ ಭಿನ್ನಭಿನ್ನಸ್ವಭಾವದ ಜೀವರಾಶಿಗಳು ಉತ್ಪನ್ನವಾಗುತ್ತವೆಯಷ್ಟೆ. ಅವುಗಳಷ್ಟೂ ಹಿಂದೆ ಹೇಳಿದ ಹದಿನಾಲ್ಕು ಮನ್ವಂತರಗಳಲ್ಲಿ ಅದೇ ಕ್ರಮದಲ್ಲಿಯೇ ಜನಿಸುತ್ತವೆಯೆಂದು ತಿಳಿಯಬೇಕು. ಅಸುರರು, ಯಾತುಧಾನರು, ಪಿಶಾಚರು, ಯಕ್ಷರು, ಮತ್ತು ರಾಕ್ಷಸರೆಂಬ ಪ್ರಜೆಗಳು ಕಲ್ಪಾನುಸಾರವಾಗಿ ಆಯಾ ಯುಗಗಳಲ್ಲಿ ಸಮಾನ ಲಕ್ಷಣಗಳಿಂದ ಕೂಡಿ ಉದಿಸುತ್ತಾರೆ. ನಾಲ್ಕು ಯುಗಗಳ ಲಕ್ಷಣವನ್ನೂ ಈ ರೀತಿಯಾಗಿ ಹೇಳಿದುದಾಯಿತು.

ಮನ್ವಂತರಾಣಾಂ ಪರಿವರ್ತನಾನಿ
ಚಿರಪ್ರವೃತ್ತಾನಿ ಯುಗಸ್ವಭಾವಾತ್ ।
ಕ್ಷಣಂ ನ ಸಂತಿಷ್ಠತಿ ಜೀವಲೋಕಃ
ಕ್ಷಯೋದಯಾಭ್ಯಾಂ ಪರಿವರ್ತಮಾನಃ ॥೧೦೭॥

ಏತೇ ಯುಗಸ್ವಭಾವಾ ವಃ ಪರಿಕ್ರಾಂತಾ ಯಥಾಕ್ರಮಂ ।
ಮನ್ವಂತರಾಣಿ ಯಾನ್ಯಸ್ಮಿನ್ ಕಲ್ಪೇ ವಕ್ಷ್ಯಾಮಿ ತಾನಿ ಚ ॥೧೦೮॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಮನ್ವಂತರಾನುಕೀರ್ತನೇ
ಯುಗವರ್ತನಂ ನಾಮ ಚತುಶ್ಚತ್ವಾರಿಂಶದಧಿಕಶತತಮೋಽಧ್ಯಾಯಃ

---

೧೦೭. ಯುಗಸ್ವಭಾವವನ್ನು ಅನುಸರಿಸಿ ಮನ್ವಂತರಗಳು ಆದಿಕಾಲದಿಂದಲೂ ಒಂದಾಗುತ್ತಲೊಂದು ತಿರುತಿರುಗಿ ಬರುತ್ತಲೇ ಇರುವುವು. ಪ್ರಾಣಿವರ್ಗವು ಹುಟ್ಟುಸಾವುಗಳ ಚಕ್ರಕ್ಕೆ ಸಿಕ್ಕಿಕೊಂಡು ಸದಾ ತಿರುಗುತ್ತಲಿರುವುದು. ಅದು ಒಂದು ಕ್ಷಣಕಾಲವಾದರೂ ಸುಮ್ಮನಿರುವುದಿಲ್ಲ.

೧೦೮. ಯಥಾಕ್ರಮವಾಗಿ ಆಯಾ ಯುಗಗಳಲ್ಲಿ ತೋರಿಬರುವ ಲಕ್ಷಣಗಳು ಇವು. ಇನ್ನು ಬೇರೆ ಕಲ್ಪದಲ್ಲಿನ ಮನ್ವಂತರಗಳನ್ನು ಹೇಳುವೆನು.

## ಅಧ್ಯಾಯದ ಸಾರಾಂಶ

ದ್ವಾಪರ ಮತ್ತು ಕಲಿಯುಗಗಳ ಸ್ವಭಾವವು ಈ ಅಧ್ಯಾಯದಲ್ಲಿ ಉಕ್ತವಾಗಿದೆ.

ತ್ರೇತಾಯುಗದ ತರುವಾಯ ದ್ವಾಪರಯುಗವು ಹುಟ್ಟುವುದು. ಇದರಲ್ಲಿ ಧರ್ಮವು ಹಿಂದಿನ ಯುಗಕ್ಕಿಂತ ಕಾಲುಪಾಲು ಕಡಿಮೆಯಾಗುವುದು. ಅಖಂಡವಾಗಿದ್ದ ವೇದವು ನಾಲ್ಕು ಭಾಗಗಳಾಗಿ ವಿಂಗಡಿಸಲ್ಪಡುವುದು. ಬರಬರುತ್ತ ಪ್ರಜೆಗಳಲ್ಲಿ ರಾಗದ್ವೇಷಾದಿಗಳು ಪ್ರಬಲಿಸಿ, ಧರ್ಮವು ಖಿಲವಾಗುವುದು. ಮನುಷ್ಯನ ಪರಮಾಯುಸ್ಸೆಂದರೆ ಈ ಯುಗದಲ್ಲಿ ಒಂದು ಸಾವಿರವರ್ಷ.

ಮುಂದಿನದೇ ಕಲಿಯುಗ. ಇದೇ ಕೊನೆಯದು. ಇದರಂತೆ ಪಾಪಭೂಯಿಷ್ಠವಾದ ಯುಗವು ಮತ್ತೊಂದಿಲ್ಲ. ಇದರಲ್ಲಿ ವೇದಗಳೂ ಧರ್ಮವೂ

ಸಂಪೂರ್ಣವಾಗಿ ಖಿಲವಾಗುವುವು. ಪ್ರಜೆಗಳಿಗೆ ನಾನಾವಿಧವಾದ ಕಷ್ಟಗಳು ಒದಗುವುವು. ಅತಿವೃಷ್ಟಿ, ಅನಾವೃಷ್ಟಿ, ದುರ್ಭಿಕ್ಷ ಮತ್ತು ರೋಗಾದ್ಯುಪದ್ರವಗಳ ಕಾಟವು ತಪ್ಪುವುದೇ ಇಲ್ಲ. ಲೂಟಿ, ಕೊಲೆ, ಕಳವು ಇವು ಕೊನೆಮೊದಲಿಲ್ಲದೆ ನಡೆಯುತ್ತಿರುವುವು. ಜನರು ಹುಳುಗಳಂತೆ ಲೆಕ್ಕವಿಲ್ಲದೆ ಸಾಯುವರು.

ಕೊನೆಗೆ ಸಂಧ್ಯಾಂಶದಲ್ಲಿ ವಿಷ್ಣುವಿನ ಅಂಶದಿಂದ ಜನಿಸಿದ ಪ್ರಮತಿಯೆಂಬ ಮಹಾವೀರನು ಧರ್ಮಕಂಟಕರನ್ನು ಅಡಗಿಸುವನು. ಆಮೇಲೆ ಕೃತಯುಗವು ಹುಟ್ಟುವುದು. ಸಪ್ತರ್ಷಿಗಳು ಧರ್ಮವನ್ನು ಪ್ರಚಾರಮಾಡುವರು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಮನ್ವಂತರಾನುಕೀರ್ತನದೊಳಗೆ ಯುಗವರ್ತನವೆಂಬ ನೂರನಲವತ್ತನಾಲ್ಕನೆಯ ಅಧ್ಯಾಯವು ಮುಗಿದುದು.



## ಅಥ ಪಂಚಚತ್ವಾರಿಂಶದಧಿಕಶತತಮೋಽಧ್ಯಾಯಃ

॥ ಸೂತ ಉವಾಚ ॥

ಮನ್ವಂತರಾಣಿ ಯಾನಿ ಸ್ಯುಃ ಕಲ್ಪೇ ಕಲ್ಪೇ ಚತುರ್ದಶ ।
ವ್ಯತೀತಾನಾಗತಾನಿ ಸ್ಯುರ್ಯಾನಿ ಮನ್ವಂತರೇಷ್ವಿಹ ॥ ೧ ॥

ವಿಸ್ತರೇಣಾನುಪೂರ್ವ್ಯಾಚ್ಚ ಸ್ಥಿತಿಂ ವಕ್ಷ್ಯೇ ಯುಗೇ ಯುಗೇ ।
ತಸ್ಮಿನ್ ಯುಗೇ ಚ ಸಂಭೂತಿರ್ಯಾಸಾಂ ಯಾವಚ್ಚ ಜೀವಿತಂ ॥ ೨ ॥

ಯುಗಮಾತ್ರಂ ತು ಜೀವಂತಿ ನ್ಯೂನಂ ತತ್ಸ್ಯಾದ್ದ್ವಯೋ ನ ಚ ।
ಚತುರ್ದಶಸು ತಾವಂತೋ ಜ್ಞೇಯಾ ಮನ್ವಂತರೇಷ್ವಿಹ ॥ ೩ ॥

ಮನುಷ್ಯಾಣಾಂ ಪಶೂನಾಂ ಚ ಪಕ್ಷಿಣಾಂ ಸ್ಥಾವರೈಃ ಸಹ ।
ತೇಷಾಮಾಯುರುಪಕ್ರಾಂತಂ ಯುಗಧರ್ಮೇಷು ಸರ್ವಶಃ ॥ ೪ ॥

---

೧-೨. ಸೂತ ಪೌರಾಣಿಕನು ಹೇಳಿದನು.—ಹಿಂದೆ ನಡೆದ ಮತ್ತು ಮುಂದೆ ನಡೆಯಲಿರುವ ಕ್ರಮದಲ್ಲಿ ಒಂದೊಂದು ಕಲ್ಪದಲ್ಲಿಯೂ ಬರುವ ಹದಿನಾಲ್ಕು ಮನ್ವಂತರಗಳನ್ನೂ, ಪ್ರತಿಯೊಂದು ಯುಗದ ಸ್ಥಿತಿಯನ್ನೂ, ಆ ಯುಗದಲ್ಲಿ ಹುಟ್ಟುವ ಪ್ರಜೆಗಳ ಜೀವನವನ್ನೂ ಇನ್ನು ಮುಂದೆ ವಿಸ್ತಾರವಾಗಿಯೂ ಕ್ರಮವಾಗಿಯೂ ಹೇಳುವೆನು.

೩. ಪ್ರತಿಯೊಂದು ಯುಗದಲ್ಲಿಯೂ ಅದರ ಸಂಧ್ಯೆಯನ್ನೂ ಸಂಧ್ಯಾಂಶವನ್ನೂ ಬಿಟ್ಟು ಉಳಿದ ಯುಗಪ್ರಮಾಣವು ಎಷ್ಟಿರುವುದೋ ಅಷ್ಟು ವರ್ಷಗಳ ಕಾಲ (ಮನುಷ್ಯಮಾನದಲ್ಲಿ) ಮನುಷ್ಯರು ಜೀವಿಸುವರು. ಹದಿನಾಲ್ಕು ಮನ್ವಂತರಗಳಲ್ಲಿಯೂ ಮಾನವರ ಆಯುಷ್ಪ್ರಮಾಣವು ಈ ರೀತಿಯಾಗಿರುವುದೆಂದು ತಿಳಿಯಬೇಕು.

೪. ಮನುಷ್ಯರು, ಪಶುಗಳು, ಪಕ್ಷಿಗಳು, ಸ್ಥಾವರಗಳು, ಇವೆಲ್ಲಕ್ಕೂ ಯುಗಧರ್ಮಾನುಸಾರವಾಗಿ ಆಯುಃ ಪರಿಮಿತಿಯು ಕ್ಲಪ್ತವಾಗಿರುವುದು.

**ತಥೈವಾಯುಃ ಪರಿಕ್ರಾಂತಂ ಯುಗಧರ್ಮೇಷು ಸರ್ವಶಃ ।**
**ಅಸ್ಥಿತಿಂ ಚ ಕಲೌ ದೃಷ್ಟ್ವಾ ಭೂತಾನಾಮಾಯುಷಶ್ಚ ವೈ ॥ ೫ ॥**

**ಪರಮಾಯುಃ ಶತಂ ತ್ವೇತನ್ಮಾನುಷಾಣಾಂ ಕಲೌ ಸ್ಮೃತಂ ।**
**ದೇವಾಸುರಮನುಷ್ಯಾಶ್ಚ ಯಕ್ಷಗಂಧರ್ವರಾಕ್ಷಸಾಃ ॥ ೬ ॥**

**ಪರಿಣಾಹೋಚ್ಛ್ರಯೇ ತುಲ್ಯಾ ಜಾಯಂತೇ ಹ ಕೃತೇ ಯುಗೇ ।**
**ಷಣ್ಣವತ್ಯಂಗುಲೋತ್ಸೇಧೋ ಹ್ಯಷ್ಟಾನಾಂ ದೇವಯೋನಿನಾಂ ॥ ೭ ॥**

**ನವಾಂಗುಲಪ್ರಮಾಣೇನ ನಿಷ್ಪನ್ನೇನ ತಥಾಷ್ಟಕಂ ।**
**ಏತತ್ಸ್ವಾಭಾವಿಕಂ ತೇಷಾಂ ಪ್ರಮಾಣಮಧಿಕುರ್ವತಾಂ ॥ ೮ ॥**

**ಮನುಷ್ಯಾ ವರ್ತಮಾನಾಸ್ತು ಯುಗಸಂಧ್ಯಾಂಶಕೇಷ್ವಿಹ ।**
**ದೇವಾಸುರಪ್ರಮಾಣಂ ತು ಸಪ್ತಸಪ್ತಾಂಗುಲಂ ಕ್ರಮಾತ್ ॥ ೯ ॥**

---

೫. ಎಲ್ಲ ಮನ್ವಂತರಗಳಲ್ಲಿಯೂ ಯುಗಧರ್ಮಕ್ಕೆ ತಕ್ಕಂತೆ ಆಯುಸ್ಸು ಗೊತ್ತಾಗಿದ್ದರೂ, ಕಲಿಯುಗದಲ್ಲಿ ಮಾತ್ರ ಪ್ರಾಣಿಗಳ ದೌರ್ಬಲ್ಯವನ್ನೂ ಅಸ್ಥಿರತವನ್ನೂ ನೋಡಿ, ಮನುಷ್ಯರ ಪರಮಾಯುಸ್ಸನ್ನು ನೂರು ವರ್ಷಗಳೆಂದು ನಿಷ್ಕರ್ಷಿಸಿರುವರು.

೬-೭. ಕೃತಯುಗದಲ್ಲಿ ದೇವತೆಗಳು, ಅಸುರರು, ಮನುಷ್ಯರು, ಯಕ್ಷರು, ಗಂಧರ್ವರು, ರಾಕ್ಷಸರು ಇವರೆಲ್ಲ ವೈಶಾಲ್ಯದಲ್ಲಿಯೂ ಔನ್ನತ್ಯದಲ್ಲಿಯೂ ಸಮಾನರಾಗಿ ಹುಟ್ಟುವರು. ದೇವತೆಗಳಲ್ಲಿ ಎಂಟು ಗಣದವರು ತೊಂಬತ್ತಾರಂಗುಲ ಎತ್ತರವಾಗಿರುವರು.

೮. ಕೃತಯುಗದ ಸಂಧ್ಯಾಂಶದಲ್ಲಿ ಮೇಲೆ ಹೇಳಿದ ದೇವಾದಿಗಳ ಸ್ವಾಭಾವಿಕ ಪ್ರಮಾಣವು ಎಪ್ಪತ್ತೆರಡಂಗುಲವಿರುವುದು. ಆಗ ವಾಸಿಸುವ ಮನುಷ್ಯರ ಅಳತೆಯೂ ಕೂಡ ಇಷ್ಟೇ.

೯. ಕಲಿಯುಗದಲ್ಲಿ ಜನಿಸುವ ದೇವತೆಗಳ ಮತ್ತು ಅಸುರರ ಪ್ರಮಾಣವು ಕ್ರಮವಾಗಿ ನಲವತ್ತೊಂಬತ್ತು ಮತ್ತು ಎಂಬತ್ತನಾಲ್ಕು ಅಂಗುಲವಿರುವುದು.

ಚತುರಶೀತಿಕೈಶ್ಚೈವ ಕಲಿಜೈರಂಗುಲೈಃ ಸ್ಮೃತಂ ।
ಆಪಾದತಲಮಸ್ತಕೋ ನವತಾಲೋ ಭವೇತ್ತು ಯಃ ॥೧೦॥

ಸಂಹೃತ್ಯಾಜಾನುಬಾಹುಶ್ಚ ದೈವತೈರಭಿಪೂಜ್ಯತೇ ।
ಗವಾಂ ಚ ಹಸ್ತಿನಾಂ ಚೈವ ಮಹಿಷಸ್ಥಾವರಾತ್ಮನಾಂ ॥೧೧॥

ಕ್ರಮೇಣೈತೇನ ವಿಜ್ಞೇಯೋ ಹ್ರಾಸವೃದ್ಧೀ ಯುಗೇ ಯುಗೇ ।
ಷಟ್ಸಪ್ತತ್ಯಂಗುಲೋತ್ಸೇಧಃ ಪಶುರಾಕಕುದೋ ಭವೇತ್ ॥೧೨॥

ಅಂಗುಲಾನಾಮಷ್ಟಶತಮುತ್ಸೇಧೋ ಹಸ್ತಿನಾಂ ಸ್ಮೃತಃ ।
ಅಂಗುಲಾನಾಂ ಸಹಸ್ರಂ ತು ದ್ವಿಚತ್ವಾರಿಂಶದಂಗುಲಂ ॥೧೩॥

ಶತಾರ್ಧಮಂಗುಲಾನಾಂ ತು ಹ್ಯುತ್ಸೇಧಃ ಶಾಖಿನಾಂ ಪರಃ ।
ಮಾನುಷಸ್ಯ ಶರೀರಸ್ಯ ಸನ್ನಿವೇಶಸ್ತು ಯಾದೃಶಃ ॥೧೪॥

ತಲ್ಲಕ್ಷಣಂ ತು ದೇವಾನಾಂ ದೃಶ್ಯತೇಽನ್ವಯದರ್ಶನಾತ್ ।
ಬುದ್ಧ್ಯಾತಿಶಯಸಂಯುಕ್ತೋ ದೇವಾನಾಂ ಕಾಯ ಉಚ್ಯತೇ ॥೧೫॥

---

೧೦. ಕಾಲಿನಿಂದ ಹಿಡಿದು ತಲೆಯ ವರೆಗೆ ಒಂಬತ್ತು ಚೋಟುಗಳಷ್ಟು ಎತ್ತರವಿದ್ದು, ತೋಳುಗಳು ಮೊಣಕಾಲುಗಳನ್ನು ಮುಟ್ಟುವಷ್ಟು ದೀರ್ಘವಾಗಿದ್ದರೆ ಅಂತಹವನನ್ನು ದೇವತೆಗಳು ಕೂಡ ಗೌರವಿಸುತ್ತಾರೆ.

೧೧-೧೨. ಹಸುಗಳು, ಆನೆಗಳು, ಕೋಣಗಳು, ಮರಗಿಡ ಬಳ್ಳಿಗಳು ಇವುಗಳ ಪ್ರಮಾಣವು ಕೃತಯುಗದಿಂದ ಬರಬರುತ್ತ ಕುಗ್ಗುವುದು. ಕಲಿಯುಗವು ಮುಗಿದ ತರುವಾಯ ಮತ್ತೆ ಹೆಚ್ಚುವುದು. ಹಸುವು ಕಾಲಿನ ಗೊರಸಿನಿಂದ ಹಿಡಿದು ಹಿಣಿಲಿನ ತುದಿಯ ವರೆಗೆ ಎಪ್ಪತ್ತಾರು ಅಂಗುಲ ಎತ್ತರವಿರುವುದು.

೧೩. ಆನೆಗಳ ಎತ್ತರವು ಎಂಟುನೂರಂಗುಲವೆಂದೂ, ಮರಗಳದು ಒಂದು ಸಾವಿರದ ತೊಂಬತ್ತೆರಡು ಅಂಗುಲವೆಂದೂ ತಿಳಿಯಬೇಕು.

೧೪-೧೫. ಮನುಷ್ಯರ ಶರೀರವೂ ದೇವತೆಗಳ ಶರೀರವೂ ಸನ್ನಿವೇಶ ಮತ್ತು ಲಕ್ಷಣಗಳಲ್ಲಿ ಒಂದೇ ತೆರನಾಗಿರುವುವು. ಏಕೆಂದರೆ ಇವೆರಡಕ್ಕೂ ಪರಸ್ಪರ

ತಥಾ ನಾತಿಶಯಶ್ಚೈವ ಮಾನುಷಃ ಕಾಯ ಉಚ್ಯತೇ ।
ಇತ್ಯೇವ ಹಿ ಪರಿಕ್ರಾಂತಾ ಭಾವಾ ಯೇ ದಿವ್ಯಮಾನುಷಾಃ ॥೧೬॥

ಪಶೂನಾಂ ಪಕ್ಷಿಣಾಂ ಚೈವ ಸ್ಥಾವರಾಣಾಂ ಚ ಸರ್ವಶಃ ।
ಗಾವೋಽಜಾಶ್ವಾಶ್ಚ ವಿಜ್ಞೇಯಾ ಹಸ್ತಿನಃ ಪಕ್ಷಿಣೋ ಮೃಗಾಃ ॥೧೭॥

ಉಪಯುಕ್ತಾಃ ಕ್ರಿಯಾಸ್ವೇತೇ ಯಜ್ಞಿಯಾಸ್ತ್ವಿಹ ಸರ್ವಶಃ ।
ಯಥಾಕ್ರಮೋಪಭೋಗಾಶ್ಚ ದೇವಾನಾಂ ಪಶುಮೂರ್ತಯಃ ॥೧೮॥

ತೇಷಾಂ ರೂಪಾನುರೂಪೈಶ್ಚ ಪ್ರಮಾಣೈಃ ಸ್ಥಿರಜಂಗಮಾಃ ।
ಮನೋಜ್ಞೈಸ್ತತ್ರ ತೈರ್ಭೋಗೈಃ ಸುಖಿನೋ ಹ್ಯುಪಪೇದಿರೇ ॥೧೯॥

---

ಸಂಬಂಧವಿದೆ. ದೇವತೆಗಳಲ್ಲಿ ಇರುವಷ್ಟು ಬುಧ್ಯತಿಶಯವು ಮನುಷ್ಯರಲ್ಲಿಲ್ಲ. ಹೀಗೆ ಇವರಿಬ್ಬರ ಲಕ್ಷಣಗಳಲ್ಲಿ ಹೋಲಿಕೆ ಮತ್ತು ವ್ಯತ್ಯಾಸಗಳಿವೆ.

೧೭-೧೮. ಪಶುಗಳು, ಪಕ್ಷಿಗಳು ಮತ್ತು ಸ್ಥಾವರಗಳ ಲಕ್ಷಣವೂ ಕೂಡ ಯುಗಭೇದದಿಂದ ವ್ಯತ್ಯಾಸವಾಗುವುದು. ಹಸುಗಳು, ಆಡುಗಳು, ಕುದುರೆಗಳು, ಆನೆಗಳು, ಪಕ್ಷಿಗಳು ಮತ್ತು ಮೃಗಗಳು ಯಾಗಗಳಲ್ಲಿ ಉಪಯೋಗವಾಗುವುವು. ಇವು ಯಜ್ಞಪಶುಗಳ ರೂಪದಿಂದ ದೇವತೆಗಳ ಉಪಭೋಗಕ್ಕೆ ಅರ್ಹವೆನಿಸುವುವು. ಆದಕಾರಣ ಇವುಗಳು ಯಜ್ಞಾರ್ಹವಾದ ಪವಿತ್ರಪ್ರಾಣಿಗಳೆನಿಸಿಕೊಂಡಿವೆ.

೧೯. ಯಜ್ಞಕಾರ್ಯಕ್ಕೆ ಉಪಯುಕ್ತವಾಗಿ ಅದನ್ನು ಪೂರ್ಣಗೊಳಿಸಿದ ಸುಕೃತಫಲದಿಂದ ಈ ಪ್ರಾಣಿಗಳು ತಮ್ಮ ದೇಹವನ್ನು ನೀಗಿದ ಬಳಿಕ ಸ್ವರ್ಗಾದಿ ದಿವ್ಯ ಲೋಕಗಳಿಗೆ ತೆರಳುವುವು. ಅಲ್ಲಿನ ಪ್ರಮಾಣಕ್ಕೆ ತಕ್ಕಂತೆ ಸ್ಥಾವರ ಜಂಗಮಗಳ ರೂಪವನ್ನೆತ್ತಿ, ಅವು ನಾನಾವಿಧವಾದ ಭೋಗಗಳನ್ನು ಅನುಭವಿಸುತ್ತ ಸುಖದಿಂದಿರುವುವು.

ಅಥ ಶಿಷ್ಟಾನ್ ಪ್ರವಕ್ಷ್ಯಾಮಿ ಸಾಧೂನಥ ಸತಶ್ಚ ವೈ ।
ಬ್ರಾಹ್ಮಣಾಃ ಶ್ರುತಿಶಬ್ದಾಶ್ಚ ದೇವಾನಾಂ ಪಶುಮೂರ್ತಯಃ ।
ಸಂಯುಜ್ಯ ಬ್ರಹ್ಮಣಾ ಹ್ಯಂತಸ್ತೇನ ಸಂತಃ ಪ್ರಚಕ್ಷತೇ ॥೨೦॥

ಸಾಮಾನ್ಯೇಷು ಚ ಧರ್ಮೇಷು ತಥಾ ವೈಶೇಷಿಕೇಷು ಚ ।
ಬ್ರಹ್ಮಕ್ಷತ್ರವಿಶೋ ಯುಕ್ತಾಃ ಶ್ರೌತಸ್ಮಾರ್ತೇನ ಕರ್ಮಣಾ ॥೨೧॥

ವರ್ಣಾಶ್ರಮೇಷು ಯುಕ್ತಸ್ಯ ಸುಖೋದರ್ಕಸ್ಯ ಸ್ವರ್ಗತೌ ।
ಶ್ರೌತಸ್ಮಾರ್ತೋ ಹಿ ಯೋ ಧರ್ಮೋ ಜ್ಞಾನಧರ್ಮಃ ಸ ಉಚ್ಯತೇ ॥೨೨॥

ವಿದ್ಯಾನಾಂ ಸಾಧನಾತ್ಸಾಧುರ್ಬ್ರಹ್ಮಚಾರೀ ಗುರೋರ್ಹಿತಃ ।
ಕಾರಣಾತ್ಸಾಧನಾಚ್ಚೈವ ಗೃಹಸ್ಥಃ ಸಾಧುರುಚ್ಯತೇ ॥೨೩॥

---

೨೦. ಇನ್ನು ಮುಂದೆ ಶಿಷ್ಟರ ಮತ್ತು ಸಾಧುಗಳ ಲಕ್ಷಣವನ್ನು ಹೇಳುವೆನು. ದ್ವಿಜರು, ವೇದಗಳು, ದೇವತೆಗಳಿಗೆ ಉಪಹಾರಯೋಗ್ಯಗಳಾದ ಪಶುಗಳು ಇವು ಬ್ರಹ್ಮಸ್ವರೂಪವೆನಿಸಿವೆ. ಪರಮಾತ್ಮನ ಅಂಶವು ಇವುಗಳಲ್ಲಿ ವಿಶೇಷವಾಗಿ ಸ್ಫುರಿಸುವುದು. ಆದುದರಿಂದ ಇವುಗಳನ್ನು "ಸತ್" ಎನ್ನುವರು. ಸಚ್ಛಬ್ದವು ಬ್ರಹ್ಮವಾಚಕವೆನಿಸಿದೆ.

೨೧. ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯರೆಂಬ ತ್ರೈವರ್ಣಿಕರು ಶ್ರುತಿಸ್ಮೃತಿ ವಿಹಿತವಾದ ಕರ್ಮಗಳನ್ನು ಆಚರಿಸುತ್ತ ಸಾಮಾನ್ಯಧರ್ಮಗಳಲ್ಲಿಯೂ, ವಿಶೇಷಧರ್ಮಗಳಲ್ಲಿಯೂ ಅಧಿಕಾರವನ್ನು ಪಡೆದಿರುವರು.

೨೨. ವರ್ಣಾಶ್ರಮಾಚಾರಗಳಲ್ಲಿ ನಿತ್ಯವೂ ಆಸಕ್ತನಾಗಿರುವ ಮನುಷ್ಯನು ಮುಂದೆ ಸ್ವರ್ಗಾದಿ ಸೌಖ್ಯಗಳನ್ನು ಪಡೆಯುತ್ತಾನೆ. ಅವನು ಆಚರಿಸುವ ಶ್ರುತಿಸ್ಮೃತಿ ಪ್ರತಿಪಾದಿತವಾದ ಆ ಧರ್ಮವನ್ನು ಜ್ಞಾನಧರ್ಮವೆಂದೂ ಕರೆಯುತ್ತಾರೆ.

೨೩. ಬ್ರಹ್ಮಚಾರಿಯು ಗುರುಶುಶ್ರೂಷೆಯಲ್ಲಿ ನಿರತನಾಗಿ, ವಿದ್ಯೆಯನ್ನು ಆರ್ಜಿಸುವಕಾರಣ ಸಾಧುವೆನಿಸಿಕೊಳ್ಳುವನು. ವಂಶಾಭಿವೃದ್ಧಿಗೆ ಕಾರಣನಾಗಿರುವುದರಿಂದಲೂ, ಮಿಕ್ಕ ಆಶ್ರಮಧರ್ಮಗಳು ನಡೆಯಲು ಸಹಕಾರಿಯಾಗಿರುವುದರಿಂದಲೂ ಗೃಹಸ್ಥನನ್ನು ಸಾಧುವೆನ್ನಬಹುದು.

**ತಪಸಶ್ಚ ತಥಾರಣ್ಯೇ ಸಾಧುರ್ವೈಖಾನಸಃ ಸ್ಮೃತಃ ।**
**ಯತಮಾನೋ ಯತಿಃ ಸಾಧುಃ ಸ್ಮೃತೋ ಯೋಗಸ್ಯ ಸಾಧನಾತ್ ॥೨೪॥**

**ಧರ್ಮೋ ಧರ್ಮಗತಿಃ ಪ್ರೋಕ್ತಃ ಶಬ್ದೋ ಹ್ಯೇಷ ಕ್ರಿಯಾತ್ಮಕಃ ।**
**ಕುಶಲಾಕುಶಲಂ ಕರ್ಮ ಧರ್ಮಾಧರ್ಮೌ ಬ್ರವೀತ್ಪ್ರಭುಃ ॥೨೫॥**

**ಅಥ ದೇವಾಶ್ಚ ಪಿತರ ಋಷಯಶ್ಚೈವ ಮಾನುಷಾಃ ।**
**ಅಯಂ ಧರ್ಮೋ ಹ್ಯಯಂ ನೇತಿ ಬ್ರುವತೇ ಮೌನಮೂರ್ತಿನಾ ॥೨೬॥**

**ಧರ್ಮೇತಿ ಧಾರಣೇ ಧಾತುರ್ಮಹತ್ವೇ ಚೈವಮುಚ್ಯತೇ ।**
**ಆಧಾರಣೇ ಮಹತ್ವೇ ವಾ ಧರ್ಮಃ ಸ ತು ನಿರುಚ್ಯತೇ ॥೨೭॥**

---

೨೪. ಅರಣ್ಯದಲ್ಲಿ ವಾಸಿಸುತ್ತ ಏಕಾಗ್ರಚಿತ್ತನಾಗಿ ತಪಸ್ಸಿನ ಸಿದ್ಧಿಗೆ ಯತ್ನಿಸುತ್ತಿರುವುದರಿಂದ ವಾನಪ್ರಸ್ಥನನ್ನು ಸಾಧುವೆನ್ನುತ್ತಾರೆ. ಯೋಗಸಾಧನೆಯಿಂದ ಆತ್ಮಸಾಕ್ಷಾತ್ಕಾರಕ್ಕೆ ಪ್ರಯತ್ನಿಸುತ್ತಿರುವ ಕಾರಣ ಯತಿಯೂ ಕೂಡ ಸಾಧುವೆನಿಸಿಕೊಳ್ಳುವನು.

೨೫. ಧರ್ಮವೆಂದರೆ ಧರ್ಮದ ಆಚರಣೆಯೆಂದರ್ಥ. ಈ ಶಬ್ದವು ಮನುಷ್ಯರು ಆಚರಿಸುವ ಕರ್ತವ್ಯರೂಪವಾದ ಕ್ರಿಯೆಯನ್ನು ತಿಳಿಸುತ್ತದೆ. ಶ್ರೇಯಸ್ಸಿಗೆ ಸಾಧನವಾದ ಕರ್ಮವನ್ನು ಧರ್ಮವೆಂದೂ, ಅಲ್ಲದುದನ್ನು ಅಧರ್ಮವೆಂದೂ ಭಗವಂತನು ಹೇಳಿದ್ದಾನೆ.

೨೬. ದೇವತೆಗಳು, ಪಿತೃಗಳು, ಋಷಿಗಳು ಮತ್ತು ಮನುಷ್ಯರು "ಇದು ಧರ್ಮ, ಇದು ಅಧರ್ಮ ಎಂದು ಹೇಳುತ್ತಾರಲ್ಲವೆ! ಅದರ ಸ್ವರೂಪವನ್ನು ತಿಳಿಸಿಕೊಟ್ಟವನು ತಪಸ್ವಿಗಳಲ್ಲಿ ಅಗ್ರೇಸರನಾದ ಬ್ರಹ್ಮನು.

೨೭. ಧಾರಣಾರ್ಥದಲ್ಲಿಯೂ, ಮಹತ್ತ್ವಾರ್ಥದಲ್ಲಿಯೂ "ಧೃಞ್" ಧಾತುವು ಪ್ರಯುಕ್ತವಾಗಿದೆ. ಅದರಿಂದ ನಿಷ್ಪನ್ನವಾದ ಧರ್ಮಶಬ್ದವು "ದುರ್ಗತಿಗೆ ಇಳಿಯದಂತೆ ಲೋಕವನ್ನು ಧರಿಸತಕ್ಕುದು, ಅಸಾಧಾರಣವಾದ ಮಹಿಮೆಯುಳ್ಳುದು" ಎಂಬ ಅರ್ಥಗಳಿಂದ ಕೂಡಿದೆ.

ತತ್ರೇಷ್ಟಪ್ರಾಪಕೋ ಧರ್ಮ ಆಚಾರ್ಯೈರುಪದಿಶ್ಯತೇ ।
ಅಧರ್ಮಶ್ಚಾನಿಷ್ಟಫಲ ಆಚಾರ್ಯೈರ್ನೋಪದಿಶ್ಯತೇ ॥೨೮॥

ವೃದ್ಧಾಶ್ಚಾಲೋಲುಪಾಶ್ಚೈವ ಆತ್ಮವಂತೋ ಹ್ಯದಾಂಭಿಕಾಃ ।
ಸಮ್ಯಗ್ವಿನೀತಾ ಮೃದವಸ್ತಾನಾಚಾರ್ಯಾ‌ನ್ ಪ್ರಚಕ್ಷತೇ ॥೨೯॥

ಧರ್ಮಜ್ಞೈರ್ವಿಹಿತೋ ಧರ್ಮಃ ಶ್ರೌತಸ್ಮಾರ್ತೋ ದ್ವಿಜಾತಿಭಿಃ ।
ದಾರಾಗ್ನಿಹೋತ್ರಸಂಬಂಧಮಿಜ್ಯಾ ಶ್ರೌತಸ್ಯ ಲಕ್ಷಣಂ ॥೩೦॥

ಸ್ಮಾರ್ತೋ ವರ್ಣಾಶ್ರಮಾಚಾರೋ ಯಮೈಶ್ಚ ನಿಯಮೈರ್ಯುತಃ ।
ಪೂರ್ವೇಭ್ಯೋ ವೇದಯಿತ್ವೇಹ ಶ್ರೌತಂ ಸಪ್ತರ್ಷಯೋಽಬ್ರುವನ್ ॥೩೧॥

---

೨೮. ಧರ್ಮವು ಇಷ್ಟಾರ್ಥವನ್ನು ಸಾಧಿಸಿಕೊಡುತ್ತದೆ. ಇದರ ಅನುಷ್ಠಾನವನ್ನೇ ಆಚಾರ್ಯರು ಉಪದೇಶಿಸುತ್ತಾರೆ. ಅಧರ್ಮವಾದರೋ ಅನಿಷ್ಟಫಲವನ್ನು ಕೊಡುತ್ತದೆ. ಅವರು ಅದನ್ನು ಎಂದಿಗೂ ಉಪದೇಶಿಸರು.

೨೯. ಹಿರಿಯರೂ, ವಿಷಯಲಂಪಟರಲ್ಲದವರೂ, ಆತ್ಮಜ್ಞಾನಪರಿಪೂರ್ಣರೂ ದಂಭರಹಿತರೂ, ಬಹುವಿನಯವಂತರೂ, ಮೃದುಸ್ವಭಾವದವರೂ ಆದವರನ್ನು ಆಚಾರ್ಯರೆಂದು ಹೇಳುತ್ತಾರೆ.

೩೦. ಧರ್ಮದ ಸ್ವರೂಪವನ್ನು ಚೆನ್ನಾಗಿ ಬಲ್ಲ ದ್ವಿಜೋತ್ತಮರು ಧರ್ಮವನ್ನು ಶ್ರೌತವೆಂದೂ ಸ್ಮಾರ್ತವೆಂದೂ ಎರಡು ಭಾಗವಾಗಿ ವಿಂಗಡಿಸಿದ್ದಾರೆ. ಗಾರ್ಹಸ್ಥ್ಯವನ್ನು ಸ್ವೀಕರಿಸಿ ಅಗ್ನಿಹೋತ್ರ, ಸ್ಥಾಲೀಪಾಕ ಇವುಗಳನ್ನು ಮಾಡುವುದು ಯಜ್ಞಗಳನ್ನು ನಡೆಸುವುದು ಇವು ಶ್ರೌತಧರ್ಮಕ್ಕೆ ಸಂಬಂಧಪಟ್ಟುವು.

೩೧. ವರ್ಣಾಶ್ರಮಾಚಾರವನ್ನು ಸ್ಮಾರ್ತಧರ್ಮವೆನ್ನುತ್ತಾರೆ. ಇದರ ಆಚರಣೆಗೆ ಯಮನಿಯಮಾದ್ಯಷ್ಟಾಂಗ ಸಹಿತವಾದ ಯೋಗದ ಅಭ್ಯಾಸವು ಸಹಕಾರಿಯಾಗಿರುವುದು. ಸಪ್ತರ್ಷಿಗಳು ಶ್ರೌತಧರ್ಮವನ್ನು ತಮ್ಮ ಪೂರ್ವಜರ ಮುಖದಿಂದ ಅರಿತು ಲೋಕಕ್ಕೆ ಉಪದೇಶಮಾಡಿದರು.

ಋಚೋ ಯಜೂಂಷಿ ಸಾಮಾನಿ ಬ್ರಹ್ಮಣೋಽಂಗಾನಿ ವೈ ಶ್ರುತಿಃ ।
ಮನ್ವಂತರಸ್ಯಾತೀತಸ್ಯ ಸ್ಮೃತ್ವಾ ತನ್ಮನುರುಬ್ರವೀತ್ ॥೩೨॥

ತಸ್ಮಾತ್ಸ್ಮಾರ್ತಃ ಸ್ಮೃತೋ ಧರ್ಮೋ ವರ್ಣಾಶ್ರಮವಿಭಾಗಶಃ ।
ಏವಂ ವೈ ದ್ವಿವಿಧೋ ಧರ್ಮಃ ಶಿಷ್ಟಾಚಾರಃ ಸ ಉಚ್ಯತೇ ॥೩೩॥

ಶಿಷೇರ್ಧಾತೋಶ್ಚ ನಿಷ್ಠಾಂತಾಚ್ಛಿಷ್ಟಶಬ್ದಂ ಪ್ರಚಕ್ಷತೇ ।
ಮನ್ವಂತರೇಷು ಯೇ ಶಿಷ್ಟಾ ಇಹ ತಿಷ್ಠಂತಿ ಧಾರ್ಮಿಕಾಃ ॥೩೪॥

ಮನುಃ ಸಪ್ತರ್ಷಯಶ್ಚೈವ ಲೋಕಸಂತಾನಕಾರಿಣಃ ।
ತಿಷ್ಠಂತೀಹ ಚ ಧರ್ಮಾರ್ಥಂ ತಾಞ್ಶಿಷ್ಟಾನ್ ಸಂಪ್ರಚಕ್ಷತೇ ॥೩೫॥

ತೈಃ ಶಿಷ್ಟೈಶ್ಚಲಿತೋ ಧರ್ಮಃ ಸ್ಥಾಪ್ಯತೇ ವೈ ಯುಗೇ ಯುಗೇ ।
ತ್ರಯೀ ವಾರ್ತಾ ದಂಡನೀತಿಃ ಪ್ರಜಾವರ್ಣಾಶ್ರಮೇಪ್ಸಯಾ ॥೩೬॥

---

೩೨. ಋಗ್ವೇದ, ಯಜುರ್ವೇದ ಮತ್ತು ಸಾಮವೇದಗಳು ಬ್ರಹ್ಮನ ಅವಯವಗಳೆಂದು ಶ್ರುತಿಯು ಹೇಳುತ್ತದೆ. ಹಿಂದಿನ ಮನ್ವಂತರದಲ್ಲಿ ಪ್ರಚಾರ ದಲ್ಲಿದ್ದ ಧರ್ಮಗಳನ್ನು ತನ್ನ ದಿವ್ಯ ಜ್ಞಾನದಿಂದ ಸ್ಮರಿಸಿಕೊಂಡು ಮನುವು ಜಗತ್ತಿಗೆ ಉಪದೇಶಿಸಿದನು.

೩೩. ಸ್ಮೃತಿಯ (ನೆನಪಿನ) ಮೂಲಕವಾಗಿ ಪ್ರಚಾರಕ್ಕೆ ಬಂದ ಧರ್ಮ ವಾದುದರಿಂದ ಇದಕ್ಕೆ ಸ್ಮಾರ್ತವೆಂಬ ಹೆಸರು ಬಂದಿದೆ. ಇದು ವರ್ಣಾಶ್ರಮ ವಿಭಾ ಗವನ್ನು ಒಳಗೊಂಡಿದೆ. ಹೀಗೆ ಶ್ರೌತವೆಂದೂ ಸ್ಮಾರ್ತವೆಂದೂ ಎರಡು ಭಾಗವಾಗಿ ರುವ ಧರ್ಮವನ್ನು ಶಿಷ್ಟಾಚಾರವೆಂದು ಕರೆಯುತ್ತಾರೆ.

೩೪-೩೫. "ಶಿಷ ವಿಶೇಷಣೇ" ಎಂಬ ಧಾತುವಿನ ಮೇಲೆ "ಕ್ತ" ಪ್ರತ್ಯಯವು ಸೇರಿ ಶಿಷ್ಟ ಎಂಬ ಪದವು ನಿಷ್ಪನ್ನವಾಗಿದೆ. ಮನ್ವಂತರಗಳಲ್ಲೆಲ್ಲ ಮನುವೂ ಸಪ್ತರ್ಷಿಗಳೂ ಲೋಕಾನುಗ್ರಹಕ್ಕಾಗಿ ಧರ್ಮಸಂಸ್ಥಾಪನ ಕಾರ್ಯದಲ್ಲಿ ನಿರತರಾಗಿರು ವರು. ಆ ಮಹಾತ್ಮರೇ ಶಿಷ್ಟರೆನಿಸಿಕೊಂಡಿರುವರು.

೩೬. ಆ ಶಿಷ್ಟರು ಪ್ರಚಾರಕ್ಕೆ ತಂದ ಧರ್ಮವೇ ಒಂದೊಂದು ಯುಗ ದಲ್ಲಿಯೂ ಸ್ಥಾಪಿತವಾಗುತ್ತದೆ. ಋಗ್ಯಜುಸ್ಸಾಮಗಳೆಂಬ ಮೂರು ವೇದಗಳು, ಕೃಷಿ, ಗೋರಕ್ಷಣೆ, ವಾಣಿಜ್ಯ, ರಾಜನೀತಿ ಇವೆಲ್ಲವೂ ಪ್ರಜೆಗಳಲ್ಲಿ ವರ್ಣಾಶ್ರಮ ಧರ್ಮವನ್ನು ನೆಲೆಗೊಳಿಸಬೇಕೆಂಬ ಇಚ್ಛೆಯಿಂದ ಹೊರಟಂತಹುವು.

**ಶಿಷ್ಟೈರಾಚರ್ಯತೇ ಯಸ್ಮಾತ್ಪುನಶ್ಚೈವ ಮನುಕ್ಷಯೇ ।**
**ಪೂರ್ವೈಃ ಪೂರ್ವೈರ್ಮತತ್ವಾಚ್ಚ ಶಿಷ್ಟಾಚಾರಃ ಸ ಶಾಶ್ವತಃ ॥೩೭॥**

**ದಾನಂ ಸತ್ಯಂ ತಪೋ ಲೋಕೋ ವಿದ್ಯೇಜ್ಯಾ ಪೂಜನಂ ದಮಃ ।**
**ಅಷ್ಟೌ ತಾನಿ ಚರಿತ್ರಾಣಿ ಶಿಷ್ಟಾಚಾರಸ್ಯ ಲಕ್ಷಣಂ ॥೩೮॥**

**ಶಿಷ್ಟಾ ಯಸ್ಮಾಚ್ಚರಂತ್ಯೇನಂ ಮನುಃ ಸಪ್ತರ್ಷಯಶ್ಚ ಹ ।**
**ಮನ್ವಂತರೇಷು ಸರ್ವೇಷು ಶಿಷ್ಟಾಚಾರಸ್ತತಃ ಸ್ಮೃತಃ ॥೩೯॥**

**ವಿಜ್ಞೇಯಃ ಶ್ರವಣಾಚ್ಛ್ರೌತಃ ಸ್ಮರಣಾತ್ಸ್ಮಾರ್ತ ಉಚ್ಯತೇ ।**
**ಇಜ್ಯಾ ವೇದಾತ್ಮಕಃ ಶ್ರೌತಃ ಸ್ಮಾರ್ತೋ ವರ್ಣಾಶ್ರಮಾತ್ಮಕಃ ॥೪೦॥**

---

೩೭. ಶಿಷ್ಟಶಬ್ದವಾಚ್ಯರಾದ ಮನು ಮತ್ತು ಸಪ್ತರ್ಷಿಗಳು ಒಂದೊಂದು ಮನ್ವಂತರದಲ್ಲಿಯೂ ಪುನಃ ಪುನಃ ಅನುಷ್ಠಾನಮಾಡುತ್ತ ಪ್ರಚಾರಮಾಡುವುದರಿಂದಲೂ, ಅವರ ಹಿಂದಿನ ಮನುಗಳೂ ಸಪ್ತರ್ಷಿಗಳೂ ಅದೇ ರೀತಿಯಲ್ಲಿ ಪ್ರಚುರಪಡಿಸುತ್ತಿದ್ದುದರಿಂದಲೂ ಶಿಷ್ಟಾಚಾರವು ಬಿಡುವಿಲ್ಲದೆ ಶಾಶ್ವತವಾಗಿ ನಡೆದುಕೊಂಡು ಬರುತ್ತಿರುವುದು.

೩೮. ದಾನ, ಸತ್ಯ, ತಪಸ್ಸು, ಲೋಕಾನುಸರಣ, ವಿದ್ಯೆ, ಯಾಗ, ಉಪಾಸನ, ಇಂದ್ರಿಯನಿಗ್ರಹ ಈ ಎಂಟೂ ಶಿಷ್ಟಾಚಾರದ ಲಕ್ಷಣಗಳು.

೩೯. ಶಿಷ್ಟರೆಂದೆನಿಸಿಕೊಂಡಿರುವ ಮನುವೂ ಸಪ್ತರ್ಷಿಗಳೂ ಮನ್ವಂತರಗಳಲ್ಲೆಲ್ಲ ಆಚರಿಸುವ ಧರ್ಮವಾದ ಕಾರಣ ಇದಕ್ಕೆ ಶಿಷ್ಟಾಚಾರವೆಂಬ ವ್ಯವಹಾರವಿದೆ.

೪೦. ಬ್ರಹ್ಮನಿಂದ ತೊಡಗಿ ಮಹರ್ಷಿಗಳ ವರೆಗೆ ಒಬ್ಬರಿಂದ ಮತ್ತೊಬ್ಬರು ಉಪದೇಶಮೂಲಕವಾಗಿ ಕೇಳಿ ತಿಳಿದುಕೊಂಡುದರಿಂದ ಶ್ರೌತವೆಂದೂ, ಹಿಂದಿನ ಮನ್ವಂತರದಲ್ಲಿ ಪ್ರಚಾರದಲ್ಲಿದ್ದುದನ್ನು ನೆನಪಿಗೆ ತಂದುಕೊಂಡು ಮನುಚಕ್ರವರ್ತಿಯು ಲೋಕಕ್ಕೆ ಉಪದೇಶಮಾಡಿದ ಕಾರಣ ಸ್ಮಾರ್ತವೆಂದೂ ಧರ್ಮಕ್ಕೆ ಪ್ರಸಿದ್ಧಿ ಬಂದಿದೆ. ಯಾಗವನ್ನೂ ವೇದೋಕ್ತವಾದ ಉಳಿದ ಧರ್ಮವನ್ನೂ ಶ್ರೌತವೆನ್ನುವರು. ವರ್ಣಾಶ್ರಮಾಚಾರ ರೂಪವಾದುದು ಸ್ಮಾರ್ತವೆನಿಸುವುದು.

ಪ್ರತ್ಯಂಗಾನಿ ಪ್ರವಕ್ಷ್ಯಾಮಿ ಧರ್ಮಸ್ಯೇಹ ತು ಲಕ್ಷಣಂ ||೪೧||

ದೃಷ್ಟಾನುಭೂತಮರ್ಥಂ ಚ ಯಃ ಪೃಷ್ಟೋ ನ ನಿಗೂಹತೇ ।
ಯಥಾಭೂತಪ್ರವಾದಸ್ತು ಇತ್ಯೇತತ್ಸತ್ಯಲಕ್ಷಣಂ ||೪೨||

ಬ್ರಹ್ಮಚರ್ಯಂ ತಪೋ ಮೌನಂ ನಿರಾಹಾರತ್ವಮೇವ ಚ ।
ಇತ್ಯೇತತ್ತಪಸೋ ರೂಪಂ ಸುಘೋರಂ ತು ದುರಾಸದಂ ||೪೩||

ಪಶೂನಾಂ ದ್ರವ್ಯಹವಿಷಾಮೃಕ್ಸಾಮಯಜುಷಾಂ ತಥಾ ।
ಋತ್ವಿಜಾಂ ದಕ್ಷಿಣಾಯಶ್ಚ ಸಂಯೋಗೋ ಯಜ್ಞ ಉಚ್ಯತೇ ||೪೪||

ಆತ್ಮವತ್ಸರ್ವಭೂತೇಷು ಯೋ ಹಿತಾಯ ಶುಭಾಯ ಚ ।
ವರ್ತತೇ ಸತತಂ ಹೃಷ್ಟಃ ಕ್ರಿಯಾ ಶ್ರೇಷ್ಠಾ ದಯಾ ಸ್ಮೃತಾ ||೪೫||

---

೪೧-೪೨. ಇನ್ನು ಮುಂದೆ ಧರ್ಮದ ಅಂಗಗಳಾದ ಸತ್ಯ ಮೊದಲಾದವುಗಳ ಲಕ್ಷಣವನ್ನು ಹೇಳುವೆನು. ಯಾರಾದರೂ ಪ್ರಶ್ನೆಮಾಡಿದಾಗ ತಾನು ನೋಡಿದ ಮತ್ತು ಅನುಭವಿಸಿದ ಸಂಗತಿಯನ್ನು ಮರೆಮಾಚದಿರುವುದು, ನಡೆದುದನ್ನು ನಡೆದಂತೆಯೇ ಹೇಳುವುದು. ಇವೆರಡೂ ಸತ್ಯದ ಲಕ್ಷಣ.

೪೩. ಬ್ರಹ್ಮಚರ್ಯ, ತಪಸ್ಸು, ಮೌನ, ಉಪವಾಸ, ಇವು ಘೋರವೂ ದುಶ್ಚರವೂ ಆದ ತಪಸ್ಸಿನ ರೂಪಗಳು.

೪೪. ಪಶುಗಳು, ದ್ರವ್ಯ, ಹವಿಸ್ಸು, ಋಗ್ಯಜುಸ್ಸಾಮಗಳೆಂಬ ವೇದಗಳು, ಋತ್ವಿಕ್ಕುಗಳು, ದಕ್ಷಿಣೆ ಇವುಗಳೆಲ್ಲ ಒಟ್ಟುಗೂಡಿದರೆ ಯಜ್ಞಕರ್ಮವು ನಡೆಯುವುದು.

೪೫. ಎಲ್ಲ ಪ್ರಾಣಿಗಳನ್ನೂ ತನ್ನಂತೆಯೇ ನೋಡುತ್ತ, ಅವುಗಳ ಹಿತಕ್ಕಾಗಿಯೂ ಶ್ರೇಯಸ್ಸಿಗಾಗಿಯೂ ಪ್ರವರ್ತಿಸುತ್ತ, ಯಾವಾಗಲೂ ಸಂತುಷ್ಟನಾಗಿರುವವನ ವ್ಯಾಪಾರವೇ ದಯೆಯೆನಿಸುವುದು. ಇದು ಅತ್ಯಂತ ಶ್ರೇಷ್ಠವಾದ ಗುಣ.

ಆಕ್ರುಷ್ಟೋಽಭಿಹತೋ ಯಸ್ತು ನಾಕ್ರೋಶೇತ್ಪ್ರಹರೇದಪಿ ।
ಅದುಷ್ಟೋ ವಾಙ್ಮನಃಕಾರ್ಯೈಸ್ತಿತಿಕ್ಷುಃ ಸಾ ಕ್ಷಮಾ ಸ್ಮೃತಾ ॥೪೬॥

ಸ್ವಾಮಿನಾ ರಕ್ಷ್ಯಮಾಣಾನಾಮುತ್ಸೃಷ್ಟಾನಾಂ ಚ ಸಂಭ್ರಮೇ ।
ಪರಸ್ವಾನಾಮನಾದಾನಮಲೋಭ ಇತಿ ಸಂಜ್ಞಿತಃ ॥೪೭॥

ಮೈಥುನಸ್ಯಾಸಮಾಚಾರೋ ಜಲ್ಪನಾಚ್ಚಿಂತನಾತ್ತಥಾ ।
ನಿವೃತ್ತಿರ್ಬ್ರಹ್ಮಚರ್ಯಂ ಚ ತದೇತಚ್ಛಮಲಕ್ಷಣಂ ॥೪೮॥

ಆತ್ಮಾರ್ಥೇ ವಾ ಪರಾರ್ಥೇ ವಾ ಇಂದ್ರಿಯಾಣೀಹ ಯಸ್ಯ ವೈ ।
ವಿಷಯೇ ನ ಪ್ರವರ್ತಂತೇ ದಮಸ್ಯೈತತ್ತು ಲಕ್ಷಣಂ ॥೪೯॥

---

೪೬. ಇತರರು ಬೈಯಲಿ, ಹೊಡೆಯಲಿ ತಾನು ಬೈಯುವುದೂ ಇಲ್ಲ; ಹೊಡೆಯುವುದೂ ಇಲ್ಲ. ಮನಸ್ಸು, ಮಾತು, ಕಾರ್ಯ ಇವುಗಳಲ್ಲಿ ಯಾವ ಬಗೆಯ ದೌಷ್ಟ್ಯವೂ ಇಲ್ಲದೆ ಬಂದುದೆಲ್ಲವನ್ನೂ ಸೈರಿಸಿಕೊಳ್ಳುವನು. ಇಂತಹವನ ಸ್ವಭಾವವನ್ನು ತಾಳ್ಮೆಯೆನ್ನುವರು.

೪೭. ಒಡೆಯನು ಎಚ್ಚರಿಕೆಯಿಂದ ನೋಡಿಕೊಳ್ಳುತ್ತಿದ್ದು ಏನೋ ಸಡಗರದಲ್ಲಿ ಮರೆತು ಬಿಟ್ಟುಹೋದ ಪದಾರ್ಥವು ಕೈಗೆ ಸಿಕ್ಕಿದರೂ, ಅದು ಪರದ್ರವ್ಯವೆಂಬ ಬುದ್ಧಿಯಿಂದ ಅದನ್ನು ತೆಗೆದುಕೊಳ್ಳದಿರುವುದೇ ಅಲೋಭವೆನಿಸಿಕೊಳ್ಳುತ್ತದೆ.

೪೮. ಸ್ತ್ರೀಸಂಭೋಗದ ಸಮಾಚಾರವೇ ಇಲ್ಲದೆ, ಆ ವಿಷಯಕ್ಕೆ ಸಂಬಂಧಿಸಿದ ಮಾತು, ಆಲೋಚನೆ ಇವುಗಳಿಂದ ದೂರವಾಗಿರುವುದೇ ಬ್ರಹ್ಮಚರ್ಯ. ಇದೇ ಅಂತರಿಂದ್ರಿಯ ನಿಗ್ರಹದ ಲಕ್ಷಣ.

೪೯. ತನ್ನ ಇಚ್ಛೆಯಿಂದಲಾಗಲಿ, ಇತರರ ಪ್ರೇರಣೆಯಿಂದಲಾಗಲಿ ಇಂದ್ರಿಯಗಳನ್ನು ವಿಷಯದ ಕಡೆಗೆ ಹರಿಸದಿದ್ದರೆ ಅದು ದಮ ಅಥವಾ ಬಾಹ್ಯೇಂದ್ರಿಯ ನಿಗ್ರಹವೆನಿಸಿಕೊಳ್ಳುವುದು.

**ಪಂಚಾತ್ಮಕೇ ಯೋ ವಿಷಯೇ ಕಾರಣೇ ಚಾಷ್ಟಲಕ್ಷಣೇ ।**
**ನ ಕುಪ್ಯೇತ ಪ್ರತಿಹತಃ ಸ ಜಿತಾತ್ಮಾ ಭವಿಷ್ಯತಿ ॥೫೦॥**

**ಯದ್ಯದಿಷ್ಟತಮಂ ದ್ರವ್ಯಂ ನ್ಯಾಯೇನೈವಾಗತಂ ಚ ಯತ್ ।**
**ತತ್ತದ್ಗುಣವತೇ ದೇಯಮಿತ್ಯೇತದ್ದಾನಲಕ್ಷಣಂ ॥೫೧॥**

**ಶ್ರುತಿಸ್ಮೃತಿಭ್ಯಾಂ ವಿಹಿತೋ ಧರ್ಮೋ ವರ್ಣಾಶ್ರಮಾತ್ಮಕಃ ।**
**ಶಿಷ್ಟಾಚಾರಪ್ರವೃದ್ಧಶ್ಚ ಧರ್ಮೋಽಯಂ ಸಾಧುಸಮ್ಮತಃ ॥೫೨॥**

**ಅಪ್ರದ್ವೇಷೋ ಹ್ಯನಿಷ್ಟೇಷು ಇಷ್ಟಂ ವೈ ನಾಭಿನಂದತಿ ।**
**ಪ್ರೀತಿತಾಪವಿಷಾದಾನಾಂ ವಿನಿವೃತ್ತಿರ್ವಿರಕ್ತತಾ ॥೫೩॥**

**ಸಂನ್ಯಾಸಃ ಕರ್ಮಣಾಂ ನ್ಯಾಸಃ ಕೃತಾನಾಮಕೃತೈಃ ಸಹ ।**
**ಕುಶಲಾಕುಶಲಾಭ್ಯಾಂ ತು ಪ್ರಹಾಣಂ ನ್ಯಾಸ ಉಚ್ಯತೇ ॥೫೪॥**

---

೫೦. ಶಬ್ದ, ಸ್ಪರ್ಶ ಮೊದಲಾದ ಐದು ಬಗೆಯ ವಿಷಯ ಸುಖಗಳಿಗೂ, ಧನ, ಕನಕ ಮೊದಲಾದ ಎಂಟು ವಿಧವಾದ ಸುಖಸಾಧನಗಳಿಗೂ ಅಡ್ಡಿಬಂದರೂ ಸಹ ಯಾವನು ಕೋಪಿಸಿಕೊಳ್ಳುವುದಿಲ್ಲವೋ ಅವನೇ ಜಿತಮನಸ್ಕನೆನಿಸುವನು.

೫೧. ನ್ಯಾಯಮಾರ್ಗದಿಂದಲೇ ಸಂಪಾದಿಸಿದ ಮತ್ತು ತನಗೆ ಬಹಳ ಇಷ್ಟವಾದ ಪದಾರ್ಥವು ತನ್ನಲ್ಲಿ ಏನೇನಿರುವುದೋ ಅದನ್ನು ಗುಣವಂತನೂ ಅರ್ಹನೂ ಆದವನಿಗೆ ಕೊಡುವುದೇ ದಾನವೆನಿಸಿಕೊಳ್ಳುತ್ತದೆ.

೫೨. ಶ್ರುತಿಸ್ಮೃತಿಗಳಲ್ಲಿ ಉಕ್ತವಾಗಿ ಶಿಷ್ಟಾಚಾರದಿಂದ ಬೆಳೆದು ಬಂದ ವರ್ಣಾಶ್ರಮಧರ್ಮವೇ ಸಜ್ಜನರಿಗೆ ಸಮ್ಮತವಾದುದು.

೫೩. ಅನಿಷ್ಟವೊದಗಿದಾಗ ಬೇಡವೆನ್ನುವುದಿಲ್ಲ; ಇಷ್ಟಸಿದ್ಧಿಯಾದಾಗ ಹಿಗ್ಗುವುದಿಲ್ಲ. ಪ್ರೀತಿ, ತಾಪ, ವಿಷಾದ ಮುಂತಾದ ಮನೋವಿಕಾರಗಳಿಗೆ ಎಡೆಗೊಡುವುದಿಲ್ಲ. ಇದೇ ವಿರಕ್ತನ ಲಕ್ಷಣ.

೫೪. ತಾನು ಮಾಡಿದ ಮತ್ತು ಮುಂದೆ ಮಾಡುವ ಕರ್ಮಗಳ ಫಲಸಂಗ ಕರ್ತೃತ್ವವನ್ನು ತೊರೆದು, ನಿಷ್ಕಾಮಬುದ್ಧಿಯಿಂದ ಕರ್ತವ್ಯಧರ್ಮವನ್ನು ಮಾಡುವುದೇ ಸಂನ್ಯಾಸ. ಕರ್ಮದಿಂದ ಬರುವ ಸುಖದುಃಖಗಳನ್ನು ಗಮನಿಸದಿರುವುದೇ ನ್ಯಾಸವೆನಿಸುವುದು.

**ಅವ್ಯಕ್ತಾದಿವಿಶೇಷಾಂತವಿಕಾರೇಽಸ್ಮಿನ್ನಿವರ್ತತೇ ।**
**ಚೇತನಾಚೇತನಂ ಜ್ಞಾತ್ವಾ ಜ್ಞಾನೇ ಜ್ಞಾನೀ ಸ ಉಚ್ಯತೇ ॥೫೫॥**

**ಪ್ರತ್ಯಂಗಾನಾಂ ತು ಧರ್ಮಸ್ಯ ಚೇತ್ಯೇತಲ್ಲಕ್ಷಣಂ ಸ್ಮೃತಂ ।**
**ಋಷಿಭಿರ್ಧರ್ಮತತ್ತ್ವಜ್ಞೈಃ ಪೂರ್ವೈಃ ಸ್ವಾಯಂಭುವೇಽಂತರೇ ॥೫೬॥**

**ಅತ್ರ ವೋ ವರ್ಣಯಿಷ್ಯಾಮಿ ವಿಧಿಂ ಮನ್ವಂತರಸ್ಯ ತು ।**
**ತಥೈವ ಚಾತುರ್ಹೋತ್ರಸ್ಯ ಚಾತುರ್ವರ್ಣ್ಯಸ್ಯ ಚೈವ ಹಿ ॥೫೭॥**

**ಪ್ರತಿಮನ್ವಂತರಂ ಚೈವ ಶ್ರುತಿರನ್ಯಾ ವಿಧೀಯತೇ ।**
**ಋಚೋ ಯಜೂಂಷಿ ಸಾಮಾನಿ ಯಥಾವತ್ಪ್ರತಿದೈವತಂ ॥೫೮॥**

---

೫೫. ಚೇತನ ಮತ್ತು ಅಚೇತನಗಳೆಂಬ ತತ್ವಗಳ ಸ್ವರೂಪವನ್ನು ಅರಿತು, "ಅವ್ಯಕ್ತವೊದಲುಗೊಂಡು ವಿಶೇಷದವರಗಿನ ವಿಕಾರಗಳೆಲ್ಲವೂ ಆತ್ಮನಿಗೆ ಸಂಬಂಧ ಪಟ್ಟುವಲ್ಲ; ಪ್ರಕೃತಿಗೆ ಮಾತ್ರವೇ ಸೇರಿದುವು" ಎಂದು ತಿಳಿಯುವಾತನನ್ನೇ ಜ್ಞಾನಿಯೆನ್ನುವರು. (ಸತ್ತ್ವಾದಿ ಗುಣತ್ರಯಗಳ ಸಾಮ್ಯಾವಸ್ಥೆಗೆ ಅವ್ಯಕ್ತವೆಂದೂ, ಕಾಲಪ್ರಯುಕ್ತವಾಗಿ ಶರೀರದಲ್ಲಿ ತೋರುವ ಯೌವನಾದಿ ವಿಕಾರಗಳಿಗೆ ವಿಶೇಷ ವೆಂದೂ ಹೆಸರು.

೫೬. ಧರ್ಮತತ್ತ್ವವನ್ನು ಬಲ್ಲ ಪೂರ್ವಿಕರಾದ ಮಹರ್ಷಿಗಳು ಶ್ರುತಿಸ್ಮೃತಿ ವಿಹಿತವಾದ ಧರ್ಮದ ಅಂಗಗಳಾದ ದಯೆ, ಕ್ಷಮೆ ಮೊದಲಾದವುಗಳ ಲಕ್ಷಣವನ್ನು ಮೇಲೆ ಹೇಳಿದ ರೀತಿಯಲ್ಲಿ ನಿಷ್ಕರ್ಷಿಸಿರುವರು. ಈ ವ್ಯವಸ್ಥೆ ಆದುದು ಸ್ವಾಯಂಭುವ ಮನ್ವಂತರದಲ್ಲಿ.

೫೭. ಈ ಸಂದರ್ಭದಲ್ಲಿ ನಿಮಗೆ ಮನ್ವಂತರದ ವಿಧಿಯನ್ನೂ, ಚಾತುರ್ಹೋತ್ರದ ಮತ್ತು ಚಾತುರ್ವರ್ಣ್ಯದ ಲಕ್ಷಣವನ್ನೂ ಹೇಳುವೆನು.

೫೮. ಅವಾಂತರದ ಪ್ರಳಯವು ಮುಗಿದ ಬಳಿಕ ಪ್ರತಿಯೊಂದು ಮನ್ವಂತರದ ಪ್ರಾರಂಭದಲ್ಲಿಯೂ ಚತುರ್ಮುಖಬ್ರಹ್ಮನು ಮಹರ್ಷಿಗಳಿಗೆ ವೇದವನ್ನು ಮತ್ತೆ ಉಪದೇಶಿಸುವನು. ಋಗ್ವೇದ, ಯಜುರ್ವೇದ ಮತ್ತು ಸಾಮವೇದದ ಮಂತ್ರಗಳು ಅವುಗಳ ಅಧಿದೇವತೆಗಳ ಸಹಿತವಾಗಿ ಆ ಮಹರ್ಷಿಗಳಿಗೆ ಸಾಕ್ಷಾತ್ಕಾರವಾಗುವುವು.

ವಿಧಿಸ್ತೋತ್ರಂ ತಥಾ ಹೌತ್ರಂ ಪೂರ್ವವತ್ಸಂಪ್ರವರ್ತತೇ ।
ದ್ರವ್ಯಸ್ತೋತ್ರಂ ಗುಣಸ್ತೋತ್ರಂ ಕರ್ಮಸ್ತೋತ್ರಂ ತಥೈವ ಚ ॥೫೯॥

ತಥೈವಾಭಿಜಿನಸ್ತೋತ್ರಂ ಸ್ತೋತ್ರಮೇವಂ ಚತುರ್ವಿಧಂ ।
ಮನ್ವಂತರೇಷು ಸರ್ವೇಷು ಯಥಾ ವೇದಾ ಭವಂತಿ ಹಿ ॥೬೦॥

ಪ್ರವರ್ತಯತಿ ತೇಷಾಂ ವೈ ಬ್ರಹ್ಮಾ ಸ್ತೋತ್ರಂ ಪುನಃ ಪುನಃ ।
ಏವಂ ಮಂತ್ರಗಣಾನಾಂ ತು ಸಮುತ್ಪತ್ತಿಶ್ಚತುರ್ವಿಧಾ ॥೬೧॥

ಅಥರ್ವಋಗ್ಯಜುಸ್ಸಾಮ್ನಾಂ ವೇದೇಷ್ವಿಹ ಪೃಥಕ್ಪೃಥಕ್ ।
ಋಷೀಣಾಂ ತಪ್ಯತಾಂ ತೇಷಾಂ ತಪಃ ಪರಮದುಶ್ಚರಂ ॥೬೨॥

ಮಂತ್ರಾಃ ಪ್ರಾದುರ್ಭವಂತ್ಯಾದೌ ಪೂರ್ವಮನ್ವಂತರಸ್ಯ ಹ ।
ಅಸಂತೋಷಾದ್ಭಯಾದ್ದುಃಖಾನ್ಮೋಹಾಚ್ಛೋಕಾಚ್ಚ ಪಂಚಧಾ ॥೬೩॥

---

೫೯-೬೦. ಶ್ರೌತವಿಧಾನದಂತೆ ಮಾಡಬೇಕಾದ ಸ್ತೋತ್ರವೂ ಹೋಮ ಕರ್ಮವೂ ಎಂದಿನಂತೆ ಪ್ರಚಾರಕ್ಕೆ ಬರುವುವು. ವೇದವು ನಾಲ್ಕು ಭಾಗವಾಗಿರುವಂತೆಯೇ ಸ್ತೋತ್ರವೂ ಕೂಡ ದ್ರವ್ಯಸ್ತೋತ್ರ, ಗುಣಸ್ತೋತ್ರ, ಕರ್ಮ ಸ್ತೋತ್ರ ಮತ್ತು ಅಭಿಜನ ಸ್ತೋತ್ರವೆಂದು ನಾಲ್ಕು ಪ್ರಭೇದಗಳಿಂದ ಕೂಡಿದೆ. ಈ ಭೇದಗಳಿಂದ ಕೂಡಿದ ಸ್ತೋತ್ರವನ್ನು ಬ್ರಹ್ಮನು ಎಲ್ಲ ಮನ್ವಂತರಗಳಲ್ಲಿಯೂ ಪುನಃ ಪುನಃ ಪ್ರವರ್ತನಗೊಳಿಸುವನು.

೬೧. ಹೀಗೆ ಋಗ್ವೇದ, ಯಜುರ್ವೇದ, ಸಾಮವೇದ ಮತ್ತು ಅಥರ್ವ ವೇದಗಳಿಗೆ ಸಂಬಂಧಪಟ್ಟಂತೆ ನಾಲ್ಕು ಬಗೆಯಾಗಿ ಮಂತ್ರಸಮೂಹಗಳು ಏರ್ಪಟ್ಟುವು.

೬೨-೬೩. ಮನ್ವಂತರದ ಆದಿಯಲ್ಲಿ ಮಹರ್ಷಿಗಳು ಅತ್ಯದ್ಭುತವಾದ ತಪಸ್ಸನ್ನು ಮಾಡಲು, ಪೂರ್ವಮನ್ವಂತರದಲ್ಲಿ ಪ್ರಚಾರದಲ್ಲಿದ್ದ ಮಂತ್ರಗಳು ಅವರಿಗೆ ಜ್ಞಾನಗೋಚರವಾದುವು. ಅಸಂತೋಷ, ಭಯ, ದುಃಖ, ಮೋಹ ಮತ್ತು ಶೋಕಗಳೆಂಬ ಐದು ಬಗೆಯ ಸಂಕಟದಿಂದ ಜಗತ್ತನ್ನು ಪಾರುಮಾಡ ಬೇಕೆಂಬುದೇ ಈ ಸಾಕ್ಷಾತ್ಕಾರದ ಉದ್ದೇಶ.

**ಋಷೀಣಾಂ ತಾರಕಾಖ್ಯೇನ ಲಕ್ಷಣೇನ ಯದೃಚ್ಛಯಾ ।**
**ಋಷೀಣಾಂ ಯಾದೃಶತ್ವಂ ಹಿ ತದ್ವಕ್ಷ್ಯಾಮೀಹ ಲಕ್ಷಣಂ ॥೬೪॥**

**ಅತೀತಾನಾಗತಾನಾಂ ಚ ಪಂಚಧಾ ಹ್ಯಾರ್ಷಕಂ ಸ್ಮೃತಂ ।**
**ತಥಾ ಋಷೀಣಾಂ ವಕ್ಷ್ಯಾಮಿ ಆರ್ಷಸ್ಯೇಹ ಸಮುದ್ಭವಂ ॥೬೫॥**

**ಗುಣಾಃ ಸಾಮ್ಯೇನ ವರ್ತಂತೇ ಸರ್ವಸಂಪ್ರಲಯೇ ತದಾ ।**
**ಅವಿಭಾಗೇನ ವೇದಾನಾಮನಿರ್ದೇಶ್ಯತಮೋಮಯೇ ॥೬೬॥**

**ಅಬುದ್ಧಿಪೂರ್ವಕಂ ತದ್ವೈ ಚೇತನಾರ್ಥಂ ಪ್ರವರ್ತತೇ ।**
**ತೇನಾರ್ಷಂ ಬುದ್ಧಿಪೂರ್ವಂ ತು ಚೇತನೇನಾಪ್ಯಧಿಷ್ಠಿತಂ ॥೬೭॥**

---

೬೪. ಮಂತ್ರದರ್ಶನದಲ್ಲಿ ಮಹರ್ಷಿಗಳಿಗೆ ಯೋಗಶಾಸ್ತ್ರಪ್ರಸಿದ್ಧವಾದ ತಾರಕದರ್ಶನವು ಸಾಧನವೆನಿಸಿದೆ. ಏಕೆಂದರೆ ಲೌಕಿಕದೃಷ್ಟಿಗೆ ಮಂತ್ರಗಳು ಗೋಚರವಾಗುವುದಿಲ್ಲ. ಋಷಿಗಳ ಲಕ್ಷಣವೇನೆಂಬುದನ್ನು ಇನ್ನು ಹೇಳುವೆನು.

೬೫. ಹಿಂದೆ ಇದ್ದ ಮತ್ತು ಮುಂದೆ ಬರಲಿರುವ ಋಷಿಗಳನ್ನೆಲ್ಲ ಐದು ವರ್ಗಗಳಾಗಿ ವಿಂಗಡಿಸಬಹುದು. ಮಂತ್ರಸಾಕ್ಷಾತ್ಕಾರವನ್ನು ಪಡೆದ ಆ ಋಷಿವರ್ಗದ ಉತ್ಪತ್ತಿಯನ್ನು ಹೇಳುವೆನು ಕೇಳು.

೬೬. ಮಹಾಪ್ರಲಯದಲ್ಲಿ ನಾಮರೂಪವಿಭಾಗಗಳಿಲ್ಲದೆ ಪ್ರಕೃತಿಯು ಅವ್ಯಕ್ತರೂಪದಲ್ಲಿರುವುದು. ಸತ್ವ, ರಜಸ್ಸು ಮತ್ತು ತಮಸ್ಸುಗಳೆಂಬ ಮೂರು ಗುಣಗಳು ಸಾಮ್ಯಸ್ಥಿತಿಯಲ್ಲಿರುವುವು. ನಾಲ್ಕುವೇದಗಳೂ ಅಖಂಡವಾಗಿ ಏಕರೂಪವನ್ನು ತಾಳಿ ಪರಮಾತ್ಮನಲ್ಲಿ ಐಕ್ಯವಾಗುವುವು. ಗಾಢಾಂಧಕಾರವು ಸರ್ವತ್ರ ವ್ಯಾಪಿಸಿರುವುದು.

೬೭. ಆ ಮೂಲಪ್ರಕೃತಿಯು ಜಡವಾದುದು; ಜ್ಞಾನರಹಿತವಾದುದು. ಅದು ಚೇತನರಿಗೆ ಆಶ್ರಯವಾಗುವುದಕ್ಕಾಗಿ ಪ್ರವರ್ತಿಸುತ್ತದೆ. ಆದುದರಿಂದ ಚೇತನಾಧಿಷ್ಠಿತವಾದ ಅದನ್ನು ಆರ್ಷ, ಬುದ್ಧಿಪೂರ್ವ ಎನ್ನುತ್ತಾರೆ.

ಪ್ರವರ್ತತೇ ತಥಾ ತೇ ತು ಯಥಾ ಮತ್ಸ್ಯೋದಕಾವುಭೌ ।
ಚೇತನಾಧಿಕೃತಂ ಸರ್ವಂ ಪ್ರಾವರ್ತತ ಗುಣಾತ್ಮಕಂ ।
ಕಾರ್ಯಕಾರಣಭಾವೇನ ತಥಾ ತಸ್ಯ ಪ್ರವರ್ತತೇ ॥೧೮॥

ವಿಷಯೋ ವಿಷಯಿತ್ವಂ ಚ ತಥಾ ಹ್ಯರ್ಥಪದಾತ್ಮಕೌ ।
ಕಾಲೇನ ಪ್ರಾಪಣೀಯೇನ ಭೇದಾಶ್ಚ ಕಾರಣಾತ್ಮಕಾಃ ॥೧೯॥

ಸಾಂಸಿದ್ಧಿಕಾಸ್ತಥಾ ವ್ಯಕ್ತಾಃ ಕ್ರಮೇಣ ಮಹದಾದಯಃ ।
ಮಹತೋಽಸಾವಹಂಕಾರಸ್ತಸ್ಮಾದ್ಭೂತೇಂದ್ರಿಯಾಣಿ ಚ ॥೨೦॥

ಭೂತಭೇದಾಶ್ಚ ಭೂತೇಭ್ಯೋ ಜಜ್ಞಿರೇ ತು ಪರಸ್ಪರಂ ।
ಸಂಸಿದ್ಧಿಕಾರಣಂ ಕಾರ್ಯಂ ಸದ್ಯ ಏವ ವಿವರ್ತತೇ ॥೨೧॥

---

೧೮. ನೀರೂ ಮೀನೂ ಒಂದರೊಡನೊಂದು ಹೊಂದಿಕೊಂಡಿರುವಂತೆ ಈ ಚೇತನಾಚೇತನಗಳೆರಡೂ ಹೊಂದಿಕೊಂಡಿರುವುವು. ಪುರುಷಾಧಿಷ್ಠಿತವಾದ ಪ್ರಕೃತಿಯ ರೂಪವೆಲ್ಲವೂ ತ್ರಿಗುಣಾತ್ಮಕವಾಗಿ ಪರಸ್ಪರ ಕಾರ್ಯಕಾರಣಭಾವವನ್ನು ಹೊಂದಿರುವುದು. ಈ ತತ್ವಗಳೆರಡೂ ಭೋಗ್ಯಭೋಕ್ತೃರೂಪವಾಗಿ ಶಬ್ದಾರ್ಥಗಳಂತೆ ಅವಿನಾಭಾವ ಸಂಬಂಧವನ್ನು ಪಡೆದಿರುವುವು.

೧೯-೨೦. ಕಾಲಕ್ರಮವಾಗಿ ಮಹದಾದಿ ವಿವಿಧತತ್ವಗಳು ವ್ಯಕ್ತವಾದುವು. ಒಂದರಿಂದ ಒಂದು ಹುಟ್ಟಿದ ಕಾರಣ ಇವು ಕಾರ್ಯರೂಪವೂ, ಕಾರಣರೂಪವೂ ಆದುವು. ಮಹತ್ತಿನಿಂದ ಅಹಂಕಾರವೂ, ಅದರಿಂದ ಪಂಚಭೂತಗಳೂ, ಇಂದ್ರಿಯಗಳೂ ಉತ್ಪನ್ನವಾದುವು.

೨೧. ಪಂಚಭೂತಗಳು ಒಂದರಿಂದ ಮತ್ತೊಂದರಂತೆ ಕ್ರಮವಾಗಿ ಹುಟ್ಟಿದುವು. ಕಾರ್ಯರೂಪವಾಗಿ ಉತ್ಪನ್ನವಾದ ಒಂದು ತತ್ವವು ಮತ್ತೊಂದು ತತ್ವಕ್ಕೆ ಕಾರಣವಾಗುವುದಷ್ಟೆ. ಈ ಕಾರ್ಯತತ್ವವೂ ಸಹ ಉತ್ಪನ್ನವಾದ ಕೂಡಲೆ ಪರಿಣಾಮವನ್ನು ಹೊಂದುತ್ತದೆ.

**ಯಥೋಲ್ಮುಕಾತ್ತು ತ್ರುಟಯ ಏಕಕಾಲಾದ್ಭವಂತಿ ಹಿ ।**
**ತಥಾ ಪ್ರವೃತ್ತಾಃ ಕ್ಷೇತ್ರಜ್ಞಾಃ ಕಾಲೇನೈಕೇನ ಕಾರಣಾತ್ ॥೭೨॥**

**ಯಥಾಂಧಕಾರೇ ಖದ್ಯೋತಃ ಸಹಸಾ ಸಂಪ್ರದೃಶ್ಯತೇ ।**
**ತಥಾ ನಿವೃತ್ತೋ ಹ್ಯವ್ಯಕ್ತಃ ಖದ್ಯೋತ ಇವ ಸಂಜ್ವಲನ್ ॥೭೩॥**

**ಸ ಮಹಾತ್ಮಾ ಶರೀರಸ್ಥಸ್ತತ್ರೈವೇಹ ಪ್ರವರ್ತತೇ ।**
**ಮಹತಸ್ತಮಸಃ ಪಾರೇ ವೈಲಕ್ಷಣ್ಯಾದ್ವಿಭಾವ್ಯತೇ ॥೭೪॥**

**ತತ್ರೈವ ಸಂಸ್ಥಿತೋ ವಿದ್ವಾಂಸ್ತಪಸೋಽಂತ ಇತಿ ಶ್ರುತಂ ।**
**ಬುದ್ಧಿರ್ವಿವರ್ಧತಸ್ತಸ್ಯ ಪ್ರಾದುರ್ಭೂತಾ ಚತುರ್ವಿಧಾ ॥೭೫॥**

---

೭೨. ಉರಿಗೊಳ್ಳಿಯಿಂದ ಏಕಕಾಲದಲ್ಲಿ ಅನೇಕ ಕಿಡಿಗಳು ಹೊರಹೊಮ್ಮು ವಂತೆ ಸರ್ವಕಾರಣನಾದ ಪರಮಾತ್ಮನಿಂದ ಕಾಲಕ್ರಮದಲ್ಲಿ ಅನೇಕ ಜೀವಾತ್ಮರು ಕರ್ಮಾನುಭವದ ಸಲುವಾಗಿ ಶರೀರವನ್ನು ಧಾರಣಮಾಡಲು ಒಟ್ಟಿಗೆ ಹೊರ ಬಿದ್ದರು.

೭೩. ಕಗ್ಗತ್ತಲೆಯಲ್ಲಿ ಮಿಂಚುಹುಳು ಥಟ್ಟನೆ ಮಿಣುಗುವಂತೆ ಕ್ಷೇತ್ರಜ್ಞ ಸಂಸ್ಪೃಷ್ಟವಾದ ಅವ್ಯಕ್ತವು ಆ ಗಾಢಾಂಧಕಾರದಲ್ಲಿ ಪ್ರಕಾಶಯುಕ್ತವಾಗಿ ಮಿರುಗ ಲಾರಂಭಿಸಿತು.

೭೪. ಜ್ಞಾನಾನಂದಾದಿ ಗುಣಗಳಿಂದ ಕೂಡಿದ ಆ ಆತ್ಮನು ಶರೀರದ ಸಂಬಂಧವನ್ನು ಪಡೆದು ವಿಧವಿಧವಾದ ಕಾರ್ಯಗಳಲ್ಲಿ ಪ್ರವರ್ತಿಸುತ್ತಾನೆ. ಆದರೂ ವಿವಿಧವಿಕಾರಗಳನ್ನು ತಳೆದ ಅನಂತವಾದ ಪ್ರಕೃತಿಗಿಂತಲೂ ಭಿನ್ನನಾಗಿ, ಅದಕ್ಕಿಂತ ವಿಲಕ್ಷಣನಾಗಿ ಪ್ರಕಾಶಿಸುತ್ತಾನೆ.

೭೫. ಜ್ಞಾನಿಯಾದ ಆತನು ಪ್ರಕೃತಿಮಯವಾದ ಆ ಶರೀರದಲ್ಲೇ ನಿಂತು ತಪಸ್ಸಿಗೆ ತೊಡಗಿದನು. ಅವನ ಜ್ಞಾನವು ವಿಕಾಸವಾಗುತ್ತ ಬಂದಿತು. ಬುದ್ಧಿಯು ನಾಲ್ಕು ವಿಧವಾಗಿ ಪರಿಣತವಾಯಿತು.

ಜ್ಞಾನಂ ವೈರಾಗ್ಯಮೈಶ್ವರ್ಯಂ ಧರ್ಮಶ್ಚೇತಿ ಚತುಷ್ಟಯಂ ।
ಸಾಂಸಿದ್ಧಿಕಾನ್ಯಥೈತಾನಿ ಅಪ್ರತೀತಾನಿ ತಸ್ಯ ವೈ ॥೭೬॥

ಮಹಾತ್ಮನಃ ಶರೀರಸ್ಯ ಚೈತನ್ಯಾತ್ಸಿದ್ಧಿರುಚ್ಯತೇ ।
ಪುರಿ ಶೇತೇ ಯತಃ ಪೂರ್ವಂ ಕ್ಷೇತ್ರಜ್ಞಾನಂ ತಥಾಪಿ ಚ ॥೭೭॥

ಪುರೇ ಶಯನಾತ್ಪುರುಷಃ ಜ್ಞಾನಾತ್ಕ್ಷೇತ್ರಜ್ಞ ಉಚ್ಯತೇ ।
ಯಸ್ಮಾದ್ಧರ್ಮಾತ್ಪ್ರಸೂತೇ ಹಿ ತಸ್ಮಾದ್ವೈ ಧಾರ್ಮಿಕಸ್ತು ಸಃ ॥೭೮॥

ಸಾಂಸಿದ್ಧಿಕೇ ಶರೀರೇ ಚ ಬುದ್ಧ್ಯಾ ವ್ಯಕ್ತಸ್ತು ಚೇತನಃ ।
ಏವಂ ವಿವೃತ್ತಃ ಕ್ಷೇತ್ರಜ್ಞಃ ಕ್ಷೇತ್ರಂ ಹ್ಯನಭಿಸಂಧಿತಃ ॥೭೯॥

---

೭೬. ಜ್ಞಾನ, ವೈರಾಗ್ಯ, ಐಶ್ವರ್ಯ ಮತ್ತು ಧರ್ಮಗಳೆಂಬುವೇ ಆ ನಾಲ್ಕು ಗುಣಗಳು. ಇವು ಆತ್ಮನಿಗೆ ಸ್ವತಃ ಸಿದ್ಧವಾದುವು. ಆದರೆ ಅವನ ಕರ್ಮವಶದಿಂದ ಪ್ರಬುದ್ಧವಾಗದೆ ಸಂಕುಚಿತವಾಗಿದ್ದುವು.

೭೭. ಮಹಾಮಹಿಮನಾದ ಆತ್ಮನಿಗೆ ಶರೀರವಿಷಯಿಕವಾದ ಜ್ಞಾನದಿಂದ ಎಂದರೆ ಇದಕ್ಕೂ ನನಗೂ ಸಂಬಂಧವೇನು ? ಇದರ ಮತ್ತು ನನ್ನ ಸ್ವರೂಪದಲ್ಲಿ ಕಂಡು ಬರುವ ವೈಲಕ್ಷಣ್ಯಗಳೇನು? ಮುಂತಾದ ತಿಳುವಳಿಕೆಯಿಂದ ಸಿದ್ಧಿಯುಂಟಾಗುತ್ತದೆ. ಏಕೆಂದರೆ ಅವನು ಈ ದೇಹದಲ್ಲಿ ನೆಲಸಿರುವವನು. ಮೊದಲಿನಿಂದಲೂ ತನಗೆ ದೇಹದ ಸಂಬಂಧವಿರುವುದನ್ನು ಅರಿತಿರುವವನು.

೭೮. ಪುರದಲ್ಲಿ ಶಯನಮಾಡುವುದರಿಂದ ಎಂದರೆ ಶರೀರದಲ್ಲಿ ವಾಸಿಸುವುದರಿಂದ ಪುರುಷನೆಂದೂ, ಕ್ಷೇತ್ರದ ಜ್ಞಾನವಿರುವುದರಿಂದ ಎಂದರೆ ಶರೀರವನ್ನು ಅರಿತವನಾದುದರಿಂದ ಕ್ಷೇತ್ರಜ್ಞನೆಂದೂ ಆತ್ಮನಿಗೆ ಹೆಸರು ಬಂದಿದೆ. ಧರ್ಮಾನುಷ್ಠಾನದ ಮೂಲಕ ಸ್ವಸ್ವರೂಪವನ್ನು ಪಡೆಯುವವನಾದ ಕಾರಣ ಅವನನ್ನು ಧಾರ್ಮಿಕನೆಂದೂ ಹೇಳುವರು.

೭೯. ಪಂಚಭೂತಗಳಿಂದ ನಿಷ್ಪನ್ನವಾದ ಶರೀರದಲ್ಲಿ ನೆಲೆಸಿರುವ ಆತ್ಮನನ್ನು ಯೋಗಿಗಗಳು ತಮ್ಮ ಬುದ್ಧಿಬಲದಿಂದ ಅರಿಯುತ್ತಾರೆ. ಹೀಗೆ ವಿಶಿಷ್ಟರೂಪದಿಂದಿರುವ ಆತನು ಶರೀರದಿಂದ ಭಿನ್ನನಾಗಿ ಅದರ ವಿಕಾರಗಳಿಗೆ ತಾನು ಭಾಗಿಯಲ್ಲವೆಂದು ತಿಳಿದಿರುವನು.

ನಿವೃತ್ತಿಸಮಕಾಲೇ ತು ಪುರಾಣಂ ತದಚೇತನಂ ।
ಕ್ಷೇತ್ರಜ್ಞೇನ ಪರಿಜ್ಞಾತಂ ಭೋಗ್ಯೋಽಯಂ ವಿಷಯೋ ಮಮ ॥೮೦॥

ಋಷಿರ್ಹಿಂಸಾಗತೌ ಧಾತುರ್ವಿದ್ಯಾ ಸತ್ಯಂ ತಪಃ ಶ್ರುತಂ ।
ಏಷ ಸಂನಿಚಯೋ ಯಸ್ಮಾದ್ಬ್ರಹ್ಮಣಸ್ತು ತತಸ್ತ್ವೃಷಿಃ ॥೮೧॥

ನಿವೃತ್ತಿಸಮಕಾಲಾಚ್ಚ ಬುಧ್ಯಾಽವ್ಯಕ್ತಮೃಷಿಸ್ತ್ವಯಂ ।
ಋಷತೇ ಪರಮಂ ಯಸ್ಮಾತ್ಪರಮರ್ಷಿಸ್ತತಃ ಸ್ಮೃತಃ ॥೮೨॥

ಗತ್ಯರ್ಥಾದೃಷತೇರ್ಧಾತೋರ್ನಾಮನಿರ್ವೃತ್ತಿಕಾರಣಂ ।
ಯಸ್ಮಾದೇಷ ಸ್ವಯಂಭೂತಸ್ತಸ್ಮಾಚ್ಚ ಋಷಿತಾ ಮತಾ ॥೮೩॥

---

೮೦. ಜೀರ್ಣವಾದ ಜಡದೇಹವನ್ನು ಬಿಡುವ ಕಾಲದಲ್ಲಿ "ಇದು ನನಗೆ ಭೋಗ್ಯವಾಗಿತ್ತು ; ಸುಖದುಃಖಾನುಭವಗಳಿಗೆ ವಿಷಯವಾಗಿತ್ತು" ಎಂದು ಕ್ಷೇತ್ರಜ್ಞನು ತಿಳಿಯುವನು.

೮೧. ಋಷೀ ಗತೌ ಎಂಬ ಧಾತುವು ಹಿಂಸಾರ್ಥವನ್ನೂ ಗತ್ಯರ್ಥವನ್ನೂ ಬೋಧಿಸುತ್ತದೆ. ವಿದ್ಯೆ, ಸತ್ಯ, ತಪಸ್ಸು, ಶಾಸ್ತ್ರ ಇವೆಲ್ಲವೂ ಇದರಿಂದ ಸೂಚಿತವಾಗುತ್ತವೆ. ಈ ಗುಣಗಳ ಸಮೂಹವು ನೆಲಸಿರುವ ಕಾರಣ ಬ್ರಹ್ಮನನ್ನು ಋಷಿಯೆಂದು ಕರೆಯುತ್ತಾರೆ.

೮೨. ಸೃಷ್ಟಿಕಾರ್ಯಕ್ಕೆ ತೊಡಗಿದ ಕೂಡಲೆ ಋಷಿನಾಮಕನಾದ ಬ್ರಹ್ಮನು ಮೂಲಪ್ರಕೃತಿಯನ್ನು ಎಲ್ಲಕ್ಕಿಂತ ಮೇಲಾದುದೆಂದು ತಿಳಿದನು. ಆದಕಾರಣ ಅವನಿಗೆ ಪರಮರ್ಷಿಯೆಂದೂ ಹೆಸರು ಬಂದಿತು.

೮೩. ಋಷಿ ಎಂಬ ಶಬ್ದವು ಗತ್ಯರ್ಥವನ್ನು ಬೋಧಿಸುವ ಋಷೀ ಧಾತುವಿನಿಂದ ನಿಷ್ಪನ್ನವಾಗಿದೆ. ಬ್ರಹ್ಮನು ಸ್ವಯಂಸಂಭೂತನೆನಿಸಿರುವ ಕಾರಣದಿಂದಲೂ ಕೂಡ ಇವನಿಗೆ ಋಷಿಯೆಂಬ ಅನ್ವರ್ಥಸಂಜ್ಞೆ ಬಂದಿದೆ.

ಈಶ್ವರಾಃ ಸ್ವಯಮುದ್ಭೂತಾ ಬ್ರಹ್ಮಣೋ ಮಾನಸಾಃ ಸುತಾಃ ।
ನಿವರ್ತಮಾನೈಸ್ತೈರ್ಬುದ್ಧ್ಯಾ ಮಹಾನ್ ಪರಿಗತಃ ಪರಃ ॥೮೪॥

ಯಸ್ಮಾದೃಷಿರ್ಮಹತ್ತ್ವೇನ ಜ್ಞೇಯಾಸ್ತಸ್ಮಾನ್ಮಹರ್ಷಯಃ ।
ಈಶ್ವರಾಣಾಂ ಸುತಾಸ್ತೇಷಾಂ ಮಾನಸಾಶ್ಚೌರಸಾಶ್ಚ ವೈ ॥೮೫॥

ಋಷಿಸ್ತಸ್ಮಾತ್ಪರತ್ವೇನ ಭೂತಾದಿರ್ಋಷಯಸ್ತತಃ ।
ಋಷಿಪುತ್ರಾ ಋಷೀಕಾಸ್ತು ಮೈಥುನಾದ್ಗರ್ಭಸಂಭವಾಃ ॥೮೬॥

ಪರತ್ವೇನ ಋಷಂತೇ ವೈ ಭೂತಾದೀನೃಷಿಕಾಸ್ತತಃ ।
ಋಷಿಕಾಣಾಂ ಸುತಾ ಯೇ ತು ವಿಜ್ಞೇಯಾ ಋಷಿಪುತ್ರಕಾಃ ॥೮೭॥

---

೮೪. ಬ್ರಹ್ಮನ ಮಾನಸಪುತ್ರರು ಹಲವರು ಅಯೋನಿಜರಾಗಿ ಹುಟ್ಟಿದರು. ಇವರು ಸರ್ವಸಮರ್ಥರು. ಆದುದರಿಂದ ಇವರಿಗೆ ಈಶ್ವರರೆಂದು ಹೆಸರು. ಇವರು ತಪೋನಿಷ್ಠರಾಗಿ ತಮ್ಮ ಅಸಾಧಾರಣ ಬುದ್ಧಿಬಲದಿಂದ ಮಹತ್ತತ್ತ್ವವೇ ತತ್ತ್ವಗಳಲ್ಲಿ ಅತಿಶ್ರೇಷ್ಠವಾದುದೆಂದು ಅರಿತರು.

೮೫. ಋಷಿಶಬ್ದಕ್ಕೆ ಮಹತ್ತ್ವವೆಂಬ ಅರ್ಥವೂ ಇರುವುದಾದ ಕಾರಣ ಈಶ್ವರರು ಮಹರ್ಷಿಗಳೆನಿಸಿಕೊಂಡರು. ಇವರಿಗೆ ಮಾನಸರೂ ಔರಸರೂ ಆದ ಅನೇಕ ಜನ ಪುತ್ರರು ಉದಿಸಿದರು. ಇವರಿಗೆ ಋಷಿಗಳೆಂದು ಹೆಸರು.

೮೬-೮೭. ಋಷಿಪುತ್ರರನ್ನು ಋಷೀಕರೆಂದು ಹೇಳುತ್ತಾರೆ. ಇವರು ಮೈಥುನ ಸಂಬಂಧದಿಂದ ಗರ್ಭದಲ್ಲಿ ಜನಿಸಿದವರು. ಮಹತ್ತತ್ತ್ವಕ್ಕಿಂತ ವಿಲಕ್ಷಣವಾದ ಅಹಂಕಾರ ತತ್ತ್ವವೂ ಸಹ ಋಷಿಶಬ್ದದಿಂದ ವ್ಯವಹರಿಸಲ್ಪಡುವುದು. ಋಷೀಕರು ಸಾತ್ತ್ವಿಕ, ರಾಜಸ ಮತ್ತು ತಾಮಸವೆಂದು ಮೂರು ವಿಧವಾದ ಅಹಂಕಾರ ತತ್ತ್ವವನ್ನು ಬಹಳ ಉತ್ಕೃಷ್ಟವಾದುದೆಂದು ಪರಿಗಣಿಸಿದರು. ಆದುದರಿಂದ ಇವರಿಗೂ ಋಷಿಸಂಜ್ಞೆ ಬಂದಿತು. ಈ ಋಷಿಕರ ಮಕ್ಕಳಿಗೆ ಋಷಿಪುತ್ರಕರೆಂಬ ನಾಮಧೇಯವಿದೆ.

ಶ್ರುತ್ವಾ ಋಷಂ ಪರತ್ವೇನ ಶ್ರುತಾಸ್ತಸ್ಮಾಚ್ಛ್ರುತರ್ಷಯಃ ।
ಅವ್ಯಕ್ತಾತ್ಮಾ ಮಹಾತ್ಮಾ ವಾऽಹಂಕಾರಾತ್ಮಾ ತಥೈವ ಚ ॥೮೮॥

ಭೂತಾತ್ಮಾ ಚೇಂದ್ರಿಯಾತ್ಮಾ ಚ ತೇಷಾಂ ತಜ್ಜ್ಞಾನಮುಚ್ಯತೇ ।
ಇತ್ಯೇವಮೃಷಿಜಾತಿಸ್ತು ಪಂಚಧಾ ನಾಮ ವಿಶ್ರುತಾ ॥೮೯॥

ಭೃಗುರ್ಮರೀಚಿರತ್ರಿಶ್ಚ ಅಂಗಿರಾಃ ಪುಲಹಃ ಕ್ರತುಃ ।
ಮನುರ್ದಕ್ಷೋ ವಸಿಷ್ಠಶ್ಚ ಪುಲಸ್ತ್ಯಶ್ಚಾಪಿ ತೇ ದಶ ॥೯೦॥

ಬ್ರಹ್ಮಣೋ ಮಾನಸಾ ಹ್ಯೇತೇ ಉತ್ಪನ್ನಾಃ ಸ್ವಯಮೀಶ್ವರಾಃ ।
ಪರತ್ವೇನರ್ಷಯೋ ಯಸ್ಮಾನ್ಮತಾಸ್ತಸ್ಮಾನ್ಮಹರ್ಷಯಃ ॥೯೦॥

ಈಶ್ವರಾಣಾಂ ಸುತಾಸ್ತ್ವೇಷಾಮೃಷಯಸ್ತಾನ್ನಿಬೋಧತ ।
ಕಾವ್ಯೋ ಬೃಹಸ್ಪತಿಶ್ಚೈವ ಕಶ್ಯಪಶ್ಚ್ಯವನಸ್ತಥಾ ॥೯೨॥

---

೮೮-೮೯. ಇವರು ಜ್ಞಾನದ ಮಹಿಮೆಯನ್ನು ಕೇಳಿ ಅದನ್ನೇ ಉತ್ಕೃಷ್ಟವಾದು ದೆಂದು ತಿಳಿದರು. ಆದುದರಿಂದ ಇವರಿಗೆ ಶ್ರುತರ್ಷಿಗಳೆಂದು ಹೆಸರು. ಹೀಗೆ ಅವ್ಯಕ್ತ ಮಹತ್ತು, ಅಹಂಕಾರ, ಪಂಚಭೂತಗಳು, ಇಂದ್ರಿಯಗಳು ಈ ತತ್ವಗಳ ಪರತ್ವವನ್ನು ತಮ್ಮ ಬುದ್ಧಿ ಬಲದಿಂದ ಅರಿತುಕೊಂಡ ಋಷಿವರ್ಗನನ್ನು ಅವ್ಯಕ್ತಾತ್ಮಾ, ಮಹಾತ್ಮಾ, ಅಹಂಕಾರಾತ್ಮಾ, ಭೂತಾತ್ಮಾ, ಇಂದ್ರಿಯಾತ್ಮಾ ಎಂದು ಐದು ಬಗೆಯಾಗಿ ವಿಂಗಡಿಸುವರು.

೯೦-೯೧. ಭೃಗು, ಮರೀಚಿ, ಅತ್ರಿ, ಅಂಗಿರಸ, ಪುಲಹ, ಕ್ರತು, ಮನು, ದಕ್ಷ, ವಸಿಷ್ಠ, ಪುಲಹ ಎಂಬ ಹತ್ತು ಜನರೂ ಬ್ರಹ್ಮನ ಮಾನಸಪುತ್ರರು. ಇವರು ಸರ್ವಸಮರ್ಥರು. ಇವರಿಗೆ ಈಶ್ವರರೆಂದು ಹೆಸರು. ಋಷಿಗಳಲ್ಲೆಲ್ಲ ಶ್ರೇಷ್ಠರಾದ ಕಾರಣ ಇವರನ್ನು ಮಹರ್ಷಿಗಳೆನ್ನುತ್ತಾರೆ.

೯೨-೯೪. ಈಶ್ವರರ ಪುತ್ರರು ಋಷಿಗಳಷ್ಟೆ! ಇವರ ಹೆಸರನ್ನು ಹೇಳು ವೆನು ಕೇಳಿ. ಕಾವ್ಯ, ಬೃಹಸ್ಪತಿ ಕಶ್ಯಪ, ಚ್ಯವನ, ಉತಥ್ಯ, ವಾಮದೇವ, ಅಗಸ್ತ್ಯ

ಉತಥ್ಯೋ ವಾಮದೇವಶ್ಚ ಅಗಸ್ತ್ಯಃ ಕೌಶಿಕಸ್ತಥಾ ।
ಕರ್ದಮೋ ವಾಲಖಿಲ್ಯಾಶ್ಚ ವಿಶ್ರವಾಃ ಶಕ್ತಿವರ್ಧನಃ ॥೯೩॥

ಇತ್ಯೇತೇ ಋಷಯಃ ಪ್ರೋಕ್ತಾಸ್ತಪಸಾ ಋಷಿತಾಂ ಗತಾಃ ।
ತೇಷಾಂ ಪುತ್ರಾನೃಷೀಕಾಂಸ್ತು ಗರ್ಭೋತ್ಪನ್ನಾನ್ನಿಬೋಧತ ॥೯೪॥

ವತ್ಸರೋ ನಗ್ನಹೂಶ್ಚೈವ ಭರದ್ವಾಜಶ್ಚ ವೀರ್ಯವಾನ್ ।
ಋಷಿರ್ದೀರ್ಘತಮಾಶ್ಚೈವ ಬೃಹದ್ವಕ್ಷಾಃ ಶರದ್ವತಃ ॥೯೫॥

ವಾಜಿಶ್ರವಾಃ ಸುಚಿಂತಶ್ಚ ಶಾವಶ್ಚ ಸಪರಾಶರಃ ।
ಶೃಂಗೀ ಚ ಶಂಖಪಾಚ್ಚೈವ ರಾಜಾ ವೈಶ್ರವಣಸ್ತಥಾ ॥೯೬॥

ಇತ್ಯೇತೇ ಋಷಿಕಾಃ ಸರ್ವೇ ಸತ್ಯೇನ ಋಷಿತಾಂ ಗತಾಃ ।
ಈಶ್ವರಾ ಋಷಯಶ್ಚೈವ ಋಷೀಕಾ ಯೇ ಚ ವಿಶ್ರುತಾಃ ॥೯೭॥

ಏವಂ ಮಂತ್ರಕೃತಃ ಸರ್ವೇ ಕೃತ್ಸ್ನಶಶ್ಚ ನಿಬೋಧತ ।
ಭೃಗುಃ ಕಾಶ್ಯಪಃ ಪ್ರಚೇತಾ ದಧೀಚೋ ಹ್ಯಾತ್ಮವಾನಪಿ ॥೯೮॥

---

ಕೌಶಿಕ, ಕರ್ದಮ, ವಾಲಖಿಲ್ಯ, ವಿಶ್ರವಸ್ಸು, ಶಕ್ತಿವರ್ಧನ ಇವರೇ ಋಷಿಗಳು. ತಮ್ಮ ತಪಸ್ಸಿನ ಬಲದಿಂದ ಋಷಿತ್ವವನ್ನು ಪಡೆದ ಮಹಾಮಹಿಮರು ಇವರು. ಇವರ ಗರ್ಭೋತ್ಪನ್ನರಾದವರಿಗೆ ಋಷೀಕರೆಂದು ಹೆಸರು. ಅವರು ಯಾರು ಯಾರೆಂಬುದನ್ನು ಕೇಳಿರಿ.

೯೫-೯೭. ವತ್ಸರ, ನಗ್ನಹು, ಭರದ್ವಾಜ, ವೀರ್ಯವಂತ, ದೀರ್ಘತಮಸ್ಸು, ಬೃಹದ್ವಕ್ಷ, ಶರದ್ವತ, ವಾಜಿಶ್ರವಸ್ಸು, ಸುಚಿಂತ, ಶಾವ, ಪರಾಶರ, ಶೃಂಗಿ, ಶಂಖಪಾತ್, ರಾಜನಾದ ವೈಶ್ರವಣ ಇವರೆಲ್ಲರಿಗೂ ಋಷೀಕರೆಂದು ಹೆಸರು. ಇವರು ಸತ್ಯದ ಬಲದಿಂದ ಋಷಿತ್ವವನ್ನು ಸಂಪಾದಿಸಿದರು. ಈಶ್ವರರು, ಋಷಿಗಳು ಮತ್ತು ಋಷೀಕರೆಂಬ ಮೂವರನ್ನೂ ಹೇಳಿದುದಾಯಿತು.

೯೮-೧೦೦. ಇನ್ನು ಮಂತ್ರಕಾರರಾದ ಮಹರ್ಷಿಗಳನ್ನು ಅರಿಯಿರಿ. ಭೃಗು, ಕಾಶ್ಯಪ, ಪ್ರಚೇತಸ್ಸು, ದಧೀಚ, ಆತ್ಮವಂತ, ಊರ್ವ, ಜಮದಗ್ನಿ, ವೇದ,

ಊರ್ವೋऽಥ ಜಮದಗ್ನಿಶ್ಚ ವೇದಃ ಸಾರಸ್ವತಸ್ತಥಾ ।
ಆರ್ಷ್ಟಿಷೇಣಶ್ಚ್ಯವನಶ್ಚ ಪೀತಹವ್ಯಃ ಸವೇಧಸಃ ॥೯೯॥

ವೈನ್ಯಃ ಪೃಥುರ್ದಿವೋದಾಸೋ ಬ್ರಹ್ಮವಾನ್ ಗೃತ್ಸಶೌನಕೌ ।
ಏಕೋನವಿಂಶತಿರ್ಹ್ಯೇತೇ ಭೃಗವೋ ಮಂತ್ರಕೃತ್ತಮಾಃ ॥೧೦೦॥

ಅಂಗಿರಾ ವೇಧಸಶ್ಚೈವ ಭರದ್ವಾಜೋऽಥ ಲಕ್ಷ್ಮಣಃ ।
ಕೃತವಾಚಸ್ತಥಾ ಗರ್ಗಃ ಸ್ಮೃತಿಸಂಕೃತಿರೇವ ಚ ॥೧೦೧॥

ಗುರುವೀತಶ್ಚ ಮಾಂಧಾತಾ ಅಂಬರೀಷಸ್ತಥೈವ ಚ ।
ಯುವನಾಶ್ವಃ ಪುರುಕುತ್ಸಃ ಸ್ವಶ್ರವಸ್ತು ಸದಸ್ಯವಾನ್ ॥೧೦೨॥

ಅಜಮೀಢೋऽಸ್ವಹಾರ್ಯಶ್ಚ ಹ್ಯುತ್ಕಲಃ ಕವಿರೇವ ಚ ।
ಪೃಷದಶ್ವೋ ವಿರೂಪಶ್ಚ ಕಾವ್ಯಶ್ಚೈವಾಥ ಮುದ್ಗಲಃ ॥೧೦೩॥

ಉತಥ್ಯಶ್ಚ ಶರದ್ವಾಂಶ್ಚ ತಥಾ ವಾಜಿಶ್ರವಾ ಅಪಿ ।
ಅಪಸ್ಯೌಷಃ ಸುಚಿತ್ತಿಶ್ಚ ವಾಮದೇವಸ್ತಥೈವ ಚ ॥೧೦೪॥

ಋಷಿಜೋ ಬೃಹಚ್ಛುಕ್ಲಶ್ಚ ಋಷಿರ್ದೀರ್ಘತಮಾ ಅಪಿ ।
ಕಕ್ಷೀವಾಂಶ್ಚ ತ್ರಯಸ್ತ್ರಿಂಶತ್ಸ್ಮೃತಾ ಹ್ಯಂಗಿರಸಾಂ ವರಾಃ ॥೧೦೫॥

---

ಸಾರಸ್ವತ, ಆರ್ಷ್ಟಿಷೇಣ, ಚ್ಯವನ, ಪೀತಹವ್ಯ, ವೇಧಸ, ವೈನ್ಯ, ಪೃಥು, ದಿವೋದಾಸ, ಬ್ರಹ್ಮವಂತ, ಗೃತ್ಸ, ಶೌನಕ ಈ ಹತ್ತೊಂಬತ್ತು ಜನ ಮಂತ್ರಕಾರರೂ ಭೃಗುವಂಶದಲ್ಲಿ ಜನಿಸಿದವರು.

೧೦೧-೧೦೫. ಅಂಗಿರಸ್, ವೇಧಸ, ಭರದ್ವಾಜ, ಲಕ್ಷ್ಮಣ, ಕೃತವಾಚ, ಗರ್ಗ, ಸ್ಮೃತಿ, ಸಂಕೃತಿ, ಗುರುವೀತ, ಮಾಂಧಾತ, ಅಂಬರೀಷ, ಯುವನಾಶ್ವ, ಪುರುಕುತ್ಸ, ಸ್ವಶವ, ಸದಸ್ಯವಂತ, ಅಜಮೀಢ, ಅಸ್ವಹಾರ್ಯ, ಉತ್ಕಲ, ಕವಿ, ಪೃಷದಶ್ವ, ವಿರೂಪ, ಕಾವ್ಯ, ಮುದ್ಗಲ, ಉತಥ್ಯ, ಶರದ್ವಂತ, ವಾಜಿಶ್ರವಸ್, ಅಪಸ್ಯೌಷ, ಸುಚಿತ್ತಿ, ವಾಮದೇವ, ಋಷಿಜ, ಬೃಹಚ್ಛುಕ್ಲ, ದೀರ್ಘತಮಸ್, ಕಕ್ಷೀವಂತ. ಈ ಮೂವತ್ತು ಮೂರು ಮಂದಿಯೂ ಅಂಗಿರಸವಂಶದಲ್ಲಿ ಪ್ರಖ್ಯಾತರಾದವರು.

ಏತೇ ಮಂತ್ರಕೃತಃ ಸರ್ವೇ ಕಾಶ್ಯಪಾಂಸ್ತು ನಿಬೋಧತ ।
ಕಾಶ್ಯಪಃ ಸಹವತ್ಸಾರೋ ನೈಧ್ರುವೋ ನಿತ್ಯ ಏವ ಚ ॥೧೦೬॥

ಅಸಿತೋ ದೇವಲಶ್ಚೈವ ಷಡೇತೇ ಬ್ರಹ್ಮವಾದಿನಃ ।
ಅತ್ರಿರರ್ಧಸ್ವನಶ್ಚೈವ ಶಾವಾಸ್ಯೋಽಥ ಗವಿಷ್ಠಿರಃ ॥೧೦೭॥

ಕರ್ಣಕಶ್ಚ ಋಷಿಃ ಸಿದ್ಧಸ್ತಥಾ ಪೂರ್ವಾತಿಥಿಶ್ಚ ಯಃ ॥೧೦೮॥

ಇತ್ಯೇತೇ ತ್ವತ್ರಯಃ ಪ್ರೋಕ್ತಾ ಮಂತ್ರಕೃತ್ಸ್ನಮಹರ್ಷಯಃ ।
ವಸಿಷ್ಠಶ್ಚೈವ ಶಕ್ತಿಶ್ಚ ತೃತೀಯಶ್ಚ ಪರಾಶರಃ ॥೧೦೯॥

ತತಸ್ತು ಇಂದ್ರಪ್ರತಿಮಃ ಪಂಚಮಸ್ತು ಭರದ್ವಸುಃ ।
ಷಷ್ಠಸ್ತು ಮಿತ್ರಾವರುಣಃ ಸಪ್ತಮಃ ಕುಂಡಿನಸ್ತಥಾ ॥೧೧೦॥

ಇತ್ಯೇತೇ ಸಪ್ತ ವಿಜ್ಞೇಯಾ ವಾಸಿಷ್ಠಾ ಬ್ರಹ್ಮವಾದಿನಃ ।
ವಿಶ್ವಾಮಿತ್ರಶ್ಚ ಗಾಧೇಯೋ ದೇವರಾತಸ್ತಥಾ ಬಲಃ ॥೧೧೧॥

ತಥಾ ವಿದ್ವಾನ್ ಮಧುಚ್ಛಂದಾ ಋಷಿಶ್ಚಾನ್ಯೋಽಘಮರ್ಷಣಃ ।
ಅಷ್ಟಕೋ ಲೋಹಿತಶ್ಚೈವ ಭೃತಕೀಲಶ್ಚ ಮಾಂಬುಧಿಃ ॥೧೧೨॥

---

೧೦೬. ಇವರೆಲ್ಲರೂ ಮಂತ್ರಕಾರರೆಂದು ಪ್ರಸಿದ್ಧರಾಗಿರುವರು. ಇನ್ನು ಮುಂದೆ ಕಾಶ್ಯಪವಂಶದಲ್ಲಿ ಹುಟ್ಟಿದ ಮಹರ್ಷಿಗಳ ಹೆಸರನ್ನು ಹೇಳುವೆನು ಕೇಳಿ. ಕಾಶ್ಯಪ, ಸಹವತ್ಸಾರ, ನೈಧ್ರುವ, ನಿತ್ಯ, ಅಸಿತ, ದೇವಲ ಈ ಆರು ಜನರೇ ಅವರು.

೧೦೭-೧೦೮. ಅತ್ರಿ, ಅರ್ಧಸ್ವನ, ಶಾವಾಸ್ಯ, ಗವಿಷ್ಠಿರ, ಋಷಿವರ್ಯನಾದ ಕರ್ಣಕ, ತಪಸ್ಸಿದ್ಧನಾದ ಪೂರ್ವಾತಿಥಿ ಈ ಆರು ಜನರೂ ಅತ್ರಿವಂಶೋದ್ಭವರು ; ಮಂತ್ರಕಾರರಾದ ಮಹರ್ಷಿಗಳು.

೧೦೯-೧೧೦. ವಸಿಷ್ಠ, ಶಕ್ತಿ, ಪರಾಶರ, ಇಂದ್ರಪ್ರತಿಮ, ಭರದ್ವಸು, ಮಿತ್ರಾವರುಣ, ಕುಂಡಿನ ಈ ಏಳುಮಂದಿ ಮಹರ್ಷಿಗಳೂ ವಸಿಷ್ಠವಂಶೋದ್ಭವರು.

೧೧೧-೧೧೩. ಗಾಧಿಪುತ್ರನಾದ ವಿಶ್ವಾಮಿತ್ರ, ಬಲಶಾಲಿಯಾದ ದೇವರಾತ, ವಿದ್ವಾಂಸನಾದ ಮಧುಚ್ಛಂದ, ಋಷಿವರ್ಯನಾದ ಅಘಮರ್ಷಣ, ಅಷ್ಟಕ, ಲೋಹಿತ, ಭೃತಕೀಲ, ಮಾಂಬುಧಿ, ದೇವಶ್ರವಸ್, ದೇವರತ, ಅತಿಪ್ರಾಚೀನನೆನಿಸಿದ

**ದೇವಶ್ರವಾ ದೇವರತಃ ಪುರಾಣಶ್ಚ ಧನಂಜಯಃ ।**
**ಶಿಶಿರಶ್ಚ ಮಹಾತೇಜಾಃ ಶಾಲಂಕಾಯನ ಏವ ಚ ॥೧೧೩॥**

**ತ್ರಯೋದಶೈತೇ ವಿಜ್ಞೇಯಾ ಬ್ರಹ್ಮಿಷ್ಠಾಃ ಕೌಶಿಕಾ ವರಾಃ ।**
**ಅಗಸ್ತ್ಯೋಽಥ ದೃಢದ್ಯುಮ್ನೋ ಇಂದ್ರಬಾಹುಸ್ತಥೈವ ಚ ॥೧೧೪॥**

**ಬ್ರಹ್ಮಿಷ್ಠಾಗಸ್ತಯೋ ಹ್ಯೇತೇ ತ್ರಯಃ ಪರಮಕೀರ್ತಯಃ ।**
**ಮನುರ್ವೈವಸ್ವತಶ್ಚೈವ ಐಲೋ ರಾಜಾ ಪುರೂರವಾಃ ॥೧೧೫॥**

**ಕ್ಷತ್ರಿಯಾಣಾಂ ವರೌ ಹ್ಯೇತೌ ವಿಜ್ಞೇಯೌ ಮಂತ್ರವಾದಿನೌ ।**
**ಭಲಂದಕಶ್ಚ ವಾಸಾಶ್ವಃ ಸಂಕೀಲಶ್ಚೈವ ತೇ ತ್ರಯಃ ॥೧೧೬॥**

**ಏತೇ ಮಂತ್ರಕೃತೋ ಜ್ಞೇಯಾ ವೈಶ್ಯಾನಾಂ ಪ್ರವರಾಃ ಸದಾ ।**
**ಇತಿ ದ್ವಿನವತಿಃ ಪ್ರೋಕ್ತಾ ಮಂತ್ರಾ.ಯೈಶ್ಚ ಬಹಿಷ್ಕೃತಾಃ ॥೧೧೭॥**

**ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾ ಋಷಿಪುತ್ರಾನ್ ನಿಬೋಧತ ।**
**ಋಷೀಕಾಣಾಂ ಸುತಾ ಹ್ಯೇತೇ ಋಷಿಪುತ್ರಾಃ ಶ್ರುತರ್ಷಯಃ ॥೧೧೮॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಮನ್ವಂತರಕಲ್ಪವರ್ಣನೋ ನಾಮ ಪಂಚಚತ್ವಾರಿಂಶದಧಿಕಶತತಮೋಽಧ್ಯಾಯಃ**

---

ಧನಂಜಯ, ಮಹಾತೇಜಸ್ವಿಯಾದ ಶಿಶಿರ, ಶಾಲಂಕಾಯನ ಈ ಹದಿಮೂರು ಜನರೂ ಕುಶಿಕನ ಸಂತತಿಯಲ್ಲಿ ಹುಟ್ಟಿದವರು. ಸಕಲವೇದಪಾರಂಗತರು.

೧೧೪. ಅಗಸ್ತ್ಯ, ದೃಢದ್ಯುಮ್ನ, ಇಂದ್ರಬಾಹು ಎಂಬ ಮೂವರೂ ಅಗಸ್ತ್ಯವಂಶೋದ್ಭವರು ; ಬಹುಕೀರ್ತಿವಂತರು ; ಬ್ರಹ್ಮವಾದಿಗಳು.

೧೧೫. ಸೂರ್ಯಪುತ್ರನಾದ ಮನು, ಇಲಾಪುತ್ರನಾದ ಪುರೂರವಸ್ ಈ ರಾಜರಿಬ್ಬರೂ ಕ್ಷತ್ರಿಯರಲ್ಲಿ ಮಂತ್ರಕರ್ತರೆಂದು ಪ್ರಖ್ಯಾತರಾಗಿರುವರು.

೧೧೬-೧೧೭. ಭಲಂದಕ, ವಾಸಾಶ್ವ, ಸಂಕೀಲ ಎಂಬ ಮೂವರು ಮಂತ್ರಕಾರರು ವೈಶ್ಯವರ್ಣದಲ್ಲಿ ಹುಟ್ಟಿದವರು. ಇವರು ಬಹು ಪ್ರಸಿದ್ಧರು. ಮೇಲೆ ಹೇಳಿದ ತೊಂಬತ್ತೆರಡು ಮಂದಿ ಮಹರ್ಷಿಗಳೂ ಮಂತ್ರಗಳನ್ನು ಸಾಕ್ಷಾತ್ಕಾರ ಮಾಡಿಕೊಂಡು ಅವುಗಳನ್ನು ಲೋಕಕ್ಕೆ ಉಪದೇಶಿಸಿದರು.

೧೧೮. ಈಗ ಹೇಳಿದ ಮಂತ್ರಕಾರರಲ್ಲಿ ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು ಎಲ್ಲರೂ ಸೇರಿದ್ದಾರೆ. ಇವರು ಋಷಿಗಳ ಪುತ್ರರು. ಋಷೀಕರೆಂದು ಇವರ ಹೆಸರು. ಇವರ ಸುತರನ್ನು ಋಷಿಪುತ್ರಕರೆನ್ನುವರು. ಅವರಿಗೆ ಶ್ರುತರ್ಷಿಗಳೆಂಬ ಪ್ರಖ್ಯಾತಿಯಿದೆ.

## ಅಧ್ಯಾಯ ೧೪೫

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಮನ್ವಂತರಕಲ್ಪವನ್ನು ವರ್ಣಿಸಿದೆ.

ದೇವ, ಮನುಷ್ಯ, ತಿರ್ಯಕ್ ಮತ್ತು ಸ್ಥಾವರಗಳೆಂಬ ನಾಲ್ಕು ಬಗೆಯ ಜೀವ ರಾಶಿಗಳ ದೇಹಪ್ರಮಾಣವೂ, ಆಯುಷ್ಪ್ರಮಾಣವೂ ಕೃತಯುಗದಿಂದ ಕಲಿಯುಗದ ವರೆಗೆ ಬರಬರುತ್ತ ಕುಗ್ಗುವುವು. ಧರ್ಮವು ಶ್ರೌತವೆಂದೂ ಸ್ಮಾರ್ತವೆಂದೂ ಎರಡು ವಿಧವಾಗಿರುವುದು. ವೇದೋಕ್ತವಾದುದನ್ನು ಶ್ರೌತವೆಂದೂ ಸ್ಮೃತ್ಯುಕ್ತವಾದು ದನ್ನು ಸ್ಮಾರ್ತವೆಂದೂ ಹೇಳುವರು. ಇವುಗಳನ್ನು ಕ್ರಮವಾಗಿ ಸಪ್ತರ್ಷಿಗಳೂ ಮನುಗಳೂ ಲೋಕಕ್ಕೆ ಉಪದೇಶಿಸಿದರು. ಇವರಿಗೆ ಶಿಷ್ಟರೆಂಬ ಪ್ರಸಿದ್ಧಿಯಿದೆ. ಇವರಿಂದ ಪ್ರಚಾರಕ್ಕೆ ಬಂದ ಶ್ರೌತಸ್ಮಾರ್ತಧರ್ಮವನ್ನೂ ಸಹ ಶಿಷ್ಟಾಚಾರ ವೆನ್ನುತ್ತಾರೆ. ಇದಕ್ಕೆ ದಯೆ, ಕ್ಷಮೆ, ದಮ, ಶಮ ಮೊದಲಾದ ಅಂಗಗಳಿವೆ.

ಮಂತ್ರಗಳನ್ನು ಸಾಕ್ಷಾತ್ಕರಿಸಿಕೊಂಡು ಲೋಕದಲ್ಲಿ ಅವುಗಳನ್ನು ಪ್ರಚುರ ಗೊಳಿಸಿದವರು ಋಷಿಗಳು. ಇವರಲ್ಲಿ ಪರಮರ್ಷಿಗಳು, ಮಹರ್ಷಿಗಳು ಅಥವಾ ಈಶ್ವರರು, ಋಷಿಗಳು, ಋಷಿಪುತ್ರರು ಅಥವಾ ಋಷೀಕರು ಮತ್ತು ಋಷಿಪುತ್ರಕರು ಎಂದು ಐದು ಪಂಗಡಗಳುಂಟು. ಮಂತ್ರಕಾರರಲ್ಲಿ ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯರೆಂಬ ತ್ರೈವರ್ಣಿಕರೂ ಸೇರಿದ್ದಾರೆ. ಇವರ ಒಟ್ಟು ಸಂಖ್ಯೆ ತೊಂಬತ್ತೆರಡು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಮನ್ವಂತರಕಲ್ಪವರ್ಣನವೆಂಬ
ನೂರನಲವತ್ತೈದನೆಯ ಅಧ್ಯಾಯವು ಮುಗಿದುದು.



ಶ್ರೀನಿವಾಸ್ ಎಲೆಕ್ಟ್ರಿಕ್ ಪ್ರೆಸ್, ಮೈಸೂರು.

